ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೭

ಪ್ರಧಾನ ಸಂಪಾದಕ

ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಗ್ರೀಕರ ತತ್ವಶಾಸ್ತ್ರ ಸಾರಸಂಗ್ರಹ




ಲೇಖಕರು

ಕೆ. ಆರ್. ಶ್ರೀನಿವಾಸೈಯಂಗಾರ್, ಎಂ.ಎ.

ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

೧೯೪೧

# ಮುನ್ನುಡಿ

ಗ್ರೀಕ್ ಸಂಸ್ಕೃತಿ ನಾಗರಿಕತೆಗಳಿಗೆ ಸಂಬಂಧಪಟ್ಟಂತೆ ಪ್ರಕಟನ ಸಮಿತಿ ಏರ್ಪಡಿಸಿದ ಗ್ರಂಥಗಳಲ್ಲಿ "**ಸಾಕ್ರಟೀಸನ ಕೊನೆಯ ದಿನಗಳು**" ಎಂಬುದರ ಜೊತೆಗೆ ಈಗ "**ಗ್ರೀಕರ ತತ್ವಶಾಸ್ತ್ರ ಸಾರ ಸಂಗ್ರಹ**" ಎಂಬ ಗ್ರಂಥವನ್ನು ಪ್ರಕಾಶಪಡಿಸಲಾಗಿದೆ. "**ಗ್ರೀಕ್ ನಾಟಕ**" ಎಂಬ ಗ್ರಂಥ ತಯಾರಾಗುತ್ತಿದೆ.

ಈ "**ತತ್ವಶಾಸ್ತ್ರ**" ಗ್ರಂಥವನ್ನು ರಚಿಸಿಕೊಟ್ಟದ್ದಕ್ಕಾಗಿ ನಾವು ಪ್ರೊಫೆಸರ್ ಕೆ. ಆರ್. ಶ್ರೀನಿವಾಸಯ್ಯಂಗಾರ್ ಅವರಿಗೆ ಚಿರಋಣಿಗಳಾಗಿದ್ದೇವೆ. ಇಂಗ್ಲಿಷ್ ಸಾಹಿತ್ಯದಲ್ಲಿಯೂ, ಭಾರತೀಯ ಮತ್ತು ಪಾಶ್ಚಾತ್ಯ ತತ್ವಶಾಸ್ತ್ರ ಜ್ಞಾನದಲ್ಲಿಯೂ, ಅವರ ಪ್ರವೀಣತೆ ಸರ್ವವಿದಿತವಾದದ್ದು. ಕನ್ನಡಿಗರಿಗೆ ತಮ್ಮ ಪಕ್ವ ಪಾಂಡಿತ್ಯವನ್ನು ಸುಲಭವಾಗಿ ಒದಗಿಸಿಕೊಟ್ಟದ್ದಕ್ಕಾಗಿ ನಾನು ಅವರಿಗೆ ವ್ಯಕ್ತಿಶಃ ಕೃತಜ್ಞನಾಗಿದ್ದೇನೆ.

ಪ್ರಪಂಚದ ಜ್ಞಾನ ವಿಜ್ಞಾನ ವಿಮರ್ಶೆಗಳನ್ನೂ, ರಾಜಕೀಯ ಸಾಮಾಜಿಕ ರಚನೆಗಳನ್ನೂ, ಕಲಾ ಸಾಹಿತ್ಯ ಸೌಂದರ್ಯಗಳನ್ನೂ, ವಿಚಾರ ಕ್ರಮಗಳನ್ನೂ, ಬೇರೆ ಆಧಾರವನ್ನು ಬಯಸದೆ ಕೇವಲ ಬುದ್ಧಿವ್ಯಾಪಾರದ ಅನುಭವದಿಂದಲೇ ಸತ್ಯಾನ್ವೇಷಣ ಮಾಡತಕ್ಕ ಧೈರ್ಯಸ್ಥೈರ್ಯಗಳನ್ನೂ, ಪಾಶ್ಚಾತ್ಯ ಸಂಸ್ಕಾರ ವ್ಯವಹಾರಗಳ ಮೂಲಾಧಾರಗಳನ್ನೂ ಅರಿಯಬೇಕೆಂಬವರಿಗೆ—ಯಾವ ವಿದ್ಯಾವಂತನು ತಾನೇ ಇವನ್ನು ಅರಿಯದೆ ವಿದ್ಯಾವಂತನಾಗುವನು?—ಪೂರ್ವಕಾಲದ ಗ್ರೀಕರ ಸರ್ವತೋಮುಖವಾದ ಸಾಹಿತ್ಯದ ಪರಿಚಯ ಅತ್ಯಾವಶ್ಯಕ. ಇತಿಹಾಸ ಕಾವ್ಯವೆ, ನಾಟಕವೆ, ಭಾವಗೀತೆಯೆ, ಚರಿತ್ರೆಯೆ, ತತ್ವವೆ, ವಾಗ್ಮಿತೆಯೆ, ರಂಜನ ಕಥೆಯೆ, ರಾಜಕೀಯ ಆದರ್ಶಗಳೆ, ಧಾರ್ಮಿಕ ಸೂಕ್ಷ್ಮತೆಯೆ, ವ್ಯಾವಹಾರಿಕ ವಿವೇಕವೆ, ಕಲೆಯೆ, ಶಿಲ್ಪವೆ, ಚಿತ್ರವೆ, ಸಂಗೀತವೆ, ವಿಜ್ಞಾನವೆ, ಕುಶಲಕರ್ಮವೆ, ನಿತ್ಯಜೀವನದ ಸೊಬಗೆ, ವ್ಯಾಯಾಮವೆ, ಆರೋಗ್ಯವೆ, ವಿನೋದವೆ, ಗಭೀರತೆಯೆ, ದ್ಯಾವಾಪೃಥಿವಿಯ ವಿಶ್ವವರ್ತನೆಯಲ್ಲಿ ಸಕಲ ಸೌಭಾಗ್ಯಗಳಿಗೂ ಪುರಾತನ ಹೆಲಸ್ ತವರುಮನೆಯಾಗಿತ್ತು.

ಇಂತಹ ಇನ್ನೊಂದು ದೇಶವೆಂದರೆ, ಇಂತಹ ಇನ್ನೊಂದು ಜನವೆಂದರೆ ಪುರಾತನ ಭಾರತ, ಪುರಾತನ ಭಾರತೀಯರು. ಇವರಿಬ್ಬರ ಪರಸ್ಪರ ಸಂಬಂಧಗಳನ್ನು ಇನ್ನೂ ಪರಿಶೋಧನೆ ಮಾಡಿ ಪ್ರಕಾಶಪಡಿಸುವುದರಲ್ಲೇ ನಾವಿದ್ದೇವೆ. ಇಂದಿನ ಭಾರತೀಯರು ಈ ಎರಡು ಜನರ ಇತಿಹಾಸಗಳನ್ನೂ, ಕಾರ್ಯಸಾಧನೆಗಳನ್ನೂ ವಿಶ್ವಾಸದಿಂದ ಅಭ್ಯಾಸ ಮಾಡಬೇಕು. ತಮ್ಮ ಹಿರಿಯ ಹೆಸರುಗಳ ಸಾಲಿನಲ್ಲಿ ಗ್ರೀಕರ ಹಿರಿಯರ ಹೆಸರುಗಳನ್ನೂ ಕೂಡಿಸಿಕೊಳ್ಳಬೇಕು. ಹೋಮರ್, ಈಸ್ಕಿಲಸ್, ಸಾಕ್ರಟೀಸ್, ಪ್ಲೇಟೊ, ಅರಿಸ್ಟಾಟಲ್, ಹೆರೊಡೊಟಸ್, ಥೂಸಿಡಿಡಿಸ್, ಪೆರಿಕ್ಲಿಸ್, ಅಲೆಕ್ಸಾಂಡರ್, ಡೆಮಾಸ್ಥಿನಿಸ್, ಎಪಿಕ್ಟೆಟಸ್, ಮಾರ್ಕಸ್ ಅರೀಲಿಯಸ್ —ಒಂದೊಂದು ವ್ಯಕ್ತಿಯೂ ಒಂದೊಂದು ಪ್ರಪಂಚ; ಒಂದೊಂದು ಉಪನಿಷತ್ತು; ಒಂದೊಂದು ಜೀವ ಸಂಜೀವನ.

ಕಸ್ಮೈ ದೇವಾಯ ಹವಿಷಾ ವಿಧೇಮ?—ಯಾವ ದೇವನನ್ನು, ಯಾವ ಆದರ್ಶಪುರುಷನನ್ನು, ಯಾವ ಸುಖ ಸಮಾಜವನ್ನು ನಾವು ಅವಲಂಬಿಸೋಣ? ನೆನೆಯೋಣ, ನಂಬೋಣ, ನುಡಿಯೋಣ, ನಡೆಯೋಣ? ನಮ್ಮ ಮುಂದಿನ ಮಾರ್ಗ ಎತ್ತ? ಭಾರತದ ಕೆಂಡ ಬೂದಿಯಿಂದ ಮತ್ತೆ ಕನಲುತ್ತಿದೆ. ಊದಿಬಿಡುವ ಬೂದಿ ಯಾವುದು; ಊದಿ ಕನಲಿಸುವ ಕೆಂಡ ಯಾವುದು? ವಿಚಾರಪರರು ಪುರಾತನ ಭಾರತೀಯರ, ಪುರಾತನ ಗ್ರೀಕರ, ಆಧುನಿಕ ಪ್ರಪಂಚದ ಸಾರಾಸಾರ ವಿವೇಕದಿಂದ ಮುಂದುವರಿಯಬೇಕಾಗಿದೆ. ಈ **"ಗ್ರೀಕರ ತತ್ತ್ವಶಾಸ್ತ್ರ"** ಗ್ರಂಥ ಅಂತಹವರಿಗೆ ಒಂದು ಕಿಟಕಿಯನ್ನು ತೆರೆದು ಹೊಸ ನೋಟಗಳನ್ನೂ ವಿಚಾರಸ್ಫೂರ್ತಿಯನ್ನೂ ಕೊಡಬಲ್ಲುದೆಂದು ನಂಬಲಾಗಿದೆ.

ಬೆಂಗಳೂರು
೭-೧೨-೧೯೪೧

**ಬಿ. ಎಂ. ಶ್ರೀಕಂಠಯ್ಯ.**

# ಗ್ರಂಥಕರ್ತನ ಮೊದಲಮಾತು

ಕನ್ನಡದಲ್ಲಿ ತತ್ವಶಾಸ್ತ್ರವನ್ನು ಬರೆಯುಬೇಕೆಂಬ ಉತ್ಸಾಹ ದಿಂದಲೂ ಗ್ರೀಕರಮೇಲಿನ ಪ್ರೇಮದಿಂದಲೂ ಈ ಗ್ರಂಥವನ್ನು ೧೯೨೩ರಲ್ಲಿ ಪ್ರಾರಂಭಿಸಿ ೧೯೨೪ರಲ್ಲಿ ಮುಗಿಸಿದೆನು. ಕೂಡಲೇ ಇದನ್ನು ಅಚ್ಚು ಹಾಕಿಸಲು ನಾನು ಮಾಡಿದ ಪ್ರಯತ್ನವೆಲ್ಲಾ ನಿಷ್ಫಲವಾಯಿತು. ಕನ್ನಡದಲ್ಲಿ ತತ್ವಶಾಸ್ತ್ರವನ್ನು—ಅದರಲ್ಲಿಯೂ ಪಾಶ್ಚಾತ್ಯ ತತ್ವಶಾಸ್ತ್ರ ವನ್ನು—ಓದುವವರು ಯಾರು, ಇದನ್ನು ಅಚ್ಚುಹಾಕಿ ಏನುಪ್ರಯೋಜನ, ಎಂಬ ಭಯಸಂದೇಹಗಳಿಂದ ಅಚ್ಚುಹಾಕಿಸಲು ಸಹಾಯಮಾಡಬಹು ದಾಗಿದ್ದವರೆಲ್ಲರೂ ಹಿಂತೆಗೆದರು. ಈ ಕಾರಣದಿಂದ ಹತ್ತುಹನ್ನೆರಡು ವರ್ಷಗಳ ಕಾಲ "ಕಾಕರಲಿಪಿ"ಯಲ್ಲಿದ್ದ ಈ ಗ್ರಂಥ ನನ್ನ ಮೇಜಿನ ಮೇಲೆಯೇ ಸುಖನಿದ್ರೆಯಲ್ಲಿತ್ತು. ಅನಂತರ ನನ್ನ ಪೂಜ್ಯಗುರುಗಳಾದ, ಕನ್ನಡಕುಲ ಪಿತಾಮಹರಾದ, ಇಂದಿನಯುಗದಲ್ಲಿ ಕನ್ನಡ ಮತಕ್ಕೆ ಆಚಾರ್ಯಪುರುಷರಾದ, ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀ ಕಂಠಯ್ಯನವರನ್ನು ನೆನಸಿಕೊಂಡೆ. ೧೯೧೪ರಲ್ಲಿ (ಅಥವಾ—ಹದಿಮೂರ ರಲ್ಲೆ ?) ನಾನು ಮೈಸೂರು ನಗರದ ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗ "ಶ್ರೀ"ಯವರು ಆ ಶಾಲೆಗೆ ದಯಮಾಡಿಸಿ "ಕನ್ನಡ ಮಾತು ತಲೆಯೆತ್ತುವ ಬಗೆ" ಎಂಬ ವಿಷಯವನ್ನು ಕುರಿತು ಸ್ಫೂರ್ತಿದಾಯಕವಾದ ಭಾಷಣಮಾಡಿದ್ದನ್ನು ಕೇಳಿ ನಾನೂ ಆವೇಶ ಹೊಂದಿದ್ದನ್ನು ನೆನಸಿಕೊಂಡೆ. ತತ್ವಶಾಸ್ತ್ರವಾದರೂ ಚಿಂತೆ ಇಲ್ಲ, ಕನ್ನಡ ದಲ್ಲಿ ಬರೆದ ಗ್ರಂಥವಾದರೆ ಅದನ್ನು ವಿಶಾಲಹೃದಯರಾದ ಇವರು ಸ್ವಾಗತಿಸುತ್ತಾರೆ ಎಂಬ ಭರವಸೆಯಿಂದ ನನ್ನ ಹಸ್ತಪ್ರತಿಯನ್ನು ಕೊಂಡು ಹೋಗಿ ಅವರ ಮುಂದಿಟ್ಟೆ. ಅವರು ಸಾವಧಾನವಾಗಿ ಅದನ್ನು ಪರಿಶೀಲಿಸಿ, ದಯೆಯಿಂದ ಸ್ವೀಕರಿಸಿ, ಉಪಯುಕ್ತವಾದ ಹಲವು ಸೂಚನೆಗಳನ್ನು ಕೊಟ್ಟು ಅವುಗಳ ಪ್ರಕಾರವಾಗಿ ಗ್ರಂಥವನ್ನು ಸ್ವಲ್ಪ ವಿಸ್ತರಿಸುವಂತೆ ಅಪ್ಪಣೆಮಾಡಿದರು. ಈಗ ಹೊರಬಿದ್ದಿರುವ ಗ್ರಂಥ ಅವರ ಅಪ್ಪಣೆಯನ್ನು ಶಿರಸಾವಹಿಸಿ ನಡಸಿದುದರ ಫಲವೇ ಆಗಿದೆ.

ಹದಿನೈದು ವರುಷಗಳ ಹಿಂದೆ ಬರೆದ ಗ್ರಂಥ ಈಗ ಅಚ್ಚಾಗುವುದೆಂದರೆ ಅದಕ್ಕಿಂತಲೂ ಹೆಚ್ಚಿನ ಸಂತೋಷ ಗ್ರಂಥವನ್ನು ಬರೆದವನಿಗೆ ಏನಿದೆ? ಇದರಿಂದ "ಶ್ರೀ"ಯವರಿಗೆ ನಾನು ಎಷ್ಟು ಋಣಿಯಾಗಿದ್ದೇನೆಂಬುದನ್ನು ವಾಚಕರೇ ಊಹಿಸಿಕೊಳ್ಳಬಹುದು. ಆದರೆ ಗ್ರಂಥ ಅಚ್ಚಾಗುತ್ತಿರುವಾಗ ಕರಡುಪ್ರತಿಗಳನ್ನೆಲ್ಲಾ ಆಮೂಲಾಗ್ರವಾಗಿ ಪರಿಶೋಧಿಸುವ ಮಹತ್ತರವಾದ ಕಷ್ಟವನ್ನು ವಹಿಸಿ "ಶ್ರೀ"ಯವರು ಋಣದ ಹೊರೆಯನ್ನು ನನ್ನ ಮೇಲೆ ಮತ್ತಷ್ಟು ಹೊರಿಸಿದ್ದಾರೆ. ಇದಕ್ಕೆಲ್ಲಾ ಅವರಿಗೆ ನನ್ನ ಅನಂತಾನಂತ ವಂದನೆಗಳು.

ತತ್ತ್ವಶಾಸ್ತ್ರಕ್ಕೆ ತವರೂರಾದ ನಮ್ಮ ಕರ್ನಾಟಕದಲ್ಲಿ ಪಾಶ್ಚಾತ್ಯ—ಅದರಲ್ಲಿಯೂ ಗ್ರೀಕರ—ತತ್ತ್ವಶಾಸ್ತ್ರವನ್ನು ಕನ್ನಡದಲ್ಲಿ ಓದಲು ಬಯಸುವವರು ಹಲವರಾದರೂ ಇದ್ದಾರೆಂಬುದು ನನ್ನ ನಂಬಿಕೆ. ತತ್ತ್ವವಿವೇಚನೆ ಎಂಬುದು ಮಾನವನಿಗೆ ಸ್ವಭಾವಸಿದ್ಧವಾದ ಹಕ್ಕೆಂದೂ, ಮೂಡಣದಿಕ್ಕಿನಲ್ಲಾಗಲಿ ಪಡುವಣದಿಕ್ಕಿನಲ್ಲಾಗಲಿ ಯೋಚನಾಪರರ ಕಣ್ಣಿಗೆ ಪ್ರಪಂಚ ಒಂದೇ ರೀತಿಯಲ್ಲಿ ಕಾಣುವುದೆಂದೂ, ಅದರ ಸಮಸ್ಯೆಗಳೂ ಅವುಗಳಿಗೆ ಕೊಡುವ ಸಮಾಧಾನಗಳೂ ಹೆಚ್ಚು ಕಡಮೆ ಒಂದೇ ರೂಪದಲ್ಲಿ ಇರುವುವೆಂದೂ, ಈ ಗ್ರಂಥವನ್ನು ಓದುವಷ್ಟು ನನ್ನ ಮೇಲೆ ಕೃಪೆ ಮಾಡುವವರ ಮನಸ್ಸಿಗೆ ಹತ್ತಿದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಸಂತೋಷಿಸುತ್ತೇನೆ. ಅಪೌರುಷೇಯವೆಂದು ನಂಬಲ್ಪಟ್ಟಿರುವ ಶ್ರುತಿಗಳ ಅಧಿಕಾರವ್ಯಾಪ್ತಿಯ ಎಲ್ಲೆಯೊಳಗೇ ನಡೆದ ತತ್ತ್ವವಿಮರ್ಶೆಯ ಫಲಗಳನ್ನು ನಾವು ಭಾರತದಲ್ಲಿ ಕಂಡಿದ್ದೇವೆ; ಇಂಥ ಶೃಂಖಲೆಗಳೊಂದೂ ಇಲ್ಲದೆ ಸ್ವಬುದ್ಧಿಯೆಂಬ ಒಂದೇ ಬೆಳಕಿನ ಸಹಾಯದಿಂದ ಜ್ಞಾನಲೋಕದಲ್ಲಿ ವಿಹರಿಸಿದ ಪೂರ್ವಕಾಲದ ಪಾಶ್ಚಾತ್ಯರಲ್ಲಿ ಹಲವರ ಪುರುಷಪ್ರಯತ್ನದ ಫಲಗಳನ್ನು ಇಲ್ಲಿ ವಿವರಿಸಿದೆ. ಇಂಥ ಪ್ರಯತ್ನದಿಂದ ಸತ್ಯವನ್ನು ಕಂಡುಹಿಡಿಯಲು ಹೆಚ್ಚು ಸುಲಭವಾಗುವುದೆ, ಕಷ್ಟವಾಗುವುದೆ; ಹಳ್ಳಕೊಳ್ಳಗಳು ಇರುವುದೆಲ್ಲಿ, ನಾವು ಮುಗ್ಗರಿಸಿಬೀಳಬಹುದಾದ ಸಂದರ್ಭಗಳೆಲ್ಲಿ — ಇಷ್ಟಾದರೂ ನಮಗೆ ಗೋಚರವಾದರೆ ಅದೂ ಒಂದು ದೊಡ್ಡ ಪ್ರಯೋಜನವೇ ಅಲ್ಲವೆ?

ಗ್ರಂಥದಲ್ಲಿ ಕೊಟ್ಟಿರುವ ಸಾಕ್ರಟೀಸನ ಚಿತ್ರ ಸಾಧಾರಣವಾಗಿ ಇದುವರೆಗೂ (ಕನ್ನಡದಲ್ಲಿ) ಬರೆಯಲ್ಪಟ್ಟಿರುವ ಚಿತ್ರಗಳಿಗಿಂತ ತೀರ ವ್ಯತ್ಯಸ್ತವಾದದ್ದಾಗಿದೆ. ಸಾಕ್ರಟೀಸನ ವಿಚಾರ ತೀರ್ಮಾನಿಸುವುದು ಕಷ್ಟವೆಂದು ಕನ್ನಡಿಗರಿಗೆ ತಿಳಿಯಲೆಂಬ ಉದ್ದೇಶದಿಂದಲೇ ಈ ಬೇರೆ ಚಿತ್ರವನ್ನು ಇಲ್ಲಿ ಕೊಟ್ಟಿದೆ.

ಇಲ್ಲಿ ಸ್ಮರಿಸಿಕೊಳ್ಳಬೇಕಾದ ಇನ್ನೊಂದು ಉಪಕಾರವಿದೆ. ನನಗೆ ತತ್ವಶಾಸ್ತ್ರದ ಸವಿಯನ್ನು ಮೊದಲು ಅನುಭವಮಾಡಿಕೊಟ್ಟವರು ನನ್ನ ಗುರುವರ್ಯರಾದ ಪ್ರೊ. ಎ. ಆರ್. ವಾಡಿಯಾ, ಬಿ. ಎ. (ಕ್ಯಾಂಟಾಬ್), ಬಾರ್-ಅಟ್-ಲಾ, ಅವರು. ಸುಮಾರು ಇಪ್ಪತ್ತೈದು ವರ್ಷಗಳಿಂದಲೂ ಅವರ ಬಳಿ ತತ್ವಶಾಸ್ತ್ರಾಭ್ಯಾಸದಲ್ಲಿ ಇನ್ನೂ ಶಿಷ್ಯವೃತ್ತಿಯಲ್ಲಿಯೇ ಇದ್ದೇನೆ. ಈ ಗ್ರಂಥವನ್ನು ಬರೆಯಲು ಮೊದಲು ಪ್ರೇರೇಪಿಸಿ ಮೊದಲಿಂದಲೂ ನನಗೆ ಪ್ರೋತ್ಸಾಹವನ್ನು ಕೊಡುತ್ತಾ ಬಂದವರು ಅವರೇ. ಅವರ ಉತ್ತೇಜನವಿಲ್ಲದೆ ಇದ್ದಿದ್ದರೆ ಇದನ್ನು ನಾನು ಬರೆಯುತ್ತಲೇ ಇರಲಿಲ್ಲ. ಇಂಥವರ ಉಪಕಾರವನ್ನು ಇಲ್ಲಿ ಸ್ಮರಿಸುವುದು ನನ್ನ ಕರ್ತವ್ಯ ಮಾತ್ರವಲ್ಲದೆ ನನಗೆ ಮಹದಾನಂದಕರವಾದುದೂ ಹೌದು. ಕಡೆಯಲ್ಲಿ ನನ್ನ ಅಭ್ಯುದಯದಲ್ಲೇ ಸಂತೋಷಪಡುತ್ತಿದ್ದ ಈ ಗ್ರಂಥದ ಮೂಲ ಪ್ರತಿಯನ್ನು ಅಂದವಾಗಿ ಬರೆದುಕೊಟ್ಟ ನನ್ನ ವಿದ್ಯಾರ್ಥಿಯೂ ಸನ್ಮಿತ್ರರೂ ಆಗಿದ್ದ ದಿವಂಗತ ಶ್ರೀ ಕೆ. ಪಿ. ವಜ್ರನಾಭಯ್ಯನವರ ಉಪಕಾರವನ್ನೂ, ಮತ್ತು ಗ್ರಂಥವನ್ನು ಬರೆಯುತ್ತಿರುವಾಗ ಅದನ್ನು ಆಗಾಗ್ಗೆ ಕೇಳಿ ಆನಂದಿಸಿ ಎಲ್ಲೆಲ್ಲಿ ಕಠಿಣವಾಗಿ ಕಂಡುಬರುತ್ತಿತ್ತೊ ಅಲ್ಲೆಲ್ಲಾ ಸುಲಭತರವಾಗಿ ಮಾಡುವಂತೆ ಸಲಹೆಯಿತ್ತ ನನ್ನ ಸಹಧರ್ಮಿಣಿ ಶ್ರೀಮತಿ ಶಲ್ಲಮ್ಮನವರ ಉಪಕಾರವನ್ನೂ, ಇಲ್ಲಿ ನೆನೆಯದೆ ಇರಲಾರೆ.

"ತುಳಸೀವಾಸ" ವೊಂಟಿಕೊಪ್ಪಲು, ಮೈಸೂರು
೧೮೬೩, ಆಷಾಢ ಶುಕ್ಲಪ್ರಥಮಾ ಬುಧವಾರ
(೨೫-೬-೧೯೪೧)

ಗ್ರಂಥಕರ್ತ.

# ವಿಷಯಾನುಕ್ರಮಣಿಕೆ

# ತಿದ್ದುಪಡಿ

| ಪುಟ | ಪಂಙ್ತಿ | ತಪ್ಪು | ಒಪ್ಪು |
|---|---|---|---|
| XXII | ೨೫ | ಆರ್ಯರಂತೆ | ಆರ್ಯರ ದೇವತೆಗಳಂತೆ |
| XXXVI | ೧೬ | ನಗರಧಾಳಿಕಾರರ | ನಗರ ಧಾಳಿಕಾರರ |
| ೧೩ | ೧೮ | ಆಮೂಲವಸ್ತು ವಿನ | ಆ ಮೂಲವಸ್ತು ವಿನ |
| ೧೭ | ೨೬ | ಹಿಡಿದಾರೆಂದು | ಹಿಡಿದಿದಾರೆಂದು |
| ೧೮ | ೮ | ಗೂಡಾರ್ಥ | ಗೂಢಾರ್ಥ |
| ೨೧ | ೧೬ | ದ್ರವ್ಯನಾಶರಹಿತವೆಂಬ | ದ್ರವ್ಯ ನಾಶರಹಿತವೆಂಬ |
| ೨೩ | ೨ | ಗೂಡಾರ್ಥ | ಗೂಢಾರ್ಥ |
| ೨೩ | ೨೬ | ಪೈಥಾಗೋರಿಯನರ | ಪೈಥಗೋರಿಯನರ |
| ೬೭ | ೬ | ವೆಂಬುದನ್ನು, ತಿಳಿಯಬೇಕಾದರೆ | ವೆಂಬುದನ್ನು ತಿಳಿಯಬೇಕಾದರೆ |
| ೭೩ | ೧ | ಚಿತ್ರದಲ್ಲಿ ಒಂದು ದೃಶ್ಯ | ಚಿತ್ರದಲ್ಲಿ ಇದು ಒಂದು ದೃಶ್ಯ |
| ೮೮ | ೨೫ | ಹಾಕುತ್ತೀಯು | ಹಾಕುತ್ತೀಯೆ |
| ೧೧೨ | ೨೩ | ಸಾಕ್ರಟೀಸನು | “ ಸಾಕ್ರಟೀಸನು |
| ೧೧೭ | ೭ | ಹೋದನು ? | ಹೋದನು ?” |
| ೧೫೮ | ೨೫ | ಬಲ್ಲೆ,” | ಬಲ್ಲೆ.” |
| ೧೫೯ | ೨೬ | ಯಾಜ್ಞ್ಯವಲ್ಕ | ಯಾಜ್ಞವಲ್ಕ್ಯ |
| ೧೭೭ | ೨೦ | ಶಿಕ್ಷಿಸಿ, | ಶಿಕ್ಷಿಸಿ ; |

“ನಾಗರೀಕ” “ನಾಗರೀಕತೆ” ಎಂದಿರುವ ಕಡೆಯಲ್ಲೆಲ್ಲಾ “ನಾಗರಿಕ” ನಾಗರಿಕತೆ” ಎಂದು ತಿದ್ದಿಕೊಳ್ಳಿ.

“ಅವಶ್ಯಕ” “ಅವಶ್ಯಕತೆ” ಎಂದಿರುವ ಕಡೆಯಲ್ಲೆಲ್ಲಾ “ಆವಶ್ಯಕ” “ಆವಶ್ಯಕತೆ” ಎಂದು ತಿದ್ದಿಕೊಳ್ಳಿ.

| | | | |
|---|---|---|---|
| ೨೧೧ | * | ಸತ್ತನುಳ್ಳವುಗಳೆಂದು | ಸತ್ತನ್ನುಳ್ಳವುಗಳೆಂದು |
| ೨೧೧ | ೨–೩ | ಜ್ಞೇಯತತ್ವಗಳೇ | ಜ್ಞಾನತತ್ವಗಳೇ |
| ೨೧೧ | ೬–೭ | ಬಣ್ಣವೇ ಅವುಗಳಿಗಿರತಕ್ಕುದು. | ಬಣ್ಣವನ್ನೇ ಹೊಂದಿರತಕ್ಕುವು. |
| ೨೧೩ | ೧ | “ಇಂದ್ರಿಯಾತೀತವಾದ”ಆದಮೇಲೆ | “ಸತ್ವ ಪ್ರಪಂಚ” ಎಂಬುದನ್ನು ಸೇರಿಸಿಕೊಳ್ಳಿ |
| ೨೧೩ | ೨ | “ಸತ್ವಪ್ರಪಂಚ” ಎಂಬ ಪದವನ್ನು ಬಿಟ್ಟು ಬಿಟ್ಟು ಓದಿಕೊಳ್ಳಿ | |
| ೨೨೬ | ೨೧ | ಸಮ್ಮೆಳನಗೊಂಡು | ಸಮ್ಮೇಳನಗೊಂಡು |

*ಪಾದಸೂಚಿಯಲ್ಲಿ (ಪಂಙ್ತಿ : ೧೪)

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೪೨ | ೭ | (mimetics) | (mimesis) |
| ೨೫೩ | ೧೨ | ಭವಾತ್ಮಕವಾದ | ಭವಾತ್ಮವಾದ |
| ೨೫೪ | ೯ | ಭೋಗವಿರೋಧವಾದುದು, (anti-hedonistic) | ಭೋಗವಿರೋಧವಾದುದು (anti-hedonistic), |
| ೨೫೪ | ೧೦ | ಆತ್ಮಸಿದ್ಧಿ ರೂಪವಾದುದು ; (self-realisation) ; | ಆತ್ಮಸಿದ್ಧಿ ರೂಪವಾದುದು (self-realisation) ; |
| ೨೫೪ | ೨೦ | ತೊಡಗಿದ, ಕ್ರೈಸ್ತಮತಕ್ಕೆ | ತೊಡಗಿದ ಕ್ರೈಸ್ತಮತಕ್ಕೆ |
| ೨೬೦ | ೨೧ | ದ್ರವ್ಯರೂಪವನ್ನೂ | ದ್ರವ್ಯ ರೂಪವನ್ನೂ |
| ೨೬೧ | ೨೨ | ಚಿಂತಾಕ್ರಮವೇ | ಚಿಂತನಾಕ್ರಮವೇ |
| ೨೬೪ | ೩ | ಇಂದ್ರಿಯಾವಲೋಕನ | ಇಂದ್ರಿಯಾವಲೋಕನದಿಂದ |
| ೨೬೬ | * | ಈ ಪದಾರ್ಥ | ಅರಿಸ್ಟಾಟಲನ ಪದಾರ್ಥ |
| ೨೭೭ | ೨೫ | common sense | commonsense |
| ೨೮೦ | ೪ | ತತ್ವವಾಗಿರುವುದು | ತತ್ವವಾಗಿರುವುದು. |
| ೨೯೨ | ೨ | ಐಂದ್ರಿಯ ಸೌಂದರ್ಯದ | ಐಂದ್ರಿಯಕ ಸೌಂದರ್ಯದ |
| ೨೯೮ | ೧೫ | ಐಂದ್ರಿಯರೂಪವನ್ನು | ಐಂದ್ರಿಯಕ ರೂಪವನ್ನು |
| ೩೨೯ | ೯ | (ತಾತ್ಪರ್ಯ—Intuition) | (ತಾತ್ಪರ್ಯಜ್ಞಾನ—Intuition) |
| ೩೩೬ | ೫ | ಶ ಕ್ತೈರಪಿ | ಶಕ್ತೈರಪಿ |
| ೩೪೦ | ೨೪ | Devine | Divine |
| ೩೪೭ | ೪ | ಯಾರಪಕ್ಷದಲ್ಲಿಯೂ | ಯಾವ ಪಕ್ಷದಲ್ಲಿಯೂ |
| ೩೭೮ | ೨೦ | ಚಿಂತೆಯ ವ್ಯಾಪಾರ | ಚಿಂತನೆಯ ವ್ಯಾಪಾರ |

* ಪಾದಸೂಚಿಯಲ್ಲಿ (ಪಂಕ್ತಿ: ೪-೫)

# ಪ್ರವೇಶ : ಗ್ರೀಕ್ ಸಂಸ್ಕೃತಿ

**ಸಂಸ್ಕೃತಿಯ ಪ್ರಭಾವ.** "ಅಮರವಾದ ಗ್ರೀಸ್", "ಅಜೇಯರಾದ ಗ್ರೀಕರು"—ಪ್ರಪಂಚದ, ಆದರಲ್ಲಿಯೂ ಪಾಶ್ಚಾತ್ಯ ಪ್ರಪಂಚದ–ನಾಗರಿಕತೆ ಮತ್ತು ಸಂಸ್ಕೃತಿಗಳನ್ನು ಸಮಾವಲೋಕನಮಾಡುವಾಗ ಈ ಮಾತುಗಳನ್ನು ಆಡುವುದು ಸಾಧಾರಣವಾಗಿ ವಾಡಿಕೆಯಲ್ಲುಂಟು. ಪಂಚಭೂತಗಳಿಂದ (ಗ್ರೀಕರು ಹೇಳುವಂತೆ ಚತುರ್ಭೂತಗಳಿಂದ) ಮಾಡಲ್ಪಟ್ಟ ಈ ಪ್ರಪಂಚದಲ್ಲಿ ಅಮರವಾದದ್ದು ಯಾವುದೂ ಇಲ್ಲವೇ ಇಲ್ಲ. ಯಾವುದಾದರೂ ಇದೆ ಎನ್ನುವ ಪಕ್ಷದಲ್ಲಿ ಅದು ಒಂದು ಜನರ ಅಥವಾ ಜನಾಂಗದ ಆತ್ಮವೇ, ಅವರ ಆಧ್ಯಾತ್ಮಿಕ ಶಕ್ತಿಯೇ, ಅವರ ಸಂಸ್ಕೃತಿಯ ಆತ್ಮೀಯತೆಯೇ. ಮನುಷ್ಯನ ಆತ್ಮ ಅಮರವಾದದ್ದೆಂದು ವೇದಾಂತ ಸಾರುತ್ತದೆ: ಜನಾಂಗಗಳ ಆತ್ಮ ಮರಣರಹಿತವಾದದ್ದೆಂಬುದನ್ನು ನಾವು ಕಣ್ಣಿನಿಂದಲೇ ನೋಡುತ್ತೇವೆ. ಆದರೆ ಎಲ್ಲ ಜನಾಂಗಗಳ ಆತ್ಮವೂ ಹೀಗೆ ನಾಶರಹಿತವಾಗಿರುವುದೆಂದು ಹೇಳಲಾಗುವುದಿಲ್ಲ. ಪುರಾತನ ಈಜಿಪ್ಟ್, ಅಸ್ಸೀರಿಯಾ, ಬೇಬಿಲೋನಿಯಾ, ಚಾಲ್ಡಿಯಾ, ಇನ್ನೂ ಹಲವು ದೇಶಗಳ ನಾಗರಿಕತೆ ಎಲ್ಲಿ, ಸಂಸ್ಕೃತಿ ಎಲ್ಲಿ? ಆ ದೇಶದ ಜನರನ್ನು ಈಗ ನೆನಸುವವರು ಯಾರು? ಒಂದು ಜನಾಂಗದ ಆತ್ಮ ಆ ಜನರ ಬಾಹುಬಲದಲ್ಲಿಲ್ಲ ; ಸಣ್ಣ ರಾಷ್ಟ್ರಗಳನ್ನು ಜಯಿಸಿ ಅವರು ಕಟ್ಟಬಹುದಾದ ಏಕಛತ್ರಾಧಿಪತ್ಯದಲ್ಲಿಲ್ಲ; ಅನುಕೂಲವಾದ ಯಂತ್ರೋಪಕರಣಗಳನ್ನು ನಿರ್ಮಿಸಿಕೊಂಡು ಅವರು ಅನುಭವಿಸಬಹುದಾದ ಭೋಗಭಾಗ್ಯಗಳಲ್ಲಿಯೂ ಸುಖಲೋಲುಪತೆಗಳಲ್ಲಿಯೂ ಇಲ್ಲ. ಅವರು ಮುಟ್ಟಬಲ್ಲ ಮಾನಸಿಕ ಮಟ್ಟದಲ್ಲಿದೆ ಅವರ ಜೀವ ; ಅವರು ನಡೆಯುವ ನೈತಿಕ ಜೀವನದ ಹಾದಿಯಲ್ಲಿದೆ ಅವರ ಪ್ರಾಣ; ಅವರು ಹೊಂದಿರುವ ಉನ್ನತ ಧ್ಯೇಯಗಳಲ್ಲಿಯೂ ಹಲುಬಿಡುವ ಆಧ್ಯಾತ್ಮಹಂಬಲುಗಳಲ್ಲಿಯೂ ಇದೆ ಅವರ ಆತ್ಮತೇಜಸ್ಸು. ಈ ಧ್ಯೇಯಗಳನ್ನು ಅವರು ಮುಟ್ಟದಿರಬಹುದು ; ಈ ಹವಣಿಕೆಗಳನ್ನು ಅವರು ಸಾಧಿಸಲು ಅಶಕ್ತರಾಗಿರಬಹುದು. ಆದರೂ ಅವರ ಆದರ್ಶಗಳಲ್ಲಿ ದೈವಿಕವಾದ ಕಳೆ ಇದ್ದರೆ ಸಾವಿರಾರು ವರುಷಗಳು

ಅವು ಮಾನವನ ಚಿತ್ತಪ್ರಪಂಚದ ಮೇಲೆ—ಆತ್ಮಜೀವನದ ಮೇಲೆ—ತಮ್ಮ ಪ್ರಭಾವವನ್ನು ಬೀರಿ ಸಮಾಜದ ಸಂಸ್ಥೆಗಳನ್ನೂ ಜನರ ನಡೆ ನುಡಿಗಳನ್ನೂ ಸಂಸ್ಕರಿಸಿ ಅಳಿವಿಲ್ಲದೆ ಉಳಿಯುವುವು. ಭಾರತೀಯರು ಇಂದು ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು, ಆರ್ಥಿಕ ದುರ್ದಶೆಯಲ್ಲಿ ಬಿದ್ದು, ತಮ್ಮ ತನುಮನಧನಗಳನ್ನು ರಕ್ಷಿಸಿಕೊಳ್ಳಲು ಕೂಡ ಅಶಕ್ತರಾಗಿ ತೊಳಲಿ ಬಳಲುತ್ತಿರಬಹುದು; ಆದರೂ ಭಾರತೀಯರ ಉನ್ನತ ತಾತ್ವಿಕದರ್ಶನಗಳನ್ನೂ ಉದಾತ್ತವಾದ ಧಾರ್ಮಿಕಧ್ಯೇಯ ಗಳನ್ನೂ ಹಳಿಯುವವರು ಯಾರು? ಅವರ ಅಸಮಾನವಾದ ಆಧ್ಯಾತ್ಮಿಕ ಸಂಸ್ಕೃತಿಯನ್ನೂ, ಕಲಾಸಂಪತ್ತಿಯನ್ನೂ ಅಲ್ಲಗಳೆಯುವವರು ಯಾರು? ಇಂಗ್ಲೆಂಡು ಯೂರೋಪಿನ ಭೂಪಟದಲ್ಲಿ ಇಲ್ಲದೆ ಹೋದರೂ ಷೇಕ್ಸ್‌ಪಿಯರ್, ಮಿಲ್ಟನ್, ಷೆಲ್ಲಿ, ವರ್ಡ್ಸ್‌ವರ್ತ್—ಈ ಮುಂತಾದ ಕವಿಗಳನ್ನು ಮರೆಯುವವರು ಯಾರು?

ಆತ್ಮಸಂಸ್ಕೃತಿಯ ಬಲವೇ ಇದು. ಅದಕ್ಕೆ ಸಾವಿಲ್ಲ, ನೋವಿಲ್ಲ. ರಾಷ್ಟ್ರಗಳು ಉರುಳಬಹುದು; ಚಕ್ರಾಧಿಪತ್ಯಗಳು ಮಾಯವಾಗಬಹುದು; ಆತ್ಮಸಂಸ್ಕೃತಿಯೋ ಅಚಲವಾಗಿ ನಿಲ್ಲುವುದು. ಇದನ್ನು ಒಪ್ಪಿದ ಮೇಲೆ ಸದ್ಯದಲ್ಲಿ ನಮ್ಮ ಪ್ರಶ್ನೆ ಏನೆಂದರೆ: ಪುರಾತನ ಗ್ರೀಕರ ಆತ್ಮಸಂಸ್ಕೃತಿಯ ಅಚ್ಚೇನು? ಅವರ ಜೀವನದೃಷ್ಟಿಯ ಕಳೆ ಏನು? ಪ್ರಾಚೀನಗ್ರೀಕರನ್ನು ಅಮರರನ್ನಾಗಿ ಮಾಡಿರುವ, "ಹೆಲನಿಸಂ" ಎಂದೆನಿಸಿಕೊಂಡಿರುವ, ಅವರ ಅಧ್ಯಾತ್ಮ ಸಂಸ್ಕೃತಿಯ ಮುಖಮುದ್ರೆ ಏನು?

**ಸಂಪ್ರದಾಯ—ಸುಧಾರಣೆಗಳ ವ್ಯತ್ಯಾಸ.** ಯಾವ ಜನಾಂಗದ ನಾಗರಿಕತೆಯನ್ನು ಪರೀಕ್ಷಿಸಿದರೂ ಒಂದು ವಿಷಯ ಎದ್ದು ಕಾಣುವುದು: ಸಾಮಾನ್ಯ ಜನಜೀವನದ ನಂಬಿಕೆ, ಆಚಾರವ್ಯವಹಾರ, ಪದ್ಧತಿ ಕ್ರಮಗಳಿಗೂ ಆ ಸಮಾಜದಲ್ಲಿ ಆಗಾಗ ಉದಯಿಸುವ ಜ್ಞಾನಿಗಳ ಬೋಧನೆಗೂ ವ್ಯತ್ಯಾಸ—ಕೆಲವು ಸಮಯಗಳಲ್ಲಿ ವಿರೋಧ—ಇದ್ದೇ ಇರುವುದು. ಜ್ಞಾನಿಗಳು ಜನಸಾಮಾನ್ಯಕ್ಕಿಂತ ಮುಂದೆ ನೋಡಬಲ್ಲರು. ಅದರ ಕುಂದುಕೊರತೆಗಳನ್ನು ಅರಿಯಬಲ್ಲರು. ಅದರ ದೋಷಗಳನ್ನು ಉದ್ಘಾಟಿಸತಕ್ಕವರು. ಸಾಧಾರಣ ಜನರಾದರೋ ಪೂರ್ವಾಚಾರ

ಗಳನ್ನೇ ಅನುಸರಿಸುತ್ತಾ ಸಂಪ್ರದಾಯಶರಣರಾಗಿರುವರು. ಗ್ರೀಸಿನ ಚರಿತ್ರೆಯಲ್ಲಿಯೂ ಇದೇ ಸಂಪ್ರದಾಯ—ವಿಚಾರಗಳ ವಿರೋಧವನ್ನು ಕಾಣುವೆವು. ಅಂದಮೇಲೆ ಗ್ರೀಕರ ಸಂಸ್ಕೃತಿಯ ಮುಖಮುದ್ರೆಯನ್ನು ನಾವು ನೋಡಬೇಕಾದರೆ ಕ್ರಿ. ಪೂ. ಐದನೆಯ ಶತಮಾನದಿಂದೀಚೆ ಅವರಲ್ಲಿ ಉದ್ಭವಿಸಿದ ಜ್ಞಾನವೀರರ ಬೋಧನೆಗಳನ್ನು ಪರೀಕ್ಷಿಸಿದರೆ ಸಾಲದು ; ಐದನೆಯ ಶತಮಾನದ ಹೊತ್ತಿಗೆ ಗ್ರೀಕ್‌ಸಂಸ್ಕೃತಿ ಸ್ಥಾಯಿಯಾದ ರೂಪ ಹೊಂದಿ ಗ್ರೀಕ್‌ಜನಾಂಗದ ಚರಿತ್ರೆ ಭರದಿಂದಲೇ ಸಾಗಿತ್ತು. ಈ ಸಾಮಾನ್ಯ ಗ್ರೀಕ್‌ಜನಾಂಗ ಸಾಮೂಹಿಕರೀತಿಯಲ್ಲಿ ಯಾವ ನಂಬಿಕೆ ಗಳನ್ನು ಪಡೆದಿತ್ತು, ಅದರ ಜೀವನದ ದೃಷ್ಟಿ ಏನಿತ್ತು, ಯಾವ ಧ್ಯೇಯ ಗಳಿಂದ ಅದು ಸ್ಫೂರ್ತಿಹೊಂದಿತ್ತು,—ಈ ವಿವರಗಳನ್ನು ನಾವು ಅರಿಯ ಬಲ್ಲೆವಾದರೆ ಗ್ರೀಕರಲ್ಲಿ ಆಗಾಗ್ಗೆ ಜನಿಸಿದ ಯುಗಪುರುಷರಿಂದ ಗ್ರೀಕ್ ಜನಜೀವನ ಯಾವ ರೂಪಗಳಲ್ಲಿ ಸುಧಾರಣೆ ಹೊಂದಿತೆಂಬುದನ್ನು ತಿಳಿಯುಲು ಸುಲಭವಾಗುವುದು. ಸಾಮಾನ್ಯಜನಜೀವನವೇ ವೀರ ಪುರುಷರ ಹಿನ್ನೆಲ; ಈ ಹಿನ್ನೆಲದ ಬಣ್ಣವನ್ನೂ ಕಾಂತಿಯನ್ನೂ ನೋಡಿ ದಲ್ಲದೆ ಅದರಲ್ಲಿ ಕಟ್ಟಿರುವ ಜ್ಞಾನವಜ್ರಗಳ ಪ್ರಕಾಶವನ್ನು ನೋಡಿ ಆನಂದಿಸಲಾರೆವು.

(೧) **"ಕ್ಲಾಸಿಕ್" ಗ್ರೀಕ್ ಸಂಸ್ಕೃತಿಯ ಲಕ್ಷಣಗಳು. ೧ ಸಾಮರಸ್ಯ.** (Harmony) ಗ್ರೀಕ್‌ಜನಾಂಗದ ಆತ್ಮದ ಸ್ವಭಾವಲಕ್ಷಣ ಗಳನ್ನು ಮೊದಲು ಪರೀಕ್ಷಿಸಬಹುದು. ಸಾಮರಸ್ಯ, ಪರಿಮಾಣ, ಸಮತಾಳ, ಹೊಂದಾಣಿಕೆ ಅಥವಾ ಅಂಗಸಮಾಕಾರ—ಇದೇ ಗ್ರೀಕ್‌ಸಂಸ್ಕೃತಿಯ ಸರ್ವಸಾಮಾನ್ಯವಾದ ಹಾಗೂ ಅತ್ಯಂತ ಅಮೂಲ್ಯವಾದ ಲಕ್ಷಣ. ಗ್ರೀಕರು ಜೀವನದ ಎಲ್ಲಾ ಪ್ರಾಂತಗಳಲ್ಲಿಯೂ ಈ ಸಾಮರಸ್ಯವನ್ನು ಏರ್ಪಡಿಸಲು ಪ್ರಯತ್ನಪಟ್ಟರು. ಜೀವನದಲ್ಲಿ ನಮ್ಮ ಆಸೆಗಳಿಗೂ ಆಕಾಂಕ್ಷೆಗಳಿಗೂ ಒಂದು ಮಿತಿ ಇರಬೇಕು. ಯಾವುದರಲ್ಲಿಯೂ ಅತಿ ಯಾದುದನ್ನು ವರ್ಜಿಸಬೇಕು. ನಮಗೆ ಸಾಧ್ಯವಾದುದನ್ನು ಅರಿತು ಅದನ್ನು ಮಿತವಾದ ಉಚಿತವಾದ ರೀತಿಯಲ್ಲಿ ಮಾಡಬೇಕು. ಸಾಧ್ಯವಲ್ಲ ದುದಕ್ಕೆ ಕೈ ಹಾಕಲೇಬಾರದು. ಐಶ್ವರ್ಯವಾಗಲಿ, ಅಧಿಕಾರವಾಗಲಿ, ಇತರ

ವಿಧವಾದ ಭೋಗಸಾಮಗ್ರಿಗಳಾಗಲಿ, ಅವುಗಳನ್ನು ಹೊಂದಿರುವುದಕ್ಕೆ ಒಂದು ಮೇರೆ ಇರಬೇಕು. ಮೇರೆದಪ್ಪಿದರೆ ಅವು ವೈಯಕ್ತಿಕಜೀವನದ, ಹಾಗೆಯೇ ಸಮಾಜಜೀವನದ, ಭದ್ರತೆಗೆ ಧಕ್ಕೆ ತರುವುವು. ನಮ್ಮ ಸ್ವಾಭಾವಿಕಶಕ್ತಿಗಳ ಸಂಸಿದ್ಧಿಯಲ್ಲಿಯೂ ಇದೇ ರೀತಿಯಾಗಿ ಒಂದು ಪರಿಮಾಣವನ್ನು ಅನುಸರಿಸಬೇಕು. ಯಾವುದೊಂದು ಸ್ವಯಾರ್ಜಿತಗುಣವೇ (acquired character) ಆಗಲಿ, ಪಿತ್ರಾರ್ಜಿತಸಾಮರ್ಥ್ಯವೇ (innate character) ಆಗಲಿ, ಇತರ ಗುಣಗಳನ್ನು ನಾಶಗೊಳಿಸುವಷ್ಟು ಬಲವಾದ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಲು ಅವಕಾಶಕೊಡಕೂಡದು. ಎಲ್ಲಾ ಶಕ್ತಿಗಳನ್ನೂ ಸಾಧ್ಯವಾದಷ್ಟು ಸರಿಸಮವಾದ ರೀತಿಯಲ್ಲಿ ಅಭಿವೃದ್ಧಿಪಡಿಸಿ ಒಟ್ಟಿನಲ್ಲಿ ಸಮಾಕಾರವಡೆದ ಜೀವನವನ್ನು ನಡಸುವುದೇ ನಮ್ಮ ಗುರಿಯಾಗಿರಬೇಕು. ಇದರಿಂದ ಜೀವನ ಪರಿಪೂರ್ಣವಾಗುವುದಲ್ಲದೆ ಅಪೂರ್ವವಾದ ಒಂದು ಸೊಬಗನ್ನು, ಕಾಂತಿಯನ್ನು, ಸುಖವನ್ನು, ಹೊಂದುವುದು. ಇದೇ ಅರಿಸ್ಟಾಟಲನು ಕರೆದ ಸ್ವರ್ಣಮಧ್ಯಮ ತತ್ವ. ಇದರಂತೆಯೇ ಸಾಹಿತ್ಯದಲ್ಲಿಯೂ, ಕಲೆಯಲ್ಲಿಯೂ ಪರಿಮಾಣವೇ, ಅಂಗಸಮಾಕಾರವೇ, ಸಾಮರಸ್ಯವೇ, ಪರಿಪೂರ್ಣತೆಯ ಗುಟ್ಟು. ಗ್ರೀಕ್ ಕಲೆಯನ್ನು "ಕ್ಲಾಸಿಕ್" ಅಂದರೆ ಸುಸಂಸ್ಕೃತವಾದದ್ದು ಎಂದು ಸಾಧಾರಣವಾಗಿ ಹೇಳುವುದುಂಟು. ಹಾಗೆಂದರೆ ಪೂರ್ಣವಾಗಿ ಅಂಗ ಸಮಾಕಾರವುಳ್ಳದ್ದು, ಅವಯವಗಳೆಲ್ಲಾ ನಿರ್ಮಲವಾಗಿ ಸ್ಫುಟವಾಗಿ ಎದ್ದು ಕಾಣಿಸತಕ್ಕದ್ದು, ಶುದ್ಧವಾದದ್ದು, ಹದಿನಾರುಬಣ್ಣದ ಅಪರಂಜಿ, ಎಂದರ್ಥ. ಅಳತೆಗೆ ಮೀರಿದುದು, ಒಂದು ತೂಕಕ್ಕೆ ಬಾರದುದು, ಹಿಡಿತಕ್ಕೆ ಸಿಕ್ಕದಿರುವುದು, ಅಯತಸಿದ್ಧವಾದ್ದುದು (incoherent), ಅಸ್ಪಷ್ಟವಾದದ್ದು, ಅವ್ಯಕ್ತವಾದದ್ದು–ಈ ಗುಣಗಳನ್ನು ಹೊಂದಿರುವಕಲೆಗೆ "ರೊಮ್ಯಾಂಟಿಕ್ ಕಲೆ" ಎಂದು ಹೇಳುತ್ತಾರೆ—ಈ ಗುಣಗಳು ಗ್ರೀಕ್‌ಕಲಾವಿದರಿಗೆ ಅಸಹನೀಯವಾದುವು. ಶಿಲ್ಪಕಲೆಯಲ್ಲಿ ಪ್ರತಿಮೆಯ ಪ್ರತಿಯೊಂದು ಅವಯವವೂ ಸ್ಫುಟವಾಗಿರಬೇಕು, ಅವಯವಗಳಿಗೆ ಪರಸ್ಪರ ಹೊಂದಾಣಿಕೆ ಇರಬೇಕು. ಪ್ರತಿಮೆಯಲ್ಲಿ ಹೊರಸೂಸುವ ಭಾವ ಶುದ್ಧವಾಗಿರಬೇಕು. ಕಾವ್ಯದಲ್ಲಿ ಕೆತ್ತುವ ಪ್ರತಿಯೊಂದು ಚಿತ್ರವೂ (Imagery)

ಸ್ಪಷ್ಟವಾಗಿ ಕಾಣಿಸಬೇಕು. ಕಲ್ಪನೆ ಖಚಿತವಾದ ರೂಪಗಳನ್ನು ಸೃಷ್ಟಿಸಬೇಕಲ್ಲದೆ ಅನಿರ್ಣೀತವಾದ, ಅಸ್ಪಷ್ಟವಾದ, ಮಸಕು ಮಸಕಾದ ಭಾವಗಳನ್ನು ಕಲ್ಪಿಸಕೂಡದು. ಸಂಗೀತದಲ್ಲಿ ಅನುಭವಿಸುವ ರಸ ಶುದ್ಧವಾಗಿ, ತಿಳಿಯಾಗಿ, ನಿರ್ಮಲವಾಗಿ, ಪ್ರತ್ಯೇಕವಾಗಿ ಇರಬೇಕು. ಕರುಣದಲ್ಲಿ ಕಾಠಿಣ್ಯವಿರಬಾರದು; ಪ್ರೇಮದಲ್ಲಿ ಕಪಟವಿರಬಾರದು; ಗಾಂಭೀರ್ಯದಲ್ಲಿ ನಗೆಸಾರವಿರಬಾರದು.

"ಅತಿ ಸರ್ವತ್ರ ವರ್ಜಯೇತ್" ಎಂಬ ಈ ಪರಿಮಾಣಸೂತ್ರ ವೈಯಕ್ತಿಕಜೀವನಕ್ಕೆ ಹೇಗೋ ಸಮಾಜ ಜೀವನಕ್ಕೂ ಹಾಗೆಯೇ ಅನ್ವಯಿಸುವುದು. ಸಮಾಜದಲ್ಲಿ ಯಾವ ಒಬ್ಬ ವ್ಯಕ್ತಿಯಾಗಲಿ, ಯಾವುದೊಂದು ಪಂಗಡವಾಗಲಿ, ಇತರ ವ್ಯಕ್ತಿಗಳ ಅಥವಾ ಪಂಗಡಗಳ ಶ್ರೇಯವನ್ನು ದೂರೀಕರಿಸಿ ಮುಂದಕ್ಕೆ ಬರಬಾರದು. ಮನುಷ್ಯನು ಸಂಘಜೀವಿ, ಸಮಾಜಪ್ರಿಯನು. ಆದ್ದರಿಂದ ಸಮಗ್ರಸಮಾಜದ ಅಭಿವೃದ್ಧಿಯಲ್ಲಿಯೇ ತಾನೂ ತನ್ನ ಅಭಿವೃದ್ಧಿಯನ್ನು ಕಾಣಬಲ್ಲನು. ಮಾನವನ ಶ್ರೇಯ ಸಂಸ್ಥಾರೂಪವುಳ್ಳದ್ದು. ಆದುದರಿಂದ ಜನಜೀವನದ ಸಂಸ್ಥೆಗಳಲ್ಲಿಯೇ ನಮ್ಮ ಮೇಲ್ಮೆಯನ್ನು ನಾವು ಅರಸಬೇಕು.

೨. **ಸರಳತೆ** (Simplicity). ಇದನ್ನು ಪರ್ಯಾಯದಲ್ಲಿ ಹೇಳಬೇಕಾದರೆ ಜೀವನದಲ್ಲಾಗಲಿ, ಕಲೆಯಲ್ಲಾಗಲಿ, ಸಾಹಿತ್ಯದಲ್ಲಾಗಲಿ, ಪ್ರಕೃತಿಯ ನಿರ್ಮಾಣಗಳಲ್ಲಾಗಲಿ, ಸೊಬಗಿರಬೇಕಾದರೆ ಸರಳತೆ ಇರಬೇಕು. ಈ ಸರಳಸ್ವಭಾವವನ್ನು ಗ್ರೀಕರು ಕೊಂಡಾಡಿದಷ್ಟು ಮತ್ತೆ ಯಾವ ಜನಾಂಗವೂ ಕೊಂಡಾಡಿಲ್ಲ. ಸಮರಸವುಳ್ಳದ್ದೆಲ್ಲಾ ಸರಳವಾದುದೆಂದು ಗ್ರೀಕರ ಭಾವನೆ. ಸಂಕೀರ್ಣವಾದುದೆಲ್ಲಾ (complex) ಸಾಮರಸ್ಯರಹಿತವಾದುದು, ಪರಿಮಾಣರಹಿತವಾದುದು. ಜೀವನ ಸರಳವಾಗಿರಬೇಕಾದರೆ ಪ್ಲೇಟೊ ಹೇಳುವಂತೆ ನಿಷ್ಕೃಷ್ಟವಾದ ಒಂದು ಗುರಿಯನ್ನು ಹೊಂದಿರಬೇಕು. ನಮ್ಮ ಸಾಮರ್ಥ್ಯಗಳನ್ನೆಲ್ಲಾ ಆ ಗುರಿಯ ಸಾಧನೆಯಲ್ಲಿಯೇ ವಿನಿಯೋಗಿಸಬೇಕು. ಇದನ್ನು ಬಿಟ್ಟು ಅನೇಕ ವಿಧವಾದ ಧ್ಯೇಯಗಳನ್ನೂ, ಗುರಿಗಳನ್ನೂ, ಮುಂದಿಟ್ಟುಕೊಂಡು ಹೋದರೆ ಜೀವನ ತೊಡಕಾಗಿ ನಮ್ಮ ಶಕ್ತಿ ಸಾಮರ್ಥ್ಯಗಳು ತುಣುಕು ತುಣುಕಾಗಿ

ಸವೆಯುವುವಲ್ಲದೆ ಆತ್ಮನಲ್ಲಿ ಮಹತ್ತರವಾದ ಗೊಂದಲವನ್ನು ಎಬ್ಬಿ ದಂತಾಗುವುದು. ಹ್ರಸ್ವದಲ್ಲಿ ಜೀವನ ಸಂಕೀರ್ಣವಾದಷ್ಟೂ ಗೊಂದಲ ಹೆಚ್ಚು. ಇದರಿಂದ ಸುಖಸಾಮರಸ್ಯಗಳು ಹಾರಿಹೋಗುವುವು. ಕಾರಣದಿಂದಲೇ ಪ್ಲೇಟೊ ತನ್ನ ಆದರ್ಶರಾಜ್ಯದಲ್ಲಿ ಪ್ರತಿಯೊಂ ಪಂಗಡದ ಜನರೂ ನಿಯಮಿತವಾದ (ಅಂದರೆ ತಮ್ಮ ಸಾಮರ್ಥ್ಯ ಅನುಸಾರವಾದ) ಒಂದೇ ವೃತ್ತಿಯನ್ನು ಅವಲಂಬಿಸಬೇಕೆಂದೂ, ಒಂದ ಪಂಗಡದವರು ಮತ್ತೊಂದು ಪಂಗಡದವರ ಕೆಲಸಕ್ಕೆ ಕೈಹಾಕಕೂ ದೆಂದೂ ಹೇಳುವನು. ಇದರ ಆಧಾರದ ಮೇಲೆಯೇ ಅವನ ಸಮಾ ಕಟ್ಟಡ ಕಟ್ಟಲ್ಪಟ್ಟಿರುವುದು. ಹೀಗೆಯೇ ಸಾಹಿತ್ಯದಲ್ಲಿಯೂ ಸಂಗೀ ದಲ್ಲಿಯೂ ಇತರ ವಿಧವಾದ ಕುಶಲಕಲೆಗಳಲ್ಲಿಯೂ ಸರಳತೆಯನ್ನು ಅನುಸರಿಸಬೇಕೆಂದು ಆತನು ಒತ್ತಾಯಪಡಿಸುವನು. ಆದರ್ಶರಾಜ್ಯದ ರುದ್ರನಾಟಕಗಳೂ, ಈಗ ಎಲ್ಲೆಲ್ಲಿಯೂ ವ್ಯಾಪಿಸುತ್ತಿರುವ "ಹಿಂದೂಸ್ಥಾ ಚೌಚೌ" ಅಂತಹ ಸಂಗೀತವೂ ಬರಕೂಡದೆಂದು ಶಾಸನಮಾಡುವನು ಕಾರಣವೇನೆಂದರೆ ಇಂತಹ ನಾಟಕಸಂಗೀತಗಳಲ್ಲಿ ಭಾವ—ರಸ— ಪಾರಿಶುದ್ಧ್ಯಕ್ಕೆ ಅವಕಾಶವಿಲ್ಲ. ನಾನಾ ವಿಧದ ಭಾವಗಳೂ ರಸಗಳೂ ಸಂಕರವಾಗೋಣದರಿಂದ ಅವುಗಳನ್ನು ಅನುಭವಿಸುವ ಆತ್ಮನು ಚಿತ್ತ ಸಂರಂಭವನ್ನು ಹೊಂದಿ ತಳಮಳಗೊಂಡು ಗೊಂದಲದಲ್ಲಿ ಬೀಳುವನು. ಹೀಗಾಗಿ ಜೀವನದಲ್ಲಿ ಯಾವ ಗುಣವನ್ನು — ಅನುಕರಿಸಬೇಕು, ಯಾವುದನ್ನು ಬಿಡಬೇಕು, ಎಂಬುದು ಗೊತ್ತಾಗದೆ ಅತ್ಮನ ಸುಖ ಶಾಂತಿಗಳು ಹಾರಿಹೋಗುವುವು. ಹೀಗೆಂದು ಪ್ಲೇಟೊ ಅಭಿಪ್ರಾಯ ಪಡುತ್ತಾನೆ. ಸಂಕೀರ್ಣತೆಯಲ್ಲಿಯೂ ಒಂದು ವಿಧವಾದ ಉಚ್ಚತರದ ಸಾಮರಸ್ಯ ಅಥವಾ ಪರಿಮಾಣತತ್ವವಿರಬಹುದು, ಇದರಿಂದ ಅತಿಶಯ ತರವಾದ ಸರಳತೆಯೊಂದು ಸಿದ್ಧಿಸಬಹುದು, ಎಂಬುದು ಆತನಿಗೆ ತೋರಲಿಲ್ಲ.೧ ಇದು ಹೇಗಿದ್ದರೂ ಸರಳತೆಯ ಶ್ರೇಷ್ಠತೆಯನ್ನು ಗ್ರೀಕರು ಹೇಗೆ ಮೆಚ್ಚಿದರೆನ್ನುವುದು ಪ್ರಕೃತದಲ್ಲಿ ನಾವು ಗಮನಿಸಬೇಕಾದ ವಿಷಯ. ಈ ಸರಳತೆಯೇ "ಕ್ಲಾಸಿಕ್" ಎನ್ನುವುದರ ಒಂದು ಅರ್ಥವಿಶೇಷ.

೧. ಅರಿಸ್ಟಾಟಲ್ ರುದ್ರನಾಟಕವನ್ನು ಮೆಚ್ಚಿ ಅದರ ಶುದ್ಧೀಕರಣಗುಣವನ್ನು ವಿವರಿಸಿರುವರು.

**೩. ಅವಯವಿಯೇ (Whole) ಮೊದಲು ಬರತಕ್ಕದ್ದು.** ಈ ಸರಳತೆ, ಸಾಮರಸ್ಯ, ಪರಿಮಾಣ ಭಾವಗಳನ್ನು ಗ್ರೀಕ್ ಚರಿತ್ರೆಯಲ್ಲಿ ಸಾಮಾನ್ಯ ಜನರಂತೆಯೇ ಕವಿಗಳೂ ನಾಟಕಕರ್ತೃಗಳೂ ತಾತ್ವಿಕರೂ ಪ್ರಶಂಸಿಸುವರು. ಸಾಕ್ರಟೀಸ್, ಪ್ಲೇಟೊ, ಅರಿಸ್ಟಾಟಲ್ ಇವರೆಲ್ಲರೂ ಜೀವನಸಮಕಟ್ಟನ್ನು ಹೊಗಳುವರು. ತಾತ್ವಿಕ ದೃಷ್ಟಿಯಲ್ಲಿ ಹೇಳಬೇಕಾದರೆ, ಗ್ರೀಕರಿಗೆ ಸಂಪೂರ್ಣವಾದುದೇ, ಸಮಗ್ರವಾದುದೇ, ಪ್ರಧಾನವಾದುದು. ಅಂಗಗಳು ಅಥವಾ ಅಂಶಗಳು ಗೌಣವಾದುವು. ಅಂಶಿ ಕ್ಷೇಮವಾಗಿದ್ದರೆ ಅಂಶಗಳೂ ಕ್ಷೇಮವಾಗಿರುವುವು — ಅದರ ಕ್ಷೇಮಕ್ಕೆ ಭಂಗಬಂದರೆ ಅಂಶಗಳೂ ನಷ್ಟಹೊಂದುವುವು. ಇದರಂತೆ ಪ್ರತ್ಯೇಕಾಂಶಗಳು ಒಂದೊಂದೂ ವೃದ್ಧಿಹೊಂದುತ್ತಿದ್ದರೂ ಇದರಿಂದಲೇ ಸಂಪೂರ್ಣವಾದ ಅಂಶಿಯೂ ಪ್ರಗತಿಯನ್ನು ಹೊಂದುತ್ತಿದೆ ಎಂದು ಹೇಳಲಾಗುವುದಿಲ್ಲ. ಆದರೆ ಅಂಶಿ ಸಮಗ್ರವಾಗಿ ಸುಸ್ಥಿತಿಯಲ್ಲಿರಬೇಕಾದರೆ ಪ್ರತ್ಯೇಕವಾದ ಅಂಶಗಳೂ ಕ್ಷೇಮದಿಂದಿರಬೇಕು. ಹಾಗೆ ಅಂಶಗಳು ಕ್ಷೇಮವಾಗಿರಬೇಕಾದರೆ ಅವು ಪರಸ್ಪರ ಹೊಂದಿಕೆಯಿಂದಿರಬೇಕು. ಅಂದ ಮೇಲೆ ಅವಯವಗಳಲ್ಲಿ ಪರಿಮಾಣವಿರಬೇಕು, ಸಾಮರಸ್ಯವಿರಬೇಕು, ಎಂದು ಹೇಳಿದಹಾಗಾಯಿತು.

**೪. ಅವಯವಿಯೇ ಜ್ಞೇಯವಸ್ತು.** ಅವಯವಿಯೇ ಸರಳವಾದದ್ದು, ಶುದ್ಧವಾದದ್ದು, ಸ್ಪಷ್ಟವಾದದ್ದು, ಮೇರೆಯುಳ್ಳದ್ದು, ಖಚಿತವಾದದ್ದು. ಆದ್ದರಿಂದ ಅವಯವಿಯೇ ನಿಜವಾದ ಜ್ಞಾನಕ್ಕೆ ವಿಷಯವಾದದ್ದು. ಅಸ್ಪಷ್ಟವಾದುದನ್ನು, ಅಪಾರವಾದುದನ್ನು, ಅನಿರ್ಣೀತವಾದುದನ್ನು, ಅರಿಯಲಾಗುವುದಿಲ್ಲ. ಅವ್ಯಕ್ತವೆಂಬುದು ಅಜ್ಞೇಯ. ವ್ಯಕ್ತವಸ್ತುವಾಗಬೇಕಾದರೆ ಅವ್ಯಕ್ತದೊಂದಿಗೆ ಸೀಮಾತತ್ವವೊಂದು ಬೆರೆಯಬೇಕು. ಸೃಷ್ಟಿಯಾಗುವುದೇ ಈ ವಿಧದಲ್ಲಿ. ಅವ್ಯಕ್ತವಾಧ ಗರ್ಭಪಿಂಡದಲ್ಲಿ ಪಾರತತ್ವ ಪ್ರವೇಶಿಸುವುದರಿಂದ ವಿಧವಿಧವಾದ ಅಂಗಾಂಗಗಳು ಉತ್ಪತ್ತಿಯಾಗಿ ಜೀವನು ರೂಪಹೊಂದುತ್ತಾನೆ. ಅವ್ಯಕ್ತವಾದ ಶಿಲೆಯಲ್ಲಿ ಶಿಲ್ಪಿ ಖಚಿತವಾದ ಒಂದು ಪಾರತತ್ವವನ್ನು ತುಂಬುವುದರಿಂದ ವ್ಯಕ್ತವಾದ ಆಕಾರ ಎದ್ದು ಕಾಣುತ್ತದೆ. ಅಸ್ಪಷ್ಟವಾದ ಧ್ವನಿಗೆ ಸ್ಪಷ್ಟವಾದ ಕೆಲವು

ಪರಿಮಿತಿಗಳನ್ನು ಹಾಕುವುದರಿಂದ ಸ್ವರಗಳುಂಟಾಗಿ ಸ್ವರಗಳ ಸಮ್ಮೇಲನದಿಂದ ರಾಗವುಂಟಾಗುತ್ತದೆ. ಕವಿಯ ಕೆಲಸವೂ ಹೀಗೆಯೇ ತನ್ನ ಭಾವಗಳಿಗೂ ಭಾವನೆಗೂ ಸನ್ನಿವೇಶಕ್ಕನುಗುಣವಾದ ಮಟ್ಟು ಹಾಕುವುದೇ ಆಗಿದೆ. ಈ ಮಟ್ಟು ಅಥವಾ ಮೇರೆ ಎಷ್ಟು ಖಚಿತವಾಗಿದ್ದರೆ ಅದರಿಂದ ಫಲಿಸುವ ರೂಪವೂ ಅಷ್ಟೇ ಖಚಿತವಾಗಿರುತ್ತದೆ; ರೂಪವೆಷ್ಟು ಖಚಿತವೋ ವಸ್ತು ಅಷ್ಟು ಜ್ಞೇಯವಾಗುವುದು. ಯಾವುದಕ್ಕೆ ರೂಪವಿಲ್ಲವೋ, ನಿರ್ಣೀತವಾದ ಗುಣಗಳಿಲ್ಲವೋ, ಮೇರೆಯಿಲ್ಲವೋ, ಅದು ಅನಿರ್ವಚನೀಯವಲ್ಲದೆ ಅಚಿಂತ್ಯ ಮತ್ತು ಅಗ್ರಾಹ್ಯವೂ ಹೌದು. ಇಂತಹ ಅಗ್ರಾಹ್ಯ—ಅವ್ಯಕ್ತ—ಅಪಾರಗಳನ್ನು ಕಂಡರೆ ಗ್ರೀಕರು ಹೇಸುವರು. ಅವರ ಸಂಸ್ಕೃತಿಯು ಹೆಗ್ಗುರುತೆಂದರೆ ಪರಿಮಾಣ, ಮಟ್ಟು, ಮೇರೆ, ರೂಪ. ಈ ಪರಿಮಾಣಗಳನ್ನು ಅಂಕಗಳಿಂದ ಸೂಚಿಸಬಹುದಾದುದರಿಂದ—ಅಳೆಯಬಹುದಾದುದರಿಂದ-ಗಣಿತಶಾಸ್ತ್ರ ಪ್ರಾಧಾನ್ಯತೆ ಪಡೆದು ಗ್ರೀಕರಲ್ಲಿ ತತ್ವಶಾಸ್ತ್ರದ ಭಾಗವಾಯಿತು. ಗ್ರೀಕ್ ಸಂಸ್ಕೃತಿ "ಕ್ಲಾಸಿಕ್" ಎನ್ನುವುದರ ಅರ್ಥವನ್ನು ಸ್ಪಷ್ಟಪಡಿಸುವ ತತ್ವವಿದೊಂದು.

೫. **ಸಹಜತೆ.** (Naturalness) "ಕ್ಲಾಸಿಕ್" ಎನ್ನುವುದರ ಅರ್ಥವನ್ನು ಇನ್ನೊಂದು ರೀತಿಯಲ್ಲಿ ಸ್ಪಷ್ಟಪಡಿಸಬಹುದು. ಗ್ರೀಕ್ ಸಂಸ್ಕೃತಿ ಸ್ವಾಭಾವಿಕ ವಸ್ತುಗಳನ್ನು ಸ್ವಾಭಾವಿಕವಾದ ರೀತಿಯಲ್ಲಿಯೇ ಕಾಣಲು ಪ್ರಯತ್ನ ಪಡುವುದು. ಕವಿಗಳು ಪ್ರಕೃತಿವೈಭವವನ್ನು ವರ್ಣಿಸುವಾಗ ವೈಪರೀತ್ಯಕ್ಕಾಗಲಿ, ಉತ್ಪ್ರೇಕ್ಷೆಗಾಗಲಿ, ಅವುಗಳಲ್ಲಿ ಮಾನವಹೃದಯ ಭಾವಗಳನ್ನು ಆರೋಪಿಸುವುದಕ್ಕಾಗಲಿ, ಅವಕಾಶ ಕೊಡುವುದಿಲ್ಲ. ಕಂಡದ್ದನ್ನು ಕಂಡಹಾಗೆ ಹೇಳುವುದೇ ಅವರ ವಿಶೇಷ. (ಅಂದರೆ ಇದ್ದುದನ್ನು ಇದ್ದ ಹಾಗೆ ಹೇಳಿದಂತಾಯಿತೆ ಎನ್ನುವುದು ಬೇರೆ ಪ್ರಶ್ನೆ). ವಸ್ತುವಿನಲ್ಲಿ ನೇರವಾಗಿ ನಾವು ಏನನ್ನು ಕಾಣಬಹುದೋ ಅದನ್ನೇ ಗ್ರೀಕ್‌ಕವಿ ವರ್ಣಿಸುವುದು. ಸಮುದ್ರದ ಅಲೆಯೊಂದನ್ನು ಹೋಮರ್ ಕವಿ ಕಂಡರೆ ಅದು ನಿರ್ಮಲವಾಗಿರಲಿ, ಕಾಳವರ್ಣದಲ್ಲಿರಲಿ; ಭೋರ್ಗರೆಯುತ್ತಿರಲಿ, ಮೆಲ್ಲನೆ ಸರಿಯುತ್ತಿರಲಿ—ಅದು ಯಾವಾಗಲೂ ಶೈತ್ಯವುಳ್ಳ ಉಪ್ಪು ನೀರೆಂದು ಹೇಳುವನೇ ವಿನಾ ಅದಕ್ಕೆ ಮತ್ತೆ ಯಾವ ಗುಣವನ್ನೂ

ಆರೋಪಿಸುವುದಿಲ್ಲ. ಕಂಡದ್ದನ್ನು ಕಂಡಹಾಗೆ ಹೇಳುವ ಈ ಗುಣಕ್ಕೆ ನೈಜತೆ, ಸಹಜತ್ವ, ಸ್ವಾಭಾವಿಕತೆ, ಎಂದೆನ್ನಬಹುದು. ಒಂದರ್ಥದಲ್ಲಿ ನಿಷ್ಕಾಪಟ್ಯ ಅಥವಾ ಸರಳತೆ ಎಂದೂ ಹೇಳಬಹುದು. ಪ್ರೇಮವನ್ನು ಅನೇಕ ಬಗೆಗಳಲ್ಲಿ ಕವಿಗಳು ವರ್ಣಿಸುತ್ತಾರೆ. ಹುಟ್ಟಿನಲ್ಲಿ ದೈಹಿಕವಾದುದು, ದೇಹದ ರಾಗಗಳಲ್ಲೆಲ್ಲಾ ಅತ್ಯಂತ ಬಲಶಾಲಿಯಾದದ್ದು. ಆದರೂ ಆದ್ಯಂತ ಮಾನವಜೀವನವನ್ನೇ ವ್ಯಾಪಿಸಿ, ಭಾವವನ್ನೂ ಬುದ್ಧಿಯನ್ನೂ ಚುರುಕುಗೊಳಿಸಿ, ಧೈರ್ಯ, ಸ್ಥೈರ್ಯ, ಕಾರುಣ್ಯ, ಆತ್ಮತ್ಯಾಗ ಮುಂತಾದ ಗುಣಗಳನ್ನೆಲ್ಲಾ ಹುರುಪುಗೊಳಿಸುವುದು. ಇನ್ನೊಂದು ದೃಷ್ಟಿಯಲ್ಲಿ ನೋಡಿದರೆ, ಸಂಸಾರಗಳನ್ನೂ, ಸಂಸ್ಥೆಗಳನ್ನೂ, ಸಮಾಜಗಳನ್ನೂ ಒಂದುಗೂಡಿಸುವ ಅತಿ ಸೂಕ್ಷ್ಮವಾದ ಹಾಗೂ ಬಿಗಿಯಾದ ಸ್ನಿಗ್ಧ ಪದಾರ್ಥವದು. ಪ್ರಾಣಿಪ್ರೇಮ, ಪ್ರಣಯಿಗಳ ಪ್ರೇಮ, ಗಂಡಹೆಂಡಿರ ಪ್ರೇಮ, ತಾಯಿತಂದೆಗಳ ಪ್ರೇಮ, ಸಂಘ ಅಥವಾ ಸಮಾಜ ಪ್ರೇಮ—ಈ ರೀತಿಯಾಗಿ ಪ್ರೇಮ ಹಲವು ಹಂತಗಳನ್ನು ಹೊಂದಿರುವುದು. ಈ ಹಂತಗಳನ್ನೆಲ್ಲಾ ಗ್ರೀಕ್‌ಕವಿಗಳು ತಮ್ಮ ಪ್ರೇಮ ವರ್ಣನೆಯಲ್ಲಿ ಹತ್ತಿರುವರು. ಆದರೂ ಇವೆಲ್ಲಾ ಪ್ರೇಮದ ಸ್ವಾಭಾವಿಕ ರೂಪಗಳೇ. ಇವುಗಳಲ್ಲಿ ಅತಿಶಯುವಾದ, ಲೋಕೋತ್ತರವಾದ, ಅತೀಂದ್ರಿಯವಾದ, ಅಸ್ವಾಭಾವಿಕವಾದ, ವ್ಯಾಪಾರ ಯಾವುದೂ ಇಲ್ಲ. ಆಧುನಿಕರು ಪ್ರೇಮವನ್ನು ವರ್ಣಿಸುವುದನ್ನು ನೋಡಿ. ಇವರ ದೃಷ್ಟಿಯಲ್ಲಿ ಪ್ರೇಮ ಅಪ್ರಾಕೃತವಾದುದು, ಲೋಕೋತ್ತರವಾದುದು, ಆತ್ಮದ ಒಂದೇ ಆಹಾರ, ಅಮರರಿಗೆ ಮಾತ್ರ ಯೋಗ್ಯವಾದ ಉಣಿಸು. ಹುಟ್ಟಿನಲ್ಲಿ ದೈಹಿಕವಾದದ್ದೆಂಬುದು ಮರೆತುಹೋಯಿತು, ಸ್ವಭಾವದಲ್ಲೇ ದೈವಿಕವಾದದ್ದೆಂದು ಮನವರಿಕೆಯಾಯಿತು. ಪ್ರೇಮಕ್ಕೆ ಪಾತ್ರರಾದವರು ನಮ್ಮ ಪ್ರೇಮವನ್ನು ಹಿಂತಿರುಗಿಸದಿದ್ದರೂ ಚಿಂತೆಯಿಲ್ಲ, ಪ್ರೇಮವೆಂಬ ವಿದ್ಯುತ್ತನ್ನು ನಮ್ಮ ಆತ್ಮನಲ್ಲಿ ಆಕರ್ಷಿಸಿಕೊಂಡು ಅನುಭವಿಸುವುದೇ ಅತಿಶಯುವಾದ ಆನಂದ. ಪ್ರೇಮವೆಂದರೆ ಆಕಳು ಕರುವಿನಲ್ಲಿಟ್ಟಿರುವ ವಾತ್ಸಲ್ಯ, ಪ್ರಣಯಿಗಳು ಪರಸ್ಪರ ಸೇರಬೇಕೆನ್ನುವ ಕಾಮ, ಎಂಬುದು ಅದೃಶ್ಯವಾಯಿತು ; ಪರಮಾತ್ಮನು ತನ್ನ ಪ್ರಪಂಚದೊಂದಿಗೆ ಒಂದು

ಗೂಡುವ ಹೊಂದಿಕೆಯ ಚಿಹ್ನೆಯೆಂದು ಭಾಸವಾಯಿತು. ಹ್ರಸ್ವದಲ್ಲಿ, ಆಧುನಿಕರ ಪ್ರೇಮವರ್ಣನೆಯಲ್ಲಿ ಸಹಜತೆಯಿಲ್ಲ, ಸ್ವಾಭಾವಿಕತೆಯಿಲ್ಲ. ತಮ್ಮ ಭಾವನಾಲೋಕದಲ್ಲಿ ಮೂಡುವ ಉದಾತ್ತವಾದ ಭಾವನೆ ಯಾವುದೋ, ಧ್ಯೇಯ ಅಥವಾ ಆದರ್ಶ ಯಾವುದೋ, ಅದರ ಹೊದಿಕೆಯನ್ನು ಪ್ರೇಮಕ್ಕೆ ಹೊದಿಸುವರು; ಆ ಧ್ಯೇಯಕ್ಕನುಗುಣವಾಗಿ ತಮ್ಮ ಭಾವಸಾಗರದಲ್ಲಿ ಏಳುವ ಭಾವತರಂಗಗಳು ಯಾವುವೋ ಆ ತರಂಗಗಳ ಉಬ್ಬರವಿಳಿತಗಳನ್ನು ಚಿತ್ರಿಸುವರು.

**೬. ಗ್ರೀಕ್ ಕಲೆ ಮತ್ತು ಸಾಹಿತ್ಯ ಭಾವ ಶೂನ್ಯವಾದುವೇ?** (Emotiolness) ಗ್ರೀಕ್ ಕವಿಗಳು ಈ ರೀತಿಯಲ್ಲಿ ಮಾನವಭಾವಗಳನ್ನು ಬಾಹ್ಯವಸ್ತುಗಳಲ್ಲಿ ಆರೋಪಿಸುವುದನ್ನು ಅರಿಯರು. ಇದನ್ನು ನೋಡಿ ಕೆಲವರು ಗ್ರೀಕ್‌ಕಾವ್ಯವೂ ಕಲೆಯೂ ಭಾವಶೂನ್ಯವಾದುವೆಂದು ಹೇಳುತ್ತಾರೆ; ನಿರ್ಜೀವವಾದದ್ದು, ಕಾವಿಲ್ಲದ್ದು, ಶೈತ್ಯಭರಿತವಾದದ್ದು, ಎಂದು ಹಳಿಯುತ್ತಾರೆ. ಇದು ಬಹಳ ಮಟ್ಟಿಗೆ ತಪ್ಪು ಅಭಿಪ್ರಾಯ. ಕಲೆಯಿಂದಾಗಲಿ ಕಾವ್ಯದಿಂದಾಗಲಿ ಸ್ಫೂರ್ತಿಪಡೆದ ಯಾವನೂ ರಸೋತ್ಪಾದಕವಾದ ಭಾವಗಳನ್ನು ದೂರೀಕರಿಸುವಂತಿಲ್ಲ. ಹಾಗೆ ಮಾಡಿದರೆ ಕಾವ್ಯವಾಗಲಿ ಕಲೆಯಾಗಲಿ ಹುಟ್ಟುವಂತಿಲ್ಲ. ಕಾರಣಾಂತರಗಳಿಂದ ಗ್ರೀಕ್‌ಕಲೆಯಲ್ಲಿ ಕೆಲವುಕಡೆ ಭಾವಪ್ರದರ್ಶನ ಕಡಮೆಯಾಗಿದೆ ಎಂದು ಹೇಳಬಹುದೇ ಹೊರತು ಭಾವವೇ ಇಲ್ಲವೆಂದಾಗಲಿ, ಅಥವಾ ಎಲ್ಲಾ ಕಡೆಯಲ್ಲಿಯೂ ಅದು ಅಲ್ಪವಾಗಿದೆಯೆಂದಾಗಲಿ, ಹೇಳಲಾಗದು. ಶಿಲ್ಪದಲ್ಲಿ ಗ್ರೀಕ್‌ಪ್ರತಿಮೆಗಳು ಸಾಧಾರಣವಾಗಿ ಗಂಭೀರಮುದ್ರೆಯನ್ನು ತಾಳಿರುವುವು. ದೈವಭಕ್ತಿಯನ್ನು ಹುಟ್ಟಿಸುವ ಸಲುವಾಗಿ, ದೇವಗೃಹಗಳ ಭೂಷಣಾರ್ಥವಾಗಿ, ವೀರಯೋಧರ ಜ್ಞಾಪಕಾರ್ಥವಾಗಿ, ರಾಜಕಾರಣಪಟುಗಳ ಸ್ಮಾರಕಾರ್ಥವಾಗಿ, ಪರಂತು ಸಾರ್ವಜನಿಕರ ಉಪಯೋಗಕ್ಕಾಗಿ, ಕೆತ್ತಿದ ಪ್ರತಿಮೆಗಳು ಗಾಂಭೀರ್ಯವನ್ನಲ್ಲದೆ ಮತ್ತೆ ಯಾವ ಉದ್ರೇಕಿತಭಾವವನ್ನು ಸೂಚಿಸಲಾಗುವುದು? ಹಾಗೆ ಸೂಚಿಸುವುದರಲ್ಲಿ ಔಚಿತ್ಯವಾದರೂ ಏನಿದೆ? ಆದರೆ ಒಂದು ಕದನವನ್ನಾಗಲಿ, ಅಲಂಕಾರ ಚಿತ್ರವನ್ನಾಗಲಿ, ಕಡೆಗೆ ಮಂಟಪದ ಮೇಲಿನ ಒಂದು ಕಮಾನನ್ನಾಗಲಿ

ಚಿತ್ರಿಸುವಾಗ ಗ್ರೀಕ್‌ಶಿಲ್ಪಿಗಳು ಯಥೇಚ್ಛವಾಗಿಯೇ ಭಾವವನ್ನು ಪ್ರದರ್ಶಿಸುತ್ತಾರೆ. ಇದರಿಂದ ತಿಳಿಯಬರುವುದೇನೆಂದರೆ, ಆರಿಸಿಕೊಂಡ ಕಲಾವಸ್ತುವಿನ ಸ್ವಭಾವಕ್ಕನುಸಾರವಾಗಿ ಗ್ರೀಕ್‌ಶಿಲ್ಪ ಸ್ವಲ್ಪ ಕಾಠಿಣ್ಯತೆಯನ್ನು ತೋರುವುದೇ ಹೊರತು ಸಿದ್ಧಾಂತ ರೀತಿಯಾಗಿ ಭಾವಪ್ರದರ್ಶನ ಕೂಡದೆನ್ನುವ ಕಾರಣದಿಂದಲ್ಲ. ಹಾಗೆ ಕೆಲವಸ್ತುಗಳನ್ನೇ ಆರಿಸಿ ಕೊಳ್ಳಲು ಬಲವಾದ ಕಾರಣಗಳೂ ಗ್ರೀಕರಿಗೆ ಇದ್ದುವು. ಕಲೆ ಗೋಸ್ಕರವೇ ಕಲೆ ಎಂಬ ಕೂಗು ಅವರದಲ್ಲ. ಕ್ರಿ. ಪೂ. ನಾಲ್ಕನೆಯ ಶತಮಾನದವರೆಗೂ — ಅಂದರೆ ಎಪಿಕ್ಯೂರಿಯನ್ನರೂ, ಸ್ಟೋಯಿಕರೂ ತಲೆಯೆತ್ತುವವರೆಗೂ—ಗ್ರೀಕರ ದೃಷ್ಟಿಯಲ್ಲಿ ರಾಜ್ಯವೇ, ಸಮಾಜವೇ, ನಿಜವಾದ ಪೂರ್ಣಜೀವಿ; ವ್ಯಕ್ತಿಗಳು ಈ ಪೂರ್ಣಜೀವಿಯ ಶ್ರೇಯಸ್ಸಿನ ಸಲುವಾಗಿ ಬದುಕಿರುವ ಅವಯುವಗಳು. ವ್ಯಕ್ತಿಗಳಿಗೆ ವೈಯಕ್ತಿಕವಾದ ಅಂತಸ್ತಾಗಲಿ, ಪ್ರಾಶಸ್ತ್ಯವಾಗಲಿ ಇರಲಿಲ್ಲ. ಹೀಗಿರುವಾಗ ವ್ಯಕ್ತಿಗಳ ಭೋಗದ ಸಲುವಾಗಿಯಾಗಲಿ, ಅವರ ಪ್ರತಾಪಮಹಿಮೆಗಳಿಗೋಸ್ಕರವಾಗಿಯಾಗಲಿ, ಕಲೆ ಕೆಲಸಮಾಡುತ್ತಿರಲಿಲ್ಲ. ಅಂದಮೇಲೆ ವೈಯಕ್ತಿಕ — ಆತ್ಮೀಯ — ಭಾವರಾಗಗಳನ್ನು ಚಿತ್ರಿಸುವ ಕಲೆ ಎಲ್ಲಿ ಹುಟ್ಟಬೇಕು ? ಇಂತಹ ಕಲೆ ಸಮಾಜದ ಭದ್ರತೆಗೆ ಕುಂದನ್ನು ತರುವುದಲ್ಲವೆ? ಪ್ಲೇಟೋವಿನ ಕಲಾಖಂಡನೆಗೆ ಇಲ್ಲಿ ಒಂದು ಬಲವಾದ ಕಾರಣವನ್ನು ಕಾಣಬಹುದು.

ಸ್ಟೋಯಿಕರು ರಂಗಕ್ಕೆ ಬಂದ ಮೇಲೆ ವೈಯಕ್ತಿಕ ಮಾನವನಿಗೆ ಪ್ರಾಶಸ್ತ್ಯ ಸಿಕ್ಕಿತು. ಆತನ ಆತ್ಮೀಯ ಹಂಬಲುಗಳು, ಹವಣಿಕೆಗಳು ರಾಜ್ಯದ ಯೋಗಕ್ಷೇಮಕ್ಕಿಂತ ಹೆಚ್ಚು ಬೆಲೆಯುಳ್ಳವು ಎಂಬ ಭಾವ ತಲೆದೋರಿತು. ಪರಮಾತ್ಮನೊಡನೆ ಆತ್ಮನು ಹೊಂದಿರುವ ಸಂಬಂಧ ಅತಿ ಪ್ರಾಮುಖ್ಯ; ಮಾನವಜೀವನವೆಲ್ಲಾ ಪಾರಲೌಕಿಕದ ಕಡೆ ಗುರಿ ಹೊಂದಿರಬೇಕು; ಭೂಮಂಡಲದ ನಾಯಕರುಗಳೆಲ್ಲಾ ಈ ಚತುರ್ದಶ ಮಂಡಲಗಳ ಅಧಿನಾಯಕನಾದ ಆ ಪರಮದೇವನ ರಾಜ್ಯದ ವಿಜಯ ವೈಭವಗಳಿಗಾಗಿಯೇ ಆಳುವರು; ಆತ್ಮದ ದೃಷ್ಟಿಯಲ್ಲಿ ದೇಹ ಬಹು ನಿಕೃಷ್ಟವಾದದ್ದು — ಇಂತಹ ಭಾವನೆಗಳು ತಲೆಯೆತ್ತಿದ ಮೇಲೆ ಆತ್ಮನ

ಆಗುಹೋಗುಗಳೇ, ಭಾವವಿಭಾವಗಳೇ, ಕಲೋಪಾಸಕನಿಗೆ ಅರ್ಥವುಳ್ಳ ಆಕರ್ಷಣೀಯ ವಸ್ತುಗಳಾದುದು ಏನೂ ಆಶ್ಚರ್ಯವಿಲ್ಲ. "ರೊಮ್ಯಾಂಟಿಕ್" ಕಲೆಯ ಪ್ರಧಾನ ಗುಣವೇ ಈ ಆತ್ಮರಾಜ್ಯನಿಮಗ್ನತೆ: ಆದರೆ "ಕ್ಲಾಸಿಕ್" ಯುಗದಲ್ಲಿ ಗ್ರೀಕರು ದೇಹಕ್ಕೂ ಆತ್ಮಕ್ಕೂ ಈ ವಿಧವಾದ ವಿರೋಧವನ್ನು ಕಾಣಲಿಲ್ಲ. ದೇಹವೇ ಸುಂದರ ವಸ್ತು, ದೇಹದ ವ್ಯಾಪಾರಗಳೇ ಅರ್ಥಗರ್ಭಿತವಾದುವುಗಳು ; ದೇಹಪರಿಪೂರ್ಣತೆಯೇ ಉತ್ಕೃಷ್ಟ ಮಾನವಜೀವನದ ಆಧಾರ. ದೇಹಪರಿಪೂರ್ಣತೆಯೆಂದರೆ ಅದರಲ್ಲಿ ಬುದ್ಧಿಯ ವ್ಯವಸಾಯವೂ ಸೇರಿರುವುದೆಂದು ಮರೆಯಕೂಡದು. ಹೀಗೆಂದು ಬಗೆದವರು ಜೀವನದ ಸ್ವಾರಸ್ಯವನ್ನೆಲ್ಲಾ ಶರೀರದ ಮುಖಾಂತರವಾಗಿಯೇ ಪ್ರದರ್ಶಿಸಲು ಪ್ರಯತ್ನಪಟ್ಟುದು ಸಹಜವೇ ತಾನೆ. ಸೋಫೊಕ್ಲೀಸನು ತನ್ನ ಚಿತ್ತಸಂಸ್ಕಾರವನ್ನೆಲ್ಲಾ ಶಬ್ದಪರಿಪೂರ್ಣತೆಯಲ್ಲಿ ತುಂಬಿದ ಹಾಗೆ ಫಿಡಿಯಸ್ಸನು ತನ್ನ ಮನೋಬಲವನ್ನೆಲ್ಲಾ ಪ್ರತಿಮೆಯ ರೂಪಸೌಂದರ್ಯದಲ್ಲಿಯೇ ಲಯಮಾಡಿದನು.

ಅಂದರೆ ಭಾವಬಲವನ್ನು ಗ್ರೀಕ್‌ಕಲೆಗಾರರು ಪೂರ್ಣವಾಗಿ ಅಲಕ್ಷ್ಯ ಮಾಡಿದರೆಂದು ತಾತ್ಪರ್ಯವಲ್ಲ. ಭಾವಪ್ರದರ್ಶನವೇ ತಪ್ಪು, ಆದ್ದರಿಂದ ಅದನ್ನು ಬಿಡಬೇಕು, ಎಂದು ಅವರು ಹೇಳಲಿಲ್ಲ. ಗೀತಕಾವ್ಯದಲ್ಲಿ (Lyric) ಭಾವವನ್ನು ಬಿಡುವುದು ಹೇಗೆ? ಈಸ್ಕಿಲಸ್ಸಿನಲ್ಲಿಯೂ, ಸೋಫೊಕ್ಲೀಸನಲ್ಲಿಯೂ, ಯೂರಿಪಿಡಿಸ್ಸಿನ "ಟ್ರೋಅಡೀಸ್"ಎಂಬ ಕಾವ್ಯದಲ್ಲಿಯೂ ಅತ್ಯಂತ ಮರ್ಮಭೇದಕವಾದ ಹೃದಯವಿದ್ರಾವಕವಾದ ಭಾವಗಳು ಚಿತ್ರಿಸಲ್ಪಟ್ಟಿವೆ. ರುದ್ರನಾಟಕಗಳಲ್ಲಂತೂ ದುಃಖದೃಶ್ಯಗಳೂ ವ್ಯಸನವ್ಯಾಪಾರಗಳೂ ಹೇರಳವಾಗಿಯೇ ಇವೆ — ಅವುಗಳಲ್ಲಿ ಬರುವ ರೋದನಸೂಚಕವಾದ ಹಲವು ಅಸ್ಪಷ್ಟ ಕೂಗುಗಳಿಗಂತೂ ನಮ್ಮಲ್ಲಿ ಮಾತೇ ಇಲ್ಲ. ಹೋಮರಿನಲ್ಲಿ ಆಕಿಲೀಸ್ ಮುಂತಾದ ವೀರರು ಕೂಡ ಅಳುವುದಕ್ಕೆ — ತಮ್ಮ ಕೂದಲನ್ನು ಕಿತ್ತು ನೆಲದ ಮೇಲೆ ಬಿದ್ದು ಹೊರಳಾಡುವುದಕ್ಕೆ — ಅಂಕೆಯೇ ಇಲ್ಲ. ಹೀಗೆಯೇ ಇತರ ಕವಿಗಳಲ್ಲಿಯೂ ಚರಿತ್ರಕಾರರಲ್ಲಿಯೂ ವಾಗ್ಮಿಗಳಲ್ಲಿಯೂ ಭಾವಪ್ರದರ್ಶನಕ್ಕೆ ಬೇಕಾದಷ್ಟು ನಿದರ್ಶನಗಳು ಸಿಕ್ಕುತ್ತವೆ. ಆದುದರಿಂದ

ಗ್ರೀಕ್‌ಕಲೆಯಲ್ಲಿ ಭಾವದ ಅಭಾವವಿಲ್ಲ. ಹಾಗಾದರೆ ಗ್ರೀಕ್‌ಕಲೆ ಕಾವಿಲ್ಲದ್ದು, ನಿರ್ಜೀವವಾದದ್ದು, ಶೈತ್ಯಭರಿತವಾದದ್ದು, ಎನ್ನುವ ಮಾತು ಶುದ್ಧ ತಪ್ಪೋ, ಹಾಗಿಲ್ಲದಿದ್ದರೆ ಅದರ ಅರ್ಥವೇನು, ಎಂದು ಕೇಳಿದರೆ ಹೀಗೆ ಉತ್ತರ ಕೊಡಬಹುದು. ಇದೇ ಸರಿ, ಅದೇ ತಪ್ಪು' ಎಂಬ ನೀತಿಧರ್ಮ ಗ್ರೀಕರದಲ್ಲ. ತಪ್ಪುನೆಪ್ಪುಗಳು ಸಮಯಸಂದರ್ಭ ಗಳನ್ನು ಅನುಸರಿಸಿರುತ್ತವೆ. ಕಾಲ, ದೇಶ, ವರ್ತಮಾನಗಳಿಗನುಸಾರ ವಾಗಿ ಅನೇಕ ವಿಷಯಗಳನ್ನು ತಪ್ಪು ಅಥವಾ ನೆಪ್ಪು ಎಂದು ನಿರ್ಣ ಯಿಸಬೇಕಾಗುತ್ತದೆ. ಭಾವಪ್ರದರ್ಶನದ ವಿಷಯವೂ ಹೀಗೆಯೇ. ಕೆಲವು ಕಲೆಗಳಲ್ಲಿ—ಅದರಲ್ಲಿಯೂ ಶಿಲ್ಪದಲ್ಲಿ — ಹಿಂದೆಯೇ ತಿಳಿಸಿದ ರಾಜಕೀಯ ಮತ್ತು ಇತರ ವಿಧವಾದ ಕಾರಣಗಳಿಂದ ಭಾವಪ್ರದರ್ಶನ ಕಡಮೆಯಾಗಿರುವುದು. ಅಲ್ಲದೆ ನಾವು ಮೊದಲೇ ಹೇಳಿದಂತೆ ಮಿತಿ ಮೇರೆಗಳನ್ನು ಸನ್ಮಾನಿಸುವುದೂ, ಅತಿಯಾದುದನ್ನು ವರ್ಜಿಸುವುದೂ ಗ್ರೀಕ್‌ಸಂಸ್ಕೃತಿಯಲ್ಲಿ ಮೊದಲಿಂದಲೂ ಬೇರೂರಿಕೊಂಡು ಬಂದ ಸಂಪ್ರದಾಯವಾಗಿತ್ತು. ಇದನ್ನನುಸರಿಸಿ ಸರ್ವಸಾಧಾರಣವಾಗಿ ಗ್ರೀಕ್ ಕಲೆಯಲ್ಲಿ ಭಾವಪ್ರದರ್ಶನಸನ್ನಿವೇಶಗಳಲ್ಲೆಲ್ಲಾ ಒಂದು ವಿಧವಾದ ಹಿಡಿತವನ್ನು, ಬಿಗಿಯನ್ನು, ಕಟ್ಟನ್ನು, ಕಾಣುತ್ತೇವೆ. ಲಂಗುಲಗಾ ಮಿಲ್ಲದ, ಕಟ್ಟಿಲ್ಲದ, ನಿಯಮ ನಿಬಂಧನೆಗಳ ನಿರ್ಬಂಧವಿಲ್ಲದ, ಕಲೆಯಲ್ಲ ಗ್ರೀಕರದು. ಕಲ್ಪನಾಶಕ್ತಿಯನ್ನು ಕಾಲದೇಶಗಳ ಔಚಿತ್ಯವಿಲ್ಲದಂತೆ ಪ್ರವಹಿಸಲು ಬಿಡುವ ಕಲೆಯಲ್ಲ ಗ್ರೀಕರದು. ಕಾವ್ಯವನ್ನು ಬರೆಯು ವುದರಲ್ಲಿ ಹಲವು ಕಟ್ಟುನಿಯಮಗಳನ್ನು ಅನುಸರಿಸುವುದು ಹೇಗೆ ಸಂಪ್ರದಾಯವೋ, ಭಾವದ ಅಭಿವ್ಯಕ್ತಿಯಲ್ಲಿಯೂ ಹಾಗೆಯೇ ಒಂದು ವಿಧದ ಮಟ್ಟುಮರ್ಯಾದೆಯನ್ನು ಅಭ್ಯಾಸಮಾಡುವುದು ಗ್ರೀಕ್‌ಕಲೆಯ ಸಂಪ್ರದಾಯ. ಹೀಗೆ ಮರ್ಯಾದೆ ಮೀರಿ ಭಾವೋದ್ರೇಕವಾಗುವಂತೆ ಬರೆದ ಕಾವ್ಯಗಳನ್ನು—ಚಿತ್ರಿಸಿದ ದೃಶ್ಯಗಳನ್ನು—ಕುರಿತೇ ಪ್ಲೇಟೊ ತನ್ನ "ಆದರ್ಶ ರಾಜ್ಯ"ದಲ್ಲಿ ಖಂಡನೋದ್ಗಾರವನ್ನು ತೆಗೆಯುವುದು. ಈ ಸಂಧರ್ಭದಲ್ಲಿಯೇ ಆತನು ಭಾವಪ್ರದರ್ಶನದಲ್ಲಿ ಸಾಧ್ಯವಾದಷ್ಟು ಹಿಡಿತವಿರಬೇಕೆಂದು ಒತ್ತಿ ಒತ್ತಿ ಹೇಳುವುದು. ಮುಗುಳ್ನಗೆಯಿಂದ

ನಮ್ಮ ಸಂತೋಷವನ್ನು ಸೂಚಿಸಬೇಕಲ್ಲದೆ ಕತ್ತಿಕಿರುಬನಂತೆ ಕಿರಿಚಿಕೊಳ್ಳಕೂಡದು. ವಿಷಣ್ಣವದನದಿಂದ ನಮ್ಮ ದುಃಖವನ್ನು ತೋರಬೇಕಲ್ಲದೆ ಎದೆ ಬಡಿದುಕೊಂಡು ಅರಚಿಕೊಳ್ಳಬಾರದು, ಮುಂತಾದುವು. ಈ ವಿಷಯದಲ್ಲಿ ಪ್ಲೇಟೋವಿಗೂ ಕ್ಲಾಸಿಕಲ್ ಗ್ರೀಕ್ ಸಂಸ್ಕೃತಿಗೂ ಪೂರ್ಣ ಐಕಮತ್ಯವಿರುವುದೆಂದು ಹೇಳಬಹುದು.

೭. **ಕಾವಿಲ್ಲದಿರುವುದಕ್ಕೆ ಇನ್ನೊಂದು ಕಾರಣ: ಕಲೆಯ ನೈಜತೆ.** ಗ್ರೀಕ್‌ಕಲೆಯಲ್ಲಿ ಕಾವಿಲ್ಲವೆನ್ನುವುದಕ್ಕೆ ಇನ್ನೊಂದು ವಿವರಣೆಯನ್ನು ಕೊಡಬೇಕಾದರೆ ನಾವು ಮೊದಲೇ ಕಂಡ ಅವರ ಸಂಸ್ಕೃತಿಯ ನೈಜತೆ, ಸಹಜತ್ವ, ಸರಳತೆಯನ್ನು ಜ್ಞಾಪಕಕ್ಕೆ ತಂದುಕೊಳ್ಳಬೇಕು. ವಸ್ತುಗಳನ್ನು ಸಾಮಾನ್ಯವಾಗಿ ಕಂಡುಬರುವ ರೀತಿಯಲ್ಲಿ ಚಿತ್ರಿಸುವ ಜಾಣ್ಮೆಯೇ ಅವರದಲ್ಲದೆ ಆಧುನಿಕಕಲೆ ಮಾಡುವಂತೆ ಕಲೆಗಾರನ ಆತ್ಮೀಯ ಭಾವರಾಗಗಳೆಂಬ ಕನ್ನಡಿಯಲ್ಲಿ — ಬಣ್ಣದ ಕನ್ನಡಿಯಲ್ಲಿ—ವಸ್ತುಗಳು ಹೇಗೆ ಕಾಣುತ್ತವೆ, ಎಂಬುದನ್ನು ಅವರು ನೋಡುವುದಿಲ್ಲ. ಗ್ರೀಕ್‌ಕವಿ ತನ್ನ ಕಾವ್ಯದಲ್ಲಿ ತನ್ನ ಆತ್ಮವನ್ನು ಹೊರಗೆಳೆದು ಬಿಚ್ಚಿ ತೋರಿಸುವುದಿಲ್ಲ. ಆಧುನಿಕಕವಿ ಮಾಡುವಂತೆ ಅದನ್ನು ವಿಭಜಿಸಿ ವಿವಕ್ಷೆಮಾಡಿ ಅದರಲ್ಲಿರಬಹುದಾದ ಮುತ್ತುರತ್ನಗಳನ್ನು ನಮ್ಮ ಪರೀಕ್ಷೆಗೆ ಎದುರಿಗಿಡುವುದಿಲ್ಲ. ಪ್ರಾಯಶಃ ಅವರ ಆತ್ಮಜೀವನ ಈ ಕಾಲದಲ್ಲಿ ಅಷ್ಟಾಗಿ ಪುಷ್ಟಿ ಹೊಂದದೇ ಇದ್ದಿರಬಹುದು. ಇಲ್ಲವೆ ಕಾರ್ಯರಂಗದಲ್ಲೇ ಹೆಚ್ಚು ಆಸಕ್ತಿ ಹೊಂದಿದ್ದ ಗ್ರೀಕರಿಗೆ ತಮ್ಮ ಪ್ರವೃತ್ತಿಗಳಿಗೆ ಬಹುದೂರವಾಗಿದ್ದು, ಹಾಗೂ ಅಂತರ್ಜೀವನದಲ್ಲಿ ಅವುಗಳನ್ನು ಪ್ರಚೋದಿಸುವ, ಆಶಯಉದ್ದೇಶಗಳಲ್ಲಿಯೂ, ಮೂಲಶಕ್ತಿಗಳಲ್ಲಿಯೂ, ಸುಪ್ತಚೇತನದ ಗೂಢವ್ಯಾಪಾರಗಳಲ್ಲಿಯೂ, ರಹಸ್ಯಕನಸುಗಳಲ್ಲಿಯೂ, ಅಭಿರುಚಿ ಇದ್ದಿರಲಾರದು. ಪ್ರಾಯಶಃ ಈ ಕನಸುಗಳನ್ನು ಅವರು ಕಂಡೂ ಇರಲಾರರು. ಪರಂತು ಫಲಿತಾಂಶದಲ್ಲಿ ಅವರ ಸಾಹಿತ್ಯದಲ್ಲಿಯೂ ಕಲೆಯಲ್ಲಿಯೂ ಸಾಧಾರಣೀಕರಣತತ್ವವಿದ್ದರೂ ಷೆಲ್ಲಿ ಹೇಳುವಂತೆ ಜೀವನವನ್ನು ಕಲೆಗಾರನ ಆತ್ಮಜೀವನವೆಂಬ ವಿವಿಧ ವರ್ಣಗಳಿಂದೊಡಗೂಡಿದ ಕನ್ನಡಿಯ ಮುಖಾಂತರ ಕಾಣುವ ಕಾರ್ಯವಿಲ್ಲ.

ಕಲೆಗಾರನು ಕಲಾವಸ್ತುವಿನೊಡನೆ ತನ್ನ ಆತ್ಮವನ್ನು ಬೆರಸದೆ ಅದಕ್ಕೆ ಹೊರಗಡೆಯೇ ನಿಲ್ಲುತ್ತಾನೆ. ಇದರಿಂದ ಆಧುನಿಕರಲ್ಲಿ ಅನೇಕರಿಗೆ ಅವರ ಕಲೆಯಲ್ಲಿಯೂ ಕಾವ್ಯದಲ್ಲಿಯೂ ಕಾವಿಲ್ಲದಂತೆ, ಜೀವವಿಲ್ಲದಂತೆ, ಕಾಣುವುದು ಸಹಜವಾಗಿಯೇ ಇದೆ.

**೮. ಮತ್ತೊಂದು ಕಾರಣ: ಭಾವಾತಿರೇಕದ ಅಭಾವ.** ಕಾವಿಲ್ಲದಿರುವುದಕ್ಕೆ ಮತ್ತೊಂದು ಕಾರಣವನ್ನು ಹೇಳಿದರೆ ಕ್ಲಾಸಿಕಲ್ ಎನ್ನುವ ಶಬ್ದದ ಅರ್ಥದಲ್ಲಿ ಇನ್ನೊಂದು ವಿಶೇಷವನ್ನು ಹೇಳಿದಂತಾಗುವುದು. ಭಾವವನ್ನು ಭಾವದ ಸಲುವಾಗಿಯೇ ಅಪ್ಪಿ ಆನಂದಿಸುವ ಭಾವಾತಿರೇಕ (Sentimentality) ಗ್ರೀಕರ ಸಂಸ್ಕೃತಿಯಲ್ಲಿಲ್ಲ—ಪರಂತು, ಕ್ಲಾಸಿಕಲ್ ಯುಗದ ಸಾಹಿತ್ಯಕಲೆಗಳಲ್ಲಿಲ್ಲ. ಭಾವವೆಂಬುದು ಭಾವರೂಪದಲ್ಲಿಯೇ ಶ್ರೇಯಸ್ಕರವಾದುದಲ್ಲ—ಅದರಿಂದ ಲಭಿಸುವುದು ನೋವು ಮತ್ತು ಆತ್ಮದ ಹುಯ್ಯಾಟವೇ ಹೊರತು ಮತ್ತೇನೂ ಅಲ್ಲ. ಇದರಿಂದಲೇ ಅರಿಸ್ಟಾಟಲನು ಭಾವಸತ್ವಗಳನ್ನು ಶುದ್ಧಿಮಾಡುವುದೇ (Katharsis) ಕಲೆಯ — ರುದ್ರ ನಾಟಕದ — ಪ್ರಧಾನ ಕೆಲಸವೆಂದು ಪರಿಗಣಿಸಿದನು. ಸಾಯುವ ಸಣ್ಣಮಕ್ಕಳ ಸ್ಮೃತಿಚಿತ್ರಗಳನ್ನೂ, ಅಲುಗುವ ಅಡುಗೂಲಜ್ಜಿಗಳ ಸ್ಮೃತಿಚಿತ್ರಗಳನ್ನೂ ಚಿತ್ರಿಸಿ ಪ್ರೇಕ್ಷಕರಲ್ಲಿ ಕಣ್ಣೀರು ಕರೆಸುವ ಅಲ್ಪ ಕೌಶಲವನ್ನು ಯೂರಿಪಿಡಿಸ್ಸಿಗೆ ಹಿಂದೆ ನಾವು ಕಾಣುವುದಿಲ್ಲ. ಇವುಗಳ ಅಭಾವದಿಂದ ಓದುಗರನೇಕರಿಗೆ ಗ್ರೀಕ್ ಸಾಹಿತ್ಯ ಶೀತಲವಾಗಿ ತೋರುವುದು. ಡಿಕನ್ಸಿನ ಅಸ್ವಾಭಾವಿಕವಾದ ಕರುಣಾರಸವನ್ನೂ, ಪೋಪನ ಅಸಹನೀಯವಾದ ಅಸತ್ಯತೆಯನ್ನೂ, ಬೈರನ್ನಿನ ಅಸಹಜವಾದ ಭಂಗಿಯನ್ನೂ, ಬುಲ್ವರ್ ಲಿಟ್ಟನ್ನಿನ ಸೋಗನ್ನೂ, ಅನುಭವಿಸಿದವರಿಗೆ ಇಂಥ ಅತಿರೇಕಭಾವದಿಂದ ಪೂರ್ಣ ವಿಮುಕ್ತವಾಗಿ, ಸಾಧಾರಣತೆ, ಸಹಜತೆ, ಸರಳತೆ, ಮಗುತನದ ನಿಷ್ಕಳಂಕತೆ, ನಿಷ್ಕಾಪಟ್ಯ, ನೇರಭಾವ, ಇವುಗಳಿಂದೊಡಗೂಡಿ ಮೆರೆದ ಗ್ರೀಕ್ ಕಲೆಯೂ ಸಾಹಿತ್ಯವೂ ಸ್ವಲ್ಪ ನೀರಸವಾಗಿ ಕಾಣುವುದರಲ್ಲಿ ಏನಾಶ್ಚರ್ಯ? ಗ್ರೀಕರಿನ್ನೂ ಪ್ರಪಂಚದ ಪ್ರಾತಃಕಾಲದಲ್ಲಿಯೇ ಇದ್ದು ಬಾಳಿ ಹೋದವರು. ಗೂಢತತ್ವಗಳನ್ನೂ, ಯೋಗಪ್ರಯೋಗಗಳನ್ನೂ, ಮಾಯಾಮೋಹಗಳನ್ನೂ,

ಕಲ್ಪನೆಯ ಇಂದ್ರಜಾಲವನ್ನೂ, ಭಾವಬಲದ ಮಹೇಂದ್ರಜಾಲವನ್ನೂ, ಆತ್ಮಜೀವನದ ಗುಂಭರಹಸ್ಯಗಳನ್ನೂ ಅರಿಯದವರು ; ಕೇವಲ ಬುದ್ಧಿ ಪ್ರಮಾಣವಾದಿಗಳು. ಮನುಷ್ಯನ ಸಹಜವಾದ ಬುದ್ಧಿಗೆ ವಸ್ತುಗಳು ಹೇಗೆ ತೋರುತ್ತವೆಯೋ ಹಾಗೆ ವಿವರಣೆಯನ್ನು ಕೊಡುವರು. ಅವುಗಳಲ್ಲಿ ಬೇರೆ ಆಂತರಿಕ ಶಕ್ತಿ ಇದೆಯೆಂದು ನಂಬಿ ಅದನ್ನು ಅರಸಲು ಹೋಗುವುದಿಲ್ಲ. ಭಾರತದ ಕಲೆಗಾರರಂತೆ ಕಲೆಯ ಮುಖಾಂತರ ನಿಗೂಢವಾದ ಆಧ್ಯಾತ್ಮತತ್ವಗಳನ್ನು ಸೂಚಿಸಲು ಹೋಗುವುದಿಲ್ಲ. ಅವರ ಕಲೆ ಸಾಂಕೇತಿಕ ಕಲೆಯಲ್ಲ (Symbolic Art). ಸಾಕ್ರಟೀಸ್, ಪ್ಲೇಟೊ ಮೊದಲಾದ ಜ್ಞಾನಿಗಳಲ್ಲಿ ಈ ಗೂಢತತ್ವಗಳ ಅರಸುವಿಕೆ ಹೇರಳವಾಯಿತು ; ಆದರೂ ಗ್ರೀಕ್ ತತ್ವಶಾಸ್ತ್ರವೂ ಕೂಡ ಕಡೆಯವರೆಗೂ ಬುದ್ಧಿಬದ್ಧವಾದ ಮಾರ್ಗವನ್ನೇ ಅನುಸರಿಸಿತು.

**(೨) ಸ್ವಾಭಾವಿಕವಾದುದು ಯಾವುದು?** ಸಹಜವಾದದ್ದು ಯಾವುದು? ಇದರ ವಿವರಣೆಯನ್ನು ಕೊಡುವುದರಲ್ಲಿ ಗ್ರೀಕರು ಮೊದಲಿಂದಲೂ ವಸ್ತುವಿನ ನಿರ್ಮಾಣದ ಉದ್ದೇಶ ಅಥವಾ ಪ್ರಯೋಜನ, ಆದರಿಂದಾಗುವ ಕೆಲಸ, ಅದರ ಗುರಿ, ಇದನ್ನೇ ನೋಡುತ್ತ ಹೋದರು. ಚಾಕುವನ್ನು ಮಾಡಿದ್ದು ಸೀಸದ ಕಡ್ಡಿಯನ್ನು ಹರಿತ ಮಾಡುವುದಕ್ಕೆ ; ಕತ್ತರಿಯನ್ನು, ಬಟ್ಟೆ ಕತ್ತರಿಸುವುದಕ್ಕೆ ; ಕುದುರೆ ನಿರ್ಮಾಣವಾಗಿದ್ದು ಸವಾರಿಗೆ; ಬಾಳೆಎಲೆ, ಊಟ ಮಾಡುವುದಕ್ಕೆ. ಆಂದಮೇಲೆ ವಸ್ತುವೊಂದು ತನಗೆ ಗೊತ್ತುಮಾಡಲ್ಪಟ್ಟಿರುವ ಉದ್ದೇಶವನ್ನು ಸಾಂಗಗೊಳಿಸಿದರೆ ಅದರ ಸ್ವಾಭಾವಿಕ ಸ್ಥಿತಿಯನ್ನು ಸಿದ್ಧಿಮಾಡಿಕೊಂಡಿತೆಂದು ಅರ್ಥ ; ಇದರಲ್ಲಿ ಅಪಜಯಪಡೆದ ವಸ್ತು ಸ್ವಾಭಾವಿಕವಲ್ಲ. ಈ ಉದ್ದೇಶ ಸಂಪೂರ್ತಿಯೇ ಅದರ ಕರ್ತವ್ಯ, ಇದೇ ಅದರ ಶ್ರೇಯ. ಈ ಕರ್ತವ್ಯವನ್ನು ನೆರವೇರಿಸುವುದೇ ಅದರ ಜೀವನದ ಧರ್ಮ, ಅದರ ನೀತಿ ; ಹಾಗೆ ನೆರವೇರಿಸಲು ಹಿಂತೆಗೆಯುವುದೇ ಅಧರ್ಮ, ಅನೀತಿ ; ಹಾಗೆ ನೆರವೇರಿಸಲು ಅದಕ್ಕಿರಬಹುದಾದ ಕೊರತೆಯೋ, ಕುಂದೇ, ಅರಿಷ್ಟ ಅಥವಾ ಕೇಡು. ಮೂಲಿಕೆ ರೋಗವನ್ನು ವಾಸಿಮಾಡುವ ಪ್ರಭಾವವನ್ನು ಪಡೆದಿದ್ದರೆ ಆ ಪ್ರಭಾವವೇ ಅದರ ಸಹಜ ಸ್ಥಿತಿ, ಅದರ ಸದ್ಗುಣ. ಬೀಜ

ಮೊಳಕೆಯಾಗಿ ದೊಡ್ಡ ಅಶೋಕವುರವಾಗುವುದೇ ಅದರ ಸ್ವಭಾವ ಸ್ಥಿತಿ; ಗರ್ಭಪಿಂಡ ಬೆಳೆದು ಪೂರ್ಣಾಕಾರದ ಮನುಷ್ಯನಾಗುವುದೇ ಅದರ ಸಹಜ ಸ್ಥಿತಿ. ಹಾಗೆಯೇ ಮಾನವನು ತನ್ನಲ್ಲಿರುವ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ಪೂರ್ಣವಾಗಿ ಸಂಸಿದ್ಧಿಗೊಳಿಸಿಕೊಂಡ ಪಕ್ಷದಲ್ಲಿ ತನ್ನ ಸಹಜಸ್ಥಿತಿಯನ್ನು ಪಡೆದನೆಂದು ಹೇಳಬಹುದು.

**(೩) ಗ್ರೀಕರು ಆಶಾವಾದಿಗಳು.** ಸಾಧಾರಣವಾಗಿ ಪ್ರಪಂಚದ ಪ್ರಭಾತದಲ್ಲಿ ಜೀವಿಸಿದ ಜನರೆಲ್ಲರೂ ಸಹಜತೆಯನ್ನೂ ಸರಳತೆಯನ್ನೂ ತೋರ್ಪಡಿಸುವರು. ಇಂಥವರು ಜೀವನದಲ್ಲಿ ಆಶಾವಾದಿಗಳೇ ಹೊರತು ನೈರಾಶ್ಯವನ್ನು ಹೊಂದುವವರಲ್ಲ. ವೇದಗಳ ಕಾಲದ ಆರ್ಯರೂ ಸಹ ದೃಶ್ಯಪ್ರಪಂಚವನ್ನು ಸಹನೆಯಿಂದಲೂ ಸ್ವಾಭಾವಿಕವಾಗಿಯೂ ನೋಡುತ್ತಿದ್ದ ಆಶಾವಾದಿಗಳೇ ಅಲ್ಲವೆ? ಆಗ ಜನರು ಇನ್ನೂ ಸತ್ಯವನ್ನು ಅರಸುತ್ತಿದ್ದ ಕಾಲ; ಇಹಲೋಕದಲ್ಲಿಯೂ ಜೀವನದಲ್ಲಿಯೂ ಇನ್ನೂ ಜಿಹಾಸೆ ಹುಟ್ಟದಿದ್ದ ಕಾಲ; ಪ್ರಕೃತಿಯಲ್ಲಿ ಸೌಂದರ್ಯವನ್ನೂ, ಪಶುಪಕ್ಷಿಗಳಲ್ಲಿ ಭ್ರಾತೃತ್ವವನ್ನೂ, ನಿತ್ಯಜೀವನದಲ್ಲಿ ಸಂತುಷ್ಟಿಯನ್ನೂ ಕಾಣುತ್ತಿದ್ದ ಕಾಲ; ಸೂರ್ಯದೇವನನ್ನು ನೋಡಿ "ನೂರು ವರ್ಷ ನಿನ್ನನ್ನು ನೋಡುತ್ತಿರೋಣ, ನೂರು ವರ್ಷ ಬದುಕಿರೋಣ, ನೂರು ವರ್ಷ ಆನಂದಪಡುತ್ತಿರೋಣ" ಎಂದು ಹೇಳುತ್ತಿದ್ದ ಕಾಲ. ಪುರಾತನ ಗ್ರೀಕರಲ್ಲಿಯೂ ಈ ಇಹಲೋಕ ಸ್ಪೈರಣೆಯ ದೃಷ್ಟಿ ಬೇರೂರಿತ್ತು. ಅನುಭವ ಪ್ರಪಂಚವನ್ನು ಹೊಸತಾಗಿ ಅರಳಿದ ಕಣ್ಣುಗಳಿಂದ ನೋಡಿ ಅದರಲ್ಲಿ ಆನಂದವನ್ನೂ ಸತ್ಯವನ್ನೂ ತೃಪ್ತಿಯನ್ನೂ ಕಾಣುತ್ತಿದ್ದರವರು. ನಿಜ, ಪ್ರಪಂಚದಲ್ಲಿರತಕ್ಕ ಅರಿಷ್ಟವನ್ನೂ ಅಸತ್ಯವನ್ನೂ ವಿರೂಪವನ್ನೂ ಕಾಣುತ್ತಿದ್ದರು. ಬೆಳಕಿನಂತೆಯೇ ಜೀವನವೂ ಅನೇಕ ಬಣ್ಣಗಳಿಂದೊಡಗೂಡಿದ್ದೆಂದು ಅರಿತಿದ್ದರು. ಅದರೆ ಅರಿಷ್ಟದ ಅನುಭವ ಅವರನ್ನು ನೈರಾಶ್ಯಕ್ಕೆ ಗುರಿ ಮಾಡಲಿಲ್ಲ. ಬೆಳಕನ್ನು ಕತ್ತಲೆ ಮುತ್ತುತ್ತದೆ; ಕತ್ತಲೆಯನ್ನು ಪುನಃ ಬೆಳಕು ಓಡಿಸುತ್ತದೆ. ಒಬ್ಬ ಸ್ನೇಹಿತನು ಇನ್ನೊಬ್ಬನ ಮರಣವನ್ನು ಕುರಿತು ಹೇಳುವನು: "ನಿನ್ನ ಸಾವಿಗೆ ನಾನೇಕೆ ದುಃಖಿಸಬೇಕು? ಪ್ರಪಂಚದ ಅನೇಕ ಭೋಗಗಳನ್ನು ನೀನನುಭವಿಸಿದೆ, ಕಡೆಗೆ ನಿನಗೆ

ಕಷ್ಟವೂ ಬಂದಿತು." "ಆನಂದವನ್ನು ಕೊಡುವುದನ್ನು ಕಂಡು ಸಂತೋಷ ಪಡು, ಕೇಡನ್ನು ಕುರಿತು ಚಿಂತಿಸಬೇಡ." ಇದೇ ನಿಜವಾದ ಗ್ರೀಕ್ ಜೀವನದೃಷ್ಟಿ.

(೪) **ಗ್ರೀಕರ ಸಂಸ್ಕೃತಿಯಲ್ಲಿ ಸೌಂದರ್ಯದ ಸ್ಥಾನ.** ಗ್ರೀಕರ ಸಂಸ್ಕೃತಿಯಲ್ಲಿ ನೀತಿಧರ್ಮಕ್ಕೂ ಸೌಂದರ್ಯಕ್ಕೂ ಬಹಳ ವ್ಯತ್ಯಾಸ ವೇನೂ ಇಲ್ಲ. ಆಧುನಿಕರ ದೃಷ್ಟಿಯಲ್ಲಿ ಸುಂದರವಾದುದೆಲ್ಲವೂ ಶ್ರೇಯಸ್ಕರವಾಗಿರಲೇಬೇಕೆಂಬ ಭಾವ ತಪ್ಪು. ಗ್ರೀಕರು ಹಾಗೆ ತಿಳಿಯು ಲಿಲ್ಲ. ಸೌಂದರ್ಯವೇ ಶ್ರೇಯವಲ್ಲದಿದ್ದರೂ ಅದು ಶ್ರೇಯದ ಒಂದಂಶ ವಾಗಿಯಾದರೂ ಇರಬೇಕೆಂದು ಅವರ ನಂಬಿಕೆ. ಹೀಗೆಂದಮಾತ್ರಕ್ಕೆ ಅವರು ಕೇವಲ ಸೌಂದರ್ಯೋಪಾಸಕರೆಂದೂ ಪ್ರತಿದಿನವೂ ಪಾರ್ಥೆನಾನ್ ಆವರಣದಲ್ಲಿದ್ದ ಶಿಲಾಪ್ರತಿಮೆಗಳನ್ನು ನೋಡಿನೋಡಿ ಹಿಗ್ಗುವುದೇ ಅವರ ಕೆಲಸವೆಂದೂ ತಿಳಿಯಕೂಡದು. ನಿಜ, ವ್ಯಾಯಾಮಕ್ರೀಡೆಗಳಾಗುವಾಗ ಅವರು ಬಟ್ಟೆಕಳಚಿ ತಮ್ಮ ಅಂಗಸೌಷ್ಠವವನ್ನು ಪ್ರದರ್ಶಿಸುತ್ತಿದ್ದರು; ಸೌಂದರ್ಯಾತಿಶಯಕ್ಕೆ ಬಹುಮಾನಗಳನ್ನು ಕೊಡುತ್ತಿದ್ದರು; ಲೀಲಾ ವಿನೋದಗಳಲ್ಲಿ ಬಹಳಕಾಲ ಕಳೆಯುತ್ತಿದ್ದರು. ಒಂದಾನೊಂದು ಸಂದರ್ಭದಲ್ಲಿ ಹೆಂಗಸೊಬ್ಬಳು ಕೊಲೆಮಾಡಿ ನ್ಯಾಯಸ್ಥಾನದ ಮುಂದೆ ನಿಲ್ಲಿಸಲ್ಪಟ್ಟಿರಲು, ಪಂಚಾಯಿತರು ಆಕೆಯ ಭುವನಮೋಹಕರೂಪ ಲಾವಣ್ಯಾತಿಶಯಗಳನ್ನು ಹಾಗೆಯೇ ನೋಡಿ ಅವಳ ಮೇಲೆ ತಪ್ಪು ಹೊತ್ತಿದ್ದರೂ ತಪ್ಪಿತಸ್ಥಳಲ್ಲವೆಂದು ತೀರ್ಮಾನಿಸಿ ಅವಳನ್ನು ಬಿಡುಗಡೆ ಮಾಡಿದರಂತೆ! ಗ್ರೀಕ್‌ನಗರಗಳು ದಿವ್ಯಸೌಧಗಳಿಂದಲೂ, ಚಿತ್ರಶಾಲೆ ಗಳಿಂದಲೂ ತುಂಬಿದ್ದುವು; ಗ್ರೀಕ್‌ದೇವಾಲಯಗಳಲ್ಲಿ ನಯನಮೋಹಕ ಶಿಲಾಮೂರ್ತಿಗಳು ನೆಲಸಿದ್ದುವು; ಗ್ರೀಕ್‌ಕಲಶಪಾತ್ರೆಗಳೂ ಚಿತಾಭಸ್ಮ ಪಾತ್ರೆಗಳೂ ಅತ್ಯಂತ ಸುಂದರವಾದ ಚಿತ್ರಗಳ ಆವಾಸಸ್ಥಾನಗಳಾ ಗಿದ್ದುವು; ಅವರ ಕಾವ್ಯಗಳ ಸೊಬಗನ್ನು ಸೋಲಿಸಿದವರೇ ಇಲ್ಲ. ಇಷ್ಟಾದರೂ ಅವರು ಸೌಂದರ್ಯವನ್ನೇ ಆರಾಧ್ಯದೇವತೆಯನ್ನಾಗಿ ಮಾಡಿಕೊಂಡಿರಲಿಲ್ಲ. ಆ ಪಕ್ಷದಲ್ಲಿ ಅವರು ಸೌಂದರ್ಯವನ್ನು ಯಾವ ರೀತಿಯಲ್ಲಿ ಕಂಡರೆನ್ನುವುದು ವಿಚಾರಮಾಡತಕ್ಕ ವಿಷಯ.

ಈಗಿನ ಕಾಲದವರಿಗೆ ಸೌಂದರ್ಯಕ್ಕೇ ಒಂದು ಇಂದ್ರಿಯವಿರುವಂತೆ ಕಾಣುತ್ತದೆ. ಚಿತ್ರಶಾಲೆಗೆ ಹೋದಾಗಲೇ, ಕಾವ್ಯವನ್ನು ಕಥನ ಮಾಡುವಾಗಲೇ, ವೇಷಭೂಷಣಗಳನ್ನು ಧರಿಸುವಾಗಲೇ, ಉಪಭೋಗಗಳನ್ನು ಅನುಭವಿಸುವಾಗಲೇ, ಇಲ್ಲವೆ ಸೌಂದರ್ಯವನ್ನು ವಿಮರ್ಶಿಸಿ ಭಾಷಣಮಾಡುವಾಗಲೇ, ಈ ಸೌಂದರ್ಯದ ಇಂದ್ರಿಯ ಕೆಲಸಮಾಡುವುದು! ಉಳಿದ ಕಾಲಗಳಲ್ಲಿ, ನಮ್ಮ ನಿತ್ಯಜೀವನದಲ್ಲಿ, ನಮ್ಮ ದಿನಚರಿಯ ಕೆಲಸಗಳಲ್ಲಿ, ಈ ಇಂದ್ರಿಯ ಸುಪ್ತವಾಗಿದ್ದು, ಆಡುವ ಮಾತಿನಲ್ಲಿ, ಪರಸ್ಪರವ್ಯವಹಾರಗಳಲ್ಲಿ, ಸೌಂದರ್ಯಾನುಭವವೆಂಬುದು ನಮಗೆ ಅಪರೂಪವೇ ಸರಿ! ಹಬ್ಬಹುಣ್ಣಿಮೆಗಳಲ್ಲಿ ಮನೆಯ ಅಲಂಕಾರವೇ ಹೊರತು ಸಾಧಾರಣ ದಿನಗಳಲ್ಲಿ ಜೇಡನ ಬಲೆಗಳೇ ನಮ್ಮ ಮನೆಯ ತೋರಣ! ಗ್ರೀಕರಲ್ಲಿ ಸೌಂದರ್ಯಾನುಭವ ಜೀವನದಲ್ಲಿ ಸರ್ವವ್ಯಾಪಿಯಾಗಿತ್ತು. ಅವರ ಹೆಸರುಗಳನ್ನು ಕೊಂಚನೋಡಿ: ಅರಿಸ್ಟೊಕ್ರಾಟಿಸ್ (ಉತ್ಕೃಷ್ಟ ಶಕ್ತಿ); ಅರಿಸ್ಟೋನೊ (ಉತ್ತಮ ಚಿತ್ತ); ಕ್ಲಿಯೋಮಿನೀಸ್ (ಘನಮಹಿಮೆ); ಆಸ್ಪೇಸಿಯಾ (ಸುಸ್ವಾಗತ) ಇತ್ಯಾದಿ. (ಹಿಂದೂಗಳ ಹೆಸರುಗಳೂ ಹೀಗೆಯೇ ಸುಂದರವಾಗಿದ್ದುವು; ಆದರೆ ಇತ್ತೀಚೆಗೆ ಪಾಶ್ಚಾತ್ಯರ ಅನುಕರಣದ ಮಹಿಮೆಯಿಂದ ಕಲ್ಲುಟ್ಟಿ, ಮುಳ್ಳುಮನೆ, ಗುಜ್ಜುಗೊರಲ, ಗೂನುಬೆನ್ನು, ಮೊದಲಾದ ಹೆಸರುಗಳು ಹೆಚ್ಚಾಗುತ್ತಿವೆ!) ಅವರ ಮಾತಿನಲ್ಲಿಯೂ ಒಂದು ವಿಧವಾದ ಮಾಧುರ್ಯ, ಲಾವಣ್ಯ, ನಯ, ತುಂಬಿದೆ. ಪ್ಲೇಟೋವಿನ ಸಂವಾದಗಳನ್ನು ಓದುವವರಿಗೆ ಅವರ ದಿನಚರಿಯ ಜೀವನದಲ್ಲಿ ಸೌಂದರ್ಯದ ವಾಸನೆ ಹೇಗೆ ಬೆರೆತುಹೋಗಿತ್ತು, ಎಂಬುದರ ಅನುಭವವಾಗದೇ ಇರದು. ಸಾಕ್ರಟೀಸನೂ ಹಿಪ್ಪೊಕ್ರಟೀಸನೂ ಪ್ರೊಟಾಗೊರಾಸನನ್ನು ನೋಡಲು ಹೋದಾಗ ಅಲ್ಲಿನ ಸನ್ನಿವೇಶವನ್ನು ಚಿತ್ರಿಸಿರುವ ದೃಶ್ಯ; "ಆದರ್ಶರಾಜ್ಯ"ದ ಪ್ರಸ್ತಾವನೆಯಲ್ಲಿಯೇ ಸಾಕ್ರಟೀಸನೂ, ಗ್ಲಾಕನ್ನನೂ ಪ್ರಾರ್ಥನೆಗೋಸ್ಕರ ಪಿರೇಯಸ್ಸಿಗೆ ಹೋದಾಗ ಪೋಲಿಮಾರ್ಕಸ್ಸನೂ, ಅಡೀಮ್ಯಾಂಟಸ್ಸನೂ ಅವರಿಗೆ ಭೇಟಿಯಾಗಿ ಅವರವರಿಗೆ ನಡೆಯುವ ಸಂಭಾಷಣೆಯ ಚಿತ್ರ; "ಫೇಡ್ರಸ್"ನಲ್ಲಿ ಸಾಕ್ರಟೀಸನು ಫೇಡ್ರಸನನ್ನು ಸಂಧಿಸಿದಾಗ ಅವರ ವಿನೋದಪ್ರಸಂಗದ ಚಿತ್ರ;

"ಸಿಂಪೋಸಿಯಂ"ನಲ್ಲಿ ಅಗೆಥಾನನ ಮನೆಯಲ್ಲಿ ಅತಿಥಿಗಳೆಲ್ಲರೂ ನೆರೆದಿರುವಾಗ ಯಜಮಾನನಾದ ಅಗೆಥಾನನು ಸೇವಕರಿಗೆ ತಾನು ಇಂಥ ಸಂದರ್ಭಗಳಲ್ಲಿ ಹೇಳತಕ್ಕ ಮಾತಿನ ವಿವರಣೆ ("ನೀವೇ ನಮ್ಮನ್ನು ಉಪಚರಿಸತಕ್ಕ ಯಜಮಾನರು, ನಾವು ನಿಮ್ಮ ಅತಿಥಿಗಳೆಂದು ಭಾವಿಸಿ; ನಮ್ಮನ್ನು ತೃಪ್ತಿಪಡಿಸಿ, ನಿಮ್ಮನ್ನು ನಾವು ಶ್ಲಾಘಿಸುತ್ತೇವೆ")—ಇವುಗಳನ್ನು ಓದಿದವರು ಗ್ರೀಕರ ಜೀವನವೇ ಸುಂದರವಾಗಿತ್ತೆಂಬುದರಲ್ಲಿ ಸಂಶಯಪಡಲಾರರು. ಗ್ರೀಕರ ಬಾಳಿನ ಹೊನಲಿನಲ್ಲಿ ಲಾವಣ್ಯವೆಂಬ ಹೊನ್ನನೀರು ಮೂಲದಲ್ಲಿಯೇ ಸೇರಿ ಅವರ ಆದ್ಯಂತ ಹೊನಲನ್ನೇ ಹೊಂಬಣ್ಣದ ಹೊಳೆಯನ್ನಾಗಿ ಮಾಡಿತ್ತು. ಇದಕ್ಕೆ ಇನ್ನೊಂದು ಆಶ್ಚರ್ಯಕರವಾದ ದೃಷ್ಟಾಂತವನ್ನೂ ಕೊಡಬಹುದು.

ಕ್ರಿ. ಪೂ. ೪೫೦ರ ಸುಮಾರಿನಲ್ಲಿ ಒಂದು ದಿನ ಸಾಯಂಕಾಲ ಅಥೆನ್ಸಿನ ನೌಕಾಸೇನೆಯೊಂದು ಈಜಿಯನ್ ಸಮುದ್ರದ ದ್ವೀಪವೊಂದರ ಬಳಿ ಲಂಗರುಹಾಕಿತು. ಅಥೆನ್ಸ್ ಸಮುದ್ರರಾಣಿಯಾಗುವುದರಲ್ಲಿತ್ತು; ಮಾರನೆಯ ದಿನವೇ ಆ ದ್ವೀಪದಮೇಲೆ ಧಾಳಿನಡೆಯಬೇಕಾಗಿತ್ತು. ಆ ಸಾಯಂಕಾಲ ನೌಕಾಧಿಪತಿ (ಆತನು ಪೆರಿಕ್ಲೀಸ್, ಮತ್ತೆ ಯಾರೂ ಅಲ್ಲ) ತನ್ನ ಕೈಕೆಳಗಿನ ಅಧಿಕಾರಿಯನ್ನು ತನ್ನೊಡನೆ ಊಟಮಾಡುವಂತೆ ಹೇಳಿಕಳುಹಿಸಿದನು. ಹಡಗಿನ ಹಿಂಭಾಗದಲ್ಲಿ ಇಬ್ಬರೂ ಊಟಕ್ಕೆ ಕುಳಿತರು. ಅಲ್ಲಿನ "ಮಾಣಿ"ಗಳಲ್ಲಿ ಚೆಲುವನ್ನೇ ಸೂರೆಗೊಂಡಿದ್ದ ಕಿಶೋರ ಚಂದ್ರವದನನಾದ ಬಾಲಕನೊಬ್ಬನು ದ್ರಾಕ್ಷಾರಸದ ಬಟ್ಟಲುಗಳನ್ನು ತುಂಬುತ್ತಿದ್ದನು. ಪೆರಿಕ್ಲೀಸನು ಆ ಬಾಲನ ಮೊಗವನ್ನು ದಿಟ್ಟಿಸಿನೋಡಿ, ಕವಿಯೊಬ್ಬನು ಯೌವನದ ಕಮನೀಯವಾದ ಕೆನ್ನೆಯಮೇಲೆ ಕುಣಿಯುತ್ತಿದ್ದ ಕಿರಣವನ್ನು ಧೂಮ್ರಕಾಂತಿ ಎಂದು ವರ್ಣಿಸಿದ್ದ ಚರಣವೊಂದನ್ನು ಎತ್ತಿ ಹೇಳುವನು. ಕಿರಿಯದಳಪತಿ ಪೆರಿಕ್ಲೀಸನು ಹೇಳಿದ ಬಣ್ಣ ಅನುಗುಣವಾಗಿಲ್ಲವೆಂದು ತಲೆಯಲ್ಲಾಡಿಸಿ, ಯೌವನದ ವಿಸ್ಫುರಿತಕುಸುಮವನ್ನು ವರ್ಣಿಸಬೇಕಾದರೆ ಮತ್ತೊಬ್ಬ ಕವಿ ಉಪಯೋಗಿಸಿದ್ದ ಗುಲಾಬಿಯ ನಸುಗೆಂಪೇ ಸರಿ ಎಂದು ಅಭಿಪ್ರಾಯಪಡುವನು. ಪೆರಿಕ್ಲೀಸನು ಇದಕ್ಕೆ ಒಡಂಬಡುವುದಿಲ್ಲ. ಅದೇ ಕವಿ ಮತ್ತೊಂದೆಡೆಯಲ್ಲಿ ತಾರುಣ್ಯದ

ಲಾವಣ್ಯವನ್ನು ಹೊಗಳುವಾಗ ಧೂಮ್ರ ವರ್ಣವನ್ನೇ ನೆನೆದಿರುವನೆಂದು ವಾದಿಸುವನು. ಹೀಗೆಯೇ ಸಂಭಾಷಣೆ ಮುಂದುವರಿಯಿತು: ಒಬ್ಬನು ಕೊಟ್ಟ ಉಲ್ಲೇಖಕ್ಕೆ ಪ್ರತಿಯಾಗಿ ಮತ್ತೊಬ್ಬನು ಸಾಟಿಯಾದ ಮತ್ತೊಂದು ಉಲ್ಲೇಖವನ್ನು ಕೊಡುತ್ತಹೋದರು. ಭೋಜನದ ಸಂಭಾಷಣೆಯೆಲ್ಲಾ ಕಲ್ಪನೆಯ ಸೂಕ್ಷ್ಮ ವ್ಯಾಪಾರಗಳನ್ನು ಕುರಿತ ಸಾಹಿತ್ಯವಿಮರ್ಶೆಯಲ್ಲಿಯೇ ಕಳೆಯಿತು. ಆದರೇನು, ಮಾರನೆಯ ದಿನ ಕದನ ಪ್ರಾರಂಭವಾದಾಗ, ಇದೇ ಪುರುಷರೇ ಪ್ರಾಣದಮೇಲಿನ ಆಸೆಯನ್ನು ತೊರೆದು ಬುದ್ಧಿವಂತಿಕೆಯಿಂದ ವೀರ ಯುದ್ಧವನ್ನು ಮಾಡಿ ಆ ದ್ವೀಪವನ್ನು ವಶಮಾಡಿಕೊಂಡರು.

ಇಬ್ಬರು ಸುಸಂಸ್ಕೃತ ಪುರುಷರು, ಕಾರ್ಯ ಪುರುಷರು, ರಣಧೀರರು, ಸೇನಾನಾಯಕರು, ರಾಜಕಾರಣಪಟುಗಳು—ಇಂಥವರು ಕದನವಾಗುವುದಕ್ಕೆ ಮೊದಲನೆಯ ದಿನ ಸಾಯಂಕಾಲ ಸಾಹಿತ್ಯವಿಮರ್ಶೆಯ ಸೂಕ್ಷ್ಮವಿಚಾರಗಳಲ್ಲಿ—ಉಪಮಾನಗಳ ಔಚಿತ್ಯಾನೌಚಿತ್ಯ ವಿಚಾರದಲ್ಲಿ—ನಿಮಗ್ನರಾಗಿರುವುದೆಂದರೆ, ಇಂಥ ಗುಣಸಂಯೋಗ ಸ್ವಲ್ಪ ವಿರಳವೆಂದೇ ಹೇಳಬೇಕಲ್ಲದೆ, ಅಂಥವರ ಸಂಸ್ಕೃತಿಯಲ್ಲಿ ಸೌಂದರ್ಯಭಾವ ಪ್ರತ್ಯೇಕಿಸಲಾಗದಂತೆ ಹೇಗೆ ಮಿಳಿತವಾಗಿ ಹೋಗಿದೆ, ಎಂಬುದು ಸ್ಪಷ್ಟವಾಗಿ ಗೋಚರವಾಗುವುದು. ಜೀವನವೆಲ್ಲಾ ಸೌಂದರ್ಯದ ಅಭಿವ್ಯಕ್ತಿಯೆಂದು ಭಾವಿಸಿದ ಗ್ರೀಕರದೃಷ್ಟಿ ಎಷ್ಟುದೂರ ಹೋಗಿತ್ತೆಂದರೆ, ಹಿಂದೆಯೇ ಹೇಳಿದಂತೆ ಧರ್ಮಜೀವನಕ್ಕೂ ಸುಂದರಜೀವನಕ್ಕೂ ಗ್ರೀಕರು ವ್ಯತ್ಯಾಸ ಕಾಣಲಿಲ್ಲ. ನಾವು ಒಳ್ಳೆಯದು ಎನ್ನುವುದನ್ನೆಲ್ಲಾ ಗ್ರೀಕರು ಸುಂದರವಾಗಿರುವುದು ಎನ್ನುವುದಕ್ಕೆ ಹಿಂತೆಗೆಯುತ್ತಿರಲಿಲ್ಲ. ನಾವು ಕೇಡೆನ್ನುವುದನ್ನು ಅವರು ಕುರೂಪವೆನ್ನುತ್ತಿದ್ದರು. ದೇಶಕ್ಕೋಸ್ಕರ ಆತ್ಮತ್ಯಾಗ, ದೈವಭಕ್ತಿ, ಸುಸ್ಥಿ ಹೊಂದಿದ ರಾಜ್ಯದಾಡಳಿತ—ಇವೆಲ್ಲವೂ ಸುಂದರವೇ. ವಿಜಯ, ವಾಗ್ವೈಖರಿ, ದುಷ್ಟಶಿಕ್ಷಣ, ವಿವೇಕ, ಶಮ, ದಮ—ಇವು ಒಳ್ಳೆಯವು, ಹಾಗೂ ಸುಂದರವೂ ಹೌದು. ಧರ್ಮವೆಂಬುದಕ್ಕೆ ಎರಡು ಮೊಗಗಳುಂಟು: ಆಜ್ಞೆ ಈಯುವ ಅಧಿಕಾರವದನವೊಂದು, ಚಿತ್ತವನ್ನೇ ಆಕರ್ಷಿಸಿ ಒಲಿಸಿಕೊಳ್ಳುವ ಸೌಮ್ಯ ಸುಂದರವದನವೊಂದು; ಗ್ರೀಕರು

ಈ ಸುಂದರವದನವನ್ನೇ ಕಂಡು ಧರ್ಮಜೀವನದಲ್ಲಿ ಆನಂದವನ್ನು ಪಡೆದರು. ಸತ್ಯಂ ಶಿವಂ ಶಾಂತಂ ಎಂದು ನಾವು ಹೇಳಿದರೆ ಸತ್ಯಂ ಶುಭಂ ಸುಂದರಂ ಎಂದು ಅವರು ಹೇಳಿದರು.

**(೫) ಗ್ರೀಕರು ಮಾನವಪಂಥಿಗಳು** (Humanists). ಇಷ್ಟು ಹೇಳಿದ ಮೇಲೆ ಗ್ರೀಕರು ಮಾನವಪಂಥಿಗಳೆಂದು ಬೇರೆ ಹೇಳಬೇಕಾಗಿಲ್ಲ. ಈ ಮಾನವಶ್ರೇಷ್ಠತಾವಾದ ತಾತ್ವಿಕ ರೀತಿಯಲ್ಲಿ ಯಾವ ರೂಪವನ್ನು ಹೊಂದಿತೆಂಬುದನ್ನು ಮುಂದೆ ಸೋಫಿಸ್ಟರ ಬೋಧನೆಯಲ್ಲಿ ಕಾಣುವೆವು. ಇಲ್ಲಿ ಗ್ರೀಕ್‌ಸಂಸ್ಕೃತಿಯಲ್ಲಿ — ಗ್ರೀಕರ ಜೀವನದೃಷ್ಟಿಗೆ ಸಂಬಂಧಿಸಿದಂತೆ—ಅದರ ಅರ್ಥವೇನು, ಪ್ರಾಮುಖ್ಯತೆ ಏನು, ಪರಿಣಾಮಗಳೇನು, ಈ ಪ್ರಶ್ನೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗಿದೆ.

ಸಾಕ್ರಟೀಸನಿಗೆ ಹಿಂದಿನ ಕಾಲದ ಗ್ರೀಕರು ಪ್ರಪಂಚವನ್ನು ಕಣ್ಣುಬಿಟ್ಟು ನೋಡಿದಾಗ ಅವರಿಗೆ ಅತ್ಯದ್ಭುತವಾದ ವಸ್ತುವೆಂದು ಗೋಚರಿಸಿದುದು ಮಾನವನೇ. ಸ್ವಾಭಾವಿಕಸ್ಥಿತಿಯಲ್ಲಿರುವ ಮಾನವನೇ,—ಅವನ ಹುಟ್ಟು, ಬೆಳವಣಿಗೆ, ಸಾವು; ಅವನ ಆರೋಗ್ಯ, ಸಂಪತ್ತು, ಒಲುಮೆ, ಆನಂದ ; ಅವನ ರೋಗ, ದಾರಿದ್ರ್ಯ, ಕಷ್ಟ— ಇವುಗಳೇ ಅವರ ಗಮನವನ್ನು ವಿಶೇಷವಾಗಿ ಸೆಳೆದ ವಿಚಾರಗಳು. ಆದ್ದರಿಂದ ತಾತ್ವಿಕರು ಹುಟ್ಟುವುದಕ್ಕೆ ಪೂರ್ವದಲ್ಲಿ ಗ್ರೀಕರು ಪ್ರಪಂಚವನ್ನು ಕೇವಲ ಭೌತವೆಂದೂ ಕಾಣಲಿಲ್ಲ. ಇಂದ್ರಿಯಾತೀತವಾದ ಆತ್ಮ, ಪರಮಾತ್ಮ, ಪರಲೋಕ ಮುಂತಾದ ತತ್ವಗಳೇ ಸತ್ಯವೆನ್ನುವ ಆಧ್ಯಾತ್ಮಿಕವೆಂದೂ ಭಾವಿಸಲಿಲ್ಲ. ಸ್ವಾಭಾವಿಕಮಾನವನೇ ಪ್ರಪಂಚದ ಪ್ರಧಾನವಸ್ತುವೆಂದ ಮೇಲೆ ಇಂಥ ಮಾನವನ ದೃಷ್ಟಿಯಿಂದ ಪ್ರಪಂಚ ಹೇಗೆ ಕಾಣುವುದು ?

ಗ್ರೀಕರಿಗೆ ಮತದ ಹಂಬಲು ಇದ್ದುದು ವಾಸ್ತವ, ಆದರೆ ಮತವನ್ನೂ ಅವರು ಮಾನವಮಟ್ಟಕ್ಕೆ ಇಳಿಸಿದರು. ವೇದದ ಕಾಲದ ಆರ್ಯರಂತೆ ಅವರ ದೇವತೆಗಳು ಮಾನವನ ಪಡಿಯಚ್ಚಿನಲ್ಲಿಯೇ ನಿರ್ಮಿತರಾದವರು. ಮಾನವನ ರಾಗಲಾಲಸೆಗಳೇ, ಆಶಾಪಾಶಗಳೇ, ದೇವತೆಗಳನ್ನೂ ಬಂಧಿಸಿದ್ದುವು. ಆದರೆ ಮನುಷ್ಯನಿಗಿಂತಲೂ ಅವರು

ಹೆಚ್ಚು ಬಲಿಷ್ಠರು, ಜೊತೆಗೆ ಅಮರರು—ಇಷ್ಟೇ ವ್ಯತ್ಯಾಸ. ಗ್ರೀಕರಲ್ಲಿಯೂ ಹಿಂದೂಗಳಲ್ಲಿರುವಂತೆ ಮೂವತ್ತುಮೂರುಕೋಟಿ ದೇವತೆಗಳಿದ್ದರು. ಅಂದರೆ ಅವರೂ ಬಹುದೈವಾರಾಧಕರು(Polytheists). ಆದರೆ ಹಿಂದೂಗಳಂತೆಯೇ ಅವರೂ ಪರಾತ್ಪರ ದೈವವೊಂದಿದೆಯೆಂದು ನಂಬಿ ಅದನ್ನು ಸ್ಯೂಸ್ ಎಂದು ಕರೆದರು. ಅವರಲ್ಲಿಯೂ ನಮ್ಮಲ್ಲಿರುವಂತೆಯೇ ದೇವತೆಗಳಿಗೆ ಯಜ್ಞಯಾಗಾದಿಗಳನ್ನು ಮಾಡುವುದು, ಹವನ ಹೋಮಗಳನ್ನು ಆಚರಿಸುವುದು, ರೂಢಿಯಲ್ಲಿತ್ತು. ಅವರೂ ಕೇವಲ ವ್ರತಾಚಾರ ಶೀಲರು, ಸಂಪ್ರದಾಯ ಬದ್ಧರು. ಯಥಾರ್ಥವನ್ನು ಹೇಳಬೇಕಾದರೆ ವ್ರತಾಚಾರನೇಮಗಳು ನಮ್ಮಲ್ಲಿರುವುದಕ್ಕಿಂತಲೂ ಅಧಿಕವಾಗಿಯೇ ಅವರಲ್ಲಿದ್ದುವು. ಕಣಿ ಹೇಳುವುದು, ದೇವರು ಮೈಮೇಲೆ ಬಂದು ಭವಿಷ್ಯ ಹೇಳುವುದು, ಕನಸುಗಳು ನಿಜವಾಗುವುವೆಂಬ ನಂಬಿಕೆ, ಫಲ ಜ್ಯೋತಿಷ, ಶಕುನಗಳು—ಇನ್ನೂ ಇತರ ವಿಧವಾದ ಮೂಢನಂಬಿಕೆಗಳೂ ಪದ್ಧತಿಗಳೂ ನಮ್ಮಲ್ಲಿರುವಂತೆಯೇ ಅವರಲ್ಲಿಯೂ ಹೇರಳವಾಗಿದ್ದುವು. ಇವೆಲ್ಲವನ್ನೂ ನೋಡಿದರೆ ಪ್ರಾಚೀನಗ್ರೀಕರು ನಿಜವಾಗಿಯೂ ಮತ ವಿಶ್ವಾಸಿಗಳೆಂದು ಕೆಲವರಿಗೆ ತೋರಬಹುದು. ಅಜ್ಞಾನಜನ್ಯವಾದ ನಂಬಿಕೆಗಳೂ, ಮೂಢಪದ್ಧತಿಗಳೂ, ಪ್ರತಿಸಾಯಂಕಾಲವೂ ತಪ್ಪದೆ ಗುಡಿಗೆ ಹೋಗಿ ಬರುವುದೂ, ಧಾರ್ಮಿಕಲಾಂಛನಗಳನ್ನು ಧರಿಸುವುದೂ, ಮತವಿಶ್ವಾಸದ ಹೆಗ್ಗುರುತುಗಳಾದರೆ ಗ್ರೀಕರು ಧರ್ಮಶ್ರದ್ಧರೇ—ನಮ್ಮಲ್ಲಿಯೂ ಬಹುಸಂಖ್ಯಾತರು ಧರ್ಮವತ್ಸಲರೇ! ಆದರೆ ನಮ್ಮ ಸುಯೋಗದಿಂದ—ನಮ್ಮ ವ್ರತಾಚಾರನಿಯಮಗಳು ಹೇಗಾದರೂ ಇರಲಿ—ನಮ್ಮಲ್ಲಿ ಪ್ರಪಂಚವೇ ಆತ್ಮದ ಆವಿರ್ಭಾವವೆಂಬ ಅಧ್ಯಾತ್ಮದೃಷ್ಟಿ ಮೊದಲಿಂದಲೂ ಎಂಥ ಕರ್ಮಠರಲ್ಲಿಯೂ ಬೆಳೆದು ಕೊಂಡು ಬಂದಿದೆ. ಮನುಷ್ಯನ ಸತ್ವವೇ ಆತ್ಮವೆಂದು ವೇದಗಳ ಕಾಲದಿಂದ ನಮ್ಮ ನಂಬಿಕೆ. ಇದಕ್ಕನುಸಾರವಾಗಿ ಪಾರಲೌಕಿಕದಲ್ಲಿ, ಆತ್ಮನ ಅಮರತೆಯಲ್ಲಿ, ನಂಬಿಕೆ ನಮ್ಮಲ್ಲಿ ಹೆಚ್ಚು. ಗ್ರೀಕರಲ್ಲಿ ಆತ್ಮದೃಷ್ಟಿ ಇಲ್ಲದಿದ್ದುದರಿಂದ ಅಮರತ್ವ ಪರಲೋಕಗಳ ಭಾವಗಳು ಮೂಡಲಿಲ್ಲ.

ಇರಲಿ. ದೇವತೆಗಳಲ್ಲಿ ನಂಬಿಕೆ ಇಟ್ಟು ಅವರನ್ನು ಪೂಜಿಸಿದರೂ ಗ್ರೀಕರಿಗೆ ದೇವತೆಗಳು ಘನವುಳ್ಳ ಮಹಿಮೆಯುಳ್ಳ ಮಾನವರಾಗಿದ್ದರೇ ಹೊರತು ಕ್ರೈಸ್ತರು ಭಾವಿಸುವಂತೆ, ದೇವಾಂಶವೇ ಬೇರೆ, ಮಾನವಾಂಶವೇ ಬೇರೆ, ಎಂಬ ದ್ವೈತವನ್ನು ಅವರು ತಿಳಿದಿರಲಿಲ್ಲ; ಹಿಂದೂಗಳು ಭಾವಿಸುವಂತೆ ಮಾನವಾಂಶವೂ ಭೌತವೂ ಸಹ ದೇವತ್ವದ ಪ್ರಕಾಶವೇ ಹೊರತು ಬೇರೆ ಅಲ್ಲ, ಎಂಬ ಅದ್ವೈತವನ್ನು ಕನಸಿನಲ್ಲಿಯೂ ಸಹ ಕಾಣರು. ಪ್ರಕೃತಿಯನ್ನೂ ಮಾನವ ದೃಷ್ಟಿಯಿಂದಲೇ ಕಂಡರು. ಈ ಕಾರಣದಿಂದ, ಆತ್ಮರಾಜ್ಯವೆಂಬ ಸೀಮಾತೀತವಾದ ಉತ್ತಮರಾಜ್ಯ ಬೇರೊಂದಿರುವುದು, ಆ ರಾಜ್ಯದಲ್ಲಿ ಕಷ್ಟಕಾರ್ಪಣ್ಯಗಳೂ, ವ್ಯಸನ ವಿಡ್ಡೂರಗಳೂ, ಸಾವುನೋವುಗಳೂ, ಅಂಕೆಶಂಕೆಗಳೂ ಇಲ್ಲ; ಅಂಥ ರಾಜ್ಯಕ್ಕೆ ಮಾನವನು ದೊರೆಯಾಗಿ ಬಾಳಿ ಆ ದೊರೆತನದ ಅಪರಿಮಿತ ವಾದ ಅನರ್ಘ್ಯವಾದ ಆನಂದವನ್ನು ಅನುಭವಿಸಲು ಆಶಿಸಬೇಕು; ಹಾಗೆ ಬೇರೊಂದು ಪ್ರತ್ಯೇಕ ರಾಜ್ಯವಿಲ್ಲದಿದ್ದರೂ ಇಹಲೋಕವನ್ನೇ ಆ ರೀತಿ ರೂಪಾಂತರಗೊಳಿಸಬಹುದು—ಎಂಬ ಯೋಚನೆಯೇ ಗ್ರೀಕರಿಗೆ ಹೊಳೆಯದೆ, ಮಾನವ ಜೀವನವನ್ನು ಮಾನವರೀತಿಯಲ್ಲಿಯೇ—ಅದರ ಕುಂದು ಕೊರತೆಗಳನ್ನೊಳಗೊಂಡೇ—ಪರಿಪೂರ್ಣಗೊಳಿಸಬಹುದೆಂದು ಎಣಿಸಿದರು. ಪರಲೋಕವೆಂದರೇನು, ಎಂದು ಕೇಳಿದರೆ, ಆಳವರಿಯದ ಅಂಧಕಾರ, ಎಂದು ಅವರ ಉತ್ತರ. ಸತ್ತವರು ಕೇವಲ ಛಾಯೆಗಳಂತೆ ಅನ್ನಾಹಾರಗಳಿಲ್ಲದೆ ಅಲ್ಲಿ ಅಲೆಯುತ್ತಾರೆ. ಅಕಿಲೀಸನು ತಾನು ಸತ್ತವರ ಲೋಕದ ದೊರೆಯಾಗಿರುವುದಕ್ಕಿಂತ ಭೂಲೋಕದಲ್ಲಿ ಅತ್ಯಂತ ಚಿಕ್ಕದಾದ ಹೊಲದಲ್ಲಿ ದುಡಿದುಕೊಂಡು ಜೀವಿಸುತ್ತಿರುವೆನೆಂದು ಹೇಳಿದನು. ಅಮರತ್ವದ ವಿಚಾರವಂತೂ ಪ್ಲೇಟೋವಿನ ಕಾಲದಲ್ಲಿ ಕೂಡ ಶ್ರೋತೃಗಳಿಗೆ ಇದು ಆಶ್ಚರ್ಯಕರವಾದ ಸುದ್ದಿಯೇ! ಅವರು ಹಿಂದೆ ಇದನ್ನು ಕೇಳಿಯೇ ಇರಲಿಲ್ಲ! ("ಆದರ್ಶರಾಜ್ಯ," ೯೦೮, ಡಿ). ಮಾನವನು ದೇವಾಂಶಸಂಭೂತನೆಂಬುದು ಅವರ ಸಂಸ್ಕೃತಿಗೇ ಪರಕೀಯ ವಾದ ವಿಚಾರ.

ಸೌಖ್ಯವೆಂದರೇನು, ಎಂಬ ಪ್ರಶ್ನೆಗೆ ಪ್ರಸಿದ್ಧರಾದ ಕೆಲವು ಗ್ರೀಕರು ಕೊಟ್ಟ ಉತ್ತರಗಳನ್ನು ಗಮನಿಸಿದರೆ, ಗ್ರೀಕರ ಮಾನವಪಂಥದ ತಿರುಳು ಹೊರಬೀಳುವುದು. ಪಿಂಡಾರ್ ಎಂಬ ಕವಿ ಹೇಳುವನು: "ಸಂಪತ್ತಿನ ಸುಂದರ ಕುಸುಮಗಳ ಮಧ್ಯೆ ಜೀವನದ ಪ್ರಫುಲ್ಲತೆಯನ್ನು ಆದರ ಪೂರ್ಣ ಮಾಧುರ್ಯಕ್ಕೆ ಕೊಂಡೊಯ್ಯಬೇಕಾದರೆ ನಮಗೆ ಎರಡೇ ವಸ್ತುಗಳು ಸಾಕು; ಒಳ್ಳೆಯ ವಿಜಯ, ಅದನ್ನು ಪಡೆಯಲು ಒಳ್ಳೆಯ ಕೀರ್ತಿ. ದೇವತೆಯಾಗಲು ಬಯಸಬೇಡ. ಈ ಸನ್ಮಾನಗಳು ಸಾಕಾದಷ್ಟು ನಿನ್ನ ಪಾಲಿಗೆ ಬಂದರೆ ನಿನಗೆ ಬೇಕಾದ್ದೆಲ್ಲವೂ ಬಂದಹಾಗೆಯೇ. ಮರ್ತ್ಯತೆಗೆ ಮರ್ತ್ಯರ ವಸ್ತುಗಳೇ ಅತ್ಯಂತ ಅನುಗುಣವಾದುವು." ಎರಡನೆಯದು ಹೆರೊಡೋಟಸ್ಸಿನ ಮೆಚ್ಚಿಗೆಯನ್ನು ಪಡೆದ ಸೋಲನ್ನನು ಕೊಟ್ಟ ಉತ್ತರ: "ಒಬ್ಬ ಮನುಷ್ಯನು ದೃಢಾಂಗನಾಗಿದ್ದು, ನಿರೋಗಿಯಾಗಿ, ದೌರ್ಭಾಗ್ಯನಾಗದೆ, ಸುಪುತ್ರರನ್ನು ಪಡೆದು, ತಾನೇ ಸ್ಫುರದ್ರೂಪಿಯಾಗಿದ್ದರೆ, ಜೊತೆಗೆ ಅವನ ಜೀವನ ಸುಂದರವಾದ ರೀತಿಯಲ್ಲಿ ಕೊನೆಗಂಡರೆ, ಅವನೇ ಪುಣ್ಯಶಾಲಿ, ಸೌಖ್ಯವಂತ, ಎಂದು ಧಾರಾಳವಾಗಿ ಹೇಳಬಹುದು." ಅರಿಸ್ಟಾಟಲನೂ ಇದೇ ಉತ್ತರವನ್ನೆ ಕೊಡುವನು—ಅದನ್ನು ಇನ್ನೂ ವಿಸ್ತಾರಮಾಡಿ ಹೇಳುವನು. ಈ ವಿಚಾರದಲ್ಲಿ ಅವನು ಪ್ಲೇಟೋವಿನ ಅಭಿಪ್ರಾಯವನ್ನು ಖಂಡಿಸಿ ಸಾಮಾನ್ಯ ಗ್ರೀಕರ ಮತವನ್ನೇ ಅನುಮೋದಿಸುವನು. ಸ್ಟೋಯಿಕರಾಗಲಿ, ಕ್ರಿಸ್ತನಾಗಲಿ, ಬುದ್ಧನಾಗಲಿ ಇಂಥ ಉತ್ತರಗಳಿಂದ ತೃಪ್ತಿಪಡುತ್ತಿದ್ದರೆ?

ಒಂದು ಮಾತಿನಲ್ಲಿ, ಐಹಿಕಜೀವನಪರಿಪೂರ್ಣತೆಯೇ—ಮಾನವನ ಶಾರೀರಕ ಮತ್ತು ಮಾನಸಿಕ ಶಕ್ತಿಸಾಮರ್ಥ್ಯಗಳ ಪೂರ್ಣ ವಿಕಸನವೇ—ಮಾನವಪಂಥದ ಗುಟ್ಟು—ಇದೇ ಪ್ರೊಟಾಗೊರಾಸನು ಹಾಕಿದ "ಎಲ್ಲದರಲ್ಲಿಯೂ ಮಾನವನೇ ತನ್ನ ಮಾನದಂಡ" ಎಂಬ ಸೂತ್ರದ ನಿಜವಾದ ಅರ್ಥ. ಈ ಜೀವನದೃಷ್ಟಿಯ ಲೋಪದೋಷಗಳನ್ನು ಇಲ್ಲಿ ನಾವು ಎತ್ತಿ ಹೇಳಬೇಕಾಗಿಲ್ಲ; ಸಾಕ್ರಟೀಸ್, ಪ್ಲೇಟೊ, ಸ್ಟೋಯಿಕರು ಮುಂತಾದವರು ನಮಗೋಸ್ಕರ ಆ ಕೆಲಸವನ್ನು ಮಾಡಿರುವರು. ಆದರೆ ಈ ದೃಷ್ಟಿಯ ಸತ್ಯತೆಯನ್ನೂ ತತ್ವಶಾಸ್ತ್ರದಲ್ಲಿ ಅದಕ್ಕೆ ಸಲ್ಲಬೇಕಾದ

ಸ್ಥಾನಮಾನಗಳನ್ನೂ ಕೊಂಚ ವಿವರಿಸಬೇಕಾಗಿದೆ. ಭಾರತೀಯರಾದ ನಾವು ಆಧ್ಯಾತ್ಮಿಕ ದೃಷ್ಟಿಯುಳ್ಳವರೆಂದು ಹೇಳಿಕೊಳ್ಳುತ್ತೇವೆ. ಇಲ್ಲವೆನ್ನುವರು ಯಾರು? ಕೂಡದೆನ್ನಬೇಕಾದ ಅಗತ್ಯವೇನು? ಆದರೆ ಅಧ್ಯಾತ್ಮವನ್ನೇ ನಾವು ಅಟ್ಟಕ್ಕೆ ಏರಿಸಿ ಮಾನವತೆಯನ್ನೇ ಮರೆತುಬಿಟ್ಟಿದ್ದೇವೆ. ಆಗಸದ ಕಡೆಗೆ ನಮ್ಮ ಮೊಗವನ್ನು ನೀಡಿ ನೀಡಿ ನಮ್ಮ ಕಾಲು ಘಟ್ಟಿ ಭೂಮಿಯಿಂದ ಜಾರಿಹೋಗಿ ನಾವು ಮುಗ್ಗರಿಸಿ ಬೀಳುವುದರಲ್ಲಿದ್ದೇವೆ. ಕಣ್ಣು ಸದಾ ಮುಚ್ಚಿಕೊಂಡಿರುವುದರಿಂದ ಸೌಖ್ಯಜೀವನಕ್ಕೆ ಬೇಕಾದ ನಮ್ಮ ಸುತ್ತಮುತ್ತಲಿನ ಭೌತ ಸಾಮಗ್ರಿಗಳು ಸದ್ದಿಲ್ಲದೆ ಪರದೇಶಕ್ಕೆ ವರ್ಷಂಪ್ರತಿಯೂ ಸಾಗಿಹೋಗುತ್ತಿರುವುದನ್ನು ಕಾಣಲಶಕ್ತರಾಗಿದ್ದೇವೆ. ಇದರ ಫಲಿತಾಂಶ—ಸಹಿಸಲಾಗದ ದಾರಿದ್ರ್ಯ, ರೋಗ, ನಿರ್ಬಲತೆ, ಅಕಾಲಮರಣ, ದಾಸ್ಯ. ತತ್ತ್ವರೂಪದಲ್ಲಿ ಹೇಳಬೇಕಾದರೆ, ಪರಮಾರ್ಥವೇನೋ ಸರಿಯೇ; ಆದರೆ ಪಾರಮಾರ್ಥಿಕವೇ ಬೇರೆ, ವ್ಯಾವಹಾರಿಕವೇ ಬೇರೆ, ಎರಡಕ್ಕೂ ಯಾವ ಸಂಬಂಧವೂ ಇಲ್ಲ ಎಂಬ ಶುಷ್ಕಾದ್ವೈತ ಅಸತ್ಯವೂ ಅಲ್ಲದೆ ಅಧಿಕ ಹಾನಿಕರವೂ ಹೌದು. ವ್ಯಾವಹಾರಿಕದ ಅಂತರಾತ್ಮವೇ ಪಾರಮಾರ್ಥಿಕ, ಅಂದಮೇಲೆ ಆರೋಗ್ಯ, ಸಂಪತ್ತು, ಮಾನವಪ್ರೇಮ, ಸಮಾಜಸೇವೆ, ಕಲೆ, ಸಾಹಿತ್ಯ, ವಿಜ್ಞಾನ, ಜ್ಞಾನಾಭಿವೃದ್ಧಿಯ ಕಾರ್ಯಗಳು, ದೇಶಸ್ವಾತಂತ್ರ್ಯ—ಇವುಗಳನ್ನೆಲ್ಲಾ ನಿಕೃಷ್ಟವಾಗಿ ಭಾವಿಸುವುದೇಕೆ? ಮತಧರ್ಮವೂ ನೀತಿಧರ್ಮವೂ ಶ್ರೇಷ್ಠಪುರುಷಾರ್ಥಗಳೇನೋ ಹೌದು; ಆದರೂ ಮಾನವಪುರೋವೃದ್ಧಿಗೆ ಸಂಬಂಧಿಸಿದ ಸಾಮಗ್ರಿಗಳೂ ನಿಜವಾದ ಅರ್ಥಗಳೇ ಹೊರತು ಸ್ಟೋಯಿಕರು ಹೇಳಿದಂತೆ ಅವು ಕೇವಲ ಔಪೇಕ್ಷಿಕವಸ್ತುಗಳಲ್ಲ (adiaphora). ನಿಜವಾದ ತತ್ತ್ವಶಾಸ್ತ್ರದಲ್ಲಿ ಈ ಮಾನವಾರ್ಥಗಳಿಗೂ (Human Values) ಉಚ್ಚಸ್ಥಾನ ದೊರಕಬೇಕು; ಇವುಗಳಮೇಲೆ ಬೇಕಾದರೆ ನೀತಿಯನ್ನೂ ಮೋಕ್ಷವನ್ನೂ ಕೂರಿಸೋಣ—ಇದಕ್ಕೆ ಆಕ್ಷೇಪಣೆ ಇಲ್ಲ; ಆದರೆ ಈಗ ಹೇಳುವುದೇನೆಂದರೆ, ಇವುಗಳ ಮುಖಾಂತರವೇ ನಾವು ನೀತಿಯನ್ನೂ ಮೋಕ್ಷವನ್ನೂ ಕಾಣಬೇಕು, ಕಂಡು ದೊರಕಿಸಿಕೊಳ್ಳಬೇಕು. ಇದೇ ಮಾನವಪಂಥದಿಂದ ನಾವು ಕಲಿಯಬೇಕಾದ ಪಾಠ. ಗ್ರೀಕರು

ಮಾನವಾರ್ಥಗಳನ್ನು ಬಿಟ್ಟು ನೀತಿಯನ್ನೇ—ಧರ್ಮವನ್ನೇ—ಬೇರೆ ಹೇಳಲಿಲ್ಲ. ಬುದ್ಧಿ ವಿಕಸನವಾಗದೆ, ಶರೀರಪುಷ್ಟಿವಡೆಯದೆ, ಸೌಂದರ್ಯಾನುಭವವಿಲ್ಲದೆ, ಜೀವನದ ಲಾಲಿತ್ಯ ಮಾರ್ದವ ಮಾಧುರ್ಯಗಳನ್ನರಿಯದೆ, ಕೇವಲ ಧರ್ಮದಲ್ಲೇ ದೃಷ್ಟಿಯುಳ್ಳ ಪುರುಷನನ್ನು ಗ್ರೀಕರು ಮಾಧುರ್ಯವಿಲ್ಲದ ಧರ್ಮಿಷ್ಠನೆಂದು ಹೇಳಲೇಇಲ್ಲ—ಅವನು ಧರ್ಮಿಷ್ಠನಲ್ಲವೆಂದೇ ಅವರ ನಂಬಿಕೆ. ಪೂರ್ಣಜೀವನವಿಲ್ಲದಮೇಲೆ, ಧರ್ಮಜೀವನವೆಲ್ಲಿಂದ ಬರಬೇಕು? ಎಂದು ಅವರ ಪ್ರಶ್ನೆ. ಬತ್ತಿದ ದೇಹದ ಮೇಲೆ ಚೆಲುವುಳ್ಳ ಮೊಗವಿದ್ದರೆ ಅಂಥವನನ್ನು ಸುಂದರ ಪುರುಷನೆನ್ನಲಾದೀತೆ?*

**(೬) ಗ್ರೀಕ್ ಸಂಸ್ಕೃತಿಯಲ್ಲಿ ನೀತಿಧರ್ಮದ ಸ್ಥಾನ.** ಗ್ರೀಕರ ನೀತಿಧರ್ಮ ಜಾತಿನಿಬದ್ಧವಾದದ್ದು, ಅಂದರೆ ಗ್ರೀಕ್‌ಜನಾಂಗಕ್ಕೆ ಸೇರಿದವರಿಗೆ ಮಾತ್ರ ನ್ಯಾಯಾನ್ಯಾಯದ ವಿವೇಚನೆ ಅನ್ವಯಿಸುತ್ತದೆ, ಧರ್ಮದ ಹಕ್ಕುಬಾಧ್ಯತೆಗಳು ಸಲ್ಲುತ್ತವೆ, ಆ ಗ್ರೀಕ್‌ಮಂಡಲದಿಂದ ಹೊರಗಿರುವವರಿಗೆ ಅಲ್ಲ. ಪ್ರಾಯಶಃ ಎಲ್ಲಾ ಪ್ರಾಚೀನಜನರಲ್ಲಿಯೂ ಹೀಗೆಯೇ ಇದ್ದಿತು ಎಂದು ಕಾಣುತ್ತದೆ. ಗ್ರೀಕ್‌ನೀತಿಯಲ್ಲಿ "ಡಿಕೆ" ಎಂಬ ಒಂದು ಭಾವವಿದೆ. ಇದನ್ನು ಸಾಧಾರಣವಾಗಿ ಇಂಗ್ಲಿಷಿನಲ್ಲಿ "ಜಸ್ಟ್" (just) ಅಂದರೆ ನ್ಯಾಯವಾದದ್ದು, ಎಂದು ಭಾಷಾಂತರ ಮಾಡುವ ರೂಢಿಯುಂಟು. ಆದರೆ ಗ್ರೀಕರು ನ್ಯಾಯವೆನ್ನುವ ಭಾವಕ್ಕೆ ವಿಶಾಲವಾದ ಅರ್ಥವನ್ನು ಕೊಟ್ಟರು. ಕೊಟ್ಟವರ ಸಾಲ ಹಿಂದಕ್ಕೆ ಕೊಡುವುದು, ನಿಷ್ಪಕ್ಷಪಾತವಾಗಿ ಹಕ್ಕುಗಳನ್ನು ಹಂಚುವುದು, ಹಿರಿಯರಿಗೆ ವಿಧೇಯವಾಗಿರುವುದು, ರಾಜ್ಯಶಾಸನಗಳನ್ನು ಶಿರಸಾವಹಿಸಿ ನಡಸುವುದು—ಇವೆಲ್ಲವೂ ನ್ಯಾಯವೆ ; ಆದರೆ ಇವುಗಳಂತೆಯೇ

---

* ಮಾನವಾರ್ಥಗಳಿಗೂ ಧರ್ಮಜೀವನಕ್ಕೂ ಯಾವ ಸಂಬಂಧವಿರಬೇಕೆಂಬುದನ್ನು ಹೆಚ್ಚು ತಿಳಿಯಲಪೇಕ್ಷಿಸುವವರು ೧೯೪೯ನೆಯ ಇಸವಿಯ "ಶರಣ ಸಾಹಿತ್ಯ"ದ ವಿಶೇಷ ಸಂಚಿಕೆಯಲ್ಲಿ ಈ ಲೇಖಕನು ಬರೆದಿರುವ "ಜೀವನಕ್ಕೆ ಧರ್ಮದ ಆವಶ್ಯಕತೆಯುಂಟೆ ? " ಎಂಬ ಲೇಖನವನ್ನೂ, ಹಾಗೂ ಇದೇ ಲೇಖಕನ "The Metaphysics of Value" ಎಂಬ ಗ್ರಂಥದ ಮೊದಲನೆಯ ಮತ್ತು ಕೊನೆಯ ಅಧ್ಯಾಯಗಳನ್ನೂ ನೋಡಬಹುದು.

ಪಳಗಿದ ಕುದುರೆಯನ್ನೂ, ಚೆನ್ನಾಗಿ ನೋಡಬಲ್ಲ ಕಣ್ಣನ್ನೂ, ಗ್ರೀಕರು ನ್ಯಾಯವಾದುವೆಂದೇ ಹೇಳಿದರು. ಕಟ್ಟಡಕಟ್ಟುವವನ ನ್ಯಾಯ ವೆಂದರೆ ಒಳ್ಳೆಯ ಮನೆಯನ್ನು ಕಟ್ಟುವುದು ; ಪುರನಿವಾಸಿಯ ನ್ಯಾಯ ವೆಂದರೆ ಒಳ್ಳೆಯ ನಾಗರಿಕನಾಗಿರುವುದು. ಅಂದ ಮೇಲೆ "ನ್ಯಾಯ"ಕ್ಕೂ "ಡಿಕೆ" ಎಂಬ ಭಾವಕ್ಕೂ ಬಹಳ ಅಂತರವಿದೆಯೆಂದು ಸ್ಪಷ್ಟ ವಾಯಿತು.

ಇದರ ಗುಟ್ಟೇನೆಂದರೆ ಗ್ರೀಕ್‌ಜೀವನದಲ್ಲಿ ಮೊದಲಿಂದಲೂ ಇಂಥ ಕೆಲಸವನ್ನು ಇದೇ ರೀತಿಯಲ್ಲಿಯೇ ಮಾಡಬೇಕೆಂಬ ನಿಯಮ ವಿತ್ತು. ಆ ಬಗೆಯನ್ನು ಹೇಗೆ ನಿರ್ಧರಿಸಿದರೆಂದರೆ ಕೆಲವು ಕಡೆ ವಸ್ತು ವಿನ ಸ್ವಭಾವಗುಣದಿಂದ; ಕೆಲವು ಕಡೆ ಅನುಭವದಿಂದ; ಮತ್ತೆ ಕೆಲವು ಕಡೆ ನಮ್ಮ ಗುರಿ ಅಥವಾ ಉದ್ದೇಶದಿಂದ. ಪರಂತು ಈ ನಿಯಮಗಳನ್ನು ಪಾಲಿಸಿಕೊಂಡು ಬರುವುದೇ ನೀತಿಧರ್ಮದ ಸಾರ. ಪರಸ್ಪರ ವ್ಯವಹಾರ ಗಳಲ್ಲಿಯೂ ಇಂಥಿಂಥ ಸಂದರ್ಭಗಳಲ್ಲಿ ಹೀಗೆಯೇ ಮಾಡಬೇಕು ಎಂಬ ನಿಯಮಗಳು ಏರ್ಪಟ್ಟಿದ್ದುವು. ನಮ್ಮಲ್ಲಿರುವಂತೆಯೇ ಗ್ರೀಕರಲ್ಲಿಯೂ ಸಂಪ್ರದಾಯ, ಹಿರಿಯರ ಆಚರಣೆ, ಕ್ರಮ, ನಿಯಮ—ಇವುಗಳ ಪ್ರಭಾವ ಅತಿಶಯವಾಗಿತ್ತು. ಇವುಗಳಿಗನುಸಾರವಾಗಿ ನಡೆಯುವವನೇ (ಸಂಕುಚಿತಾರ್ಥದಲ್ಲಿ) ನೀತಿವಂತ, ಧಾರ್ಮಿಕ. ಕಲೆಯಲ್ಲಿದ್ದಂತೆಯೇ ಧರ್ಮಜೀವನದಲ್ಲಿಯೂ ಸ್ಪಷ್ಟವಾದ, ವ್ಯಕ್ತವಾದ, ಅನುಸರಿಸಲು ಸಾಧ್ಯವಾದ, ಚಾರಿತ್ರರೂಪಗಳು ಇರಬೇಕು. ಆರ್ಷೇಯದಿಂದ ಬಂದ ಆಚರಣೆಗಳೇ ಈ ಧರ್ಮರೂಪಗಳು. ಸಂಪ್ರದಾಯಕ್ಕೇ ಅಗ್ರ ತಾಂಬೂಲ ಕೊಡುವ ನಾವು ಇದನ್ನು ಸುಲಭವಾಗಿಯೇ ಗ್ರಹಿಸಬಲ್ಲೆವು. ಆದರೆ ಗ್ರೀಕರ ನೀತಿಯಲ್ಲಿ ಗಮನಾರ್ಹವಾದ ವಿಷಯವೇನೆಂದರೆ, ನ್ಯಾಯವೆಂಬುದರ ವಿಶಾಲವಾದ ಪ್ರಯೋಗ. ವಾಸ್ತವಾರ್ಥದಲ್ಲಿ, ಗ್ರೀಕರ "ಡಿಕೆ" ಅಥವಾ "ಡಿಕೈಯಾಸ್" ಎಂಬ ಪದಕ್ಕೆ ನಮ್ಮ "ಧರ್ಮ"ಎಂಬ ಪದವೇ ಸರಿಯಾದ ಅನುವಾದ. ನಮ್ಮ ಸಂಸ್ಕೃತಿಯಲ್ಲಿ "ಧರ್ಮ" ಎಂಬ ಪದಕ್ಕೆ ಎಷ್ಟು ವ್ಯಾಪಕವಾದ ಅರ್ಥವಿದೆ ಎಂಬುದನ್ನು ವಿಶದಪಡಿಸಬೇಕಾಗಿಲ್ಲ. ಧರ್ಮಶಾಸ್ತ್ರ (ನಿಯಮ, ನಿಬಂಧನೆ), ಧರ್ಮ

ಮಾರ್ಗ (ನೀತಿ), ಸನಾತನ ಧರ್ಮ (ಮತ), ರಾಜಧರ್ಮ, ಯತಿ ಧರ್ಮ (ಅನುಗುಣವಾದ ನಡತೆ, ಕರ್ತವ್ಯ), ಮೂಲಿಕಾಧರ್ಮ (ಗುಣ, ಶಕ್ತಿ), ಪ್ರಕೃತಿಧರ್ಮ(ಸ್ವಭಾವಕ್ಕನುಸಾರವಾದವ್ಯಾಪಾರ), ಧರ್ಮಾತ್ಮ, ಧರ್ಮಾವತಾರ (ನ್ಯಾಯ), ಧರ್ಮವನ್ನು ಗಳಿಸು (ಪುಣ್ಯ), ಧರ್ಮ ಮಾಡು (ದಾನ)—ಈ ರೀತಿಯಾಗಿ ಧರ್ಮಕ್ಕೆ ಸಂದರ್ಭಾನುಸಾರವಾಗಿ ನಾನಾರ್ಥಗಳಿವೆ. ಸಾವಧಾನವಾಗಿ ಪರಿಶೀಲಿಸಿದರೆ, ತಕ್ಕುದಾದುದು, ಯುಕ್ತವಾದುದು, ಯೋಗ್ಯವಾದದ್ದು, ಸರಿಯಾದ ಹಾದಿ, ಎಂಬ ಧ್ವನಿ ಪ್ರತಿ ಒಂದು ಅರ್ಥದಲ್ಲಿಯೂ ಕಂಡು ಬರುವುದು. ಇದನ್ನೇ ಗ್ರೀಕರು "ಡಿಕೆ" (Right, the Way) ಎಂದು ಕರೆದದ್ದು. ಪ್ರಕೃತಿಸಂಭವ ಅಥವಾ ವಸ್ತುವಾಗಲಿ, ಮಾನವವ್ಯಾಪಾರವಾಗಲಿ, ಸಮಾಜದಲ್ಲಿನ ವ್ಯವಹಾರವಾಗಲಿ, ದೈವ ಮಾನವ ಸಂಬಂಧವಾಗಲಿ,—ಪ್ರತಿ ಒಂದಕ್ಕೂ ತದನುಗುಣವಾದ ಶಕ್ತಿಯೊಂದುಂಟು, ಶಕ್ತಿಪ್ರದರ್ಶನಮಾರ್ಗವೊಂದುಂಟು. ಈ ಮಾರ್ಗದಲ್ಲಿ ನಡೆಯುವುದೇ, ಈ ಶಕ್ತಿಯನ್ನು ಪ್ರಯೋಗಿಸುವುದೇ, ಅಥವಾ ಅದನ್ನು ಸಿದ್ಧಿಮಾಡಿಕೊಳ್ಳುವುದೇ, ವಸ್ತುವಿನ ಧರ್ಮ, ಇದೇ ಅದರ ಸದ್ಗುಣ ಅಥವಾ ಶ್ರೇಯ. ಈ ವಿಷಯ ಪ್ಲೇಟೋವಿನ ನೀತಿಶಾಸ್ತ್ರದಲ್ಲಿ ವಿಶದವಾಗಿ ಕಂಡುಬರುವುದು. ಸದ್ಯದಲ್ಲಿ, ಪ್ರಕೃತಿಯಲ್ಲಿಯೂ, ಮಾನವಸಮಾಜದಲ್ಲಿಯೂ, ಅಖಿಲ ಜಗತ್ತಿನ ವ್ಯಾಪಾರದಲ್ಲಿಯೂ ಕ್ರಮಸಮೀಚನತೆಗಳನ್ನೇರ್ಪಡಿಸಿ ಸುವ್ಯವಸ್ಥಿತ "ದಾರಿ"ಯಲ್ಲಿ ಅವುಗಳೆಲ್ಲವೂ ನಡೆಯುವಂತೆ ಮಾಡುವ ಯಾವ ತತ್ವವಿಶೇಷವನ್ನು ಕಂಡು ಆರ್ಯರು "ಋತ" ಅಥವಾ "ಧರ್ಮ" ಎಂದು ಕರೆದರೋ, ಅದೇ ತತ್ವವನ್ನು ಗ್ರೀಕರು "ಡಿಕೆ" ಅಥವಾ "ಸರಿಯಾದ ಹಾದಿ" ಎಂದು ಹೇಳಿದರೆಂದು ತಿಳಿದರೆ ಸಾಕಾಗಿದೆ. ಮ್ಯಾಥ್ಯೂ ಆರ್‌ನಾಲ್ಡ್ ಅವರು ನೀತಿಧರ್ಮವೆಂಬುದು ಪ್ರಾಚೀನ ಯೆಹೂದ್ಯರ ವಿಶೇಷ ಗುಣವೆಂದೂ, ಗ್ರೀಕರಲ್ಲಿ ಬೌದ್ಧಿಕ ವ್ಯವಸಾಯ ಮತ್ತು ಕಲಾ ಸಂಪತ್ತೇ ಪ್ರಾಧಾನ್ಯವೆಂದೂ ಹೇಳಿರುವರು. ಈ ಭೇದನಿರೂಪಣದಿಂದ ಗ್ರೀಕರಿಗೆ "ನ್ಯಾಯ" ಮಾಡಿದಂತಾಗಲಿಲ್ಲ—ಅದನ್ನು ಅವರು ಒಪ್ಪುತ್ತಲೂ ಇರಲಿಲ್ಲ. ಯೆಹೂದ್ಯರ ನೀತಿ ಕ್ರೈಸ್ತ ಮತದಲ್ಲಿರುವ ನೀತಿ

ಯಂತೆ (Morality) ಸಂಕುಚಿತವಾದದ್ದು ; ಅದರಲ್ಲಿ ಮಾನವಾರ್ಥಗಳ ಸಂಸಿದ್ಧಿಗೆ ಅವಕಾಶವೇ ಇರಲಿಲ್ಲ. ಈ ಸಂಕೋಚಾರ್ಥದಲ್ಲಿ ಬಳಕೆಯಲ್ಲಿರುವ ನೀತಿಯನ್ನೇ—ಸಮಾಜದ ಮೇಲೆ ಅದರಿಂದುಂಟಾಗುವ ದುಷ್ಪರಿಣಾಮಗಳಿಗೋಸ್ಕರವಾಗಿ—ನಿಚ್ಚೆ ಎಂಬ ಆಧುನಿಕ ತಾತ್ವಿಕನು ವಾಚಾಮಗೋಚರವಾಗಿ ಬೈದದ್ದು. ನಾವು ಹಿಂದೆಯೇ ಹೇಳಿದಂತೆ ಗ್ರೀಕರಲ್ಲಿ ನೀತಿಗೂ ಜೀವನದ ಇತರ ಮಾನವಾರ್ಥಗಳಿಗೂ (Human Values) ವಿರೋಧವಿರಲಿಲ್ಲ.

**(೭) ಗ್ರೀಕರು ಅದೃಷ್ಟವಾದಿಗಳು**. ಹಿಂದೂಗಳಂತೆಯೇ ಗ್ರೀಕರೂ ಒಂದು ದೃಷ್ಟಿಯಲ್ಲಿ ಅದೃಷ್ಟವಾದಿಗಳೆಂದು ತೋರುತ್ತದೆ. ಸ್ಟೋಯಿಕರಲ್ಲಿ ಈ ಸಿದ್ಧಾಂತವನ್ನು ಸ್ಪಷ್ಟವಾಗಿಯೇ ಕಾಣಬಹುದು. ಆದರೆ ಅವರಿಗೆ ಹಿಂದಿನ ಸಾಹಿತ್ಯದಲ್ಲಿಯೇ ಇದರ ಬೀಜಾಂಕುರವಾಗಿದೆ. ಸಾಹಿತ್ಯದಲ್ಲಿ ಅದೃಷ್ಟವಾದ ಒಂದು ರೀತಿಯ ಕರ್ಮಸಿದ್ಧಾಂತದೊಂದಿಗೆ ಬೆರೆತುಹೋಗಿದೆ. ಗ್ರೀಕರಲ್ಲಿ, ಯೆಹೂದ್ಯರಲ್ಲಿಯೂ ಹಿಂದೂಗಳಲ್ಲಿಯೂ ಮುಸ್ಲಿಮರಲ್ಲಿಯೂ ಇರುವಂತೆ, "ಪಾಪ" ಅಥವಾ "ಪಾತಕ"ದ ಭಾವ ಇದ್ದಂತೆ ತೋರುವುದಿಲ್ಲ. ನೀತಿನಿಯಮಗಳನ್ನು ಉಲ್ಲಂಘಿಸಿದವರಿಗೆ ದೇವತೆಗಳಿಂದ ಶಿಕ್ಷೆಯಾಗುವುದು ನಿಜ. ಆದರೆ ಹೋಮರಿನಲ್ಲಿ ತಪ್ಪುಮಾಡಿದವನು ತಾನು "ಪಾಪ"ಮಾಡಿದ್ದೇನೆಂಬ ಭಾವವನ್ನು ಹೊಂದಿದ್ದನೆಂದಾಗಲಿ, ಅದಕ್ಕೆ ಪಶ್ಚಾತ್ತಾಪಪಡುತ್ತಿದ್ದನೆಂದಾಗಲಿ, ಹೇಳುವುದು ಕಷ್ಟ. ಪಾಪಮಾಡಿದ್ದನ್ನು ಕಂಡುಹಿಡಿಯಬೇಕಾದರೆ ಅನೇಕವೇಳೆ ಅವನು ಕಣಿ ಕೇಳಬೇಕಾಗಿತ್ತು! ಹಾಗೆ ಗೊತ್ತುಮಾಡಿಕೊಂಡಮೇಲೆ ಅದಕ್ಕೆ ತಕ್ಕ ಪ್ರಾಯಶ್ಚಿತ್ತರೂಪವಾದ ಕರ್ಮವನ್ನಾಚರಿಸಿದರೆ ಆ ಪಾತಕ ಕರಗಿಹೋಗುವುದೆಂದು ಅವನು ಭಾವಿಸುತ್ತಿದ್ದನು. ನಮ್ಮಲ್ಲಿಯೂ ಪಾಪವನ್ನು ಕರಗಿಸಲು ಯಜ್ಞಯಾಗಾದಿಗಳನ್ನು ಮಾಡುವುದೂ ಶಾಂತಿಕರ್ಮಗಳನ್ನೆಸಗುವುದೂ ರೂಢಿಯಲ್ಲಿಲ್ಲವೆ?

ದೇವತೆಗಳು ಸ್ವಭಾವತಃ ಪರಿಶುದ್ಧರಾಗಿರಬೇಕೆಂಬ ನಂಬಿಕೆ ತಾತ್ವಿಕರ ಹಿಂದಿನ ಗ್ರೀಕರಿಗೆ ಇರಲಿಲ್ಲವಾದ್ದರಿಂದಲೂ, ಮನುಷ್ಯನಲ್ಲಿ ಪರಿಶುದ್ಧವಾದ ಆತ್ಮವೆಂಬ ದೇವಾಂಶವಿದೆ ಎಂದು ಅವರಿಗೆ ತೋರಲಿಲ್ಲ

ವಾದ್ದರಿಂದಲೂ, ಪಾಪವೆನ್ನುವುದು ದೇವರ ಅಥವಾ ಆತ್ಮದ ದೃಷ್ಟಿಯಲ್ಲಿ ತಪ್ಪುಮಾಡುವುದು ಎಂದು ಅವರು ತಿಳಿಯಲಿಲ್ಲ. ನಮ್ಮಲ್ಲಿಯೂ ಸಾಮಾನ್ಯಜನರು ಪಾಪವನ್ನು ಈ ರೀತಿ ತಿಳಿಯುತ್ತಾರೆಯೇ ಎಂಬುದು ಸಂದೇಹಾಸ್ಪದವಾಗಿದೆ. ಆದರೂ ಕರ್ಮವೆಂಬುದು ಪ್ರತಿಒಬ್ಬನೂ ತಾನು ಸ್ವಂತವಾಗಿ ಸಂಪಾದಿಸಿಕೊಂಡ ಆಸ್ತಿ, ಈ ಜನ್ಮದಲ್ಲಿ ಶಿಕ್ಷೆಎಂಬುದು ಹಿಂದಿನ ಜನ್ಮದಲ್ಲಿ ಮಾಡಿದ ದುಷ್ಕರ್ಮದ ಫಲ ಎಂಬ ನಂಬಿಕೆ ನಮ್ಮಲ್ಲಿ ಎಲ್ಲರಿಗೂ ಉಂಟು. ಆದ್ದರಿಂದಲೇ ಮುಕ್ತಿ ದೊರಕಬೇಕಾದರೆ "ಕರ್ಮ ಸವೆಯಬೇಕು" ಎಂದು ನಾವು ಹೇಳುತ್ತೇವೆ, "ಪಾಪ ಹೋಗಬೇಕು" ಎಂದು ಸಾಮಾನ್ಯವಾಗಿ ಹೇಳುವುದಿಲ್ಲ. ಗ್ರೀಕರಲ್ಲಿ ಪಾಪವೆಂಬುದು ಚಿತ್ತಶುದ್ಧಿಗೆ ಸಂಬಂಧಿಸಿದ್ದು ಎಂಬ ಅರಿವು ಇಲ್ಲದಿದ್ದುದರ ಜೊತೆಗೆ ಕರ್ಮವೆಂಬುದು ನಮ್ಮ ಸ್ವಾಧೀನದಲ್ಲಿ ಇಲ್ಲದಿರುವ ಕೇವಲ ಹೊರಗಣ ಶಕ್ತಿವಿಶೇಷಗಳಿಂದ ನಡೆಯತಕ್ಕದ್ದು—ಎಂಬ ಭಾವ ಬೇರೂರಿತ್ತು. ಈಸ್ಕಿಲಸ್ ಎಂಬ ಕವಿಯಲ್ಲಿ ಈ ಭಾವವನ್ನು ಚೆನ್ನಾಗಿ ಕಾಣಬಹುದು. ಅವನು ಬರೆದಿರುವ ಒಂದು ಕತೆಯಲ್ಲಿ ತಂದೆಯಾದವನು ಕಾರಣಾಂತರ ದಿಂದ ತನ್ನ ಮಗಳನ್ನೇ ಕೊಲ್ಲುತ್ತಾನೆ. ಹೆಂಡತಿ ಮಗುವಿನ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ತನ್ನ ಗಂಡನನ್ನೇ ಕೊಲ್ಲುತ್ತಾಳೆ. ಕಡೆಯಲ್ಲಿ ದೇಶಾಂತರ ಹೋಗಿರುವ ಮಗನಿಗೆ ತಂದೆಯ ಮರಣದ ಸುದ್ದಿಗೊತ್ತಾಗಿ ಅವನು ಊರಿಗೆ ಹಿಂತಿರುಗಿ ಪತಿಹಂತಕಳಾದ ತನ್ನ ತಾಯಿಯನ್ನೇ ಕೊಲ್ಲುತ್ತಾನೆ. ಈ ದುರಂತನಾಟಕದಲ್ಲಿ ನಾವು ಗಮನಿಸಬೇಕಾದ ವಿಚಾರವೇನೆಂದರೆ, ತಾನು ತಪ್ಪುಮಾಡಿದ್ದೇನೆಂದು ಯಾರೂ ಸ್ಪಷ್ಟವಾಗಿ ಒಪ್ಪಿಕೊಳ್ಳುವುದಿಲ್ಲ. ಪಾತಕವೆಂಬುದು ಮಾನವನ ಸ್ವಭಾವದಿಂದ—ಅವನ ಚಿತ್ತಪ್ರವೃತ್ತಿಯಿಂದ—ಹುಟ್ಟಿದ್ದಲ್ಲ. ಅದು ಬಾಹ್ಯವಾಗಿರುವ ಒಂದು ಕೇಡು; ಬಾಹ್ಯವಾಗಿದ್ದು ಮನುಷ್ಯನನ್ನು ಪಾಪಕೆಲಸಗಳಿಗೆ ಒಯ್ಯುತ್ತದೆ. ಕಾರಣಾಂತರದಿಂದ ಒಂದು ಸಲ ತಪ್ಪು ನಡೆದರೆ ಅದು ಅನಿವಾರ್ಯವಾಗಿ ಮತ್ತೊಂದು ದುಷ್ಕರ್ಮವನ್ನು ಹುಟ್ಟಿಸುತ್ತದೆ; ಇದು ಅಗತ್ಯವಾಗಿ ಮಗುದೊಂದು ಕೊಲೆಯನ್ನು ಜನಿಯಿಸುತ್ತದೆ. ಹೀಗೆ ನಿರಂತವಾಗಿ ದೌಷ್ಟ್ಯದ—ಕೇಡಿನ—ಸರಪಳಿಯ ಕೊಂಡಿಗಳು ಸ್ವಯಂ

ಸ್ವಜಿತವಾಗಿ ಸರಪಳಿ ಲಂಬಿಸುತ್ತಾ ಹೋಗುತ್ತದೆ. ರಕ್ತಕ್ಕೆ ರಕ್ತ ಕೊಡಲೇಬೇಕು, ಅದು ಯಾರುಕೊಟ್ಟರೂ ಸರಿಯೆ, ಯಾರ ಕೈಯಿಂದ ರಕ್ತಪಾತವಾದರೂ ಸರಿಯೆ–ಎರಿನೀಸ್ ಎಂಬ ಕರ್ಮದೇವತೆಗಳು ತೃಪ್ತರಾಗಲೇಬೇಕು. ದೋಷವೆಂಬುದು ಒಂದು ವಿದಧ ಹೊಲೆ (pollution); ಶುದ್ಧಿಸಂಸ್ಕಾರಗಳಿಂದ (purification) ಅದನ್ನು ಹೋಗಲಾಡಿಸಿಕೊಳ್ಳಬೇಕು. ಇಲ್ಲದಿದ್ದರೆ ಅದು ಸಾಂಕ್ರಾಮಿಕವಾದುದು ; ತಂದೆತಾಯಿಗಳ ದೋಷದ ಫಲ ಮಕ್ಕಳನುಭವಿಸಬೇಕು, ಮಕ್ಕಳ ಮೇಲೆ ಬೀಳದಿದ್ದರೆ ಅದು ಸಮಾಜದಮೇಲೆಯೇ ಬಿದ್ದು ಕೆಡಕುಂಟುಮಾಡಬಹುದು. ಪರಂತು ಅದರ ಋಣ ತೀರಿಸುತ್ತಲೇ ಹೋಗಬೇಕು. ಇದರಲ್ಲಿ ನ್ಯಾಯಾನ್ಯಾಯಗಳ ಮಾತು ಅಷ್ಟಾಗಿ ಏಳುವುದಿಲ್ಲ. ಇಂಥ ನಂಬಿಕೆಯನ್ನು ಅದೃಷ್ಟವಾದವೆನ್ನಬೇಕೋ, ಕರ್ಮವೆನ್ನಬೇಕೋ, ಮತ್ತೇನೆನ್ನಬೇಕೋ ಗೊತ್ತುಮಾಡುವುದು ಕಷ್ಟವಾಗಿದೆ.

**(೮) ಗ್ರೀಕರ ರಾಜಕೀಯ.** ಗ್ರೀಕರಲ್ಲಿ ಮೊದಲಿಂದಲೂ ರಾಜಕೀಯಕ್ಕೆ ಪ್ರಾಶಸ್ತ್ಯ ಹೆಚ್ಚು. ನಮ್ಮಲ್ಲಿ ರಾಜ್ಯಸಿದ್ಧಾಂತಗಳೂ ರಾಜಕೀಯ ಕೈಪಿಡಿಗಳೂ ಹೇರಳವಾಗಿದ್ದರೂ ತತ್ವಶಾಸ್ತ್ರದ ಆಧಾರದ ಮೇಲೆ ಅವು ಹುಟ್ಟಿದುವೆಂದು ಹೇಳುವುದು ಕಷ್ಟ. ಪ್ರಸಿದ್ಧವಾದ ಷಡ್ದರ್ಶನಗಳಲ್ಲಿ— ಹಾಗೂ ದ್ವೈತಾದ್ವೈತ ವಿಶಿಷ್ಟಾದ್ವೈತಗಳಲ್ಲಿ — ಪ್ರತಿ ಒಂದು ಸಿದ್ಧಾಂತಕ್ಕೂ ಅನುಗುಣವಾದ ರಾಜ್ಯಸಿದ್ಧಾಂತ ಯಾವುದು ? ಗ್ರೀಕರಲ್ಲಿಯೂ ಆಧುನಿಕ ತತ್ವಶಾಸ್ತ್ರದಲ್ಲಿಯೂ, ಅನುಗುಣವಾದ ರಾಜ್ಯಸಿದ್ಧಾಂತವನ್ನು ವಿಸ್ತರಿಸದ ದರ್ಶನವೇ ಇಲ್ಲ. ರಾಜಕೀಯಕ್ಕೆ ಪ್ರವೇಶಿಸದ ಗ್ರೀಕನು ಪುರನಿವಾಸಿಯೇ ಅಲ್ಲ— ಅವನಿಗೆ ನಾಗರಿಕರ ಹಕ್ಕುಬಾಧ್ಯತೆಗಳೇ ಇಲ್ಲ. ರಾಜ್ಯದ ಕರ್ತವ್ಯಗಳನ್ನು ಸಲ್ಲಿಸುವುದರಲ್ಲಿಯೇ ಗ್ರೀಕ್‌ನಾಗರಿಕನು ತನ್ನ ಶಕ್ತಿಸಾಮರ್ಥ್ಯಗಳನ್ನೆಲ್ಲಾ ವಿಕಸನಗೊಳಿಸಿ ಆತ್ಮಸಿದ್ಧಿಯನ್ನು ಪಡೆಯಬೇಕು. ಅವನ ನೈತಿಕ— ಧಾರ್ಮಿಕ— ಜೀವನವೆಲ್ಲಾ ನಾಗರಿಕರ ಕರ್ತವ್ಯವನ್ನು ಮನಸ್ಸಾಕ್ಷಿಯಿಂದಲೂ ಯಥಾಶಕ್ತಿಯಿಂದಲೂ ನೆರವೇರಿಸುವುದರಲ್ಲಿಯೇ ಅಡಗಿತ್ತು. ಸಾಕ್ರಟೀಸ್, ಪ್ಲೇಟೊ, ಇವರು ಹುಟ್ಟುವುದಕ್ಕೆ

ಮೊದಲು ಗ್ರೀಕ್‌ನಾಗರಿಕನಿಗೆ ತನ್ನ ಸ್ವಂತ — ಆತ್ಮೀಯ — ನೀತಿ ಜೀವನವೆಂಬುದು ಗೊತ್ತೇ ಇರಲಿಲ್ಲ, ಗೊತ್ತಿದ್ದರೂ ಅದು ಬಹಳ ಗೌಣ ವಾದದ್ದಾಗಿತ್ತು. ಅರಿಸ್ಟಾಟಲನು ಮನುಷ್ಯನೆಂಬ ಪದಕ್ಕೆ "ರಾಜಕೀಯ ಪ್ರಾಣಿ" ಎಂದು ಲಕ್ಷಣ ಹೇಳಿದ್ದಾನೆ. ನೀತಿಶಾಸ್ತ್ರದ ಪರಿಪೂರ್ಣತೆಯೇ ರಾಜನೀತಿಶಾಸ್ತ್ರವೆಂದೂ ಹೇಳಿದ್ದಾನೆ. ನೀತಿಶಾಸ್ತ್ರ ಸುಂದರವಾದ ಧ್ಯೇಯಗಳನ್ನು ನಮ್ಮ ಮುಂದಿಡಬಹುದು — ಆದರೆ ಅವುಗಳನ್ನು ಸಂಸಿದ್ಧಿಗೊಳಿಸಿಕೊಳ್ಳಬೇಕಾದರೆ ರಾಜಕೀಯದಲ್ಲಿಯೇ ಅಂದರೆ ಸಮಾಜ ಜೀವನದಲ್ಲಿಯೇ ಸಾಧ್ಯ. ಈ ಭಾವನೆಯನ್ನು ಹೊಂದಿದ್ದ ಗ್ರೀಕರು ರಾಜಕೀಯದಲ್ಲಿ ಕಂಡುಹಿಡಿಯದ, ಕಂಡುಹಿಡಿದು ಆಚರಣೆ ಯಲ್ಲಿ ತರದಿದ್ದ, ಸಿದ್ಧಾಂತಗಳೇ ಇಲ್ಲ. ಕೇವಲ ಹಲವು ಸಹಸ್ರ ಮಂದಿ ಮಾತ್ರ ಇದ್ದ ಪ್ರತಿ ಒಂದು "ನಗರ ಸಂಸ್ಥಾನ"ದಲ್ಲಿಯೂ (City-State) ಎಷ್ಟು ಸಮೃದ್ಧಿಯಾದ ಫಲಭರಿತವಾದ ರಾಜಕೀಯ ಜೀವನ! ನಾಗರಿಕರೆಲ್ಲರೂ ರಾಜ್ಯಸಭೆಗಳಲ್ಲಿ ಭಾಗವಹಿಸತಕ್ಕವರೇ! ಇಂದು ಸಭಾಸದಸ್ಯರು, ನಾಳೆ ಕದನದಲ್ಲಿ ವೀರಯೋಧರು! ರಾಜ ಪ್ರಭುತ್ವ, ಕುಲೀನರ ಪ್ರಭುತ್ವ (Aristocracy of Birth), ಜ್ಞಾನ ಕುಲೀನರ ಪ್ರಭುತ್ವ (Intellectual Aristocracy), ಶ್ರೀಮಂತರ ಪ್ರಭುತ್ವ (Aristocracy of Wealth), ಪ್ರಜಾಪ್ರಭುತ್ವ, ಸಂಯುಕ್ತ ರಾಜ್ಯಾಂಗವ್ಯವಸ್ಥೆ (Federation), ಕಡೆಗೆ ತುರಾಣಾಧಿಪತ್ಯ (Tyranny) ಅಥವಾ ಸರ್ವಾಧಿಕಾರಿಗಳ ದೌಲತ್ತು — ರಾಜ್ಯಾಂಗ ವ್ಯವಸ್ಥೆಯ ಎಲ್ಲಾ ರೂಪಗಳನ್ನೂ ಆಚರಣೆಗೆ ತಂದವರು ಗ್ರೀಕರೇ. ಈಗಿನ ಕಾಲದ ಡಿಕ್ಟೇಟರ್‌ಷಿಪ್ಪುಗಳು ನಮಗೆ ಹೊಸದಾದರೂ ಗ್ರೀಕರಿಗೆ ಹೊಸದಲ್ಲ. ನಾವು ಈಗ ಯಾವ ಪ್ರಜಾಪ್ರಭುತ್ವಕ್ಕೋಸ್ಕರ ಭಾರತ ದಲ್ಲಿ ಹೊಡೆದಾಡುತ್ತಿರುವೆವೋ ಅದನ್ನು ಅದರ ಅತ್ಯಂತ ಶುದ್ಧವಾದ ನೇರವಾದ ರೂಪದಲ್ಲಿ (Direct Democracy), ಅವರು ಆಚರಣೆಯಲ್ಲಿಟ್ಟು ಕೊಂಡಿದ್ದರು. ಪ್ರಜಾಪ್ರಭುತ್ವದ ಪ್ರಥಮಾಚಾರ್ಯರು ಗ್ರೀಕರೇ. ಅದ ರಲ್ಲಿಯೂ ಅಥೆನ್ಸ್ ನಗರವೇ ಆಚಾರ್ಯಪೀಠ! ಅಥೆನ್ಸ್ ಎಂದರೆ ಸಕಲ ವಿಧಗಳಲ್ಲಿಯೂ ಪರಾಕಾಷ್ಠತೆ ಪಡೆದಿದ್ದ ಗ್ರೀಕ್ ಸಂಸ್ಕೃತಿಯ ಶೋಭಾಯ

ಮಾನವಾದ ಪವಿತ್ರ ದೇವಾಲಯ! — ದೇವಾಲಯದ ಮೇಲಿನ ಥಳ ಥಳಿಸುವ ಸ್ವರ್ಣಕಲಶ—ದೇವಗೃಹದಲ್ಲಿ ಪವಿತ್ರತರವಾದ ಗರ್ಭಗುಡಿ —ಗರ್ಭಗುಡಿಯಲ್ಲಿ ನವರತ್ನಾಲಂಕಾರ ಭೂಷಿತವಾಗಿ ರಾರಾಜಿಸುತ್ತಿರುವ, ತೇಜೋವಿರಾಜಮಾನವಾದ ಪವಿತ್ರತಮವಾದ ದಿವ್ಯ ಸುಂದರ ಮೂರುತಿ!

**(೯) ಗ್ರೀಕರ ಸ್ವಾತಂತ್ರ್ಯ ಪ್ರೇಮ.** ಗ್ರೀಕರ ರಾಜಕೀಯ ಸಿದ್ಧಾಂತಗಳನ್ನು ವಿಮರ್ಶಿಸುವುದು ನಮ್ಮ ಅಭೀಷ್ಟವಲ್ಲ. ಈ ರಾಜಕೀಯ ಜೀವನದಿಂದ ಅವರಲ್ಲಿ ಜನಿಸಿದ, ಅವರ ಜೀವನದ ಸಕಲ ವ್ಯವಹಾರಗಳನ್ನೂ ಸ್ಫೂರ್ತಿಗೊಳಿಸಿ ಚೈತನ್ಯಯುತವನ್ನಾಗಿ ಮಾಡಿದ, ಅವರ ಸ್ವಾತಂತ್ರ್ಯಪ್ರೇಮವನ್ನು ನಾವು ಗಮನಿಸಬೇಕು. ಗ್ರೀಕರಷ್ಟು ಸ್ವಾತಂತ್ರ್ಯಪ್ರೇಮಿಗಳು ಭೂಮಂಡಲದಲ್ಲಿ ಇನ್ನೆಲ್ಲಿಯೂ ಹುಟ್ಟಲಿಲ್ಲವೆಂದೇ ಹೇಳಬೇಕು. ಅಥೇನಿಸಿನಲ್ಲಿ ವಾಕ್ಸ್ವಾತಂತ್ರ್ಯಕ್ಕೆ ಯಾವಾಗಲೂ ಪ್ರತಿಬಂಧಕಗಳೇ ಇರಲಿಲ್ಲ. ಸಾಕ್ರಟೀಸನಿಗೇನೋ ವಿಷಪಾನ ಮಾಡಿಸಿದ್ದು ನಿಜ; ಇನ್ನೂ ಒಬ್ಬಿಬ್ಬರು ತಮ್ಮ ಮೇಲೆ ವ್ಯವಹಾರಕ್ರಮ ಜರುಗೀತೆಂಬ ಭಯದಿಂದ ಊರುಬಿಟ್ಟು ಓಡಿಹೋದರು. ಆದರೆ ಇತರ ರಾಜ್ಯಗಳ ಚರಿತ್ರೆಯಲ್ಲಿ ಮತದ ಹೆಸರಿನಲ್ಲಿಯೂ ರಾಜಕೀಯದ ಹೆಸರಿನಲ್ಲಿಯೂ ಜನರನ್ನು ಕೊಂದಿರುವ ಅಥವಾ ಹಿಂಸಿಸಿರುವ ಸಂಖ್ಯೆಯನ್ನು ನೋಡಿದರೆ, ಈ ಎರಡು ಮೂರು ನಿದರ್ಶನಗಳನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕಾದ್ದೇ ಇಲ್ಲ. ಗ್ರೀಕರ ಸ್ವಾತಂತ್ರ್ಯಕ್ಕೆ ಎರಡು ಮೂರು ಕಾರಣಗಳಿದ್ದುವು. ಮೊದಲು ಅವರ ಮತ ಬಹಳ ಮೆದುವಾದದ್ದು—ಅದನ್ನು ಹೇಗೆಬೇಕಾದರೂ ಎಳೆದು ಬಗ್ಗಿಸಬಹುದಾಗಿತ್ತು. ದೇವತೆಗಳ ಸ್ವರೂಪ, ಅವರಿಗೂ ಮಾನವನಿಗೂ ಇರಬೇಕಾದ ಸಂಬಂಧ —ಈ ವಿಚಾರಗಳಲ್ಲಿ ಸಿದ್ಧಾಂತರಾದ್ಧಾಂತಗಳೊಂದೂ ಇಲ್ಲದ ಮತದಲ್ಲಿ ಮತದ ಹೆಸರಿನಲ್ಲಿ ಜನರನ್ನು ನಿರ್ಬಂಧಕ್ಕೊಳಪಡಿಸುವ ಅಗತ್ಯವೇನಿದೆ? ಈ ಪ್ರಪಂಚ ಹೇಗೆ ಉದ್ಭವಿಸಿತು, ಅದನ್ನು ದೇವರೊಬ್ಬನು ಸೃಷ್ಟಿಸಿದನೆ ಇಲ್ಲವೆ— ಇದೆಲ್ಲಾ ಯಾರಿಗೆ ಗೊತ್ತಿದೆ, ಆ ಸ್ವರ್ಗನಾಥನಿಗೊಬ್ಬನಿಗೇ ಗೊತ್ತಿರಬೇಕು, ಕಡೆಗೆ ಅವನಿಗೂ ಗೊತ್ತಿದೆಯೋ ಇಲ್ಲವೋ! ಎಂದು

ಸಂದೇಹಪಡುವ ನಾಸದೀಯಸೂಕ್ತವನ್ನು ರಚಿಸಿದ ಋಗ್ವೇದದ ಕಾಲದಲ್ಲಿ ಮತಗಳಲ್ಲಿರಬಹುದಾದ ಭಿನ್ನಾಭಿಪ್ರಾಯಗಳಿಗೋಸ್ಕರವಾಗಿ ಜನರನ್ನು ಹಿಂಸಿಸಿರಲಾರರು! ಸಾಲದುದಕ್ಕೆ ಗ್ರೀಕರ ದೇವತೆಗಳು ಪುರುಷ ಭಾವಾರೋಪಣೆಯನ್ನು ಪಡೆದ ಸ್ವಾಭಾವಿಕ ಶಕ್ತಿಗಳೇ ಆಗಿದ್ದುದರಿಂದ ಧರ್ಮದಲ್ಲಿ ಸಹನೆಗೆ ದಾರಿಯಾಯಿತು. ಕ್ರೌರ್ಯ, ಭಯ, ಕ್ರಾಂತಿ, ಆಟ, ಕುಡುಕತನ, ಪೈತ್ಯ, ಹೊಟ್ಟೆಕಿಚ್ಚು, ಲೌಲ್ಯ, ನಿದ್ದೆ, ಹಸಿವು, ಚೌರ್ಯ, ಪರಿಶುದ್ಧತೆ—ಪ್ರತಿ ಒಂದು ಗುಣಕ್ಕೂ ಒಂದೊಂದು ದೇವತೆ ಇರುವುದೆಂದಮೇಲೆ, ಒಬ್ಬನು ಮತ್ತೊಬ್ಬನ ಮತವನ್ನು ಹಳಿಯಲು ಕಾರಣವೇನು? ಎರಡನೆಯದಾಗಿ, ಗ್ರೀಕರಿಗೆ ಅಧಿಕಾರವಾಣಿಯಿಂದ ಮತ ಬೋಧನೆ ಮಾಡುವ ಬೈಬಲ್ಲಾಗಲಿ, ಕೊರಾನಾಗಲಿ, ವೇದಗಳಾಗಲಿ ಇರಲಿಲ್ಲ. ಮೂರನೆಯದಾಗಿ, ಗ್ರೀಕರಲ್ಲಿ ನಾವು ಹಿಂದೆಯೇ ಹೇಳಿದಂತೆ ಬುದ್ಧಿಪ್ರಮಾಣವಾದದ ವ್ಯಾಪಕತೆ ಬಹಳ. ದೈವಪ್ರೋಕ್ತವಾದ ಗ್ರಂಥ ಯಾವುದೂ ಇಲ್ಲದಿರುವಾಗ ಸಂದೇಹ ಬಂದೆಡೆಯಲ್ಲೆಲ್ಲಾ ಗ್ರೀಕರಿಗೆ ತಮ್ಮ ವಿಜ್ಞಾನವೇ — ಬುದ್ಧಿಯೇ — ಕೊನೆಯತೀರ್ಪಿನ ಕಛೇರಿಯಾಯಿತೆಂದಮೇಲೆ, ಇನ್ನು ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಅಡ್ಡಿ ಏನು? ಮನುಷ್ಯನ ಬುದ್ಧಿಗೆ ಅನ್ಯಾಯವೆಂದು ತೋರುವ ಕಾರ್ಯವನ್ನು ದೇವರು ಮಾಡಿದರೂ ಗ್ರೀಕನು, ದೇವರ ಮಾರ್ಗಗಳು ಅಲ್ಪಜ್ಞರಾದ ನಮಗೆ ಗೋಚರವಾಗುವುದಿಲ್ಲ, ಬಂದದ್ದನ್ನು ಹರ್ಷಚಿತ್ತರಾಗಿ ಅನುಭವಿಸೋಣ, ಎಂದು ಹೇಳುತ್ತಿರಲಿಲ್ಲ; ಅನ್ಯಾಯವೆಂಬುದು ದೇವರಿಗೂ ಅನ್ಯಾಯವೇ ಎಂದು ತಿಳಿದು ಪ್ರೊಮೀಥಿಯಸ್ಸನಂತೆ ದೇವರನ್ನೇ ನಿಂದಿಸುತ್ತಿದ್ದನು, ಶಪಿಸುತ್ತಿದ್ದನು. ಇಂಥ ಜನರಲ್ಲಿ ಸ್ವಾತಂತ್ರ್ಯವೆಂಬುದು ಕಬ್ಬಿನಲ್ಲಿ ರಸ ಶೇಖರವಾಗುವಂತೆ ಜೀವನದಲ್ಲಿ ಬೆರೆತು ಬೆಳೆಯುತ್ತಾಬಂದಿತೆಂದರೆ ಅತಿಶಯೋಕ್ತಿಯಾಗಲಾರದು.

ಮತದಂತೆ ರಾಜಕೀಯವೂ ಕೂಡ ಗ್ರೀಕರ ಸ್ವಾತಂತ್ರ್ಯಕ್ಕೆ ಭಂಗ ತರಲಿಲ್ಲ. ಅಥೆನ್ಸ್‌ನಗರದ ಆದ್ಯಂತ ಚರಿತ್ರೆಯೇ ಗ್ರೀಕರ ಸ್ವಾತಂತ್ರ್ಯದ ಚರಿತ್ರೆ ಎನ್ನಬಹುದು. ಕ್ರಿ.ಪೂ. ಏಳನೆಯ ಶತಮಾನದಿಂದ ಮುಂದಕ್ಕೆ ಈ ಸ್ವಾತಂತ್ರ್ಯಭಾವ ವೃದ್ಧಿಯಾಗುತ್ತ ಬಂದಿತು. ಸರ್ವಾಧಿಕಾರಿಗಳ

ಪ್ರಭುತ್ವ ಗ್ರೀಸಿನಲ್ಲಿ ಬಹಳಕಾಲ ನಿಲ್ಲದೆ ಹೋದುದಕ್ಕೆ ಅವರು ಜನರ ಸ್ವಾತಂತ್ರ್ಯವನ್ನು ಅಪಹರಿಸಿದ್ದೇ ಮುಖ್ಯ ಕಾರಣ. ಪರ್ಷಿಯಾದ ಗೌರ್ನರ್ ಒಬ್ಬನು ಷರ್ಸೀಸನಿಗೆ ವಶವಾಗಿ ಹೋಗಿರೆಂದು ಸ್ಪಾರ್ಟಾ ನಗರದ ಸೈನಿಕರಿಗೆ ಹೇಳಲು, ಅವರೆಂದರು: "ಹೈಡಾರ್ನ್ಸ್, ನೀನು ನಮಗೆ ಹೇಳುತ್ತಿರುವ ಬುದ್ಧಿವಾದದ ಅರ್ಥವೇನು ಎಂಬುದು ನಿನಗೆ ಗೊತ್ತಿಲ್ಲ; ಗುಲಾಮನಾಗಿರುವುದು ನಿನಗೆ ಗೊತ್ತು ಅಷ್ಟೆ, ಸ್ವಾತಂತ್ರ್ಯದ ಸವಿಯನ್ನು ನೀನೆಂದೂ ಅನುಭವಿಸಿಲ್ಲ. ಅದನ್ನು ಅನುಭವಿಸಿದ್ದರೆ, ಭರ್ಜಿಗಳಿಂದಲೇ ಅಲ್ಲ, ಕತ್ತಿಗಳಿಂದಲೂ ಅದಕ್ಕೋಸ್ಕರ ಕಾದಾಡಿ, ಎಂದು ನೀನು ನಮಗೆ ಹೇಳುತ್ತಿದ್ದೆ." ಹಾಸ್ಯನಾಟಕಗಳನ್ನು (Comedy) ನೋಡಿದರೆ ಗ್ರೀಕರ ರಾಜಕೀಯ ಸ್ವಾತಂತ್ರ್ಯ ಎಷ್ಟು ಸೀಮಾತೀತವಾಗಿದ್ದಿತೆಂದು ಕಾಣದೆ ಇರದು. ಎಂತಹ ಸಂದಿಗ್ಧ ಸನ್ನಿವೇಶದಲ್ಲಿಯೂ ಅಥೆನ್ಸಿನಲ್ಲಿ ಸರ್ಕಾರದ ರೀತಿನೀತಿಗಳನ್ನು ಟೀಕಿಸುವುದಕ್ಕೆ ಅಡ್ಡಿ ಇರಲಿಲ್ಲ; ಜನತೆಯ ಮುಂದೆ ಅಧಿಕಾರಿಗಳ ಮೇಲೆ ಅಪವಾದ ತಂದು ಅವರನ್ನು ದೂಷಿಸಿ ಅಪಹಾಸ್ಯ ಮಾಡಿ ಗುಲ್ಲೆಬ್ಬಿಸುವುದಕ್ಕೆ ಆತಂಕವಿರಲಿಲ್ಲ. ಅಥೆನ್ಸ್ ವಿಜಯಕ್ಕಲ್ಲ, ತನ್ನ ಜೀವಕ್ಕೋಸ್ಕರವೇ ಹೊಡೆದಾಡುತ್ತಿರುವಾಗಲೂ ಸಹ, ಅಥೆನ್ಸಿನ ಸೈನ್ಯ ಸೋತು ನಗರಧಾಳಿಕಾರರ ವಶವಾಗುವುದರಲ್ಲಿದ್ದಾಗಲೂ ಸಹ, ಪುರನಿವಾಸಿಗಳೆಲ್ಲರೂ ರಾಜಕೀಯ ಸಭೆಯಲ್ಲಿ (Ecclesia) ಸೇರಿಯೇ ಸೇರುವರು; ಯಾರು ಮಾತಾಡಲು ಇಷ್ಟಪಡುತ್ತಾರೆ? ಎಂದು ಸಭಾದೂತನೆದ್ದು ಕೂಗಿಯೇ ಕೂಗುವನು.

ಗ್ರೀಕರ ರಾಜಕೀಯ ಸ್ವಾತಂತ್ರ್ಯದ ಪರಮೋನ್ನತಿಯನ್ನೂ ಅದರ ಉತ್ಕೃಷ್ಟ ಫಲಗಳನ್ನೂ ಕಾಣಬೇಕಾದರೆ ಪೆರಿಕ್ಲೀಸಿನ ಕಾಲದ ಅಥೆನ್ಸಿನ ಪ್ರಜಾಪ್ರಭುತ್ವವನ್ನು ಪರೀಕ್ಷಿಸಬೇಕು. ಒಂದು ಯುದ್ಧದಲ್ಲಿ ಮಡಿದ ಸೈನಿಕರ ಶವಗಳನ್ನು ಸಮಾಧಿಮಾಡಿದ ಸಂದರ್ಭದಲ್ಲಿ ಆತನು ಒಂದು ಭಾಷಣವನ್ನು ಮಾಡಿರುವನು. ಸ್ವಾತಂತ್ರ್ಯಪ್ರಿಯರಾದ ಜನರೆಲ್ಲರೂ ಸತ್ಯವೇದದಂತೆ ಅದನ್ನು ಅಹರ್ನಿಶಿಯೂ ಪಠಿಸಬೇಕು. ಅದನ್ನು ಇಲ್ಲಿ ಕೊಡಲು ಸ್ಥಳವಿಲ್ಲ.[೧] ಶಾಸನಮುಖೇನ ಜನರನ್ನು

೧. ಪರಿಷತ್ತಿನ "ಕನ್ನಡ ನುಡಿ"ಯ ಸಂಪುಟ ೩, ಸಂಚಿಕೆ ೬, ೭, ನೋಡಿ. (೧೯೪೦, ನವಂಬರ್ ೧೫, ೨೨).

ಸಚ್ಛೀಲರನ್ನಾಗಿಮಾಡುವ ಪ್ರಯತ್ನದ ಮಾತಿಲ್ಲ ಅದರಲ್ಲಿ. ದೇಶಪ್ರೇಮದ ಅಭಾವ ಜನರಲ್ಲಿದ್ದರೆ ಅದಕ್ಕೆ ಯಾವ ರಕ್ಷಣಾ ಕ್ರಮಗಳನ್ನು ಕೈಗೊಳ್ಳ ಬೇಕೆಂಬ ಚರ್ಚೆ ಇಲ್ಲ ಅದರಲ್ಲಿ. ಜಾತಿಕೋಮುಗಳ ವೈಮನಸ್ಯ—ಅವುಗಳನ್ನು ಸಮತೂಕದಲ್ಲಿಟ್ಟಿರಲು ಬೇಕಾದ ಬಂಧಕ ಪ್ರತಿಬಂಧಕಗಳು, ನಿರ್ಬಂಧ ಸೈನ್ಯ ಸೇವೆ— ಇವುಗಳ ಸೊಲ್ಲೇ ಇಲ್ಲ ಅದರಲ್ಲಿ. ಲೀಲಾ ವಿನೋದಗಳಿಂದ ಜನರು ಕರ್ತವ್ಯಪರಾಙ್ಮುಖರಾಗುವರೆನ್ನುವ ಭಯವೇ ಇಲ್ಲ ಪೆರಿಕ್ಲೀಸನ ಮನದಲ್ಲಿ. ದೇಶದ ಸರ್ವತೋಮುಖವಾದ ಜೀವನಕ್ಕೆ ಇವು ಅತ್ಯಗತ್ಯವೆಂದು ಅವನ ನಂಬಿಕೆ. "ತಮ್ಮ ದಿನಚರಿಯ ಕಾರ್ಯವಾದ ಮೇಲೆ, ಜನರು ಚಿತ್ತವಿಹಾರ ಪಡೆಯಲು ನಾವು ಬೇಕಾದಷ್ಟು ಸಲಕರಣೆ ಗಳನ್ನು ಒದಗಿಸಿದ್ದೇವೆ; ವರ್ಷದಲ್ಲಿ ಮೊದಲಿಂದ ಕೊನೆಯವರೆಗೂ ಆಟ ಪಾಟಗಳೂ, ಯಾಗ ಸಂತರ್ಪಣೆಗಳೂ ಇದ್ದೇ ಇವೆ." ವಿದ್ಯೆಯಿಂದಲೂ ಸಂಸ್ಕೃತಿಯ ಪ್ರಸಾರದಿಂದಲೂ ಜನರು ಕೆಡುವುದಿಲ್ಲ, ಹೇಡಿಗಳಾಗುವು ದಿಲ್ಲ. "ದುಂದಿಲ್ಲದೆ ನಾಜ್ಯನಾಗರಿಕತೆಯನ್ನೂ, ಹೆಣ್ಣಿಗತನಕ್ಕೆ ದಾರಿ ಮಾಡದೆ ಜ್ಞಾನವನ್ನೂ ನಾವು ಅಭ್ಯಾಸಮಾಡುತ್ತೇವೆ."

ಆತ್ಮಸ್ವಾತಂತ್ರ್ಯವನ್ನೇ ಹೆಚ್ಚುಮಾಡಿ ದೇಶಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ನಾವು ಎರಡನ್ನೂ ಒಂದುಗೂಡಿಸಲು ಪ್ರಯತ್ನ ಪಡಕೂಡದೇಕೆ?

ತಾತ್ವಿಕರು ತಲೆಯೆತ್ತುವುದಕ್ಕೆ ಮೊದಲು ಗ್ರೀಕ್‌ಸಂಸ್ಕೃತಿ ಯಾವ ರೂಪದಲ್ಲಿತ್ತೆಂದು ಈ ಪ್ರವೇಶದಲ್ಲಿ ಪ್ರಸ್ತಾಪಿಸಿದೆ. ಅವರು ಬಂದ ಮೇಲೆ ಜನರಿಗೆ ಏನೇನು ಬೋಧಿಸಿದರು, ಅವರ ಬೋಧನೆಯಿಂದ ಸುಧಾರಿಸಲ್ಪಟ್ಟ ಗ್ರೀಕ್‌ಸಂಸ್ಕೃತಿ ಯಾವ ರೂಪವನ್ನು ತಾಳಿತು—ಇವೆಲ್ಲ ವನ್ನೂ ಮುಂದಿನ ಪುಟಗಳಲ್ಲಿ ನೋಡಬಹುದು.

ಇಂದು ಕಾರಣಾಂತರಗಳಿಂದ ಗ್ರೀಸ್ ನೆಲಕ್ಕೆ ಬಿದ್ದಿರಬಹುದು. ಆದರೂ ಗ್ರೀಕ್‌ಸಂಸ್ಕೃತಿಯಲ್ಲಿ ಶಾಶ್ವತವಾದ, ಮಾನವಜೀವನವನ್ನು ಉತ್ತಮಗೊಳಿಸುವ, ಸುಧಾರಸವಿದ್ದರೆ ಅದು ಮುಂದೆ ಎದ್ದೇಏಳುವುದು. ಗ್ರೀಸ್ ನಿಜವಾಗಿಯೂ ಅಮರವೇ; ಗ್ರೀಕರು ನಿಜವಾಗಿಯೂ ಅಜೇಯರೇ.

# ಗ್ರೀಸಿನ ಸಪ್ತಜ್ಞಾನಿಗಳಲ್ಲಿ ಒಬ್ಬನು

ಒಬ್ಬಾನೊಬ್ಬ ವಿದ್ವಾಂಸನು ಮೈಲಿಟಸ್ಸಿನ ಜ್ಞಾನಿಯನ್ನು ಪರೀಕ್ಷೆ ಮಾಡಬೇಕೆಂದು ಅವನಿಗೆ ಹಲವು ಕ್ಲಿಷ್ಟವಾದ ಪ್ರಶ್ನೆಗಳನ್ನು ಹಾಕಲು, ಧರ್ಮರಾಯನು ಯಕ್ಷನಿಗೆ ಉತ್ತರ ಕೊಟ್ಟಂತೆ, ಆತನು ಹಿಂದು ಮುಂದು ನೋಡದೆ ಪ್ರಶ್ನೆಗೆ ತಕ್ಕ ಉತ್ತರವನ್ನು ಈ ಕೆಳಗೆ ಕಂಡಂತೆ ಕೊಟ್ಟನು.

೧. ಎಲ್ಲಕ್ಕಿಂತಲೂ ಹೆಚ್ಚು ಪುರಾತನವಾದ ವಸ್ತು ಯಾವುದು ?
"ದೇವರು ; ಏಕೆಂದರೆ ಅವನು ಯಾವಾಗಲೂ ಇದ್ದೇ ಇದಾನೆ."

೨. ಎಲ್ಲಕ್ಕಿಂತಲೂ ಹೆಚ್ಚು ಸುಂದರವಾದ ವಸ್ತು ಯಾವುದು ?
"ಪ್ರಪಂಚ ; ಏಕೆಂದರೆ ಅದು ದೇವರ ಕಾರ್ಯ."

೩. ಎಲ್ಲಕ್ಕಿಂತಲೂ ಹೆಚ್ಚು ದೃಢವಾದ ವಸ್ತು ಯಾವುದು ?
"ಆಶೆ (ಭರವಸೆ) ; ಏಕೆಂದರೆ ಮನುಷ್ಯನು ಉಳಿದುದೆಲ್ಲವನ್ನೂ ಕಳೆದು ಕೊಂಡರೂ ಸಹ ಆಶೆಯೆಂಬುದು ಅವನಲ್ಲಿ ನಿಂತೇ ನಿಲ್ಲುತ್ತದೆ."

೪. ಎಲ್ಲಕ್ಕಿಂತಲೂ ಹೆಚ್ಚು ಉತ್ತಮವಾದ ವಸ್ತು ಯಾವುದು ?
"ಸದ್ಗುಣ ; ಏಕೆಂದರೆ ಅದಿಲ್ಲದಿದ್ದರೆ ಮತ್ತೆ ಯಾವುದೂ ಒಳ್ಳೆಯದಾಗುವುದಿಲ್ಲ."

೫. ಎಲ್ಲಕ್ಕಿಂತಲೂ ಹೆಚ್ಚು ವೇಗವಾದ ವಸ್ತು ಯಾವುದು ?
"ಚಿಂತನೆ ; ಏಕೆಂದರೆ ಒಂದು ಕ್ಷಣಕ್ಕಿಂತಲೂ ಕಡಮೆ ಕಾಲದಲ್ಲಿ ಅದು ಜಗತ್ತಿನ ಆದಿ ಅಂತಗಳನ್ನು ನೋಡಿಕೊಂಡು ಬರಬಲ್ಲುದು."

೬. ಎಲ್ಲಿಕ್ಕಿಂತಲೂ ಹೆಚ್ಚು ಬಲವುಳ್ಳ ವಸ್ತು ಯಾವುದು ?
"ಆವಶ್ಯಕತೆ ; ಏಕೆಂದರೆ ಅದು ಜೀವನದ ಎಲ್ಲ ಅಪಾಯುಗಳನ್ನೂ ಮನುಷ್ಯನು ಎದುರಿಸುವಂತೆ ಮಾಡುತ್ತದೆ."

೭. ಎಲ್ಲಕ್ಕಿಂತಲೂ ಹೆಚ್ಚು ಮಹತ್ತಾದ ವಸ್ತು ಯಾವುದು ?
"ಆಕಾಶ ; ಏಕೆಂದರೆ ಸೃಷ್ಟಿಯಾದುದೆಲ್ಲವನ್ನೂ ಅದು ಒಳಗೊಂಡಿರುತ್ತದೆ."

೮. ಎಲ್ಲಕ್ಕಿಂತಲೂ ಹೆಚ್ಚು ತಿಳಿವಳಿಕೆಯುಳ್ಳ ವಸ್ತು ಯಾವುದು ?
"ಕಾಲ ; ಏಕೆಂದರೆ ಎಲ್ಲವನ್ನೂ ಅದು ಕಂಡುಹಿಡಿಯುತ್ತದೆ."

೯. ಎಲ್ಲಕ್ಕಿಂತಲೂ ಹೆಚ್ಚು ಸುಲಭವಾದ ಕೆಲಸ ಯಾವುದು ?
"ಇತರರಿಗೆ ಬುದ್ಧಿ ಹೇಳುವುದು."

೧೦. ಎಲ್ಲಕ್ಕಿಂತಲೂ ಹೆಚ್ಚು ಕಷ್ಟವಾದ ಕೆಲಸ ಯಾವುದು ?
"ನಿನ್ನನ್ನು ನೀನು ತಿಳಿದುಕೊಳ್ಳುವುದು."

# ಭಾಗ ೧.

## ಪ್ರಕೃತಿ ತತ್ತ್ವಪರಿಶೋಧನೆ

### ಅಧ್ಯಾಯ ೧. ಪ್ರಾಚೀನ ಗ್ರೀಕ್ ತತ್ತ್ವಶಾಸ್ತ್ರದ ಉತ್ಪತ್ತಿ ಮತ್ತು ಬೆಳವಣಿಗೆ.

ಪೂರ್ವಕಾಲದ ಜನಾಂಗಗಳಲ್ಲಿ ಪುರಾಣೇತಿಹಾಸಗಳನ್ನತಿಕ್ರಮಿಸಿ ತತ್ತ್ವಸಂಶೋಧನೆ ಮಾಡಲುಪಕ್ರಮಿಸಿದವರು ಬಹು ವಿರಳ. ಪುರಾತನ ಗ್ರೀಕರು ಪಾಶ್ಚಾತ್ಯರ ತತ್ತ್ವಶಾಸ್ತ್ರಕ್ಕೆ ಬೀಜಪ್ರಾಯರಾಗಿದ್ದುದು ಮಾತ್ರ ವಲ್ಲದೆ ಯೂರೋಪ್‌ದೇಶದ ನಾಗರೀಕತೆಗೆ ಸಂಬಂಧಿಸಿದ ಸಕಲ ಪ್ರಶ್ನೆ ಗಳನ್ನೂ ಅವುಗಳಿಗೆ ಸಮಂಜಸವಾದ ಉತ್ತರಗಳೆಲ್ಲವನ್ನೂ ತಾವೇ ಸೂಚಿಸಿದ್ದರು. ಮಾನವನ ಬುದ್ಧಿವ್ಯಾಪಾರವು ಸಾಮಾನ್ಯವಾದ ಮತ್ತು ಬಾಲಬೋಧಕವಾದ ಕಟ್ಟುಕಥೆಗಳನ್ನು ಜೋಡಿಸಲುದ್ಯಮಿಸಿ ಹಾಗೆಯೇ ಕ್ಲಿಷ್ಟತರವಾದ ಭಾವನೆಗಳನ್ನೂ, ಅಸಾಧಾರಣವಾದ ತತ್ತ್ವದರ್ಶನ ಗಳನ್ನೂ ಹೆಣೆಯಲು ಹೇಗೆ ಪ್ರಯತ್ನಪಡುತ್ತದೆ ಎಂಬದನ್ನು ಗ್ರೀಕರ ತತ್ತ್ವಶಾಸ್ತ್ರವು ವಿಶದವಾಗಿ ವ್ಯಕ್ತಪಡಿಸುತ್ತದೆ. ಆ ಜನರ ಚಿತ್ತಸ್ವಾತಂತ್ರ್ಯ ವನ್ನೂ ಸತ್ಯಪರಿಶೀಲನ ಸಂತೋಷವನ್ನೂ ಮತ್ತೆ ಯಾವ ಜನರೂ ಮೀರಿ ಸಿಲ್ಲ. ಇವೇ ಮೊದಲಾದ ಕಾರಣಗಳಿಂದ ಅವರ ತತ್ತ್ವಶಾಸ್ತ್ರಾಭ್ಯಾಸವು ಪ್ರೌಢಜ್ಞಾನಪಕ್ಷಪಾತಿಗಳಿಗೆಲ್ಲಾ ಪ್ರಯೋಜನಕಾರಿಯಾಗಿರುವುದಲ್ಲದೆ ಬುದ್ಧಿಶಕ್ತಿಯನ್ನು ಚುರುಕುಗೊಳಿಸತಕ್ಕದ್ದಾಗಿಯೂ ಇರುವುದು.

ಗ್ರೀಕರ ಪ್ರಪಂಚದಲ್ಲಿ ಪ್ರಾರಂಭವಾಗಿ ವೃದ್ಧಿಯನ್ನು ಹೊಂದಿದ ಜ್ಞಾನಾಭ್ಯುದಯಸಾಧಕವಾದ ಪ್ರಯತ್ನವೇ ಗ್ರೀಕರ ತತ್ತ್ವಶಾಸ್ತ್ರ ಚರಿತ್ರೆಯೆಂದೆನಿಸುವುದು. ಹಾಗೆಂದರೆ, ಶುದ್ಧಗ್ರೀಕ್ ಜನರ ದರ್ಶನಗಳು ಮಾತ್ರವೇ ಅಲ್ಲ. ಆ ಜನರ ಪ್ರತಿಭಾಮಹಿಮೆಯಿಂದ ಸಂಸ್ಕೃತವಾಗಿ, ಅವರ ನಾಗರೀಕತೆಯ ಮುಖ್ಯ ಫಲರೂಪವಾಗಿ, ಬೇರೆಬೇರೆ ಕಡೆಗಳಲ್ಲಿ, ಅಂದರೆ, ಅಥೆನ್ಸ್, ಅಲೆಕ್ಸಾಂಡ್ರಿಯ, ಏಷಿಯಾ ಮೈನರ್ ಪ್ರಾಂತಗಳ ಲ್ಲೆಲ್ಲಾ ಹರಡಿದ ತತ್ತ್ವವಿಚಾರಪ್ರಯತ್ನಗಳೂ ಸಹ ಆ ಚರಿತ್ರೆಯಲ್ಲಿ ಅಡಕವಾಗಿವೆ.

ಪುರಾತನ ಗ್ರೀಕರು ಪರ್ವತ ಪರ್ಯಾಯದ್ವೀಪವಾದ ಗ್ರೀಸ್ ದೇಶದಲ್ಲಿ ವಾಸವಾಗಿದ್ದರು. ಈ ದೇಶ ಸ್ವಾಭಾವಿಕವಾಗಿ ಬಲಿಷ್ಠಕಾಯರೂ ಚಟುವಟಿಕೆಯುಳ್ಳವರೂ ಆದ ಜನರ ತವರುಮನೆಯಾಗಿಯೂ, ಸಮುದ್ರಯಾನ ಮತ್ತು ವ್ಯಾಪಾರಗಳಿಗೆ ಉತ್ತೇಜಕವಾಗಿ ಸಮುದ್ರದಿಂದಾಚೆಗಿರುವ ದೇಶಗಳಿಗೆ ಗ್ರೀಕ್ ಜನರು ಪ್ರಯಾಣ ಮಾಡಲು ಅನುಕೂಲವಾಗಿದ್ದ ಬಂದರುಗಳುಳ್ಳದ್ದಾಗಿಯೂ ಇದ್ದಿತು. ಗ್ರೀಸಿನಿಂದ ಏಷಿಯಾಮೈನರಿನ ತೀರಗಳವರೆಗೂ 'ವಸಾಹತು'ಗಳು ಸ್ಥಾಪಿತವಾದುವಲ್ಲದೆ, ಕೊನೆಕೊನೆಯಲ್ಲಿ ಈಜಿಪ್ಟಿಗೂ, ಸಿಸಿಲಿಗೂ, ದಕ್ಷಿಣ ಇಟಲಿಗೂ '.ಪಿಲ್ಲರ್ಸ್ ಆಫ್ ಹರ್ಕ್ಯುಲೀಸ್' ಎಂಬ ಸ್ಥಳಕ್ಕೂ ಗ್ರೀಕ್‌ಜನರು ವ್ಯಾಪಿಸಿದರು. ಇದರಿಂದ ಮಾತೃಭೂಮಿಯಾದ ಗ್ರೀಸ್ ದೇಶದ ಸಂಪರ್ಕವು ಅಚಲವಾಗಿದ್ದುದಲ್ಲದೆ, ವಿಧವಿಧವಾದ ಪದ್ಧತಿ, ಚರಿತ್ರೆ, ನಾಗರೀಕತೆಯುಳ್ಳ ಬೇರೆಬೇರೆ ದೇಶಗಳ ಜನರೊಂದಿಗೆ ಕಲೆಯುವುದರಿಂದುಂಟಾಗುವ ಪ್ರಯೋಜನಗಳನ್ನೆಲ್ಲಾ ಅನುಭವ ಮಾಡಿಕೊಳ್ಳುವ ಪುಣ್ಯಫಲ ಈ ವಸಾಹತುಗಳಿಗೆ ಲಭಿಸಿತು. ಇದರ ಫಲರೂಪವಾದ ಅರ್ಥಸಾಧನಾಭಿವೃದ್ಧಿ, ವಾಣಿಜ್ಯ ಕೈಗಾರಿಕೆಗಳ ಬೆಳವಣಿಗೆ, ಜನಭರಿತವಾದ ಪುರಗಳ ಸ್ಥಾಪನೆ, ಹೆಮ್ಮಡಿಯಾಗಿ ಶೇಖರಿಸಲ್ಪಡುವ ಅರ್ಥಸಂಪತ್ತಿ—ಇವೇ ಮುಂತಾದ ಕಾರಣಗಳಿಂದ ಆದ್ಯಂತ ಗ್ರೀಕ್ ಪ್ರಪಂಚದಲ್ಲೆಲ್ಲಾ, ಸಾಮಾಜಿಕ, ರಾಜಕೀಯ, ಮಾನಸಿಕ ಮತ್ತು ಮತಸಂಬಂಧವಾದ ವ್ಯಾಪಾರಗಳು ಸುಧಾರಣೆಹೊಂದಿ, ಹೊಸದಾದ, ಪ್ರಗಾಢತರವಾದ, ಒಂದು ನಾಗರೀಕತೆ ಏರ್ಪಡಲು ಅವಕಾಶವಾಯಿತು. ಒಟ್ಟಿನಲ್ಲಿ ಇದರಿಂದ ಮನುಷ್ಯನ ಚಿತ್ತವೃತ್ತಿ ಹೊಸ ರೀತಿಯಲ್ಲಿ ಮಾರ್ಪಾಡಾಯಿತು; ಬುದ್ಧಿಶಕ್ತಿ ಸೂಕ್ಷ್ಮತರವಾಯಿತು; ಜನರಲ್ಲಿ ಈ ಪ್ರಪಂಚವನ್ನೂ ಜೀವನವನ್ನೂ ಸಹನೆಯಿಂದೀಕ್ಷಿಸುವ ನೂತನ ದೃಷ್ಟಿಯೊಂದುಂಟಾಯಿತು; ಅಸಾಧಾರಣರಾದ ಅವತಾರ ಪುರುಷರಂತಹ ಮಹಾಪುರುಷರು ಜನಿಸಲು ಕಾರಣವಾಯಿತು; ಮಾನವನಿಗೆ ಸಂಬಂಧಿಸಿದ ಸಕಲ ವ್ಯವಹಾರಗಳಲ್ಲಿಯೂ ಅಪ್ರತಿಹತವಾದ ಅಭಿವೃದ್ಧಿ ತಲೆದೋರಲು ಅನುಕೂಲವಾಯಿತು; ಸ್ವಾಭಾವಿಕವಾಗಿಯೇ

ತೀಕ್ಷ್ಣಬುದ್ಧಿಯುಳ್ಳವರೂ, ಜ್ಞಾನಾರ್ಜನಾಸಕ್ತರೂ, ಸೌಂದರ್ಯವೈಭವಾನುಭವವುಳ್ಳವರೂ, ಕಾರ್ಯಕಾರಿಗಳೂ, ಶೌರ್ಯಪೌರುಷವಂತರೂ ಆದ ಗ್ರೀಕ್ ಜನರಿಗೆ ತಮ್ಮ ಬುದ್ಧಿಶಕ್ತಿಪ್ರಯೋಗದಿಂದ ರಾಜಕೀಯ, ನೈತಿಕ, ತತ್ವಶಾಸ್ತ್ರಶೋಧಕ ಮತ್ತು ಮತಸಂಬಂಧವಾದ ಮಾರ್ಗಗಳಲ್ಲಿ ಪ್ರಗತಿಯನ್ನೈದಲು ಸಹಕಾರಿಯಾಯಿತು.

ಗ್ರೀಕ್ ಜನರ ರಾಜಕೀಯ ವ್ಯಾಪಾರಗಳನ್ನು ಪರಿಶೀಲನ ಮಾಡಿದರೆ ಮಾತೃಭೂಮಿಗೂ ವಸಾಹತುಗಳಿಗೂ ಅನೇಕ ವಿಚಾರಗಳಲ್ಲಿ ಸಮತೆ ಕಂಡುಬರುವುದು: ಎಲ್ಲಾ ಕಡೆಗಳಲ್ಲಿಯೂ ನಿರಂಕುಶವಾದ ರಾಜಪ್ರಭುತ್ವ ಮೊದಲಾಗಿ, ಬಲಿಷ್ಠರೂ ಯಶೋವಂತರೂ ಆದ ಮಹಾಜನರ ಪ್ರಭುತ್ವಕ್ಕೆ ಬಂದು, ಕಡೆಯಲ್ಲಿ ಪ್ರಜಾಪ್ರತಿನಿಧಿಗಳಿಂದ ನಡಸಲ್ಪಡುವ ಸಾಂಕುಶಪ್ರಭುತ್ವಕ್ಕೆ ಇಳಿಯುತ್ತದೆ. ಹೋಮರಿ[೧]ನ ಕಾವ್ಯಗಳಲ್ಲಿ ಚಿತ್ರಿಸಲ್ಪಟ್ಟಿರುವ ಸಮಾಜವನ್ನು ನೋಡುವಲ್ಲಿ ಅದು ಜಾತ್ಯಂತರಗಳನ್ನೊಳಗೊಂಡಿರುವ ಸಮಾಜವೆಂದೂ ರಾಜ್ಯಭಾರಕ್ರಮ ಪಿತೃಮುಖ್ಯವಾದ (Patriarchal) ರಾಜಪ್ರಭುತ್ವವಾಗಿತ್ತೆಂದೂ ಕಂಡುಬರುತ್ತದೆ. ಐಶ್ವರ್ಯವೂ ನಾಗರೀಕತೆ ನಾಣ್ಯವೂ ಕೇವಲ ಸ್ವಲ್ಪಜನಗಳಲ್ಲೆ ಸೇರುವುದಾದರೆ ರಾಜ್ಯಭಾರ ಶ್ರೀಮಂತ ಪ್ರಭುತ್ವವಾಗಿ ಪರಿಣಮಿಸಿ ಕಡೆಯಲ್ಲಿ ಇದರ ನಿರಂಕುಶರೂಪವಾದ 'ಆಲಿಗಾರ್ಕಿ' ಎಂಬ ಪ್ರಭುತ್ವಕ್ಕೆ ದಾರಿಮಾಡುವುದು. ಸಾಮಾಜಿಕ ಸ್ಥಿತಿಗಳು ಬದಲಾಯಿಸುತ್ತ ಹೋದ ಹಾಗೆಲ್ಲಾ 'ದಿ ಡೀಮಾಸ್' ಎಂಬ ಸಾಮಾನ್ಯಜನರ ಪೌರಜಾತಿಯೊಂದು ಹುಟ್ಟಿ ಅನೇಕ ವಿಧವಾದ ಹಕ್ಕುಬಾಧ್ಯತೆಗಳನ್ನು ಅನುಭವಿಸುವ ಶ್ರೀಮಂತಜನಗಳ ಅಧಿಕಾರಗಳನ್ನಾಕ್ಷೇಪಿಸಲುಪಕ್ರಮಿಸುವುದು. ತದನಂತರದಲ್ಲಿ ಧೈರ್ಯಸ್ಥರಾದ ಮಹದಾಸೆಯುಳ್ಳ ಒಬ್ಬಿಬ್ಬರ ಪ್ರಯತ್ನಗಳಿಂದ ಶ್ರೀಮಂತಜನರ ಪ್ರಭುತ್ವ ಕೊನೆಗಂಡು, ಗ್ರೀಕ್ ಪ್ರಪಂಚದಲ್ಲೆಲ್ಲಾ 'ಟಿರನೀಸ್' ಎಂದರೆ ಶಾಸನವಿರೋಧವಾದ ನಿರಂಕುಶ ಪ್ರಭುತ್ವಗಳು ಸುಮಾರು ಕ್ರಿಸ್ತಪೂರ್ವ ಏಳನೆಯ ಮತ್ತು ಆರನೆಯ ಶತಮಾನಗಳಲ್ಲಿ ಸ್ಥಾಪಿತವಾಗುತ್ತವೆ; ಕೊನೆಯಲ್ಲಿ ಪ್ರಜೆಗಳೇ ರಾಜ್ಯ

೧. ಹೋಮರ್ ಪ್ರಸಿದ್ಧನಾದ ಗ್ರೀಕರ ಆದಿ ಕವಿ.

ಭಾರವನ್ನು ಮಾಡಲಾರಂಭಿಸಿ ನಿರಂಕುಶಪ್ರಭುತ್ವಗಳು ಮಾಯವಾಗಿ ಪ್ರಜಾಪ್ರಭುತ್ವಗಳೇ ತಲೆಯೆತ್ತುತ್ತವೆ.

ಈ ಪರಿಯ ಬದಲಾವಣೆಗಳನ್ನು ಗ್ರೀಕ್ ಜನರ ಚಂದ್ರೋದಯ ದಿಂದರಳಿದ ಕುಮುದಗಳೆಂದು ನಾವೆಣಿಸಬಹುದು. ಈ ನವೀನ ಪ್ರಕಾಶ ಏಕಕಾಲದಲ್ಲಿಯೇ ಪ್ರಬೋಧದ ಸೂಚನೆಯೂ, ಕಾರಣವೂ ಆಗಿರುತ್ತದೆ. ಅದು ವೃದ್ಧಿಯನ್ನೈದುತ್ತಿರುವ ವಿವೇಚನಾಶಕ್ತಿಯು, ಅನೂಚಾನವಾಗಿ ಬಂದಿರುವ ವ್ಯವಹಾರವರ್ತನೆಗಳ ಸಾಧುತ್ವಾ ಸಾಧುತ್ವವನ್ನು ನಿಶ್ಚಯಮಾಡುವ ವಿಮರ್ಶಶಕ್ತಿಯು, ಬಾಹ್ಯದೃಶ್ಯವಾದ ಹೆಗ್ಗುರುತು; ಅದು ಕಡೆಯಲ್ಲಿ ಪ್ರಾಚೀನಪದ್ಧತಿಗಳನ್ನು ಖಂಡನೆಮಾಡಿ, ಸಮಾಜಸುಧಾರಣೆಯಲ್ಲಿಯೂ, ಮತತತ್ವಸಂಸ್ಕಾರಗಳಲ್ಲಿಯೂ ಪರಿಣ ಮಿಸುತ್ತದೆ. ಕ್ರಿಸ್ತಪೂರ್ವ ಆರನೆಯ ಶತಮಾನಕ್ಕೆ ಹಿಂದಿನ ಗ್ರೀಕರ ಶಾಸ್ತ್ರಸಾಹಿತ್ಯಗಳನ್ನು ಪರೀಕ್ಷಿಸುವಲ್ಲಿ ರಾಜ್ಯಭಾರಕ್ರಮಗಳಲ್ಲಿ ಕಾರಣ ರೂಪವಾಗಿ ಕಂಡುಬರುವ ವಿವೇಚನ ಅಥವ ವಿಮರ್ಶಬಲವೇ ಇವುಗಳಲ್ಲಿಯೂ ತೋರ್ಪಡುವುದು. ಹೋಮರಿನ ಕಾಲದಲ್ಲಿದ್ದ ಮನಸ್ಸಂತೋಷವೂ, ದೃಶ್ಯಪ್ರಪಂಚವು ಸತ್ಯವೆಂಬ ಭಾವನೆಯೂ, ಮಾನವಜಾತಿಯ ಬಾಲ್ಯದಶೆಯಲ್ಲಿರುವ ನೈಜಸ್ವಭಾವವೂ, ಸರಳತೆಯೂ ಕ್ರಮೇಣ ಅದೃಶ್ಯವಾಗುವುವು. ಕವಿಗಳು ಅಲ್ಪಸ್ವಾಂತಚಿತ್ತರಾಗಿ ಬಹು ತರವಾಗಿ ಖಂಡನೆಯಲ್ಲಿಯೇ ಆಸಕ್ತಿತೋರಿಸುವರು. ಆಗಾಗಲೇ ಹೋಮರಿನ ಕಾವ್ಯಗಳಲ್ಲಿ ಅಲ್ಲಲ್ಲಿ ಜನರ ನಡತೆಯ ವಿಚಾರವಾಗಿ, ಮಾನವ ಸಾಮಾನ್ಯದ ಅವಿವೇಕದ ವಿಷಯವಾಗಿ, ಜೀವನದ ಕ್ಷಣಭಂಗುರತ್ವ, ಅಧರ್ಮದ ಅನಿಷ್ಟತ್ವವಿಷಯವಾಗಿ, ನೀತಿಬೋಧಕವಾದ ವಾಕ್ಯಗಳನ್ನು ಕಾಣುತ್ತೇವೆ. ಹೆಸಿಯಡ್ ಎಂಬ ಕವಿಯಲ್ಲಾದರೋ ಖಂಡನಾ ಸಕ್ತಿಯೂ ನಿಸ್ಸಾರನಿಶ್ಚಯವೂ ಹೆಚ್ಚುತ್ತವೆ. ಆತನ "ವರ್ಕ್ಸ್ ಅಂಡ್ ಡೇಸ್" ಎಂಬ ಪುಸ್ತಕ ಆತನ ಕಾಲದ ಜನರ ನ್ಯೂನಾತಿರೇಕ ಗಳನ್ನು ಉದ್ಘಾಟನಮಾಡಿ, ಜೀವನವನ್ನು ಸುಸೂತ್ರವಾಗಿ ನಡಸಲು ಉಪಯೋಗವಾಗುವ ನೀತಿಧರ್ಮಗಳನ್ನೊಳಗೊಂಡು, ಕಳೆದ ಕಾಲದ ಜನರ ಅನೇಕ ಸದ್ಗುಣಗಳನ್ನು ಪ್ರಶಂಸೆಮಾಡುವ ನೀತಿಧರ್ಮಕರ

ಭೂಷಣವೆಂದು ಹೇಳಬಹುದು. ಕ್ರಿಸ್ತಪೂರ್ವ ಏಳನೆಯ ಶತಮಾನದ ಕವಿಗಳಂತೂ 'ಟೆರನೀಸ್' ಎಂಬ ನ್ಯಾಯವಿರುದ್ಧವಾದ ನಿರಂಕುಶ ಪ್ರಭುತ್ವಗಳನ್ನು ಹೀಯಾಳಿಸಿ, ಜನರ ಅಬಲತೆಯನ್ನು ಕುರಿತು ಗೋಳಾಡಿ, ಕಡೆಯಲ್ಲಿ ಅವರು ತಮ್ಮ ಬಹುವಿಧದ ಕಷ್ಟಗಳನ್ನು ಧೈರ್ಯ ದಿಂದ ಸಹಿಸಿಕೊಂಡು ಕರ್ಮಫಲವನ್ನು ದೇವತೆಗಳ ಕೈಯಲ್ಲಿ ಬಿಟ್ಟುಬಿಡ ಬೇಕೆಂದು ಬೋಧಿಸುತ್ತಾರೆ. ಆರನೆಯ ಶತಮಾನದ ಕಾವ್ಯಗಳಲ್ಲಿ ನೀತಿ ಬೋಧೆಯೂ ಜೀವನದ ನಿಸ್ಸಾರತತ್ವಸರಣಿಯೂ ಹೆಚ್ಚುತ್ತವೆ; ದೇಶದ ರಾಜ್ಯಭಾರಕ್ರಮಗಳನ್ನು ಕವಿಗಳು ವಿಶೇಷವಾಗಿ ನಿಂದಿಸುತ್ತಾರೆ. ಈ ಕಾಲದಲ್ಲಿಯೇ ಧರ್ಮಬೋಧಕವಾದ ಕಟ್ಟುಕಥೆಗಳನ್ನು ಬರೆದಿರುವ ಈಸೋಪನು ಜೀವಿಸಿದ್ದುದು. ವಸ್ತುಸ್ಥಿತಿಯೇನೆಂದರೆ: ಪುರುಷನು ಸಾಮಾನ್ಯ ಪಶುವಂತೆ ಸುಮ್ಮನೆ ಆಯುಷ್ಯವನ್ನು ಕಳೆಯುತ್ತಿಲ್ಲ; ಜೀವನವನ್ನು ಶೋಧಿಸಿ ಭೇದಿಸಿ ಯೋಚನಾಪರನಾಗಿ ಸ್ಥಿತಿಗತಿಗಳನ್ನು ಖಂಡಿಸಲು ತೊಡಗಿದ್ದಾನೆ; ಅವನಿಗೀಗ ಪುರಾತನಕಾಲದಿಂದ ಬಂದಿರುವ ಪೂರ್ವಾಚಾರಗಳನ್ನನುಸರಿಸುವುದರಲ್ಲಿಯೇ, ವಾಡಿಕೆಯಾಗಿ ಆಚರಣೆ ಯಲ್ಲಿರುವ ಧ್ಯೇಯಗಳನ್ನು ಧ್ಯಾನಮಾಡುವುದರಲ್ಲಿಯೇ, ತೃಪ್ತಿಯಿಲ್ಲ; ತನ್ನ ನೈತಿಕ ರಾಜಕೀಯ ಧಾರ್ಮಿಕಭಾವನೆಗಳನ್ನೂ, ತನಗೆ ನ್ಯಾಯ ನಿಜವೆಂದು ತೋರಿಬರುವ ಆಶಯಗಳನ್ನೂ, ಪ್ರಕಾಶಪಡಿಸಲುಪಕ್ರಮಿ ಸಿದ್ದಾನೆ. ಕಾಲ್ಯಾಂತರದಲ್ಲಿ ಈ ಜ್ಞಾನಾನ್ವೇಷಣದ ದಾವಾಗ್ನಿ—ಈ ವಿಧವಾದ ಆತ್ಮದ ಅತೃಪ್ತಿ — ರಾಜನೀತಿನಿರ್ಣಯ ಮತ್ತು ಧರ್ಮಸಂಶೋಧಕರೂಪವಾದ ಸಿದ್ಧಾಂತಗಳನ್ನೇರ್ಪಡಿಸಿ ಜನಜೀವನದ ನಡೆನುಡಿಗಳ ಗುಣದೋಷಗಳನ್ನು ವಿಚಾರಪೂರ್ವಕವಾದ ವಿಮರ್ಶೆ ಗೀಡುಮಾಡುವ ಶಕ್ತಿಯಾಗಿ ಪರಿಣಮಿಸುತ್ತದೆ.

ಪುರಾತನ ಗ್ರೀಕರ ಮತವಿಚಾರಗಳೂ ಇದೇ ರೀತಿಯಲ್ಲಿ ಕೊನೆ ಗಾಣುವುವು. ಪ್ರಾರಂಭದಲ್ಲಿ ಒಂದು ವಿಧವಾದ 'ಪ್ರಕೃತಿಪೂಜೆ' ಯಿಂದ (Nature-worship) ಹೊರಟು ಅವರ ಮತ ಕ್ರಮೇಣ 'ಬಹು ದೈವಾರಾಧನೆ' (Polytheism) ಎಂಬ ರೂಪವನ್ನು ತಾಳುವುದು. ಈ ಮತಪ್ರಕಾರವಾಗಿ, ಕವಿಗಳು ತಮ್ಮ ಕಲ್ಪನಾಲೋಕದಲ್ಲಿ ಉತ್ಪತ್ತಿ

ಮಾಡಿದ ಅನೇಕ ವಿಧವಾದ ದೇವದಿಂಡರುಗಳೂ, ಚರಿತ್ರಾರ್ಹವಾದ ಜೀವನವುಳ್ಳ ಶ್ರೇಷ್ಠತರ ಪುರುಷರೂ ಸಹ ಪೂಜಾರ್ಹರೆಂದೆಣಿಸಲ್ಪಡುವರು. ಇಲ್ಲಿಯೂ ಸಹ ಸ್ವಲ್ಪಕಾಲಾನಂತರದಲ್ಲಿಯೇ ವಿಮರ್ಶಾಸಕ್ತಿ ತಲೆದೋರಿ ಮತವನ್ನು ಜ್ಞಾನಪೂರ್ವಕವಾದ, ನೀತಿಧರ್ಮಬದ್ಧವಾದ ರೀತಿಯಲ್ಲಿ ಸುಧಾರಿಸುತ್ತದೆ. ಹೋಮರ್ ಕವಿಯಿಂದ ವರ್ಣಿಸಲ್ಪಟ್ಟ ದೇವತೆಗಳ ಸ್ವಭಾವ ಗುಣ ನಡತೆಗಳನ್ನು ಜನರು ಚರ್ಚಿಸಿ ಆಕ್ಷೇಪಿಸಲು ತೊಡಗಿದಾಗ, ಒಲಿಂಪಸ್ ಎಂಬ ಪರ್ವತಶಿಖರದಲ್ಲಿ ವಾಸವಾಗಿದ್ದ "ಸ್ಯೂಸ್" ಎಂಬ ಈಶ್ವರನ ವಿಷಯವಾಗಿ ಜನರಿಗೆ ಪರಿಶುದ್ಧತರವಾದ ಭಾವನೆ ಅಂಕುರಿಸಿದಾಗ, ಅವರು ನೂತನವಾದ ಮತ್ತು ಶ್ರೇಷ್ಠತರವಾದ ಧರ್ಮಜ್ಞಾನದಿಂದ ಸಂಸ್ಕೃತರಾದರೆಂದೇ ಹೇಳಬೇಕು. ಜನರ ನಾಗರೀಕತೆ ಹೆಚ್ಚಿದಹಾಗೆಲ್ಲಾ ದೇವತೆಗಳೂ ಸಹ ಧರ್ಮಬುದ್ಧಿಯುಳ್ಳವರಾಗುತ್ತಾರೆ; ಕಡೆಯಲ್ಲಿ 'ಸ್ಯೂಸ್' ದೇವೇಂದ್ರನು ಹಿಂದೂಗಳ ಋಗ್ವೇದದಲ್ಲಿರುವ 'ಋತ' ಎಂಬ ಧರ್ಮದೇವತೆಯಂತೆ ದೇವರಾಜ್ಯದ ಅಧಿಪತಿಯೆಂದೂ, ಭೂಲೋಕದಲ್ಲಿಯೂ ದೇವಲೋಕದಲ್ಲಿಯೂ ಶಿಷ್ಟಪರಿಪಾಲಕ ಧರ್ಮೋದ್ಧಾರಕ ಗುಣೈಕಪಕ್ಷಪಾತಿಯೆಂದೂ ಪ್ರಖ್ಯಾತಿ ಹೊಂದುತ್ತಾನೆ.

ದೈವಸಿದ್ಧಾಂತವಿಚಾರದಲ್ಲಿಯೋ ಎಂದರೆ, ಜನರು ದೇವತೆಗಳನ್ನು ಕುರಿತು ಅವರ ಉತ್ಪತ್ತಿ ಮತ್ತು ಸ್ಥಿತಿ, ಅವರಿಗೂ ಪ್ರಪಂಚಕ್ಕೂ ಇರುವ ಸಂಬಂಧ, ಇವುಗಳನ್ನು ನಿರ್ಣಯಮಾಡಲು ಹೊಸ ಸಿದ್ಧಾಂತಗಳನ್ನು ಕಲ್ಪಿಸುತ್ತಾರೆ; ಪುರಾತನಕಾಲದ ಪುರಾಣೇತಿಹಾಸಗಳನ್ನು ವಿಮರ್ಶೆ ಮಾಡಲು ಪ್ರಯತ್ನಪಟ್ಟು, ಈ ದೇವತೆಗಳು ಹೇಗೆ ಉತ್ಪನ್ನರಾದರು, ಇವರನ್ನು ಸೃಷ್ಟಿಸಿದವರು ಯಾರು–ಇವೇ ಮುಂತಾಗಿ ವಸ್ತುಸ್ಥಿತಿಗಳಿಗೆ ಕಾರ್ಯಕಾರಣಭಾವಗಳನ್ನೊದಗಿಸಲು ತೊಡಗುತ್ತಾರೆ. ಈ ರೀತಿಯಾಗಿ ದೇವತೆಗಳ ಉತ್ಪತ್ತಿಕ್ರಮವನ್ನು ನಿರ್ಧರಿಸಲು ಮಾಡಿದ ಪ್ರಯತ್ನಗಳಲ್ಲಿ 'ಹೆಸಿಯಡ್' ಎಂಬ ಕವಿಯ 'ದೇವೋತ್ಪತ್ತಿಸಿದ್ಧಾಂತ'ವೇ (Theogony) ಬಹುಪುರಾತನಕಾಲದ್ದು. ಈ ಸಿದ್ಧಾಂತಪ್ರಕಾರವಾಗಿ 'ಕೇಯಾಸ್' ಅಂದರೆ ಪ್ರಳಯಾಂತವೇ ಮೊದಲು ಹುಟ್ಟಿತೆಂತಲೂ, ಅನಂತರದಲ್ಲಿ

'ಗಾಯ' (ಭೂಮಿ, ಪ್ರಪಂಚ) ಎಂಬ ಭೂದೇವತೆ ಜನಿಸಿದಳೆಂತಲೂ ತದನಂತರದಲ್ಲಿ 'ಈರಾಸ್' ಎಂದರೆ 'ಪ್ರೇಮ' 'ಪ್ರೀತಿ' ಎಂಬುದು ಜನನವಾಯಿತೆಂತಲೂ ತಿಳಿದುಬರುತ್ತದೆ. 'ಕೇಯಾಸ್' ಮೂಲಕವಾಗಿ 'ಎರಿಬಾಸ್' ಎಂದರೆ 'ಕಗ್ಗತ್ತಲೆ' ಮತ್ತು 'ನಕ್ಸ್' ಅಂದರೆ 'ರಾತ್ರಿ' ಇವೆರಡೂ ಹುಟ್ಟಿದುವು. ಇವೆರಡರ ಸಂಯೋಗಫಲದಿಂದ 'ಈಥರ್' ಎಂದರೆ 'ಬೆಳಕು' ಮತ್ತು 'ಹೆಮಿರಾ' ಎಂದರೆ 'ದಿವಾ' ಅಥವಾ ಹಗಲು ಜನಿಸಿದುವು. ಭೂಮಿ ಸಮುದ್ರವನ್ನು ಹೆತ್ತು 'ಯೂರೇನಾಸ್' ಎಂದರೆ ಗಗನಮಂಡಲದ ಸಂಪರ್ಕದಿಂದ ನದಿಗಳನ್ನು ಪಡೆದಳು. ಯೂರೇನಾಸಿನ ಬೀಜಬಲದಿಂದ 'ಅಫ್ರಾಡಿಟಿ' (ಪ್ರೇಮ ದೇವತೆ) ಎಂಬವಳು ಜನಿಸಿದಳು, ಹಾಗಂದರೆ ಗಗನಮಂಡಲದ ಮಳೆ ಪ್ರಕೃತಿಯಲ್ಲಿ (ಪ್ರಪಂಚದಲ್ಲಿ) ಪ್ರಾಣೋತ್ಪತ್ತಿಯನ್ನುಂಟುಮಾಡುತ್ತದೆ ಎಂದು ತಾತ್ಪರ್ಯ.—ಇಲ್ಲಿರುವ ವಿಶೇಷವೇನೆಂದರೆ, ಕವಿಗಳು ನಿಜವಾದ ಜ್ಞಾನಮಾರ್ಗವನ್ನು ಅಂದರೆ ಶಾಸ್ತ್ರೀಯವಾದ (Scientific) ಮತ್ತು ಬುದ್ಧಿಬದ್ಧವಾದ (Logical or Rational) ಮಾರ್ಗವನ್ನವಲಂಬಿಸದಿದ್ದರೂ ತಮ್ಮ ಕಲ್ಪನಾಶಕ್ತಿಯ ಪ್ರಭಾವದಿಂದಲಾದರೂ ಪ್ರಪಂಚವಸ್ತುಗಳ ಮೂಲಕಾರಣವನ್ನು ತಿಳಿಯಲು ಪ್ರಯತ್ನಪಡುತ್ತಾರಲ್ಲ— ಈ ಪ್ರಯತ್ನಕ್ಕೇ ನಾವು ಸಂತೋಷಪಡಬೇಕು.

ಇಂಥ ದೇವೋತ್ಪತ್ತಿ ಅಥವ ಪ್ರಕೃತಿಪರಿಣಾಮ ಸಿದ್ಧಾಂತಗಳು ನಿಜವಾದ ತತ್ವಶಾಸ್ತ್ರವಾಗುವುದಿಲ್ಲವಾದರೂ, ನಿಜವಾದ ತತ್ವಶಾಸ್ತ್ರಕ್ಕೆ ಇವು ದಾರಿಯನ್ನು ತೋರಿಕೊಡುವುವು. ಆಗಲೇ ಈ ಪೌರಾಣಿಕ, ಕಲ್ಪನಾಭಾವನೆಗಳಲ್ಲಿ ನಾವು ತತ್ವಮಾರ್ಗದ ಬೀಜಾಂಕುರವನ್ನು ಕಾಣಬಹುದು: ಈ ಪ್ರಕೃತಿಯ ವಿಚಿತ್ರವ್ಯಾಪಾರಗಳಿಗೆ ಸಮಾಧಾನವನ್ನು ಕೊಡುವುದು ಹೇಗೆ ಎಂಬ ಚಿತ್ತಾಕಾಂಕ್ಷೆ ಮನುಷ್ಯನ ಬುದ್ಧಿ ಪ್ರಪಂಚದಲ್ಲಿ ಬೇರುಳ್ಳುದಾಗಿ, ಈಗ ಕಲ್ಪನಾಲೋಕದ ಚಿತ್ರಗಳಿಂದ ಪರಿತೃಪ್ತವಾದರೂ, ಗ್ರೀಕ್ ಕವಿಗಳ ಮನಸ್ಸು ಪೌರಾಣಿಕಮಾರ್ಗದಿಂದ ಬಹುದೂರ ಮುಂದುವರಿದಿದೆಯೆಂಬುದನ್ನು ಸ್ಪಷ್ಟಪಡಿಸುತ್ತದೆ; ಹೇಗೆಂದರೆ ಈಗವರು ಬರಿಯ ಕಟ್ಟುಕಥೆಗಳೇ ಸತ್ಯವೆಂದು ನಂಬದೆ,

ತಮಗೆ ಸಾಧ್ಯವಾದಮಟ್ಟಿಗೂ ಪ್ರಕೃತಿವ್ಯಾಪಾರಗಳನ್ನೂ, ಮಾನವ ಜನ್ಮ ಮತ್ತು ಭವವ್ಯಾಪಾರಗಳನ್ನು ಆಳತಕ್ಕವರೆಂದೂಹಿಸಲ್ಪಟ್ಟಿದ್ದ ದೇವತೆಗಳ ಮೂಲವನ್ನೂ ಉತ್ಪತ್ತಿಕ್ರಮವನ್ನೂ ಕಂಡುಹಿಡಿದು ಪುರಾಣ ಪ್ರಪಂಚವನ್ನು ಜ್ಞಾನಬದ್ಧವನ್ನಾಗಿಮಾಡಲು ಪ್ರಯತ್ನಪಡುತ್ತಿದ್ದಾರೆ. ಆದರೂ, ಈ ಸಿದ್ಧಾಂತಗಳೆಲ್ಲಾ ಇನ್ನೂ ಕವಿಯ ಕಲ್ಪನಾಶಕ್ತಿಯನ್ನು ಸೂಚಿಸುತ್ತವೆಯೇ ಹೊರತು, ತಾತ್ವಿಕನ ಕಾರ್ಯಕಾರಣಭಾವವನ್ನು ಪ್ರಕಾಶಪಡಿಸುವುದಿಲ್ಲ; ಅಮಾನುಷವ್ಯಕ್ತಿಗಳನ್ನು ಕೋರುತ್ತವೆಯೇ ಹೊರತು ಸ್ವಾಭಾವಿಕಮಾರ್ಗವನ್ನು ಹಿಡಿದು ಮುಂದುವರಿಯುವುದಿಲ್ಲ. ಎಂದು ಮನುಷ್ಯನ ಚಿತ್ತವು ಕಲ್ಪನೆಯ ಬಲವನ್ನು ತ್ಯಜಿಸಿ ಜ್ಞಾನ ಮಾರ್ಗವನ್ನವಲಂಬಿಸುತ್ತದೆಯೋ, ಭಾವನಾಲೋಕವನ್ನುಬಿಟ್ಟು ಬುದ್ಧಿ ಶಕ್ತಿಯನ್ನು ಪ್ರಯೋಗಿಸುತ್ತದೆಯೋ, ಎಂದು ವಸ್ತುಸ್ಥಿತಿಯ ರಹಸ್ಯ ವನ್ನು ವ್ಯಕ್ತಪಡಿಸಲು ಅಮಾನುಷವ್ಯಾಪಾರಗಳನ್ನು ತರದೆ ಸ್ವಾಭಾವಿಕ ವಾದ ಅನುಭವಸಿದ್ಧವಾದ ಕಾರಣಗಳನ್ನು ಸೂಚಿಸಲು ಪ್ರಯತ್ನಪಡು ವುದೋ, ಅಂದು ತತ್ವಜ್ಞಾನವಂಕುರಿಸಿತೆಂದು ನಾವರಿಯಬೇಕು. ಜನ ಸಾಮಾನ್ಯದಿಂದಂಗೀಕರಿಸಲ್ಪಟ್ಟ ಪುರಾಣಕಥೆಗಳನ್ನೊತ್ತಿಟ್ಟು, ಸದ್ಯದಲ್ಲಿ ನಮ್ಮ ಕೆಲಸವನುಕೂಲವಾಗಬೇಕೆನ್ನುವ ನಮ್ಮ ಸ್ವಂತ ಅಪೇಕ್ಷೆಗಳನ್ನು ಬದಿಗಿಟ್ಟು, ನಿಷ್ಪಕ್ಷಪಾತವಾಗಿ ವಸ್ತುವ್ಯಾಪಾರಗಳ ಅರ್ಥಶೋಧನೆ ಯನ್ನು ಮಾಡುವ ಪ್ರಯತ್ನಕ್ಕೆ ತತ್ವಶಾಸ್ತ್ರವೆಂದು ಹೆಸರು. ಪ್ರಬೋಧ ಕಾಲವಾದ ಕ್ರಿಸ್ತಪೂರ್ವ ಆರನೇ ಶತಮಾನದಲ್ಲಿ ಗ್ರೀಸಿನಲ್ಲಿ ಜನಿಸಿದ ಈ ತತ್ವಶಾಸ್ತ್ರಪ್ರಯತ್ನವು, ಹಿಂದೆ ನಾವು ವರ್ಣಿಸಿರುವ ಮತ್ತು ಗ್ರೀಕರ ವಿಶಿಷ್ಟಪ್ರಯತ್ನದಲ್ಲಿ ಕಂಡುಬರುವ ವಿಮರ್ಶಬುದ್ಧಿಯು, ಅಥವಾ ಜ್ಞಾನ ಶೋಧನಾಸಕ್ತಿಯು, ಸಮಂಜಸವಾದ ಫಲವೇ ಆಗಿದೆ.

ಗ್ರೀಕರತತ್ವಶಾಸ್ತ್ರವು ವಸ್ತುಪ್ರಪಂಚದ ಸತ್ವನಿರ್ಣಯಮಾಡುವ ಕಾರ್ಯವನ್ನು ಪ್ರಥಮದಲ್ಲಿ ಕೈಗೊಳ್ಳುತ್ತದೆ. ಆರಂಭದಲ್ಲಿ ಬಾಹ್ಯ ಪ್ರಪಂಚವೇ ಅದರ ಗುರಿ; ಕ್ರಮಕ್ರಮೇಣ ಮಾನವಜಾತಿಯಮೇಲೆ ಅದರ ಲಕ್ಷ್ಯ ಬೀಳುತ್ತದೆ. ಪ್ರಕೃತಿ ಏನು, ತತ್ಸಂಬಂಧವಾದ ಮನುಷ್ಯನು ಯಾರು, ಎಂಬುದೇ ಅದರ ಮೊದಲನೆಯ ಪ್ರಶ್ನೆ; ಮನುಷ್ಯನು ಯಾರು,

ತತ್ಸಂಬಂಧವಾದ ಪ್ರಕೃತಿ ಏನು, ಎಂಬುದೇ ಅದರ ಎರಡನೆಯ ಪ್ರಶ್ನೆ. ಬಾಹ್ಯಪ್ರಪಂಚದಿಂದ ಮನುಷ್ಯಲೋಕಕ್ಕೆ ಗಮನ ತಿರುಗುವಾಗ ಮಾನವಸಂಬಂಧವಾದ ಪ್ರಶ್ನೆಗಳ ವಿಚಾರಣೆಗೆ ಅವಕಾಶವುಂಟಾಗುವುದು: ಅಂದರೆ ತರ್ಕಶಾಸ್ತ್ರ, ನೀತಿಶಾಸ್ತ್ರ, ಮನಶ್ಶಾಸ್ತ್ರ, ರಾಜನೀತಿಶಾಸ್ತ್ರ, ಕಾವ್ಯಶಾಸ್ತ್ರ–ಮುಂತಾದ ಶಾಸ್ತ್ರಾಭ್ಯಾಸಕ್ಕೆ ಗೌರವ ದೊರೆಯುವುದು. ಅದರಲ್ಲಿಯೂ ಮುಖ್ಯವಾಗಿ ನೀತಿಧರ್ಮವ್ಯವಸ್ಥೆಯೇ ಮೊದಲು ಪ್ರಾಶಸ್ತ್ಯವನ್ನು ಹೊಂದುವುದು. ಮಾನವನಿಗೆ ಸರ್ವೋತ್ತಮವಾದ ವಸ್ತು ಯಾವುದು, ಜೀವನದ ಮುಖ್ಯೋದ್ದೇಶವೇನು? ಎಂಬ ಧರ್ಮಸಾರನಿರ್ಣಯವೇ ಪ್ರಾಮುಖ್ಯವಾದ ಪ್ರಶ್ನೆ; ತರ್ಕವೂ, ತತ್ವಶಾಸ್ತ್ರವೂ ಈ ಪ್ರಶ್ನೆಗೆ ಉತ್ತರ ಪಡೆಯಲು ಸಹಾಯಕಾರಿಗಳಾದ ಶಾಸ್ತ್ರಗಳಾಗುವುವು. ಕಡೆಯಲ್ಲಿ ಈಶ್ವರನೆಂಬ ವಸ್ತು ಯಾವುದು; ಈಶ್ವರನಿಗೂ ಮಾನವನಿಗೂ ಇರುವ ಸಂಬಂಧವೇನು, ಎಂಬ ಪಾರಮಾರ್ಥಿಕ ಜ್ಞಾನ ಪ್ರಶ್ನೆ ಪ್ರಾಮುಖ್ಯತೆಯನ್ನು ಪಡೆದು ಗ್ರೀಕರ ತತ್ವಶಾಸ್ತ್ರವು ಮತದಲ್ಲಿ ಜನಿಸಿದಂತೆಯೇ ಮತದಲ್ಲಿಯೇ ಲೀನವಾಗುವುದು.

೧. ಗ್ರೀಕರ ತತ್ವಶಾಸ್ತ್ರವನ್ನು ಅಚ್ಚುಕಟ್ಟಾಗಿ ನಾವು **ನಾಲ್ಕು ಕಾಲ**ಗಳಿಗನುನಯವಾಗಿ ವಿಂಗಡಿಸಬಹುದು. ಸುಮಾರು ಕ್ರಿ. ಪೂ. ೫೮೫ನೆಯ ವರ್ಷದಿಂದ, ಕ್ರಿ. ಪೂ. ಐದನೆಯ ಶತಮಾನದ ಮಧ್ಯಭಾಗದ ವರೆಗೂ ವ್ಯಾಪಿಸಿದ್ದ 'ಪ್ರಿ-ಸೋಫಿಸ್ಟಿಕ್ ಪೀರಿಯಡ್' (Pre-Sophistic period) ಅಂದರೆ "ಸೋಫಿಸ್ಟ್" ಎಂಬವರ ಕಾಲಕ್ಕೆ ಪೂರ್ವವೇ ಮೊದಲನೆಯ ಭಾಗ. ಈ ಪ್ರಾಚೀನ ತತ್ವಶಾಸ್ತ್ರವು ಪ್ರಕೃತಿ ಪ್ರಾಧಾನ್ಯವಾದದ್ದು—ಪ್ರಕೃತಿ ಅಥವಾ ಪ್ರಪಂಚದ ಮೇಲೆಯೇ ಅದರ ದೃಷ್ಟಿ; ಅದು ಬಹುತರ ಸರ್ವಚೇತನವಾದವುಳ್ಳದ್ದು (Hylozoism)—ಪ್ರಕೃತಿಯೆಲ್ಲವೂ ಚೈತನ್ಯಮಯವಾಗಿರುವುದೆಂದು ಅದರ ಭಾವನೆ; ಸತ್ವಸ್ಥಾಪನೆಯೇ ಅದರ ಮುಖ್ಯೋದ್ದೇಶ — ಪ್ರಪಂಚದಲ್ಲಿರುವ ವಸ್ತುಗಳ ಸಾರವಿಚಾರವೇ ಅದರ ಮುಖ್ಯಪ್ರಶ್ನೆ; ಅದ್ವೈತವಾದಪರವಾದದ್ದು — ಪ್ರಪಂಚವ್ಯಾಪಾರಗಳನ್ನೆಲ್ಲಾ ಏಕಮಾತ್ರ ತತ್ವದ ಆಧಾರದಿಂದ ವಿವರಿಸಲು ಯತ್ನಪಡುವುದು; ಪ್ರಮಾಣರಹಿತವಾಗಿ, ಇಷ್ಟಾನುಸಾರವಾಗಿ

ಸಿದ್ಧಾಂತಗಳನ್ನೂ ಸ್ಥಾಪಿಸುವುದು—ಪ್ರಪಂಚವಿಚಾರವನ್ನು ಸಾಧಿಸಲು ಮಾನವನ ಚಿತ್ತಕ್ಕೆ ತಕ್ಕ ಯೋಗ್ಯತೆ ಇರುವುದೆಂದು ನಂಬುವುದು. ಈ ಕಾಲದ ತತ್ವಶಾಸ್ತ್ರವು ಅಯೋನಿಯಾ, ದಕ್ಷಿಣ ಇಟಲಿ ಮತ್ತು ಸಿಸಿಲಿ ಮುಂತಾದ ವಸಾಹತುಪ್ರದೇಶಗಳಲ್ಲಿ ಏಳಿಗೆ ಹೊಂದುವುದು.

೨. ಕ್ರಿ.ಪೂ. ಐದನೆಯ ಶತಮಾನಕ್ಕೆ ಸೇರಿದ 'ಸೋಫಿಸ್ಟ್ಸ್' ಎಂಬವರ ಕಾಲ ಮಧ್ಯಕಾಲವೆಂದು ಹೇಳಬಹುದು. ಪ್ರಪಂಚವಿಚಾರಗಳನ್ನು ಬಗೆಹರಿಸುವುದು ಮಾನವನ ಶಕ್ತಿಗೆ ದುಸ್ಸಾಧ್ಯವೆಂಬ ಸಂಶಯ ಕ್ರಮೇಣ ವೃದ್ಧಿಯಾಗಿ, ಫಲಿತಾಂಶದಲ್ಲಿ ಅನಾದಿಯಿಂದ ಪ್ರಚಾರದಲ್ಲಿ ಬಂದಿರುವ ಕಟ್ಟಳೆ ಕಾಯಿದೆಗಳಲ್ಲಿಯೂ, ಭಾವನೆಗಳಲ್ಲಿಯೂ, ಮತಾಚಾರಗಳಲ್ಲಿಯೂ ಜನರ ನಂಬುಗೆ ಸಡಿಲವಾಗುತ್ತ ಬರುವುದು. ಈ ವಿಧವಾದ ಮನೋವೃತ್ತಿ ಚಾರ್ವಾಕಮತವನ್ನು ವ್ಯಕ್ತಪಡಿಸುವುದು; ಕೂಲಂಕಷವಾಗಿ ಸಮಸ್ತವನ್ನೂ ಚರ್ಚಿಸತಕ್ಕದ್ದು; ವರ್ತಮಾನ ಸ್ಥಿತಿಗಳನ್ನು ಆದ್ಯಂತವಾಗಿ ಪರಿವರ್ತನೆ ಮಾಡತಕ್ಕದ್ದು; ಅಧ್ಯಾತ್ಮ ವಿಚಾರಗಳಲ್ಲಿ ಪೂರ್ಣೌದಾಸೀನ್ಯವನ್ನು ಅಥವಾ ವಿರೋಧವನ್ನು ತೋರಿಸತಕ್ಕದ್ದು. ಆದರೂ ಮಾನವಸಂಬಂಧವಾದ ಪ್ರಶ್ನೆಗಳಿಗೆ ಗಮನ ಕೊಡೋಣದರಿಂದ ಜ್ಞಾನಸಾಧನ ಪ್ರಶ್ನೆಯೂ, ನೈತಿಕವಿಚಾರವೂ ಪ್ರಾಮುಖ್ಯತೆಯನ್ನು ಪಡೆದು 'ಸೊಕ್ರಾಟಿಕ್ ಪೀರಿಯಡ್' ಎಂದರೆ 'ಸಾಕ್ರಟೀಸ್' ಎಂಬವನ ಕಾಲವನ್ನು ಸನ್ನಿಹಿತಮಾಡುವುದು. ಅಥೆನ್ಸ್ ಎಂಬ ಪಟ್ಟಣವೇ ಈ ನವೀನ ಪ್ರಬೋಧದ ಮತ್ತು ಅದರಿಂದ ಜನಿಸಿ ವೃದ್ಧಿಹೊಂದಿದ ತತ್ವದರ್ಶನಗಳ ಆವಾಸಸ್ಥಾನ.

೩. ಕ್ರಿ.ಪೂ.೪೩೦ರಿಂದ ೩೨೦ರ ವರೆಗೆ ಪ್ರಸರಿಸಿದ್ದ 'ಸಾಕ್ರಟೀಸಿನ ಕಾಲ' ಪುನರ್ವ್ಯವಸ್ಥೆಯ ಅಥವ ಸುಧಾರಣೆಯ ಕಾಲವೆಂದು ಹೇಳಬಹುದು. ಸಾಕ್ರಟೀಸನು ಚಾರ್ವಾಕಮತಖಂಡನದಿಂದ ಜ್ಞಾನವನ್ನು ಸಂರಕ್ಷಿಸಿ 'ನ್ಯಾಯ' ಮಾರ್ಗಾನುಸರಣೆಯಿಂದ (Logical Method) ಸತ್ಯಜ್ಞಾನವನ್ನು ಹೇಗೆ ಪಡೆಯಬಹುದೆಂಬುದನ್ನು ತೋರ್ಪಡಿಸಿದನು. ಅಲ್ಲದೆ, ಮಾನವಶ್ರೇಯ (The Good) ಎಂಬುದರ ಅರ್ಥವೇನು, ಅದರ ಗುಣಗಳು ಯಾವುವು ಎಂಬ ವಿಚಾರವನ್ನು ಕೈಗೊಳ್ಳುವುದರ ಮೂಲಕ

ನೀತಿಧರ್ಮಶಾಸ್ತ್ರಕ್ಕೆ ತಳಹದಿಯನ್ನು ಹಾಕಿದನು. ಪ್ಲೇಟೋ (Plato) ಮತ್ತು ಅರಿಸ್ಟಾಟಲ್ (Aristotle) ಎಂಬ ವಿದ್ವಾಂಸರು ಗುರುವಾದ ಸಾಕ್ರಟೀಸನು ಹಾಕಿದ್ದ ತಳಹದಿಯಮೇಲೆ ಸುಂದರತಮವಾದ ಕಟ್ಟಡಗಳನ್ನು ಕಟ್ಟಿ ಬುದ್ಧಿ ಪ್ರಾಮಾಣಿಕವಾದ (Rational) ಜ್ಞಾನಸಿದ್ಧಾಂತವನ್ನೂ (Theory of Knowledge) ಧರ್ಮಸಿದ್ಧಾಂತವನ್ನೂ (Ethics) ರಾಜ್ಯಸಿದ್ಧಾಂತವನ್ನೂ (Theory of State) ಸ್ಥಾಪಿಸುವರು. ತದನುಸಾರವಾಗಿಯೇ ಅವರು ಅಧ್ಯಾತ್ಮವಿಚಾರದಲ್ಲಿಯೂ ಸರ್ವಸಂಗ್ರಹವಾದ ತತ್ವದರ್ಶನಗಳನ್ನೇರ್ಪಡಿಸಿ ಜಗತ್ಸರ್ವವನ್ನೂ ಚಿತ್, ಅಥವಾ ಜ್ಞಾನ, ಅಥವಾ ಚೈತನ್ಯರೂಪವಾಗಿ ಭಾವಿಸಿ ವಿವರಿಸುತ್ತಾರೆ. ಆದುದರಿಂದ ಈ ವಿಧವಾದ ತತ್ವಶಾಸ್ತ್ರವನ್ನು, ಜ್ಞಾನದ ಮೂಲತತ್ವಗಳ ಶೋಧನೆ ಮಾಡುವುದರಿಂದ ವಿಮರ್ಶಪೂರ್ವಕವಾದುದೆಂತಲೂ (Critical) ಸತ್ಯಾನ್ವೇಷಣಮಾಡಲು ಮಾನವನ ಬುದ್ಧಿಶಕ್ತಿಗೆ ತಕ್ಕ ಅರ್ಹತೆ ಇರುವುದೆಂದೆಣಿಸುವುದರಿಂದ ಬುದ್ಧಿ ಪ್ರಾಮಾಣಿಕವಾದುದೆಂತಲೂ(Rationalistic)ಮನುಷ್ಯಸಂಬಂಧವಾದ ವಿಚಾರಗಳನ್ನಭ್ಯಸಿಸುವುದರಿಂದ ಮಾನವ ಪ್ರಯೋಜನಾರ್ಥಕವಾದುದೆಂತಲೂ (Humanistic), ಸತ್ವವ್ಯಾಖ್ಯಾನ ಮಾಡಿ ಚಿತ್ತೇ ಪರಮ ಸತ್ಯವೆಂದು ತೋರಿಕೊಡುವುದರಿಂದ ಆಧ್ಯಾತ್ಮಿಕ ಅಥವಾ ಚಿದಾತ್ಮಕವಾದುದೆಂತಲೂ (Spiritualistic or Idealistic) ನಾವು ಹೇಳಬಹುದು. ಪುರುಷನಂತೆಯೇ ಪಂಚಭೂತಾತ್ಮಕವಾದ ಪ್ರಕೃತಿಯೂ ಸೃಷ್ಟಿಯ ಫಲವೆಂದೆಣಿಸುವುದರಿಂದ ದ್ವೈತವಾದವೆಂತಲೂ ಹೇಳಬಹುದು.

೪. ಕ್ರಿ. ಪೂ. ೩೨೦ರಿಂದ ಜಸ್ಟಿನಿಯನ್ ಎಂಬ ಚಕ್ರವರ್ತಿ ತತ್ವಮತಗಳನ್ನೆಲ್ಲಾ ಅಡಗಿಸಿದ ವರ್ಷವಾದ ಕ್ರಿಸ್ತಶಕ ೫೨೯ರ ವರೆಗೂ ಪ್ರಸರಿಸಿದ್ದ ಕಡೆಯ ಕಾಲವನ್ನು 'ಪೋಸ್ಟ್ ಅರಿಸ್ಟೊಟೇಲಿಯನ್ ಪೀರಿಯಡ್'(Post-Aristotelian period)ಅಂದರೆ ಅರಿಸ್ಟಾಟಲಿನ ಉತ್ತರದ ಕಾಲವೆಂದು ಹೇಳಬಹುದು — ಅಥೆನ್ಸ್ ಅಲೆಕ್ಸಾಂಡ್ರಿಯಾ, ಮತ್ತು ರೋಂ, ಈ ಪ್ರಾಂತಗಳಲ್ಲಿಯೇ ಈ ಕಾಲದ ತತ್ವಶಾಸ್ತ್ರಪ್ರಸಾರಣೆ. ಇದರಲ್ಲಿ ನೈತಿಕ ಮತ್ತು ದೈವಜ್ಞಾನರೂಪವಾದ ಎರಡು ಶಾಖೆಗಳನ್ನು

ಕಾಣಬಹುದು. (ಅ) ಜೀನೋ (Zeno) ಎಂಬ ವಿರಕ್ತನಿಗೂ (Stoic) ಎಪಿಕ್ಯೂರಸ್ ಎಂಬ ಸುಖಾಕಾಂಕ್ಷಿಗೂ (Hedonist) ಶೀಲವಿಚಾರವಾದ ಪ್ರಶ್ನೆಯೇ ಅತಿಪ್ರಧಾನವಾದುದು: ವಿವೇಕಪೂರ್ವಕವಾದ ಮನುಷ್ಯ ಪ್ರಯತ್ನದ ಗುರಿ ಯಾವುದು, ಅಥವಾ ಮಾನವ ಶ್ರೇಯ ಯಾವುದು? ಎಪಿಕ್ಯೂರಿಯನರು (ಎಪಿಕ್ಯೂರಸ್ ಎಂಬ ತತ್ವಜ್ಞಾನಿಯ ಶಿಷ್ಯರು) ಸೌಖ್ಯಜೀವನವೇ ಮನುಷ್ಯಪ್ರಯತ್ನದ ಗುರಿಯೆಂದೂ, ಸ್ಟೋಯಿಕರು (ಜೀನೋ ಎಂಬ ಸಿದ್ಧಾಂತಿಯ ಅನುಯಾಯಿಗಳು) ಸೌಜನ್ಯ–ಸಚ್ಛೀಲ ಭರಿತವಾದ ಧರ್ಮಜೀವನವೇ ಮಾನವಶ್ರೇಯವೆಂದೂ ಹೇಳುತ್ತಾರೆ. ಎರಡು ಮತದವರೂ ನ್ಯಾಯಶಾಸ್ತ್ರಕ್ಕೂ, ತತ್ವಶಾಸ್ತ್ರಕ್ಕೂ ವಿಶೇಷ ಗಮನವನ್ನು ಕೊಡುತ್ತಾರೆ: ಈ ವಿಧವಾದ ಶಾಸ್ತ್ರಜ್ಞಾನ ಅನೇಕತರದ ಮೂಢಭಕ್ತಿಗಳನ್ನೂ ಅಜ್ಞಾನಾಂಧಕಾರಗಳನ್ನೂ ಮೂಲೋತ್ಪಾಟನ ಮಾಡಿ ಮಾನವಸೌಖ್ಯಕ್ಕೆ ದಾರಿಮಾಡುವುದೆಂಬುದೇ ಎಪಿಕ್ಯೂರಿಯನರ ಕಾರಣ; ಕಾರ್ಯಕಾರಣಬದ್ಧವಾದ ಜಗತ್ತೆಂಬ ಬ್ರಹ್ಮಾಂಡದಲ್ಲಿ (Rational Universe) ತಾನೂ ಒಂದು ಗಣ್ಯವಾದ ವಸ್ತುವೆಂದಿರುವ ಮಾನವನಿಗೆ ತನ್ನ ಕರ್ತವ್ಯಕರ್ಮವನ್ನು ವ್ಯಕ್ತಪಡಿಸುವುದೆಂಬುದೇ ಸ್ಟೋಯಿಕರ ಕಾರಣ. ಎಪಿಕ್ಯೂರಿಯನರು ಜಡಪ್ರಪಂಚವಾದಿಗಳು (Mechanists); ಸ್ಟೋಯಿಕರೋ ಜಗತ್ತೆಲ್ಲವೂ ದಿವ್ಯಜ್ಞಾನಸಾಕ್ಷಾತ್ಕಾರವೆಂತಲೂ, (Manifestation of Divine Reason) ಚೈತನ್ಯಮಯವೆಂತಲೂ ನಂಬುವರು. (ಆ) ಅಲೆಕ್ಸಾಂಡ್ರಿಯದಲ್ಲಿ ಹುಟ್ಟಿದ ದೈವಜ್ಞಾನಶಾಖೆ ಗ್ರೀಕರ ತತ್ವಶಾಸ್ತ್ರಕ್ಕೆ ಪೌರ್ವಾತ್ಯರ ಮತಗಳೊಡನೆ ಸಂಘರ್ಷಣೆಯುಂಟಾದುದರಿಂದ ಫಲಿತವಾಯಿತು. ಅದರ ಪೂರ್ಣಾಭ್ಯುದಯರೂಪವಾದ 'ನವೀನ ಪ್ಲೇಟೊ ಸಿದ್ಧಾಂತ'ವೆಂಬ ಮತದ ಪ್ರಕಾರ ಸರ್ವಸತ್ವಮೂಲಕಾರಣನೂ (Source of all being) ಲೋಕಾತೀತಸ್ವರೂಪನೂ (Transcendent) ಆದ ಬ್ರಹ್ಮನಿಂದ ಜಗತ್ತು ಉತ್ಪನ್ನವಾಯಿತೆಂದು ಭಾವನೆ.

**ಅಧ್ಯಾಯ ೨. ಸೋಫಿಸ್ಟರ ಕಾಲಕ್ಕೆ ಪೂರ್ವದ ತತ್ವಶಾಸ್ತ್ರದ ಬೆಳವಣಿಗೆ**

ಈ ಪ್ರಕರಣದಲ್ಲಿ ಅಯೋನಿಯಾದೇಶದ ವೈಜ್ಞಾನಿಕರ (Physicists) ಅಥವಾ ಪ್ರಕೃತಿತಾತ್ವಿಕರ ವಿಷಯವಾಗಿಯೂ, ಪೈಥಾಗೊರಾಸ್ ಮತ್ತು

ಅವನ ಮತದವರು, ಹಿರಾಕ್ಲಿಟಸ್, ಇಲಿಯಾಟಿಕ್ಸ್ ಎಂಬವರು, ಎಂಪಿಡೋಕ್ಲಿಸ್, ಅಟಾಮಿಸ್ಟ್ಸ್ ಅಥವಾ ವೈಶೇಷಿಕರು ಮತ್ತು ಅನಾಗ್ಸಗೊರಾಸ್—ಇವರ ವಿಷಯವಾಗಿಯೂ ಹೇಳುತ್ತೇವೆ. ಪ್ರಥಮದಲ್ಲಿ ಅಯೋನಿಯಾ ವೈಜ್ಞಾನಿಕರಲ್ಲಿ ತತ್ವವಿಚಾರದ ಉತ್ಸಾಹ ಕಂಡುಬರುತ್ತದೆ. ಇವರು ಪ್ರಕೃತಿ ವ್ಯಾಪಾರಗಳನ್ನು ಕಲ್ಪನಾವ್ಯಕ್ತಿಗಳ ಸಹಾಯವಿಲ್ಲದೆ ಸ್ವಾಭಾವಿಕ ಕಾರಣಗಳಿಂದಲೇ ವಿವರಿಸಲು ಪ್ರಯತ್ನಪಡುತ್ತಾರೆ. ಯಾವ ಮೂಲಾಧಾರವಸ್ತುವಿನಿಂದ ಈ ದೃಶ್ಯಪ್ರಪಂಚ ಉತ್ಪನ್ನವಾಗಿದೆ ಎಂಬುದೇ ಅವರ ಪ್ರಶ್ನೆ. ಅದಕ್ಕೆ ಅವರು, ಇಂದ್ರಿಯಗೋಚರವಾದ ನೀರಿನಿಂದ ಇಲ್ಲವೆ ವಾಯುವಿನಿಂದ ಅಥವಾ ಪಕ್ವಾರ್ಥದ ಯಾವುದೋ ಒಂದು ಅಭಿನ್ನ ಅವ್ಯಕ್ತ ವಸ್ತುವಿಶೇಷದಿಂದಲೇ ಈ ಪ್ರಪಂಚ ಹುಟ್ಟಿತೆಂದು ಉತ್ತರ ಹೇಳುವರು. ಏಕಮಾತ್ರಸತ್ವದ ಸಹಾಯದಿಂದ ನಾನಾ ವಿಧ ವಸ್ತುಗಳ ಲಕ್ಷಣಗಳನ್ನೂ ಅವುಗಳಲ್ಲುಂಟಾಗುವ ಪರಿಣಾಮ ವಿಶೇಷಗಳನ್ನೂ ಸಾಧಿಸಿ ತೋರಿಸಲು ಪ್ರಯತ್ನಪಡುವರು: ಇವೆಲ್ಲಾ ಆ ಮೂಲಸತ್ವದ ರೂಪಾಂತರಗಳೆಂದೇ ಅವರ ಭಾವನೆ. ನಾವು ಕಂಡ ಹಾಗೆ ಪ್ರಪಂಚದಲ್ಲಿ ಒಂದು ವಸ್ತು ಬೇರೆ ವಿಧವಾದೊಂದು ವಸ್ತುವಾಗಿ ಪರಿಣಮಿಸುವುದಲ್ಲವೆ (ಉದಾಹರಣೆಗೆ ನೀರು ಆವಿರೂಪವನ್ನು ಹೊಂದುವುದು) ; ಆದುದರಿಂದ ಈ ನಮ್ಮ ಅನುಭವ ಪ್ರಪಂಚದಲ್ಲಿರುವ ವಿವಿಧ ಜಾತಿಯ ವಸ್ತುಗಳೆಲ್ಲಾ ಆಮೂಲವಸ್ತುವಿನ ರೂಪಾಂತರಗಳೇ ಆಗಿರಬೇಕು. ರೂಪಾಂತರವೆಂಬ ವಸ್ತುಸ್ಥಿತಿಯೇ ಹೇಗೆ ಸಾಧ್ಯವೆಂದರೆ–ಸತ್ಯಸತ್ವ (Reality) ಸಚೇತನವಾದುದರಿಂದಲೂ, ಮೂಲವಸ್ತು ಸಮಸ್ತ ವಿಧವಾದ ಚಲನ ಮತ್ತು ಪರಿಣಾಮಶಕ್ತಿಗಳನ್ನು ತನ್ನಲ್ಲಿಯೇ ಒಳಗೊಂಡಿರುವುದರಿಂದಲೂ ಪರಿಣಾಮವೆಂಬುದು ಫಲಿಸುವುದೆಂದು ಅಭಿಪ್ರಾಯಪಡುವರು. ಇದಕ್ಕೆ ಸರ್ವಚೇತನವಾದ (Hylozoism) ವೆನ್ನುತ್ತಾರೆ.

ಪೈಥಗೋರಿಯನರಾದರೋ ಇಂದ್ರಿಯಗೋಚರವಾದ ಪದಾರ್ಥ ವಿಶೇಷವನ್ನುಳಿದು, ವಸ್ತುಗಳಲ್ಲಿರುವ ಪರಸ್ಪರ ಸಂಬಂಧವನ್ನೂ ಪ್ರಪಂಚದಲ್ಲಿ ಕಂಡುಬರುವ ಕ್ರಮ, ಸಮಾನತೆ (Uniformity) ಸಂಯೋಗ

ಸಲ್ಲಕ್ಷಣಗಳನ್ನೂ ಮೂಲಾಧಾರವಾಗೆಣಿಸುತ್ತಾರೆ. ಈ ಕ್ರಮ ಸಮಿಾಕಾರಗಳನ್ನು ಅಂಕಗಳ ಸಹಾಯದಿಂದ ವಿವರಿಸಬಹುದಾದುದರಿಂದ ಅವರು ಅಂಕಗಳನ್ನೇ ಸತ್ವರೂಪವಾಗಿ ಭಾವಿಸಿ, ಈ ಅಂಕಗಳೇ ಸಮಸ್ತ ವಸ್ತುಗಳ ಮೂಲಕಾರಣವೆಂದು ಹೇಳುತ್ತಾರೆ. ಹಿರಾಕ್ಲಿಟಸನು ಅಗ್ನಿ ರೂಪವಾದ ಸಚೇತನವಾದ ವಸ್ತುವೊಂದನ್ನು ಮೂಲಸತ್ವವಾಗೆಣಿಸುವುದರಿಂದ ಆತನನ್ನು ಅಯೋನಿಯನರೊಡನೆ ಹೋಲಿಸಬಹುದು ; ಆದರೆ ಈತನು ಪ್ರಪಂಚದಲ್ಲಿರುವ ಪರಿಣಾಮತ್ವವೆಂಬ ವಸ್ತುಸ್ಥಿತಿಯನ್ನು ಬುದ್ಧಿಪೂರ್ವಕವಾಗಿ ಅರಿಸಿ ಅದರ ಮಹತ್ವವನ್ನು ತೋರಿಸುತ್ತಾನೆ: ಅವನ ಮತದ ಪ್ರಕಾರ, ಪ್ರಪಂಚ ಸದಾ ಪರಿಣಾಮಸ್ಥಿತಿಯಲ್ಲಿರುತ್ತದೆ ; ಸಮಸ್ತವೂ ಪ್ರತಿಕ್ಷಣದಲ್ಲಿಯೂ ಮಾರ್ಪಾಡಾಗುತ್ತಿರುತ್ತದೆ ; ವಸ್ತುಗಳಲ್ಲಿ ವಾಸ್ತವಿಕವಾದ ಸ್ಥಿರತ್ವವಿರುವುದಿಲ್ಲ ; ಅಲ್ಲದೆ, ಪ್ರಪಂಚದಲ್ಲಿ ಸಂಭವಿಸುವ ವ್ಯಾಪಾರಗಳನ್ನೆಲ್ಲಾ ಆಳತಕ್ಕ ಜ್ಞಾನ ಅಥವಾ ಚಿತ್ತೆಂಬ ವಸ್ತುವಿದೆಯೆಂಬುದನ್ನು ಈತನ ಹಿಂದಿನವರು ಹೇಳಿದ್ದುದಕ್ಕಿಂತ ವಿಶದವಾದ ರೀತಿಯಲ್ಲಿ ಈತನು ತೋರಿಸಿಕೊಡುತ್ತಾನೆ. ಇಲಿಯಾಟಿಕರೂ ಪರಿಣಾಮತ್ವವೆಂಬ ವಸ್ತುಸ್ಥಿತಿಯನ್ನು ಪರೀಕ್ಷಿಸಲು ಪ್ರಯತ್ನಿಸಿ ಅದು ಸರ್ವಥಾ ಅಚಿಂತ್ಯವೆಂದು ಸಾಧಿಸುತ್ತಾರೆ ; ಉದಾಹರಣೆಗೆ, ಅಗ್ನಿ ಎಂಬ ಪಂಚಭೂತಗಳಲ್ಲೊಂದಾದ ಮೂಲತತ್ವ ಮತ್ತೆ ಯಾವ ವಸ್ತುವಾಗಿಯಾದರೂ ಪರಿಣಮಿಸುವುದೆಂದು ಆಲೋಚಿಸಲೂ ಸಾಧ್ಯವಿಲ್ಲ ; ಒಂದು ವಸ್ತು ತನ್ನ ಸ್ಥಿತಿಯನ್ನು ಬಿಟ್ಟು ಬೇರೆ ವಸ್ತುವಾಗಲಾರದು ; ಪ್ರಪಂಚದಲ್ಲಿ ಯಾವುದು ಹೇಗಿದ್ದರೂ ಅದು ಹಾಗೆಯೇ ಇರಬೇಕು ; ಸತ್ಯ ಸತ್ವದ (Reality) ನೈಜಲಕ್ಷಣ ಅಥವಾ ವಿಶೇಷಣ ಸ್ಥಿರತ್ವವೇ ಹೊರತು ಪರಿಣಾಮತ್ವವಲ್ಲ. ಹೀಗುಂಟಾದ ಪ್ರಶ್ನೆಗೆ ಎಂಪಿಡೋಕ್ಲಿಸ್ (Empedocles)ಎಂಬ ತಾತ್ವಿಕನು ಉತ್ತರಕೊಡಲು ಪ್ರಯತ್ನಿಸಿ ಹಿರಾಕ್ಲಿಟಸನೂ, ಇಲಿಯಾಟಿಕರೂ, ಎರಡು ಮತದವರೂ ಸರಿಯೆಂದು ಹೇಳುತ್ತಾನೆ. ಇಲಿಯಾಟಿಕರ ಪರವಾಗಿ, ಅವಿಶಿಷ್ಟ ರೂಪಾಂತರ ತತ್ವವೆಂಬುದು (absolute change) ಅಸಿದ್ಧವಾದುದು ; ನಿಜವಾದ ಅರ್ಥವಿವರಣೆಮಾಡಿದರೆ ಒಂದು ವಸ್ತು ಪ್ರತ್ಯೇಕವಾದ ಮತ್ತೊಂದು ವಸ್ತುವಾಗುವುದೆಂಬುದು

ಸರಿಯಲ್ಲ. ಶುದ್ಧ ಶೂನ್ಯವಸ್ತುವಿನಿಂದ (nothing) ಮತ್ತೆ ಯಾವ ವಸ್ತುವೂ ಹೊರಪಡುವುದಿಲ್ಲ; ಯಾವ ವಸ್ತುವೂ ಶುದ್ಧ ಶೂನ್ಯವಾಗಲಾರದು; ಯಾವ ವಸ್ತುವೂ ತನ್ನ ಸ್ಥಿತಿಗೆ ಪೂರ್ಣ ವ್ಯತ್ಯಸ್ತವಾದ ಇನ್ನೊಂದು ವಸ್ತುವಾಗಲಾರದು. ಹೀಗಿದ್ದರೂ, ಹಿರಾಕ್ಲಿಟಸನ ಪರವಾಗಿ, ಪ್ರಪಂಚದಲ್ಲಿ ವಸ್ತು ರೂಪಾಂತರವಾಗುವುದೆಂಬುದೇನೋ ನಿಜ ಎಂದು ಒಪ್ಪುತ್ತಾನೆ. ಆದರೂ ಇಂಥ ರೂಪಾಂತರ ಬರಿಯ ತೋರಿಕೆಯ ಪರಿಣಾಮವೇ ಹೊರತು ವಾಸ್ತವಿಕವಾದ ಪರಿಣಾಮವಲ್ಲವೆಂದು ಅವನ ನಂಬಿಕೆ. ಪ್ರಪಂಚದಲ್ಲಿ ನಿತ್ಯವಾದ ಮಹಾಭೂತಗಳಾದ ಮೂಲತತ್ವಗಳು ಅಥವಾ ಪ್ರಕೃತ್ಯಂಶಗಳುಂಟು; ಇವುಗಳ ಪರಸ್ಪರಸಂಯೋಗದಿಂದ ಪದಾರ್ಥಗಳುತ್ಪತ್ತಿಯಾಗುತ್ತವೆ: ಇದೇ ವಸ್ತುವಿನ ಹುಟ್ಟು ಅಥವಾ ಉತ್ಪತ್ತಿಯೆಂಬುದು; ಹೀಗೆ ಉತ್ಪತ್ತಿಯಾದ ಪದಾರ್ಥಗಳೊಡೆದು ಪ್ರಕೃತ್ಯಂಶಗಳ ವಿಯೋಗವಾಗುವುದುಂಟು: ಇದೇ ವಸ್ತು ಕ್ಷಯ ಅಥವಾ ನಾಶ. ನಿರ್ವಿಶೇಷವಾಗಿ ಯಾವ ವಸ್ತುವೂ ವಾಸ್ತವಿಕವಾಗಿ ಹುಟ್ಟಲಾರದು, ಪಲ್ಲಟವಾಗಲಾರದು, ನಾಶವಾಗದು; ಆದರೆ ಪ್ರಪಂಚದಲ್ಲಿರತಕ್ಕ ನಿತ್ಯವಾದ, ಪಲ್ಲಟಿಸಲ್ಪಡದ ಮೂಲತತ್ವಗಳು ಪರಸ್ಪರ ಸಂಬಂಧಗಳನ್ನು ಬದಲಾಯಿಸುವುದೇನೋ ನಿಜ. ವೈಶೇಷಿಕರು (Atomists) ಈ ನೂತನ ಸಿದ್ಧಾಂತವನ್ನು ಸಿದ್ಧಾಂತರೀತಿಯಾಗಿ ಒಪ್ಪಿಕೊಂಡಾಗ್ಯೂ, ಅನೇಕ ವಿಷಯಗಳಲ್ಲಿ ಇವರಿಗೂ ಎಂಪಿಡೋಕ್ಲಿಸ್ ಎಂಬ ತತ್ವಜ್ಞಾನಿಗೂ ವ್ಯತ್ಯಾಸಗಳು ಕಂಡುಬರುತ್ತವೆ. ವೈಶೇಷಿಕರು ಇವನಂತೆ ಪೃಥ್ವಿ, ಅಪ್, ತೇಜೋವಾಯುವೆಂಬ ಚತುರ್ಭೂತಗಳನ್ನೂ, 'ಪ್ರೇಮ' ಮತ್ತು 'ದ್ವೇಷ'ಎಂಬದಾಗಿ ಪುರುಷಭಾವಾರೋಪಣೆಯನ್ನು ಪಡೆದ (Personified) ಕೆಲವು ಚಾಲನಶಕ್ತಿಗಳನ್ನೂ ಆಧಾರವಾಗಿ ತೆಗೆದುಕೊಳ್ಳದೆ, ಅಸಂಖ್ಯಾತವಾದ, ಅವಿಭಾಜ್ಯವಾದ, ಪೃಥ್ವಿ, ಅಪ್, ತೇಜೋವಾಯುಗಳಿಗಿಂತಲೂ ಸೂಕ್ಷ್ಮತರವಾದ ಅಣುಗಳೆಂದು ಕರೆಯಲ್ಪಡುವ ಪದಾರ್ಥಕಣಗಳನ್ನು ಮೂಲತತ್ವಗಳನ್ನಾಗೆಣಿಸುತ್ತಾರೆ. ಚಲನ ಶಕ್ತಿಯೋ ಅಂದರೆ ಇದು ಅಣುಗಳಲ್ಲಿಯೇ ಇರತಕ್ಕ ಸಹಜವಾದ ಅಥವ ಸ್ವಾಭಾವಿಕ ಶಕ್ತಿಯೆಂದು ಹೇಳುತ್ತಾರೆ. ಅನಾಕ್ಸಗೊರಾಸ್

ಎಂಬ ಜ್ಞಾನಿ ಕೂಡ ಮೇಲೆ ಹೇಳಿದ ಎಂಪಿಡೋಕ್ಲಿಸ್ಸಿನ ಮತ್ತು ವೈಶೇಷಿಕರ ಅಭಿಪ್ರಾಯಗಳನ್ನು ಅನುಮೋದಿಸಿ ಒಂದು ವಿಷಯದಲ್ಲಿ ಮಾತ್ರ ಭಿನ್ನಾಭಿಪ್ರಾಯವನ್ನು ತೋರಿಸುತ್ತಾನೆ: ಲೆಕ್ಕವಿಲ್ಲದ ಮೂಲ ತರವಾದ ಗುಣವಿಶೇಷಗಳನ್ನು ಸಹಾಯಕ್ಕೆ ತೆಗೆದುಕೊಳ್ಳುವುದಲ್ಲದೆ, ಅವುಗಳ ಚಲನಾರಂಭವನ್ನು ಸಿದ್ಧಾಂತ ಮಾಡಿಕೊಡಲು, ಈ ಮೂಲತತ್ವಗಳಿಗೆ ಬೇರೆಯಾದ ಚಿಚ್ಛಕ್ತಿ ಎಂಬ ಮತ್ತೊಂದು ಭಾವನೆಯನ್ನು ತರುತ್ತಾನೆ. ಅಂತ್ಯದಲ್ಲಿ ಸೋಫಿಸ್ಟ್ಸ ಎಂಬ ಚಾರ್ವಾಕಿಗಳು ಈ ಸಿದ್ಧಾಂತಗಳೊಂದಕ್ಕೂ ಗಮನಕೊಡದೆ ಪ್ರಪಂಚ ತತ್ವಶೋಧನೆಯ ವಿಚಾರದಲ್ಲಿ ನಿಶ್ಚಯ ಜ್ಞಾನವೊಂದೂ ದೊರಕುವು ದಿಲ್ಲವಾದುದರಿಂದ ಈ ಪ್ರಯತ್ನಗಳೆಲ್ಲಾ ನಿಷ್ಫಲವೆಂದು ಸಾಧಿಸಿ ಒತ್ತಿಡುತ್ತಾರೆ.

## ಅಧ್ಯಾಯ ೩. ವಸ್ತುಸಮಸ್ಯೆ

### ಥಾಲಿಸ್

ಥಾಲಿಸ್ ಎಂಬವನು ಗ್ರೀಕ್ ವಸಾಹತುಪ್ರಾಂತವಾದ ಮೈಲಿಟಸ್ ಎಂಬ ಊರಿನಲ್ಲಿ ಸುಮಾರು ಕ್ರಿ.ಪೂ.೬೨೪ರಲ್ಲಿ ಹುಟ್ಟಿ, ಕ್ರಿ.ಪೂ.೫೫೪ ಮತ್ತು ೫೪೮ರ ಮಧ್ಯೆ ಸತ್ತನು. ಈತನು ರಾಜನೀತಿಕುಶಲನಾಗಿಯೂ ಗಣಿತಶಾಸ್ತ್ರಜ್ಞನಾಗಿಯೂ, ಖಗೋಳಸಿದ್ಧಾಂತಿಯಾಗಿಯೂ ಮತ್ತು ಗ್ರೀಸ್ ದೇಶದ ಪ್ರಥಮ ತತ್ವಜ್ಞಾನಿಯಾಗಿಯೂ ಪ್ರಸಿದ್ಧಿಯನ್ನು ಪಡೆದಿದ್ದನು. ಕ್ರಿ.ಪೂ. ೫೮೫ನೆಯ ವರುಷದ ಮೇ ತಿಂಗಳು ೨೮ನೆಯ ದಿನದಲ್ಲಿ ಸಂಭವವಾದ ಗ್ರಹಣವನ್ನು ಈತನು ಮೊದಲೇ ಗುಣಿಸಿ ಹೇಳಿದ್ದನೆಂದು ವದಂತಿ ಇದೆ. ಗ್ರೀಸ್ ದೇಶದ ಸಪ್ತಜ್ಞಾನಿಗಳ ಪಟ್ಟಿ ಕೊಟ್ಟಿರುವ ಗ್ರಂಥಕಾರರೆಲ್ಲಾ ಈತನ ಹೆಸರನ್ನು ಮೊದಲು ಹೇಳು ತ್ತಾರೆ. ಬಹುತರ ಥಾಲಿಸನು ಯಾವ ಗ್ರಂಥವನ್ನೂ ಬರೆದಹಾಗೆ ಕಾಣುವುದಿಲ್ಲ: ಆತನ ಯಾವ ಗ್ರಂಥವೂ ಇದುವರೆಗೂ ನಮಗೆ ದೊರೆತಿಲ್ಲ. ಈ ಕಾರಣದಿಂದ ಆತನ ಬೋಧನೆಯ ವಿಷಯವಾಗಿ ನಮಗೆ ತಿಳಿದಿರುವುದೆಲ್ಲಾ ಇತರರು ಆತನ ವಿಚಾರವಾಗಿ ಬರೆದಿರುವ ಗ್ರಂಥ ಗಳಿಂದ ಆರಿಸಲ್ಪಟ್ಟುದಾಗಿದೆ.

ಪ್ರಪಂಚ ವಿಚಾರದಲ್ಲಿ ನಿಜವಾದ ತತ್ವಶೋಧಕ ಪ್ರಶ್ನೆಯನ್ನು ಹಾಕಿ, ಕಲ್ಪಿತ ಅರ್ಥಾತ್ ಪೌರಾಣಿಕ ವ್ಯಕ್ತಿಗಳ ಸಹಾಯವಿಲ್ಲದೆ ಸ್ವಾಭಾವಿಕ ಕಾರಣಗಳಿಂದ ಆ ಪ್ರಶ್ನೆಗುತ್ತರವೀಯಲು ಪ್ರಯತ್ನ ಪಟ್ಟಿದ್ದೇ ಥಾಲಿಸನಲ್ಲಿ ವಿಶೇಷ. ಪಂಚಭೂತಗಳಲ್ಲೊಂದಾದ ಅಪ್ ಅಥವಾ ನೀರೆಂಬುದೇ ಮೂಲದ್ರವ್ಯವೆಂದು ಅವನು ಸಾರಿಹೇಳಿದನು. ಪ್ರಾಯಶಃ ಪ್ರಾಣರಕ್ಷಣೆಗೆ ಆವಶ್ಯಕವಾದ ಆಹಾರ, ಶಾಖ, ಬೀಜ ಮುಂತಾದ ವಸ್ತುಗಳಲ್ಲೆಲ್ಲಾ ತೇವವಿರುವುದೆಂಬ ಆಧಾರದಮೇಲೆ ಹೀಗೆ ಹೇಳಿರಬಹುದು. ನೀರಿನಿಂದ ಸಮಸ್ತವೂ ಉತ್ಪನ್ನವಾಗುವುದು ಹೇಗೆ ಎಂಬುದನ್ನು ವಿವರಿಸಲಿಲ್ಲ: ಬಹುತರವಾಗಿ ಒಂದು ವಸ್ತು ಮತ್ತೊಂದು ವಸ್ತುವಾಗಿ ರೂಪಾಂತರ ಹೊಂದುವುದು ಅನುಭವಪ್ರಸಿದ್ಧವಾದ ವಿಷಯ ವಾದುದರಿಂದ ಅದಕ್ಕೆ ಕಾರಣವನ್ನಾಗಲಿ ವಿವರಣೆಯನ್ನಾಗಲಿ ಕೊಡುವ ಆವಶ್ಯಕತೆ ಇಲ್ಲವೆಂದು ಆತನು ತಿಳಿದಿರಬಹುದು. ಗ್ರೀಕ್‌ದೇಶದ ಪ್ರಾಚೀನತತ್ವಜ್ಞಾನಿಗಳೆಲ್ಲಾ ನಂಬಿದ ಪ್ರಕಾರ ಇವನೂ ಪ್ರಕೃತಿ ಪ್ರಪಂಚವೆಲ್ಲಾ ಚೇತನಮಯವಾಗಿರುವುದೆಂದೂ, ಸದಾ ಚಲಿಸುತ್ತಲೂ, ರೂಪಾಂತರಹೊಂದುತ್ತಲೂ ಇರುವುದೆಂದೂ ನಂಬಿದ್ದನು: ಪರಂತು ಹೀಗೆಂದು ಅರಿಸ್ಟಾಟಲನು ನಮಗೆ ತಿಳಿಸುತ್ತಾನೆ. ಹಿಪ್ಪಾಲಿಟಸ್ ಹೇಳುವುದನ್ನು ನಂಬುವ ಪಕ್ಷದಲ್ಲಿ, ಥಾಲಿಸನ ಮತದಂತೆ ಸಮಸ್ತ ವಸ್ತು ಗಳೂ ನೀರಿನಿಂದ ಉತ್ಪನ್ನವಾಗುವುವಲ್ಲದೆ ಕಡೆಯಲ್ಲಿ ನೀರಿನಲ್ಲಿಯೇ ಹೋಗಿ ಲಯವಾಗುವುವು.

ಈ ಪ್ರಾಚೀನತತ್ವಜ್ಞಾನಿಗಳ ಅಭಿಪ್ರಾಯವನ್ನು ಹೀಗೆಯೇ ಸರಿ ಎಂದು ನಾವು ನಿರ್ಣಯಿಸಿ ಹೇಳುವುದಕ್ಕಾಗುವುದಿಲ್ಲ. ಇದು ವರೆಗೂ ಅವರ ತತ್ವಶಾಸ್ತ್ರದ ಹುಟ್ಟು, ಬೆಳವಣಿಗೆಯ ವಿಷಯವಾಗಿ ನಾವು ಹೇಳಿರುವುದೆಲ್ಲಾ ಆಧುನಿಕಕಾಲದ ಪಾಶ್ಚಾತ್ಯಪಂಡಿತರು ಊಹೆ ಮಾಡಿರುವ ಪ್ರಕಾರವಷ್ಟೇ ಅಲ್ಲದೆ ವಾಸ್ತವಿಕವಾಗಿಯೂ ಅದರ ಮೂಲ ತತ್ವವನ್ನಾಗಲಿ, ನಿಜಾಂಶವನ್ನಾಗಲಿ ಈ ಪಾಶ್ಚಾತ್ಯಪಂಡಿತರು ಕಂಡು ಹಿಡಿದಾರೆಂದು ನಾವು ಎಂದೆಂದಿಗೂ ಹೇಳಲಾರೆವು. ಅನೇಕ ಕಾರಣ ಗಳಿಂದ ಪ್ರಾಚೀನ ಗ್ರೀಕ್ ತತ್ವಜ್ಞಾನಿಗಳ ನಿಜಾಭಿಪ್ರಾಯವನ್ನು

ತಿಳಿಯುವುದು ಕಷ್ಟವಾಗಿದೆ: ಸಾಮಾನ್ಯವಾಗಿ ಅವರು ತಮ್ಮ ಬೋಧನೆಯ ವಿಷಯವಾಗಿ ತಾವೇ ಯಾವ ಗ್ರಂಥವನ್ನೂ ಬರೆದಿಡಲಿಲ್ಲ. ಕೆಲವರು ಬರೆದಿದ್ದ ಗ್ರಂಥಗಳೂ ನಾಶವಾಗಿ ಈಗ ನಮಗೆ ಮೂಲಪ್ರತಿಗಳು ದೊರಕದಂತಿವೆ. ಇದೂ ಅಲ್ಲದೆ ಈ ಪ್ರಾಚೀನ ತಾತ್ವಿಕರು ತಮ್ಮ ಜ್ಞಾನವನ್ನು ಸಾಮಾನ್ಯಜನರು ತಿಳಿಯುವಂತೆ, ಸುಲಭ ರೀತಿಯಲ್ಲಿ ಹೇಳಿಲ್ಲ: ಸಾಮ್ಯರೂಪವಾಗಿಯೋ, ಅಲಂಕಾರಯುಕ್ತವಾಗಿಯೋ ಹೇಳಿದ್ದಾರೆ. ಆದಕಾರಣ ಅನೇಕ ಕಡೆಗಳಲ್ಲಿ ಅತಿಸಾಧಾರಣವಾದುದೆಂದು ನಮಗೆ ತೋರಬಹುದಾದ ಭಾವಗಳೆಲ್ಲಾ ಗೂಡಾರ್ಥ ಅಥವಾ ವಿಶೇಷಾರ್ಥವುಳ್ಳದ್ದಾಗಿರಬಹುದು. ಹಾಗೆಯೇ ಪರ್ಯಾಲೋಚಿಸುತ್ತ ಬಂದರೆ, ಅನೇಕ ವಿಷಯಗಳಲ್ಲಿ ಈ ಪ್ರಾಚೀನ ಗ್ರೀಕರ ಅಭಿಪ್ರಾಯಗಳಿಗೂ, ನಮ್ಮ ಹಿಂದೂಗಳ ವೇದ ಪುರಾಣೋಕ್ತವಾದ ಸಿದ್ಧಾಂತಗಳಿಗೂ ಅನೇಕ ವಿಷಯಗಳಲ್ಲಿ ಹೋಲಿಕೆ ಕಂಡುಬರುವುದು. ಆದುದರಿಂದ ನಮ್ಮ ವೇದಪುರಾಣಗಳಲ್ಲಿರುವ ದ್ವಂದ್ವಾರ್ಥದ ಪ್ರಕಾರವೇ ಇವರ ಬೋಧನೆಗಳಿಗೂ ವಿಶೇಷಾರ್ಥವಿದ್ದಿರಬೇಕು. ಉದಾಹರಣೆಯ ಸಲುವಾಗಿ, ಹಿಂದೂದರ್ಶನಗಳಲ್ಲಿ ಪ್ರಸಿದ್ಧವಾಗಿರುವ ಪೃಥ್ವಿ, ಅಪ್, ತೇಜೋವಾಯುರಾಕಾಶಗಳೆಂಬ ಪಂಚಭೂತಗಳು ಪ್ರಕೃತಿಯ ಮೂಲತತ್ವಗಳೆಂದು ಹೇಳಿದಾಗ ಇವು ಪಾಶ್ಚಾತ್ಯರ ಭೌತಶಾಸ್ತ್ರದ ಪ್ರಕಾರವಾಗಿ (Physical Science) ಪ್ರಸಿದ್ಧವಾಗಿರುವ 'ಎಲಿಮೆಂಟ್ಸ್' ಎಂಬ ಮೂಲತತ್ವಗಳೆಂದು ಯಾರೂ ಅರ್ಥಮಾಡಕೂಡದಲ್ಲವೇ? ಅದೇ ರೀತಿಯಾಗಿ ಥಾಲಿಸನು ಅಪ್ ಎಂಬುದು ಪ್ರಪಂಚದ ಮೂಲವಸ್ತುವೆಂತಲೂ,ಅದರಿಂದ ಸಮಸ್ತ ವಸ್ತುಗಳೂ ಉತ್ಪನ್ನವಾಗಿ ಕಡೆಯಲ್ಲಿ ಅದಕ್ಕೇ ಹೋಗಿ ಸೇರುವುವೆಂದು ಹೇಳಿದಾಗ, ಅಪ್ ಎಂಬುದು ನಾವು ಕಾಣುವ ಜಲವೆಂದು ಪಾಶ್ಚಾತ್ಯರು ಅರ್ಥಮಾಡಿದ್ದರೂ ಈ ಅರ್ಥ ಬಹುತರವಾಗಿ ಸಮಂಜಸವಾಗಿಲ್ಲವೆಂದು ನಾವು ತಿಳಿಯಬೇಕು. ಇದರಂತೆಯೇ ಮುಂದೆ ನಾವು ಹೇಳುವ ಪ್ರಾಚೀನ ಗ್ರೀಕ್ ತತ್ವಜ್ಞಾನಿಗಳ ಅಭಿಪ್ರಾಯಗಳೆಲ್ಲವನ್ನೂ ಪಾಶ್ಚಾತ್ಯ ಪಂಡಿತರು ಗ್ರೀಕರ ನಿಜಾಭಿಪ್ರಾಯಗಳೆಂದು ಅನುಮೋದಿಸಿದ್ದರೂ ಅವು ವಿಶೇಷಾರ್ಥವುಳ್ಳವುಗಳೆಂಬುದನ್ನು ನಾವು ಸೆನಪಿನಲ್ಲಿಡಬೇಕು.

## (೨) ಅನಾಕ್ಸಿಮಾಂಡರ್

ಅನಾಕ್ಸಿಮಾಂಡರನು ಮೈಲಿಟಸ್‌ನಲ್ಲಿ ಕ್ರಿ. ಪೂ. ೬೧೧ ರಲ್ಲಿ ಹುಟ್ಟಿ, ಕ್ರಿ. ಪೂ. ೫೪೭ ಅಥವಾ ೫೪೬ ರಲ್ಲಿ ಸತ್ತನು. ಈತನು ಥಾಲಿಸನ ಶಿಷ್ಯರಲ್ಲೊಬ್ಬನಾಗಿದ್ದನೆಂದು ಪ್ರತೀತಿ ಇರುವುದರಿಂದಲೂ, ಇವರಿಬ್ಬರೂ ಏಕಗ್ರಾಮವಾಸಿಗಳಾಗಿದ್ದುದರಿಂದಲೂ ಥಾಲಿಸನ ಉಪದೇಶಗಳನ್ನು ಅನಾಕ್ಸಿಮಾಂಡರನು ಅರಿತವನಾಗಿದ್ದಿರಬೇಕೆಂದು ಊಹೆಮಾಡಲು ಕಾರಣವಿದೆ. ಈತನು ಖಗೋಳ, ಭೂಗೋಳ, ವಿಶ್ವಶಾಸ್ತ್ರ(Cosmology), ಇವುಗಳಲ್ಲಿ ಬಹು ಅಭಿರುಚಿಯುಳ್ಳವನಾಗಿದ್ದನೆಂತಲೂ, ಭೂಮಿಯ ಮತ್ತು ಆಕಾಶದ ನಕ್ಷೆಗಳನ್ನು ತಯಾರುಮಾಡಿದ್ದನೆಂತಲೂ, ಛಾಯಾಯಂತ್ರವನ್ನು ಗ್ರೀಸಿಗೆ ತಂದವನು ಇವನೇ ಎಂತಲೂ ಹೇಳುತ್ತಾರೆ. ‘ ಪ್ರಕೃತಿವಿಮರ್ಶೆ ’ ಎಂಬ ಈತನ ಗ್ರಂಥ ಗ್ರೀಸ್ ದೇಶದಲ್ಲಿ ರಚಿತವಾದ ಪ್ರಥಮ ತತ್ವಶಾಸ್ತ್ರ ಪುಸ್ತಕ, ಮತ್ತು ಗ್ರೀಕ್ ಭಾಷೆಯಲ್ಲಿ ಬರೆದ ಮೊದಲನೆಯ ಗದ್ಯಗ್ರಂಥ. ಇದರಲ್ಲಿ ಎಲ್ಲಿಯೋ ಕೆಲವು ಭಾಗಗಳು ಮಾತ್ರ ನಮಗೆ ದೊರೆತಿವೆ.

ಅನಾಕ್ಸಿಮಾಂಡರನು ಹೇಳಿದುದೇನಂದರೆ, ಪ್ರಪಂಚದ ಮೂಲತತ್ವ ಅಥವಾ ವಸ್ತುಸತ್ವ ಥಾಲಿಸನು ಊಹಿಸಿದಂತೆ ನೀರು ಇರಲಾರದು—ಏಕೆಂದರೆ ನೀರೇ ಹೇಗೆ ಉತ್ಪತ್ತಿಯಾಯಿತೆಂಬ ಪ್ರಶ್ನೆ ಬರುವುದು—ಆದುದರಿಂದ ಅನಂತವಾದ, ನಿತ್ಯವಾದ, ಅವಿನಶ್ವರವಾದ, ಯಾವುದರಿಂದ ಸಮಸ್ತವೂ ಉತ್ಪನ್ನವಾಗಿವೆಯೋ ಮತ್ತು ಯಾವುದಕ್ಕೆ ಸಮಸ್ತವೂ ಕಡೆಯಲ್ಲಿ ಹಿಂತಿರುಗುವುದೋ, ಅಂಥ ವಸ್ತುವಿಶೇಷ ಒಂದಿರಬೇಕು. ಬಹುಶಃ ಯಾವುದರಿಂದ ಸಮಸ್ತ ಗುಣವಿಶೇಷಗಳು ಉತ್ಪನ್ನವಾಗಿವೆಯೋ, ಅಂಥ ಅಪಾರವಾದ, ಆಕಾಶವ್ಯಾಪಕವಾದ ( Space-filling ), ಅಖಂಡವಾದ, ಸಚೇತನ ವಸ್ತುರಾಶಿಯೆಂದು ಅನಾಕ್ಸಿಮಾಂಡರನು ಅರ್ಥಮಾಡಿರಬೇಕು. ಪಾರವುಳ್ಳದ್ದಾಗಿದ್ದರೆ ಪದಾರ್ಥಗಳ ಸೃಷ್ಟಿಯಿಂದ ಕ್ರಮೇಣ ನಾಶವಾಗಿ ಹೋಗುವುದರಿಂದ ಈ ಸಚೇತನ ವಸ್ತುರಾಶಿ ಅಪಾರವಾದುದೆಂದು ಹೇಳಿದನು.

ಈ ಅದ್ಭುತವಾದ, ಅಪ್ರಮೇಯುವಾದ, ಅವ್ಯಕ್ತವಾದ, ಮೂಲ ವಸ್ತುರಾಶಿಯಿಂದ, ಅದರಲ್ಲಿ ಸ್ವಾಭಾವಿಕವಾಗಿ ಅಡಗಿರುವ ಶಾಶ್ವತವಾದ ಚಲನಶಕ್ತಿಯ ಮೂಲಕ ವಿಧವಿಧವಾದ ಪದಾರ್ಥಗಳು ಹೊರಪಡುತ್ತವೆ. ಪ್ರಥಮದಲ್ಲಿ ಶಾಖವುಳ್ಳ, ತದನಂತರ ಶೀತವುಳ್ಳ ಪದಾರ್ಥಗಳು—ಶೀತವನ್ನು ಶಾಖ ಮಂಡಲಾಕಾರದ ಜ್ವಾಲೆಯಂತೆ ಆವರಿಸಿಕೊಂಡು—ಹೊರಪಡುತ್ತವೆ. ಜ್ವಾಲೆಯ ಶಾಖ ಶೀತವನ್ನು ಜಲಾಣುವಾಗಿ ರೂಪಾಂತರಿಸಿ ಅನಂತರ ಅದಕ್ಕೆ ವಾಯುರೂಪವನ್ನು ಕೊಡುತ್ತದೆ. ಈ ವಾತಾವರಣ ವಿಕಸಿತವಾಗಿ ಆವರಿಸಿಕೊಂಡಿದ್ದ ಜ್ವಾಲಾಮಂಡಲವನ್ನು ಚಕ್ರಾಕಾರವಾದ ವರ್ತುಲಗಳನ್ನಾಗಿ ಪರಿಣಾಮಗೊಳಿಸುತ್ತದೆ. ಈ ವರ್ತುಲಗಳಿಗೆ ಕೊಳಲಿಗಿರುವ ರಂಧ್ರಗಳಂತೆ ದೊಡ್ಡದೊಡ್ಡ ಸಂದುಗಳಿರುವುದರಿಂದ ಇವುಗಳ ಮುಖಾಂತರ ಅಗ್ನಿ ಹೊರಪಟ್ಟು, ನಮಗೆ ಕಾಣಿಸುವ ಗಗನಮಂಡಲದ ಗೋಳಗಳಾಗುತ್ತವೆ. ಸುತ್ತಲೂ ಆವರಿಸಿಕೊಂಡಿರುವ ವಾತ ಈ ಗೋಳಗಳನ್ನು ಭೂಮಿಯ ಸುತ್ತಲೂ ತಿರುಗುವಂತೆ ಮಾಡುತ್ತದೆ. ಗಗನಮಂಡಲದಲ್ಲಿ ಸೂರ್ಯಗ್ರಹವೇ ಅತ್ಯಂತ ದೂರದಲ್ಲಿರುವುದು, ಅದಕ್ಕೆ ಎರಡನೆಯದು ಚಂದ್ರ, ಅನಂತರ ನಕ್ಷತ್ರಗಳೂ, ಇತರ ಗ್ರಹಗಳೂ ಬರುತ್ತವೆ. ಇವುಗಳ ಮಧ್ಯೆ ಭೂಮಿ ತನ್ನಲ್ಲಿದ್ದ ತೇವವೆಲ್ಲಾ ಒಣಗಲು, ವೃತ್ತಸ್ತಂಭಾಕಾರವಾದ ಗೋಳದಂತೆ ನಿಂತಿದೆ. ಆ ಮೊದಲಿದ್ದ ನೀರು ಕಳೆದುಳಿದ ಭಾಗವೇ ಈಗಿರುವ ಸಮುದ್ರಗಳು.

ಈ ಜಲಭಾಗ ಸೂರ್ಯಕಿರಣಗಳಿಂದ ಆವಿರೂಪ ಹೊಂದುತ್ತ ಜೀವಜಂತುಗಳು ಉದ್ಭವಿಸುವುದಕ್ಕೆ ಅವಕಾಶವುಂಟುಮಾಡುತ್ತದೆ. (ಆಧುನಿಕ ಭೌತಶಾಸ್ತ್ರದ ಪ್ರಕಾರವಾಗಿಯೂ ಹಿಂದೂ ಗುಪ್ತ ವಿದ್ಯೆಗನುಸಾರವಾಗಿಯೂ, ನೀರಿನಲ್ಲಿಯೇ ಮೊದಲು ಜೀವರಾಶಿಗಳು ಹುಟ್ಟಿದುವೆಂದು ನಂಬಿಕೆ). ಕಾಲಕ್ರಮೇಣ ಈ ಪ್ರಾಣಿಗಳಲ್ಲಿ ಕೆಲವು ನೀರುಬಿಟ್ಟು ಭೂಭಾಗದ ಮೇಲೆ ಬಂದು ತಮ್ಮ ನವೀನ ಪ್ರದೇಶದಲ್ಲಿ ವಾಸವಾಗಿರಲು ತಕ್ಕಂತೆ ತಮ್ಮ ಜೀವನವನ್ನು ಮಾರ್ಪಾಡು ಮಾಡಿ ಹೊಂದಿಕೊಂಡುವು. ಮನುಷ್ಯನೂ ಇತರ ಪ್ರಾಣಿಗಳಂತೆ ಪ್ರಥಮ

ದಲ್ಲಿ ಜಲಾಶಯವಾಸವಾಗಿರುವ ಮತ್ಸ್ಯವಾಗಿದ್ದನು. ಸೃಷ್ಟಿಸಮಸ್ತವೂ ಮೂಲಪ್ರಕೃತಿಯಿಂದ ಉತ್ಪನ್ನವಾದಂತೆಯೇ ಕಡೆಯಲ್ಲಿ ಮೂಲ ಪ್ರಕೃತಿಗೆ ಹಿಂದಿರುಗಬೇಕು. ಮರಳಿ ಈ ವಸ್ತುರಾಶಿಯಿಂದ ಹೊಸ ಪ್ರಪಂಚ ಉದ್ಭವಿಸಿ ಮರಳಿ ಅದರಲ್ಲಿಯೇ ಲಯವಾಗಬೇಕು. ಇದೇ ಪ್ರಾಚೀನ ತಾತ್ವಿಕರೆಲ್ಲಾ ಹೇಳಿರುವ ವ್ಯುತ್ಕ್ರಮ ಸೃಷ್ಟಿ ಲಯ ಸಿದ್ಧಾಂತ (Theory of the cyclic alternation of worlds). ಅನಾಕ್ಸಿಮಾಂಡರನ ಮತಪ್ರಕಾರ, ವಸ್ತುಸೃಷ್ಟಿಯೆಂಬುದು ಅಧರ್ಮ ಕಾರ್ಯ: ಹೇಗೆಂದರೆ ವಸ್ತು ಸೃಷ್ಟಿಯಾದಷ್ಟೂ ಮೂಲಪ್ರಕೃತಿ ಕ್ಷಯಹೊಂದುವುದು.

ಅನೇಕ ವಿಚಾರಗಳಲ್ಲಿ ಅನಾಕ್ಸಿಮಾಂಡರನ ಬೋಧನೆ ಥಾಲಿಸನ ಮತಕ್ಕಿಂತಲೂ ಉತ್ಕೃಷ್ಟವಾದುದೆಂದು ಪಾಶ್ಚಾತ್ಯ ಪಂಡಿತರ ಅಭಿಪ್ರಾಯ. ಯಾವ ವಸ್ತುವನ್ನು ಥಾಲಿಸನು ಮೂಲತತ್ವವೆಂದು ನಂಬಿದ್ದನೋ, ಅದನ್ನು ಅನಾಕ್ಸಿಮಾಂಡರನು ಉತ್ಪನ್ನವಾದುದೆಂದೆಣಿಸುತ್ತಾನೆ. ಮತ್ತು ಅನಾಕ್ಸಿಮಾಂಡರನು ಮೂಲಪ್ರಕೃತಿ ಪರಿಣಾಮ ಹೊಂದುವ ಮೆಟ್ಟಲುಗಳನ್ನೆಲ್ಲಾ ಒಂದೊಂದಾಗಿ ವಿವರಿಸಲು ಪ್ರಯತ್ನ ಪಡುತ್ತಾನೆ. ಇದರಂತೆಯೇ ಅವನು ದ್ರವ್ಯನಾಶರಹಿತವೆಂಬ ಸಿದ್ಧಾಂತ ವನ್ನೂ (Indestructibility of matter) ಅರಿತಿದ್ದನೆಂದು ಕಾಣುತ್ತದೆ. ತನ್ನ ಸಿದ್ಧಾಂತದ ಅನಂತವೆಂಬ ತತ್ವವನ್ನು ವಿಶೇಷಿಸಲು ಅವನಿಗಿರುವ ಅಸಮಾಧಾನವನ್ನು ನೋಡಿದರೆ ಇಂದ್ರಿಯಗೋಚರವಾದ ಭೌತ ವಸ್ತುವನ್ನು ಮೂಲಾಧಾರಮಾಡಿದ(?)ಥಾಲಿಸನಿಗಿಂತಲೂ ಈತನು ಶ್ರೇಷ್ಠತರನಾದ ತತ್ವವಿಮರ್ಶಕನೆಂದು ಹೇಳಬಹುದು. ಈತನ ನೂತನ ಪ್ರಾಣಿಶಾಸ್ತ್ರ ಸಿದ್ಧಾಂತಗಳನ್ನುನೋಡಿದರೆ ಪ್ರಾಚೀನಕಾಲದವರಿಗೂ'ಜಗತ್ಪರಿಣಾಮ' ಅಥವಾ 'ಲೋಕವಿಕಸನ'ವೆಂಬ ಸಿದ್ಧಾಂತದ (Theory of Evolution) ಪರಿಚಯವಿತ್ತೆಂದು ಹೇಳಲು ಕಾರಣವಿದೆ. ಈತನ ಗೋಳಸಿದ್ಧಾಂತ ವಾದರೋ ಈಗಲೂ ಖಗೋಳಶಾಸ್ತ್ರ ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ.

## (೩) ಅನಾಕ್ಸಿಮಿನೀಸ್

ಕ್ರಿ.ಪೂ. ೫೮೮ ರಲ್ಲಿ ಹುಟ್ಟಿ ಕ್ರಿ.ಪೂ. ೫೨೪ ರಲ್ಲಿ ಮರಣವನ್ನೈದಿದ ಅನಾಕ್ಸಿಮಿನೀಸ್ ಎಂಬ ತತ್ವವೇತ್ತನೂ ಮೈಲಿಟಸ್ ಪಟ್ಟಣದ ನಿವಾಸಿ ಮತ್ತು ಅನಾಕ್ಸಿಮಾಂಡರನ ಶಿಷ್ಯನಾಗಿದ್ದನು. ಈತನು ಅಯೋನಿಕ್ ಎಂಬ ದೇಶಭಾಷೆಯಲ್ಲಿ ಒಂದು ಗದ್ಯಕಾವ್ಯವನ್ನು ರಚಿಸಿದನು. ಈತನ ಸಿದ್ಧಾಂತಪ್ರಕಾರ ಪ್ರಪಂಚದ ಮೂಲತತ್ವ ಅಥವಾ ವಸ್ತುವಿಶೇಷ ಏಕ ಮತ್ತು ಅನಂತವಾದುದೇ ಸರಿ, ಆದರೆ ಅನಾಕ್ಸಿಮಾಂಡರನು ಹೇಳಿದಂತೆ ಅದು ಅನಿರ್ಣೀತವಾದುದಲ್ಲ (Indeterminate). ಅದು ವಾಯು ಅಥವಾ ಹಬೆಯಾಗಿರಬೇಕು. ವಾಯು ಪ್ರಾಣಿಸಾಮಾನ್ಯಕ್ಕೆಲ್ಲಾ ಹೇಗೆ ಪ್ರಾಣೋತ್ಪತ್ತಿಸಾಧಕವೋ ಅದೇ ರೀತಿಯಲ್ಲಿಯೇ ಅದು ಜಗತ್ಸರ್ವಕ್ಕೂ ಮೂಲತತ್ವವಾಗಿರಬೇಕು. ವಾಯುರೂಪವಾಗಿರುವ ನಮ್ಮ ಪ್ರಾಣ ನಮ್ಮ ಶರೀರಗಳನ್ನು ಆಚ್ಛಾದನಮಾಡಿಕೊಂಡಿರುವಂತೆಯೇ ಪ್ರಾಣವಾಯು ಸಮಸ್ತ ಪ್ರಪಂಚವನ್ನೂ ಆವರಿಸಿಕೊಂಡಿದೆ. ಮೂಲತತ್ವವಾದ ಈ ವಾಯು ಸಚೇತನವಾದುದಲ್ಲದೆ ಅಂತರಾಳದಲ್ಲೆಲ್ಲಾ ಅಪಾರವಾಗಿ ವ್ಯಾಪಿಸಿಕೊಂಡಿದೆ.

ವಾಯುವಿನಿಂದ ಸಮಸ್ತ ಪದಾರ್ಥಗಳೂ ವಿರಳನ ಮತ್ತು ಘನೀಭವನ (rarefaction and condensation) ಎಂಬ ರೂಪಾಂತರಗಳಿಂದ ಉತ್ಪತ್ತಿಯಾಗುತ್ತವೆ. ವಾಯು ಸೂಕ್ಷ್ಮವಾದರೆ ಅಗ್ನಿಯಾಗುತ್ತದೆ; ಘನೀಭೂತವಾದರೆ ಕ್ರಮಪ್ರಕಾರ ಗಾಳಿ, ಮೋಡ, ನೀರು, ಮಣ್ಣು ಮತ್ತು ಕಲ್ಲು ಈ ರೂಪಾಂತರಗಳನ್ನು ಹೊಂದುತ್ತದೆ. ಉಳಿದ ಸಮಸ್ತ ಪದಾರ್ಥಗಳೆಲ್ಲವೂ ಇವುಗಳಿಂದ ಉತ್ಪನ್ನವಾಗಿವೆ. ನಿತ್ಯವಾಗಿರುವ ಚಲನಶಕ್ತಿಯಿಂದ ವಸ್ತುಗಳು ರೂಪಾಂತರ ಹೊಂದುತ್ತವೆ.

(ಈ ಸಿದ್ಧಾಂತದಲ್ಲಿ ಕಂಡುಬರುವ ಅನೇಕ ವಿಷಯಗಳು ಗಹನವಾಗಿವೆಯೆಂದು ಭೇದಿಸಿ ಪರಿಶೀಲಿಸಿದಲ್ಲಿ ನಮ್ಮ ಆರ್ಯರ ಗುಪ್ತವಿದ್ಯೆಗನುಸಾರವಾಗಿವೆ ಎಂಬ ವಿಷಯವನ್ನು ನಾವು ಹೊಸದಾಗಿ ಹೇಳಬೇಕಾಗಿಲ್ಲ. ವಾಯುವಿನಿಂದ ಅಗ್ನಿಯುತ್ಪತ್ತಿಯಾಗುವುದೆಂಬ ಆರ್ಯ ಸಿದ್ಧಾಂತ

ರಾಮಾಯಣದಲ್ಲಿ ಅಂಜನಾಸುತನು ಹುಟ್ಟಿದೊಡನೆಯೇ ಸೂರ್ಯನನ್ನು ನುಂಗಲು ಪ್ರಯತ್ನಪಟ್ಟನೆಂಬ ಪುರಾಣವಚನದ ಗೂಢಾರ್ಥವನ್ನು ತಿಳಿದವರಿಗೆ ಸ್ಪಷ್ಟವಾಗದೆ ಇರದು).

## ಅಧ್ಯಾಯ ೪.

## ಸಂಖ್ಯಾಸಮಸ್ಯೆ (Problem of Number) : ಪೈಥಾಗೊರಾಸ್

ನಾವು ಇದುವರೆಗೂ ಸಮಾವಲೋಕನಮಾಡಿರತಕ್ಕ ಜ್ಞಾನಿಗಳೆಲ್ಲರೂ ಪ್ರಪಂಚದ ವಸ್ತು ಸತ್ವಪರಿಶೋಧನೆಯಲ್ಲಿಯೇ ಅಭೀಷ್ಟವುಳ್ಳವರಾಗಿದ್ದರು: ಪ್ರಪಂಚ ಯಾವ ಪದಾರ್ಥದಿಂದ ಸೃಷ್ಟಿಸಲ್ಪಟ್ಟಿದೆ ಎಂಬುದೇ ಅವರ ಪ್ರಶ್ನೆ. ಈ ಪದಾರ್ಥ ಅಪ್ ಅಥವಾ ವಾಯುಗಳಂತೆ ನಿರ್ಣೀತವಾಗಿ ಇಂದ್ರಿಯ ಗೋಚರವಾದುದಾಗಿರಬೇಕು, ಇಲ್ಲವೆ ಯಾವ ವಸ್ತುವಿನಿಂದ ಸಮಸ್ತ ಭೌತ ಪದಾರ್ಥಗಳೂ ವಿಭಕ್ತವಾಗಿ ರೂಪಾಂತರ ಹೊಂದುತ್ತವೆಯೋ ಅಂಥ ಅತೀಂದ್ರಿಯವಾದ ಅವ್ಯಕ್ತವಾದ ಅಪಾರವಾದ ವಸ್ತುವಿಶೇಷವಾಗಿರಬೇಕು — ಎಂಬುದೇ ಅವರ ಉತ್ತರ. ಈಗ ನಾವು ಸಮಾವಲೋಕನ ಮಾಡಲು ತೊಡಗಿರುವ ತತ್ತ್ವಜ್ಞಾನಿಗಳಾದರೋ ವಸ್ತುಗಳ ರೂಪ ಮತ್ತು ಸಂಬಂಧಭಾವಗಳನ್ನೇ ಮುಖ್ಯ ಪ್ರಶ್ನೆಯನ್ನಾಗಿ ಮಾಡುತ್ತಾರೆ. ಪ್ರಸಿದ್ಧ ಗಣಿತಜ್ಞರಾದುದರಿಂದ ಪರಿಮಾಣ ನಿರ್ಣಯಗಳಿಗೊಳಗಾಗುವ ರಾಶಿಸಂಬಂಧಗಳನ್ನು (Quantitative Relations) ಪರೀಕ್ಷಿಸಲು ಪ್ರಯತ್ನಿಸಿ ಪ್ರಪಂಚದಲ್ಲಿ ಕಂಡುಬರುವ ಪ್ರಕೃತಿಸಮಾನತೆ, ವ್ಯಾಪಾರ, ಕ್ರಮ ಇವುಗಳ ವಿಚಾರವಾಗಿ ಜಿಜ್ಞಾಸೆಮಾಡುವರು. ಈ ಕ್ರಮಸಮಾನತೆಗಳನ್ನು ಪರಿಮಾಣರೂಪವಾದ ಅಂಕಗಳ ಮೂಲಕ ನಿದರ್ಶಿಸಬಹುದಾದುದರಿಂದ ಇವರು ಅಂಕವನ್ನೇ ಒಂದು ತತ್ವವನ್ನಾಗಿಮಾಡಿ ಅದನ್ನು ಪ್ರಪಂಚದ ಸಮಸ್ತ ಸತ್ವಕ್ಕೂ ಮೂಲಾಧಾರವನ್ನಾಗಿ ಎಣಿಸುತ್ತಾರೆ.

ಪೈಥಾಗೋರಿಯನರ ಸಿದ್ಧಾಂತವೆಂಬ ಈ ಮತದ ಸ್ಥಾಪಕನಾದ ಪೈಥಾಗೊರಾಸ್ ಎಂಬ ತತ್ವಜ್ಞಾನಿ ಪ್ರಪಂಚದ ಅನೇಕ ಭಾಗ

ಗಳಲ್ಲಿ ಸಂಚಾರಮಾಡಿ ಆಯಾಯಾ ದೇಶದಲ್ಲಿ ಪ್ರಚಾರವಾಗಿದ್ದ ಮತಪದ್ಧತಿಗಳನ್ನೂ ತತ್ವಶಾಸ್ತ್ರಗಳನ್ನೂ ಅರಿತವನಾದನು. ಈತನು ಸೇಮಾಸ್ ನಗರದಲ್ಲಿ ಕ್ರಿ.ಪೂ. ೫೮೦ ಮತ್ತು ೫೭೦ ರ ಮಧ್ಯೆ ಜನಿಸಿ ಸುಮಾರು ೫೨೯ ರಲ್ಲಿ ದಕ್ಷಿಣ ಇಟಲಿಯಲ್ಲಿರುವ ವಸಾಹತುಗಳಿಗೆ ಹೊರಟುಹೋದನು. ಆ ಕಾಲದಲ್ಲಿ ಪ್ರಬಲವಾಗಿದ್ದ ತುರಾಣಾಧಿಪತ್ಯ ಗಳಿಗೆ (Tyrannies) ಇವನು ಶತ್ರುವಾಗಿಯೂ ಶ್ರೀಮಂತರ ದೊರೆತನಕ್ಕೆ (Aristocracy) ಮಿತ್ರನಾಗಿಯೂ ಇದ್ದುದರಿಂದ ಇವನು ತನ್ನ ಸ್ಥಳ ವನ್ನು ಬಿಟ್ಟು ಹೋಗಬೇಕಾಯಿತೆಂದು ಹೇಳುತ್ತಾರೆ. ಅನಂತರ ಕ್ರೊಟಾನ ಎಂಬ ಸ್ಥಳದಲ್ಲಿ ನೆಲಸಿ ಅಲ್ಲಿ ನೈತಿಕ, ರಾಜಕೀಯ ಮತ್ತು ಮತಸಂಬಂಧದ ಸುಧಾರಣೆಗಳನ್ನು ಪ್ರಚಾರಗೊಳಿಸಲು ಒಂದು ಸಂಘ ವನ್ನೇರ್ಪಡಿಸಿದನು. ತನ್ನ ಶಿಷ್ಯವರ್ಗದವರಲ್ಲಿ ರಾಜಕೀಯ ಸುಗುಣ ಗಳನ್ನು ಬಿತ್ತಿ ಸ್ವಪ್ರಯೋಜನಾವಲಂಬನೆಯನ್ನು ಬಿಟ್ಟು ದೇಶಸೇವೆ ಮಾಡುವ ಬುದ್ಧಿಯನ್ನುಂಟುಮಾಡುವುದೇ ಈತನ ಆಶಯವಾಗಿತ್ತು. ಈ ಇಷ್ಟಾರ್ಥವನ್ನು ಈಡೇರಿಸಿಕೊಳ್ಳುವುದಕ್ಕಾಗಿ ನೈತಿಕಶಿಕ್ಷಣಕ್ಕೂ, ಶೀಲಸ್ವಭಾವೋತ್ಪಾದನೆಗೂ ಬಹಳ ಮಟ್ಟಿಗೆ ಗಮನಕೊಟ್ಟನು. ಮನು ಷ್ಯನು ತನ್ನ ಇಂದ್ರಿಯವ್ಯಾಪಾರಗಳನ್ನು ದಮನಮಾಡುವುದನ್ನು ಕಲಿಯ ಬೇಕು, ಆತ್ಮಶಾಂತಿಹೊಂದಲು ಪ್ರಯತ್ನಪಡಬೇಕು; ತನ್ನ ಗುರು ಹಿರಿಯರಿಗೂ ರಾಜ್ಯಪಾಲಕರಿಗೂ ವಿಧೇಯತ್ವವನ್ನೂ, ಅಧಿಕಾರಕ್ಕೆ ಸನ್ಮಾನವನ್ನೂ ತೋರಿಸಬೇಕು. ಈ ರೀತಿಯಾಗಿ ಜನರನ್ನು ದೇಶ ವತ್ಸಲರಾದ ಪುರನಿವಾಸಿಗಳಾಗಿ ಸಾಧುಮಾಡುವುದೇ ಪೈಥಗೋರಿಯನ್ ಮಂಡಲಿಯವರ ಸದುದ್ದೇಶವಾಗಿತ್ತೆಂದು ಹೇಳಬಹುದು. ಅದರ ಶಿಷ್ಯವರ್ಗದವರು ಪರಸ್ಪರ ಮೈತ್ರೀಭಾವವನ್ನು ಬೆಳಸಿ ತಮ್ಮ ಶೀಲ ವನ್ನು ಸರಿಪಡಿಸುವುದಕ್ಕಾಗಿ ಆತ್ಮಪರೀಕ್ಷೆ ಮಾಡಿಕೊಳ್ಳುವ ಪದ್ಧತಿ ಯನ್ನನುಸರಿಸುತ್ತಿದ್ದರು. ಇವರೆಲ್ಲರೂ ಒಂದು ಸಮಾಜವನ್ನೇರ್ಪಡಿಸಿ ಕೊಂಡು ಏಕ ಕುಟುಂಬಿಗಳಂತೆ ವಾಸಮಾಡುತ್ತಿದ್ದರು. ಒಟ್ಟಿಗೆ ಭೋಜನಮಾಡುವುದು, ಒಂದೇ ವಿಧವಾದ ಉಡುಪು ಹಾಕಿಕೊಳ್ಳು ವುದು, ಕಲೆ, ಕೈಗಾರಿಕೆಗಳನ್ನಭ್ಯಾಸಮಾಡುವುದು, ಮತ್ತು ಸಂಗೀತ,

ವೈದ್ಯ, ಅಧಿಕವಾಗಿ ಗಣಿತಶಾಸ್ತ್ರ, ಇವುಗಳನ್ನು ಕಲಿಯುವುದು—ಇವು ಈ ಮಂಡಲಿಯವರ ಕೆಲವು ಕಾರ್ಯಗಳು. ಈ ಸಭೆಯವರು ಪ್ರಥಮ ದಲ್ಲಿ ಕೆಲವುಕಾಲ ಶಿಕ್ಷಣವನ್ನು ಹೊಂದುವುದು ವಾಡಿಕೆಯಾಗಿತ್ತು: ಆಗ ಇವರ ಮುದ್ರಿಕಾವಚನವೇನೆಂದರೆ ಮೊದಲು ಸತ್ಯಶ್ರವಣ, ಅನಂತರ ಸತ್ಯಾನುಭವ, (ಹಿಂದೂ ಉಪನಿಷತ್ತುಗಳಲ್ಲಿ ಹೇಳಿರುವ ಶ್ರವಣ, ಮನನ, ನಿಧಿಧ್ಯಾಸನವೆಂಬ ಸಾಧನತ್ರಯಗಳನ್ನು ಹೋಲಿಸಿ ನೋಡಿ).

ಪೈಥಗೋರಿಯನರ ರಾಜಕೀಯಬೋಧನೆಗಳು ಆ ಕಾಲದಲ್ಲಿ ಸ್ಥಾಪಿತವಾಗಿದ್ದ ರಾಜ್ಯಾಧಿಪತ್ಯಗಳಿಗೆ ವಿರೋಧವಾಗಿದ್ದುದರಿಂದ ಇವರ ಗುರುವಾದ ಪೈಥಾಗೊರಾಸ್ ಎಂಬವನು ಅನೇಕ ಪಟ್ಟಣಗಳಿಂದ ತಲೆ ತಪ್ಪಿಸಿಕೊಂಡುಹೋಗಿ ಕಡೆಯಲ್ಲಿ ಮೆಟಪಾಂಟಮ್ ಎಂಬ ಸ್ಥಳದಲ್ಲಿ ಕ್ರಿ.ಪೂ. ೫೦೦ ರಲ್ಲಿ ಕಾಲವಾದನು. ಇವನ ಶಿಷ್ಯರಲ್ಲನೇಕರು ಇಟಲಿ ಯಿಂದ ಓಡಿಸಲ್ಪಟ್ಟು ಗ್ರೀಸಿನಲ್ಲಿ ಹೋಗಿ ಸೇರಿದರು. ಈ ವಿಧವಾದ ಪರಾಜಯಗಳಿಂದ ಪೈಥಗೋರಿಯನ್ ಮಂಡಲಿ ಭಿನ್ನಭಿನ್ನವಾಗಿ ಒಡೆದು ಹಾಳಾಯಿತು. ಆದರೂ ಗುರುವಿನ ಶಿಷ್ಯರನೇಕರು ಆತನ ಮರಣಾ ನಂತರ ನೂರಾರು ವರ್ಷಗಳವರೆಗೂ ಆತನ ಸಿದ್ಧಾಂತಗಳನ್ನು ಬೋಧಿ ಸುತ್ತ ಪ್ರಬಲಮಾಡುತ್ತಿದ್ದರು.

ಪೈಥಾಗೊರಾಸ್ ಜ್ಞಾನಿ ಸ್ವತಃ ಬರೆದ ಗ್ರಂಥಗಳು ಯಾವುದೂ ಇಲ್ಲವಾದರೂ ನಾವು ಮೇಲೆ ಹೇಳಿರುವ ನೈತಿಕ, ರಾಜಕೀಯ, ಮತ ಸಿದ್ಧಾಂತಗಳೆಲ್ಲವೂ ಅವನವೇ ಎಂದು ನಿರ್ಧರಿಸುವುದರಲ್ಲಿ ಸಂಶಯ ವೇನೂ ಇಲ್ಲ. ಮತ್ತು ಈಗ ನಾವು ವಿವರಿಸಲು ತೊಡಗಿರುವ ಪೈಥ ಗೋರಿಯನ್ ಮತದ ಮುಖ್ಯಾಭಿಪ್ರಾಯವಾದ "ಸಾಂಖ್ಯ" ಸಿದ್ಧಾಂತದ ನಿದರ್ಶಕನೂ ಇವನೇ ಎಂದು ಹೇಳಬಹುದು. ಈಗ ನಮಗೆ ಹಸ್ತಗತ ವಾಗಿರುವ ದರ್ಶನವನ್ನು ಫೈಲೊಲಾಸ್ ಎಂಬವನು ಕ್ರಿ. ಪೂ. ೫ನೆಯ ಶತಮಾನದಲ್ಲಿ ಪೂರ್ತಿಗೊಳಿಸಿದನು.

**ಪೈಥಗೋರಿಯನರ ‹‹ಸಾಂಖ್ಯ›› ಸಿದ್ಧಾಂತ (Number Theory)**

ಪೈಥಗೋರಿಯನರು ಪ್ರಪಂಚದಲ್ಲಿ ಅನುಭವಸಿದ್ಧವಾಗಿರುವ ರೂಪ ಮತ್ತು ಸಂಬಂಧಭಾವಗಳಿಗೆ ವಿಶೇಷ ಗಮನಕೊಡುತ್ತಾರೆ. ಪರಿಮಾಣ, ಕ್ರಮ, ವ್ಯವಸ್ಥೆ, ಸಮಾಕಾರ, ಪ್ರಕೃತಿವ್ಯಾಪಾರದ ಕ್ರಮಸಂಭವ (Uniform Occurrence) ಇವೇ ಮೊದಲಾದ ರೂಪ ಮತ್ತು ಸಂಬಂಧ (Relation)ಭಾವಗಳನ್ನು ಅಂಕಗಳ ಮೂಲಕ ಸೂಚಿಸಬಹುದು. ಪ್ರಕೃತಿವ್ಯಾಪಾರಗಳಲ್ಲೆಲ್ಲಾ ಈ ರೂಪಸಂಬಂಧಭಾವಗಳೇ ಪ್ರಾಮುಖ್ಯವಾದುದರಿಂದಲೂ, ಅಂಕಗಳ ಸಹಾಯವಿಲ್ಲದಿದ್ದರೆ ಪ್ರಕೃತಿಯಲ್ಲಿ ಪರಿಮಾಣ, ಕ್ರಮ, ಸಮಾನತೆ, ನಿಯಮ, ಕ್ರಮವ್ಯಾಪಾರಸಂಭವ ಮೊದಲಾದ ಭಾವಗಳು ನಿರರ್ಥಕವಾಗುವುದರಿಂದಲೂ ಅಂಕಗಳೇ ಸರ್ವಕ್ಕೂ ಮೂಲಾಧಾರವಾಗಿರಬೇಕು (Realities) ; ಅಂಕಗಳೇ ವಸ್ತುಗಳ ಮೂಲ ದ್ರವ್ಯಗಳೂ, ಮೂಲಕಾರಣಗಳೂ ಆಗಿರಬೇಕು; ಉಳಿದ ಸಮಸ್ತ ಪದಾರ್ಥಗಳೂ ಇವುಗಳ ವ್ಯಕ್ತರೂಪಗಳಾಗಿರಬೇಕು (Expression). ಈ ಕಾಲದಲ್ಲಿ ಅನೇಕರು ಪ್ರಕೃತಿಕಟ್ಟಳೆಗಳನ್ನೇ ಸತ್ವಗಳನ್ನಾಗಿಮಾಡಿ ಪ್ರಕೃತಿವ್ಯಾಪಾರಗಳಿಗೆಲ್ಲಾ ಅವು ಹೇತುಗಳೆಂದು ಹೇಳುವ ಹಾಗೆಯೇ ಪೈಥಗೋರಿಯನರು ಅಂಕಗಳನ್ನೇ ಮೂಲಸತ್ವಗಳನ್ನಾಗಿ ಎಣಿಸಿದರು. ಸ್ವಾಭಾವಿಕ ವ್ಯಾಪಾರಗಳಲ್ಲೆಲ್ಲಾ (ಉದಾಹರಣೆ: ತಂತಿಯ ಉದ್ದಕ್ಕೂ ನಾದದ ಶ್ರುತಿಗೂ) ಪರಿಮಾಣರೂಪವಾದ ಸಂಖ್ಯಾಸಂಬಂಧ ಕಂಡುಬರುವುದರಿಂದ ಸಂಬಂಧಭಾವವನ್ನು ಸೂಚಿಸಲನುಕೂಲವಾಗಿರುವ ಸಂಬಂಧದ ಉಪಮೆ ಅಥವಾ ಚಿಹ್ನೆಯಾಗಿರುವ ಸಂಖ್ಯೆಯನ್ನೇ ಆ ಸಂಬಂಧದ ಹೇತುವಾಗಿ ಭಾವಿಸಿ ಸಂಖ್ಯೆಯೇ ಪ್ರಕೃತಿವ್ಯಾಪಾರಗಳಿಗೆಲ್ಲಾ ಮೂಲತತ್ವ ಮತ್ತು ಮೂಲಕಾರಣವಾಗಿರಬೇಕೆಂದು ಅಭಿಪ್ರಾಯ ಪಟ್ಟರು.

ಇರಲಿ. ಸಂಖ್ಯೆ ವಸ್ತುಗಳ ಸಾರ–ಸತ್ವವಾಗಿದ್ದ ಪಕ್ಷದಲ್ಲಿ ಸಂಖ್ಯೆಯ ವಿಷಯವಾಗಿ ನಾವು ನಿಜವೆಂದು ಏನನ್ನು ಹೇಳಬಹುದೋ ಅದೆಲ್ಲಾ ವಸ್ತುಗಳ ಪರವಾಗಿಯೂ ಸತ್ಯವಾದಂತಾಯಿತು. ಈ ಕಾರಣದಿಂದ ಪೈಥಗೋರಿಯನರು ಸಂಖ್ಯೆಯಲ್ಲಿ ಗೋಚರವಾಗಬಹುದಾದ

ವಿಶೇಷ ಗುಣಗಳನ್ನೆಲ್ಲಾ ಕಂಡುಹಿಡಿದು ಅವುಗಳನ್ನೆಲ್ಲಾ ವಿಶಿಷ್ಟ ಜಗತ್ತಿಗೇ ಆರೋಪಿಸಲು ತೊಡಗಿದರು. ಸಂಖ್ಯೆಗಳಲ್ಲಿ ವಿಷಮ, ಸಮ ಎಂದು ಎರಡು ವಿಧ; ವಿಷಮಸಂಖ್ಯೆಯನ್ನು ಎರಡರಿಂದ ಭಾಗಿಸಲಾಗುವುದಿಲ್ಲ, ಸಮಸಂಖ್ಯೆಯನ್ನು ಭಾಗಿಸಬಹುದು; ಆದುದರಿಂದ ವಿಷಮಗಳು ಮೇರೆಯುಳ್ಳವುಗಳು, ಸಮಗಳು ಸೀಮಾತೀತವಾದವುಗಳು. ಇದೇಪ್ರಕಾರವಾಗಿ ವಿಷಮವೂ, ಸಮವೂ ಅಥವಾ ಪಾರಯುತವೂ, ಪಾರರಹಿತವೂ, ಕೊನೆಗಂಡದ್ದೂ ಕೊನೆಗಾಣದ್ದೂ — ಇವೆರಡೂ ಸತ್ಯಸತ್ವದ ಸಾರವೆಂದು ಹೇಳಬೇಕು. ಈ ಪ್ರಕಾರವಾಗಿಯೇ ಪ್ರಕೃತಿಯೂ ಸಹ ವಿಷಮಸಮಗಳ, ಪಾರಾಪಾರಗಳ, ದ್ವಂದ್ವಭಾವಗಳ ಸಂಯೋಗವೆಂದು ಹೇಳಬೇಕು. ಇಂಥ ದಶವಿಧ ದ್ವಂದ್ವಗಳುಳ್ಳ ಪಟ್ಟಿಯನ್ನು ಪೈಥಗೋರಿಯನರು ಕಾಣಿಸಿದ್ದಾರೆ: ಪಾರಾಪಾರ; ವಿಷಮಸಮ; ಏಕಬಹುಳ; ಎಡಬಲ; ಪುಂಸ್ತ್ರೀ; ಸ್ಥಾವರಜಂಗಮ (ಚಲನೆ); ಸರಳ ಓರೆ (Straight and Crooked); ಚದರ ಆಯತ (Square and Rectangle); ದಿವಾರಾತ್ರಿ; ಶಿಷ್ಟದುಷ್ಟ(ಹಿತಾಹಿತ). ಇದಲ್ಲದೆ ಒಂದರಿಂದ ಹತ್ತರವರೆಗೂ ಪ್ರತಿಯೊಂದು ಅಂಕವೂ ಅಪ್ರತಿಮ ಅಪೂರ್ವ ಗುಣಗಳನ್ನು ಹೊಂದಿದೆಯೆಂದು ಪೈಥಗೋರಿಯನರು ಬೋಧಿಸಿದರು.

ಭೌತ ಪ್ರಪಂಚವೂ ಕೂಡ ಏಕಮೂಲತತ್ವರೂಪವಾಗಿರುವುದರಿಂದ ಸಂಖ್ಯಾಯುತವಾಗಿದೆಯೆಂದು ಹೇಳಬೇಕು. ಬಿಂದು ಏಕ; ರೇಖೆ ದ್ವಯ; ಆಕೃತಿ ತ್ರಯ; ಘನಪಿಂಡ ಚತುಷ್ಟಯ; ಮತ್ತು ಭೂಮಿ ಘನಾಕೃತಿ; ಅಗ್ನಿ ಚತುರ್ಭುಜ; ವಾಯು ಅಷ್ಟಭುಜ; ನೀರು ದ್ವಾದಶಭುಜ ಇತ್ಯಾದಿ. ಎಂದರೆ ರೇಖೆಯೂ ಮೇಲ್ಮೈಯೂ (surface) ಇಲ್ಲದೆ ಯಾವ ಪದಾರ್ಥವೂ ಇರುವುದಕ್ಕಾಗುವುದಿಲ್ಲವಾದುದರಿಂದಲೂ ವಸ್ತುಗಳ ಇರುವಿಕೆಯಿಲ್ಲದೆಯೇ ಈ ರೇಖೆಗಳ ಮತ್ತು ಮೇಲ್ಭಾಗಗಳ ಅರ್ಥವನ್ನು ಚಿಂತಿಸಿ ಗ್ರಹಿಸಬಹುದಾದುದರಿಂದಲೂ ರೇಖೆಗಳೂ ಮೇಲ್ಭಾಗಗಳೂ ಸ್ವತಂತ್ರವಾದ ಅಸ್ತಿತ್ವವನ್ನು (independent existence) ಪಡೆದಿರುವ ಮೂಲಸತ್ವಗಳಾದುವು. ಆಕಾಶರೂಪಗಳೇ (Spatial Forms) ವಸ್ತುಹೇತುಗಳು, ಮತ್ತು ಈ

ರೂಪಗಳನ್ನು ಅಂಕಗಳ ಮೂಲಕ ನಿದರ್ಶಿಸಬಹುದಾದುದರಿಂದ ಅಂಕಗಳೇ ಸಮಸ್ತ ವಸ್ತುಗಳ ಮೂಲಕಾರಣಗಳಾದುವು. ಇದೇ ತರ್ಕವನ್ನೇ ಮಾನಸಿಕ ವ್ಯಾಪಾರಗಳಿಗೂ ಪ್ರಯೋಗಿಸಬಹುದು: ಪ್ರೇಮ, ಸ್ನೇಹ, ನ್ಯಾಯ, ಗುಣ, ಆರೋಗ್ಯ ಮುಂತಾದುವುಗಳಿಗೆಲ್ಲಾ ಅಂಕಗಳೇ ಆಧಾರಗಳು; ಉದಾಹರಣೆಗೆ, ಪ್ರೇಮವೂ, ಸ್ನೇಹವೂ ಎಂಟು ಎಂಬ ಸಂಖ್ಯೆಯಿಂದ ಸೂಚಿಸಲ್ಪಡುತ್ತವೆ—ಹೇಗೆಂದರೆ ಪ್ರೇಮವೂ ಸ್ನೇಹವೂ ಏಕಮತಿಯನ್ನೂ, ಏಕಗ್ರೀವವನ್ನೂ ಸೂಚಿಸುತ್ತವೆ; ಸಂಗೀತದಲ್ಲಿಯೋ ಅಷ್ಟಮ ಸ್ವರಗಳೇ ಏಕತಾಳ.

ಇದೇ ರೀತಿಯಲ್ಲಿಯೇ ಪೈಥಗೋರಿಯನರು ಖಗೋಳಶಾಸ್ತ್ರದಲ್ಲಿ "ಸಾಂಖ್ಯ" ಸಿದ್ಧಾಂತವನ್ನು ಉಪಯೋಗಪಡಿಸಿದರು. ಹತ್ತೆಂಬುದು ಪರಿಪೂರ್ಣಾಂಕವಾದುದರಿಂದ ಅಂತರಿಕ್ಷದಲ್ಲಿ ಹತ್ತು ಗ್ರಹಗಳಿರಬೇಕು. ಗೋಳಗಳ ಚಲನೆ ಅಷ್ಟಮಸ್ವರಗಳನ್ನು ಸೂಚಿಸುವುದರಿಂದಲೂ, ಪ್ರತಿ ಒಂದು ಗೋಳವೂ ತನ್ನ ಅಪೂರ್ವ ನಾದವನ್ನುಂಟುಮಾಡುವುದರಿಂದಲೂ, ಈ ಗೋಳಗಳ ಚಲನೆಯಿಂದ ಸಮೀಕರಣವಾದ ಸಂಗೀತ ಉತ್ಪತ್ತಿಯಾಗುತ್ತದೆ (Music of the Spheres).

### ಪೈಥಗೋರಿಯನರ ವಚನಾಮೃತ ಬಿಂದುಗಳು

(೧) ವಿಶ್ವಧರ್ಮದ ಕಟ್ಟಳೆಯಂತೆ ಅಮರರಾದ ದೇವತೆಗಳನ್ನು ಮೊದಲು ಸೇವಿಸು, ನಿನ್ನ ಪ್ರಮಾಣವನ್ನು ಗೌರವಿಸು; ಅನಂತರ ತಕ್ಕ ಕ್ರಿಯೆಗಳೊಡನೆ ದೇವಾಂಶಸಂಭೂತರಾದ ವೀರಪುರುಷರಿಗೂ, ಕೆಳಗಿನ ಲೋಕದ ಪಾಲಕರಿಗೂ ನಿನ್ನ ವಂದನೆಗಳನ್ನರ್ಪಿಸು—ಇದನ್ನೆಂದಿಗೂ ಮರೆಯದಿರು.

(೨) ನಿನ್ನ ತಾಯಿತಂದೆಗಳನ್ನೂ ಕೇವಲ ಸಮೀಪಬಂಧುಗಳನ್ನೂ ಗೌರವಿಸು, ಉಳಿದವರಲ್ಲಿ ಶೀಲವಂತರಾದವರನ್ನು ನಿನ್ನ ಸ್ನೇಹಿತರನ್ನಾಗಿ ಆರಿಸಿಕೊ. ಮೃದುವಾದ ಮಾತುಗಳಿಗೂ ದಯಾಪೂರಿತವಾದ ಕರ್ಮಗಳಿಗೂ ನಿನ್ನ ಮನವು ಸೋಲಲಿ, ಮತ್ತು ಯಾವುದಾದರೂ ಒಂದು ಅಲ್ಪ ಅಪರಾಧಕ್ಕೋಸ್ಕರ ನಿನ್ನ ಸ್ನೇಹಿತನನ್ನು ದ್ವೇಷಿಸಬೇಡ. ನಿನ್ನ ಸಾಮರ್ಥ್ಯವಿದ್ದಷ್ಟು ಸಹಿಸಿಕೊ; ಏಕೆಂದರೆ ಶಕ್ತಿಗೂ ಕರ್ತವ್ಯಕ್ಕೂ ಬಹಳ ಹತ್ತಿರ. ಈ ರೀತಿ ವಿಚಾರಗಳನ್ನು ತಿಳಿಯುವವನಾಗು.

(೩) ಕೆಳಗೆ ಕಾಣಿಸಿರುವವುಗಳನ್ನು ಜಯಿಸಲು ಕಲಿ: ಮೊದಲು ನಿನ್ನ ಹೊಟ್ಟೆ, ತದನಂತರ ನಿದ್ರೆ ಮತ್ತು ಕಾಮ ಮತ್ತು ಕ್ರೋಧ. ಇತರರ ಜೊತೆಯಲ್ಲಾಗಲಿ, ಒಂಟಿಯಾಗಿ ಆಗಲಿ, ನೀಚವಾದುದನ್ನು ಆಚರಿಸಬೇಡ: ಎಲ್ಲಕ್ಕಿಂತಲೂ ಮೊದಲು ನಿನ್ನ ಆತ್ಮನಲ್ಲಿ ನಿನಗೆ ಗೌರವವಿರಲಿ.

(೪) ಮಾತಿನಲ್ಲಿಯೂ ಕಾರ್ಯದಲ್ಲಿಯೂ ಧರ್ಮವನ್ನೇ ಆಚರಿಸು, ಅಲ್ಪ ವಿಷಯಗಳಲ್ಲಿ ಕೂಡ ಪ್ರಜ್ಞೆ ತಪ್ಪಿಹೋಗಲು ಅವಕಾಶಕೊಡಬೇಡ; ಸಾವು ಎಂಬುದು ಸಾಧಾರಣವಾಗಿ ಸರ್ವರ ಪಾಲಿಗೂ ಬಂದದ್ದೆಂಬುದನ್ನು ಮರೆಯದಿರು.

(೫) ಸಾಮಾನ್ಯ ಜನರಂತೆ ಕಾಲಕ್ಕೆ ಮೊದಲೇ ನಿನ್ನ ಐಶ್ವರ್ಯವನ್ನೆಲ್ಲಾ ದುಂದು ಮಾಡಿಬಿಡಬೇಡ, ಕೃಪಣನಾಗಿಯೂ ಇರಬೇಡ. ಎಲ್ಲಾ ವಿಚಾರಗಳಲ್ಲಿಯೂ ಮಿತಿಯನ್ನನುಸರಿಸುವುದೇ ಸರ್ವೋತ್ತಮ.

(೬) ನಿನಗೆ ಮಂಗಳವನ್ನು ತರುವ ಕೆಲಸಗಳನ್ನೇ ಮಾಡು; ಮಾಡುವುದಕ್ಕೆ ಮೊದಲು ಪರ್ಯಾಲೋಚಿಸು.

(೭) ದಿನದ ಪ್ರತಿ ಒಂದು ಕೃತ್ಯವನ್ನೂ ಕುರಿತು ವಿಚಾರಮಾಡುವವರೆಗೂ ಜೋಲುವ ನಿನ್ನ ಕಣ್ಣುರೆಪ್ಪೆಗಳ ಬಳಿಗೆ ನಿದ್ರೆಯನ್ನು ಬರಗೊಡಿಸಬೇಡ: "ಯಾವುದರಲ್ಲಿ ನಾನು ತಪ್ಪಿ ನಡೆದಿದ್ದೇನೆ? ಏನು ಮಾಡಿದ್ದೇನೆ? ಯಾವ ಕರ್ತವ್ಯವನ್ನು ಬಿಟ್ಟಿದ್ದೇನೆ?"— ಮೊದಲಿಂದ ಕೊನೆಯವರೆಗೂ ಈ ರೀತಿ ಪರೀಕ್ಷೆಮಾಡು. ಅನಂತರ ನೀಚರೀತಿಯಲ್ಲಿ ನಡೆದುದಕ್ಕೆಲ್ಲಾ ಶೋಕಪಡು, ಭೀತನಾಗು; ಒಳ್ಳೆಯದಕ್ಕೆಲ್ಲಾ ಸಂತೋಷಪಡು.

(೮) ಮೇಲಿನ ವಿಚಾರಗಳನ್ನು ನಡಸು; ಅವುಗಳನ್ನು ಕುರಿತು ಚಿಂತಿಸು; ಅವುಗಳನ್ನು ಪ್ರೀತಿಸು. ನಿಜವಾಗಿಯೂ, ಬತ್ತಿಹೋಗದ ನಿತ್ಯವಾದ ಪ್ರಕೃತಿಯ ಬುಗ್ಗೆಯಂತಿರುವ "ನಾಲ್ಕು" ಎಂಬ ಸಂಖ್ಯೆಯನ್ನು ನಮ್ಮಾತ್ಮನಿಗಿತ್ತ ಪರಮಾತ್ಮನಾಣೆ ಹೇಳುತ್ತೇನೆ: ಅವು ನಿನ್ನನ್ನು ದೈವೀಸಂಪತ್ತನ್ನು ದೊರಕಿಸಿಕೊಳ್ಳುವ ಮಾರ್ಗದಲ್ಲಿ ಬಿಡುತ್ತವೆ. ಆದರೆ, ಕಾರ್ಯವನ್ನೆಸಗುವ ಮೊದಲು ದೇವತೆಗಳಿಂದ ಜಯವನ್ನು ಕೋರು.

(೯) ಈ ನಿಯಮಗಳನ್ನೆಲ್ಲಾ ಕಲಿತಮೇಲೆ, ಸಾವಿಲ್ಲದ ದೇವತೆಗಳ ಮತ್ತು ಸಾಯುವ ನರರ ನಿಗೂಢತತ್ತ್ವಗಳನ್ನು ತಿಳಿದುಕೊ. ಪ್ರತಿ ಒಂದು ವಸ್ತುವೂ ಉಳಿದ ವಸ್ತುಗಳಿಂದ ಹೇಗೆ ಬೇರೆಯಾಗಿದೆ, ಆದರೂ ಅವುಗಳೊಂದಿಗೆ ಹೇಗೆ ಒಂದಾಗಿದೆ, ಎಂಬ ತತ್ತ್ವವನ್ನರಿ. ಪ್ರಕೃತಿ ಎಲ್ಲೆಡೆಯಲ್ಲಿಯೂ ಸರಿಸಮವಾಗಿದೆ, ಎಂಬುದನ್ನು ನೀನು ತಿಳಿಯಬೇಕು, ತಿಳಿದುಕೊಳ್ಳುವುದು ನಿನಗೆ ಒಳ್ಳೆಯದೇ; ಆಗ ಆಶಾತೀತವಾದ ವಸ್ತುಗಳಿಗೊಂದಕ್ಕೂ ನೀನು

ಆಶೆಪಡಲಾರೆ; ಮತ್ತು ಯಾವ ಸತ್ಯಾರ್ಥವನ್ನೂ ತಿಳಿಯದಿರಲಾರೆ.

(೧೦) ನಾವು ಹೇಳಿರುವ ಪದಾರ್ಥಗಳನ್ನು[೧] ಸೇವನೆಮಾಡಬೇಡ, ಮತ್ತು ನಿನ್ನ ಆತ್ಮವನ್ನು ಶುದ್ಧಿಮಾಡಿ ಬಂಧನದಿಂದ ಬಿಡಿಸುವ ಪ್ರಯತ್ನದಲ್ಲಿ ವಿಚಾರವನ್ನು ತಂದೊಡ್ಡು, ಎಲ್ಲ ವಿಷಯಗಳನ್ನೂ ವಿಮರ್ಶಿಸು, ಎಲ್ಲದರ ಮೇಲೆಯೂ ಉತ್ತಮ ಚಿಂತನೆಯನ್ನು ಸಾರಥಿಯಂತೆ ಕೂರಿಸು.

(೧೧) ದೈವಾಧೀನವಾದ ಕಾರಣಗಳಿಂದ ಹುಟ್ಟುವ ಮಾನವನ ಕೇಡುಗಳಲ್ಲಿ ನಿನ್ನ ಭಾಗವನ್ನು ಸಹಿಸಿಕೊ, ಸಿಡುಕುಮೋರೆಯಿಂದ ಗೊಣಗುಟ್ಟಬೇಡ. ನಿನಗೆ ಸಾಧ್ಯವಾದುದನ್ನು ಸರಿಪಡಿಸು, ಆದಾಗಬಹುದು, ಅನಂತರ ನಂಬು, "ಧರ್ಮಿಷ್ಠನ ಮೇಲೆ ದೈವ ಅತಿ ಭಾರವನ್ನು ಹೊರಿಸುವುದಿಲ್ಲ" ಎಂದು.

(೧೨) ಶೂರತನದ ಮತ್ತು ನೀಚವಾದ ಮಾತುಗಳನೇಕವು ಕಿವಿಗಳನ್ನು ತಾಡುತ್ತವೆ, ಇವೊಂದೂ ನಿನ್ನನ್ನು ಎದೆಗುಂದಿಸದಿರಲಿ, ನಿನ್ನನ್ನು ಅಡ್ಡಗಟ್ಟದಿರಲಿ; ಆದರೆ ಅನೃತ ಆಡಲ್ಪಟ್ಟಾಗಮಾತ್ರ, ಖಿನ್ನನಾಗಿ ತಲೆವಾಗು.

(೧೩) ನಾನೀಗ ಹೇಳುವುದನ್ನು ಪ್ರತಿ ಒಂದು ಕಾರ್ಯದಲ್ಲಿಯೂ ಗಮನಿಸು. ಯಾರೇ ಆಗಲಿ, ಮಾತಿನಿಂದಾಗಲಿ ಕಾರ್ಯದಿಂದಾಗಲಿ ನಿನಗೆ ಶ್ರೇಯಸ್ಕರವಲ್ಲದುದನ್ನು ಆಡುವುದಕ್ಕಾಗಲಿ ಮಾಡುವುದಕ್ಕಾಗಲಿ ನಿನ್ನನ್ನು ಪ್ರೇರೇಪಿಸಲು ಅವಕಾಶಕೊಡಬೇಡ. ಮಾಡುವುದಕ್ಕೆ ಮೊದಲು ಯೋಚಿಸು, ಇಲ್ಲವಾದರೆ ಅವಿವೇಕ ನಡದುಹೋಗಬಹುದು. ಬುದ್ಧಿಗೇಡಿತನದ ಮಾತುಗಳಿಗೂ ಕೆಲಸಗಳಿಗೂ ನೀಚನನ್ನು ಹೆಗ್ಗುರುತಾಗಿಟ್ಟುಕೊ. ಯಾವುದರ ದೆಸೆಯಿಂದ ಪಶ್ಚಾತ್ತಾಪ ಬರಲಾರದೋ ಅದನ್ನು ಆಚರಿಸು. ನಿನಗೆ ತಿಳಿಯದೆ ಇರುವುದೊಂದನ್ನೂ ಮಾಡಬೇಡ; ಆದರೆ ತಕ್ಕಮಟ್ಟಿಗೆ ಕಲಿ. ಇದರಿಂದ ನಿನ್ನ ಜೀವನ ಸೌಖ್ಯದಿಂದ ತುಂಬಿ ಹೊರಸೂಸಿ ಹರಿಯುವುದು.

(೧೪) ನಿನ್ನ ದೇಹಾರೋಗ್ಯವನ್ನೆಂದಿಗೂ ಉಪೇಕ್ಷಿಸಬೇಡ; ಆದರೆ ಆಹಾರಪಾನಗಳಲ್ಲಿಯೂ, ಅಂಗಸಾಧನೆಯಲ್ಲಿಯೂ ಒಂದು ಪರಿಮಾಣವನ್ನನುಸರಿಸು. ಯಾವುದರಿಂದ ಕಡೆಯಲ್ಲಿ ನೋವು ಬರಲಾರದೋ ಅದೇ "ಪರಿಮಾಣ".

(೧೫) ನಿರ್ಮಲವಾದ, ಸರಳವಾದ ಜೀವನ ಪದ್ಧತಿಯನ್ನನುಸರಿಸು, ಮತ್ತು ಮತ್ಸರವನ್ನುಂಟುಮಾಡುವ ಕೆಲಸಗಳ ವಿಷಯದಲ್ಲಿ ಎಚ್ಚರಿಕೆ! ಹಾಗಿದ್ದು, ದೇಹವನ್ನು ತ್ಯಾಗಮಾಡುವಂದು, ನೀನು ಅಪಾರವಾದ ಆಕಾಶವನ್ನು ಹತ್ತಿದ್ದೇ ಆದರೆ, ಖಂಡಿತವಾಗಿಯೂ ಜರಾಮರಣರಹಿತನಾಗಿರುವೆ, ಅಮರನಾದ ದೇವನಾಗುವೆ,—ಮರ್ತ್ಯನೆಂಬುದೆಂದೆಂದಿಗೂ ಇಲ್ಲ!

೧ ಈರುಳ್ಳಿ, ಅವರೆ, ಹುರುಳಿ ಮುಂತಾದುವು.

## ಅಧ್ಯಾಯ: ೫.

## ಪರಿಣಾಮ ಸಮಸ್ಯೆ. (೧) ಹಿರಾಕ್ಲಿಟಸ್

ಅಯೋನಿಯದ ವೈಜ್ಞಾನಿಕರು ವಸ್ತುಪ್ರಪಂಚದ ಮೂಲಸತ್ವವನ್ನು ಪರಿಶೋಧಿಸುವುದರಲ್ಲಿಯೂ, ಪೈಥಗೋರಿಯನರು ರಾಶಿಸಂಬಂಧಗಳು, ಕ್ರಮ, ಸಮ್ಮೇಳನ, ನಿಯಮ, ಸಂಖ್ಯೆ—ಇವುಗಳನ್ನು ಪರಿಶೀಲಿಸುವುದರಲ್ಲಿಯೂ ಮನಸ್ಸುಳ್ಳವರಾಗಿದ್ದರು. ಇದರಲ್ಲೆಲ್ಲಾ ದೃಶ್ಯಪ್ರಪಂಚದಲ್ಲಿ ವಸ್ತುಗಳು ರೂಪಾಂತರ ಹೊಂದಿ ಮಾರ್ಪಾಡಾಗುವ ಸ್ಥಿತಿ ಸ್ಪಷ್ಟವಾಗಿ ಕಂಡುಬಂದಿದ್ದರೂ ಅದನ್ನು ಯಾರೂ ಮುಖ್ಯಪ್ರಶ್ನೆಯಾಗಿ ಗಮನಿಸಲಿಲ್ಲ. ಪರಿಣಾಮವೆಂಬ ಭಾವ ಅವರ ಸಿದ್ಧಾಂತಗಳಲ್ಲಿ ವಿಶೇಷವಾಗಿ ಕಂಡುಬಂದಿತ್ತಾದರೂ ಅದನ್ನು ಕುರಿತು ವಿಮರ್ಶೆಮಾಡಲು ಯಾರಿಗೂ ಮನತೋರಲಿಲ್ಲ. ಪರಿಣಾಮವೆಂಬ ಸ್ಥಿತಿ ಸ್ವಭಾವಸಿದ್ಧವೆಂದೂ ಅದರ ನಿಜಾಂಶವನ್ನು ಶೋಧನೆಮಾಡುವ ಆವಶ್ಯಕತೆ ಇಲ್ಲವೆಂದೂ ಅವರ ಎಣಿಕೆ ಇರಬಹುದು. ತಮ್ಮ ಮೂಲತತ್ವದಿಂದ ಸಮಸ್ತ ಪದಾರ್ಥಗಳೂ ಹೇಗೆ ಉತ್ಪನ್ನವಾಗುವುವೆಂಬುದನ್ನು, ಕಡೆಯಲ್ಲಿ ಹೇಗೆ ಎಲ್ಲವೂ ಅದಕ್ಕೇ ಹಿಂತಿರುಗುವುವೆಂಬುದನ್ನು ಸ್ಪಷ್ಟಪಡಿಸುತ್ತಾರೆ. ವಸ್ತುಗಳು ರೂಪಾಂತರ ಹೊಂದುವುವೆಂಬ ಭಾವನೆಯೂ; ಯಾವ ವಸ್ತುವೂ ನಿರಾಧಾರವಾಗಿ ಹುಟ್ಟಲಾರದು, ಯಾವುದೂ ನಿರ್ನಾಮವಾಗಿ ನಾಶವಾಗಲಾರದು, ಒಂದೇ ತತ್ವವೇ ಈಗ ನೀರಾಗಿಯೂ, ಈಗ ಮೇಘವಾಗಿಯೂ, ಈಗ ಪೃಥಿವಿಯಾಗಿಯೂ ತೋರುವುದು—ಎಂಬ ಭಾವನೆಯೂ, ಮೇಲ್ಕಂಡ ಸಿದ್ಧಾಂತದಲ್ಲಿಯೇ ಅಡಗಿವೆ. ಹೀಗಿರುವಲ್ಲಿ ವಸ್ತುರೂಪಾಂತರ ಹೊಂದುವುದೆಂದರೇನು? ವಸ್ತುವಿನ ಹುಟ್ಟು, ಬೆಳವಣಿಗೆ, ನಾಶವೆಂದರೇನು ಎಂಬ ಪ್ರಶ್ನೆಯನ್ನೇ ಯಾರಾದರೂ ಒತ್ತಿಕೇಳಿ ತತ್ವಶೋಧನೆಮಾಡಲು ಪ್ರಯತ್ನಪಟ್ಟರೆ ಅದು ಆಶ್ಚರ್ಯವಾಗಿ ಕಾಣಲಾರದು. ಹಿರಾಕ್ಲಿಟಸಿನ ಪ್ರಯತ್ನವೇ ಇದು. ಪ್ರಪಂಚದಲ್ಲಿ ಪರಿಣಾಮವೆಂಬ ವಸ್ತುಸ್ಥಿತಿಗೆ ಆತನು ವಿಶೇಷ ಗಮನ ಕೊಡುತ್ತಾನೆ. ಪ್ರಪಂಚವ್ಯಾಪಾರಗಳೆಲ್ಲವನ್ನೂ ಪರಿಶೀಲಿಸಿ, ಪರಿಣಾಮ

ವೆಂಬುದೇ ಜಗತ್ತಿನ ಮೂಲತತ್ವವೆಂದೂ, ಪ್ರಪಂಚದಲ್ಲಿ ಯಾವುದೂ ಸ್ಥಿರವಲ್ಲವೆಂದೂ, ಸ್ಥಿರತ್ವವೆಂಬುದೆಲ್ಲಾ ಮಾಯೆಯೆಂದೂ, ವಸ್ತುಗಳು ಸ್ಥಿರವಾಗಿರುವಂತೆ ತೋರಿದರೂ, ವಾಸ್ತವಿಕವಾಗಿಯೂ ಅವು ಅನಂತವಾದ ಪರಿಣಾಮಾವಸ್ಥೆಯಲ್ಲಿ-ನಿರಂತರವೂ ಹರಿಯುತ್ತಿರುವ ಮಾರ್ಪಾಡೆಂಬ ಪ್ರವಾಹದಲ್ಲಿ—ಸಿಲುಕಿರುವುವೆಂದೂ ಅವನು ಅಭಿಪ್ರಾಯಪಡುತ್ತಾನೆ. ಇಲಿಯಾಟಿಕರಾದರೋ ಇದಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ತಾಳಿ ಪರಿಣಾಮವೆಂಬ ವಸ್ತುಸ್ಥಿತಿಯೇ ಮಿಥ್ಯವೆಂದೂ, ಸತ್ಯಸತ್ವ ರೂಪಾಂತರ ಹೊಂದುವುದೆಂಬುದು ಅಸಾಧ್ಯಭಾವನೆಯೆಂತಲೂ, ಒಂದು ವಸ್ತು ವಾಸ್ತವಿಕವಾಗಿಯೂ ಪರಿಣಾಮ ಹೊಂದಿ ಮತ್ತೊಂದು ವಸ್ತುವಾಯಿತೆಂದು ಹೇಳುವುದು ಅಸಿದ್ಧವೆಂದೂ, ಈ ಕಾರಣಗಳಿಂದ ಪರಿಣಾಮವೆಂಬುದು ಕೇವಲ ಮಾಯಾಕಲ್ಪಿತ, ಇಂದ್ರಿಯಗಳ ತೋರುವಿಕೆ, ಸತ್ತೆಂಬುದು ಶಾಶ್ವತ, ನಿತ್ಯ ಎಂದೂ ತೀರ್ಮಾನಿಸುತ್ತಾರೆ.

ಹಿರಾಕ್ಲಿಟಸಿನ ಬೋಧನೆಯಲ್ಲಿ ಮೂಲರೂಪವಾಗಿರುವ ಅಭಿಪ್ರಾಯವೇನೆಂದರೆ: ಜಗತ್ತೆಲ್ಲವೂ ಅನಂತವಾದ ಪಲ್ಲಟವೆಂಬ ಸ್ಥಿತಿಯಲ್ಲಿ ಸಿಕ್ಕಿಬಿದ್ದಿದೆ. "ಒಂದೇ (ಅನನ್ಯವಾದ) ನದಿಯಲ್ಲಿ ಎರಡಾವರ್ತಿ ಇಳಿಯಲಾಗುವುದಿಲ್ಲ, ಏಕೆಂದರೆ ಕ್ಷಣಕ್ಷಣವೂ ಹೊಸಹೊಸದಾದ ಜಲರಾಶಿಗಳು ಹರಿದುಹೋಗುತ್ತಿವೆ." ಈ ಉದಾಹರಣೆಯಲ್ಲಿ ವಸ್ತುಗಳ ಅನಂತಪರಿಣಾಮವೊಂದೇ ಅಲ್ಲ, ಅವಿಚ್ಛಿನ್ನವಾದ ವ್ಯಾಪಾರವೂ ದೃಷ್ಟಾಂತಕ್ಕೆ ಬರುತ್ತದೆ. ಈ ಎಡೆಬಿಡದ ಕ್ರಿಯಾಭಾವವನ್ನು ಸೂಚಿಸುವುದಕ್ಕಾಗಿಯೇ ಹಿರಾಕ್ಲಿಟಸನು ಅತ್ಯಂತ ಚಂಚಲಸ್ವರೂಪವಾದ (Mobile) ಎಂದಿಗೂ ಶಾಂತಿಯನ್ನಡೆಯದ ವಸ್ತುವಿಶೇಷವಾದ ಅಗ್ನಿಯನ್ನು ತನ್ನ ಮೂಲತತ್ವವನ್ನಾಗಿ ಆರಿಸಿಕೊಳ್ಳುತ್ತಾನೆಂದು ಹೇಳಬಹುದು. ಈ ಅಗ್ನಿಯೇ ಸಚೇತನವಸ್ತುಗಳ ಜೀವಾಂಶವೆಂದು ಆತನ ಅಭಿಮತ. ಈ ಅಗ್ನಿತತ್ವವನ್ನೇ ಕೆಲವು ಸಂದರ್ಭಗಳಲ್ಲಿ ಹಬೆ ಅಥವಾ ಪ್ರಾಣವಾಯುವೆಂದು ಹೇಳುತ್ತಾನೆ (ಅನಾಕ್ಸಿಮಿನೀಸ್ ಎಂಬ ಜ್ಞಾನಿ ವಾಯುತತ್ವದಿಂದ ಅಗ್ನಿತತ್ವ ಉತ್ಪನ್ನವಾಗುವುದೆಂದು ಹೇಳಿದ್ದನು). ಸಾವಧಾನವಾಗಿ ಪರಿಶೀಲಿಸುವವರಿಗೆ ಹಿರಾಕ್ಲಿಟಸಿನ ಮೂಲತತ್ವವಾದ ಅಗ್ನಿ

ನಮ್ಮ ಅನುಭವಸಿದ್ಧವಾದ ಪಂಚಭೂತಗಳಲ್ಲೊಂದಾದ ಅಗ್ನಿಯೆಂದು ತೋರಿಬರದು. ಪ್ರಾಯೇಣ ಅಗ್ನಿ ಎಂದರೆ ತೇಜಸ್ಸು ಅಥವಾ ಜ್ಯೋತಿ ಎಂಬ ಅಗ್ನಿತನ್ಮಾತ್ರವೆಂದು ಅವನು ಅರ್ಥಮಾಡಿರಬೇಕು. ಅಥವಾ ಹಿರಾಕ್ಲಿಟಸಿನ ಸಿದ್ಧಾಂತಕ್ಕೆ ಸಮಂಜಸವಾಗಿ, ಅಗ್ನಿತತ್ವವೆಂದರೆ ವಸ್ತು ಅಥವಾ ದ್ರವ್ಯವೆಂಬ ಭಾವಕ್ಕೆ ವಿರೋಧವಾದ, ಎಡೆಬಿಡದ ಕ್ರಿಯಾ ಭಾರ — ಅವಸ್ಥಾಸ್ಥಿತಿ; ವಸ್ತುವಿಶೇಷವಲ್ಲ — ಶುದ್ಧ ಕ್ರಿಯತ್ವವೆಂದು ನಾವು ತಿಳಿಯಬೇಕು.

ಅಗ್ನಿ ನೀರಾಗಿಯೂ ತದನಂತರ ಪೃಥಿವಿಯಾಗಿಯೂ ಪರಿಣಮಿಸುತ್ತದೆ; ಕಡೆಯಲ್ಲಿ ಪೃಥಿವಿ ನೀರಾಗಿಯೂ ತದನಂತರ ಅಗ್ನಿಯಾಗಿಯೂ ಪುನಃ ಪರಿಣಾಮವಾಗುತ್ತದೆ. ಏಕೆಂದರೆ "ಸೃಷ್ಟಿ ಲಯಗಳೆರಡೂ–ವಿಕಾಸ ಸಂಕೋಚ ಮಾರ್ಗಗಳೆರಡೂ–ಒಂದೇ". "ಚಿನ್ನದ ಸಲುವಾಗಿ ಪದಾರ್ಥಗಳನ್ನೂ, ಪದಾರ್ಥಗಳ ಸಲುವಾಗಿ ಚಿನ್ನವನ್ನೂ ಬದಲುಮಾಡುವಂತೆ ಅಗ್ನಿಯ ಸಲುವಾಗಿ ಸಮಸ್ತ ವಸ್ತುಗಳೂ, ಇವುಗಳ ಸಲುವಾಗಿ ಅಗ್ನಿಯೂ ಬದಲಾಗುತ್ತವೆ". ಪ್ರತಿಕ್ಷಣವೂ ವಸ್ತುಗಳಲ್ಲುಂಟಾಗುತ್ತಿರುವ ಬದಲಾವಣೆಗಳನ್ನೂ ವ್ಯಾಪಾರಗಳನ್ನೂ ನಮ್ಮ ಚಕ್ಷುರೇಂದ್ರಿಯಗಳಿಂದ ಅನುಭವ ಮಾಡಿಕೊಳ್ಳಲು ಸಾಧ್ಯವಿಲ್ಲದುದರಿಂದ ಪದಾರ್ಥಗಳು ಸ್ಥಿರರೂಪದಲ್ಲಿ ನಮಗೆ ಕಾಣುತ್ತವೆ. ಅಲ್ಲದೆ ಪದಾರ್ಥಗಳು ತಾವು ಒಂದುವಿಧವಾಗಿ ಕಳೆದುಕೊಂಡುದನ್ನೆಲ್ಲಾ ಮತ್ತೊಂದು ವಿಧದಲ್ಲಿ ಸಂಪಾದಿಸಿಕೊಳ್ಳುತ್ತವೆ: ಸೂರ್ಯನು ಅಸ್ತಮಿಸಿದ ಹಾಗೆಲ್ಲಾ ಆತನ ಜ್ವಾಲೆ ಆರಿಸಲ್ಪಟ್ಟು, ಉದಯಿಸಿದಾಗೆಲ್ಲಾ ಪುನಃ ಹಚ್ಚಲ್ಪಡುವುದರಿಂದ, ಆತನು ದಿನಂಪ್ರತಿಯೂ ಹೊಸ ಜ್ಯೋತಿಯೆಂದೇ ಹೇಳಬೇಕು.

ಆದಿತತ್ವ ಸದಾ ಚಲಿಸುತ್ತ ಪರಿಣಾಮಹೊಂದುತ್ತಿರುತ್ತದೆ; ಎಂದಿಗೂ ತಟಸ್ಥವಾಗುವುದಿಲ್ಲ. ಅದರ ಸೃಷ್ಟಿಯೇ ಲಯ, ಅದರ ಲಯವೇ ಸೃಷ್ಟಿ. ಅಂದರೆ ಒಂದು ರೂಪದಿಂದ ಮತ್ತೊಂದು ರೂಪವನ್ನು ಹೊಂದುವಾಗ—ಅಗ್ನಿಯಿಂದ ಜಲವಾಗುವಾಗ—ಮೊದಲಿನ ರೂಪ ಅದೃಶ್ಯವಾಗಿ ಹೊಸ ರೂಪವೊಂದು ವ್ಯಕ್ತವಾಗುತ್ತದೆ. ಅಗ್ನಿ ಜಲ

ವೆಂಬ ಹೊಸಸ್ಥಿತಿಯಲ್ಲಿ ತನ್ನ ಅಗ್ನಿರೂಪವನ್ನು ನೀಗುತ್ತದೆ. ಹೀಗೆ ಪ್ರತಿಯೊಂದು ವಸ್ತುವೂ ಆದರ ಪ್ರತ್ಯವಸ್ಥೆಯನ್ನು—ವಿರುದ್ಧಸ್ಥಿತಿಯನ್ನು—ತಾಳುತ್ತಿರುತ್ತದೆ. ಆದುದರಿಂದ ಪ್ರತಿಯೊಂದು ವಸ್ತುವೂ ವಿರುದ್ಧಗುಣಗಳ ಸಂಗಮ, ದ್ವಂದ್ವಗಳ ಸಂಯೋಗ; ಯಾವುದೂ ತನ್ನ ನೈಜಗುಣಗಳಲ್ಲಿಯೇ ನಿಲ್ಲುವುದಿಲ್ಲ, ಅವಿನಶ್ವರದ ಗುಣಗಳನ್ನು ಹೊಂದಿರುವುದು ಯಾವುದೂ ಇಲ್ಲ. ಈ ಪರ್ಯಾಯದಲ್ಲಿ ಪ್ರತಿಯೊಂದು ವಸ್ತುವೂ ಇದೆಯೆಂತಲೂ ಹೇಳಬಹುದು, ಇಲ್ಲವೆಂತಲೂ ಹೇಳಬಹುದು. ಅದರ ಪ್ರಕೃತಸ್ಥಿತಿಯನ್ನು ಕುರಿತು ಏನನ್ನು ಹೇಳಬಹುದೋ ಅದನ್ನೆಲ್ಲಾ ಆದರ ವಿರೋಧಪರವಾಗಿಯೂ ಹೇಳಬಹುದು. ಇಂಥ ವಿರೋಧವೇ—ಪರ್ಯವಸ್ಥೆಯೇ—ಪ್ರಪಂಚದ ಮೂಲಾಧಾರ. ಪ್ರಪಂಚದಲ್ಲಿ ಕಂಡುಬರುವ ಶಾಂತಿ–ಸಮ್ಮೇಲನ–ಸಮಾಕರಣವೆಲ್ಲ ಈ ಪರ್ಯವಸ್ಥೆಯ ಫಲವೇ ಆಗಿದೆ. ಹೇಗೆಂದರೆ ಎಲ್ಲಿ ವಿರೋಧಭಾವಕ್ಕೆ ಎಡೆಯಿಲ್ಲವೋ ಅಲ್ಲಿ ಶಾಂತಿಯೆಂಬುದು ಅಸಂಬದ್ಧ, ಎಲ್ಲಿ ವಿರೋಧಗಳು ಒಂದಕ್ಕೊಂದು ಸಮಶಕ್ತಿಯುಳ್ಳವುಗಳಾಗಿರುವುವೋ ಅಲ್ಲಿ ಶಾಂತಿ ಸದಾ ನೆಲಸಿರುವುದು. ಸಂಗೀತದಲ್ಲಿ, ರಾಗಸಾಮರಸ್ಯ ಎಂದರೇನು? ಆರೋಹಣ ಅವರೋಹಣ ಧ್ವನಿಗಳ ಸಂಯೋಗವೇ; ಅಂದರೆ ದ್ವಂದ್ವಗಳ—ವಿರೋಧಗಳ—ಸಂಗಮವೇ ರಾಗಸಮಾಕಾರವೆಂದೆನಿಸುವುದು.

ಇದೇಕಾರಣದಿಂದ ಪ್ರಪಂಚ ವಿರೋಧಗಳ ಪರಸ್ಪರ ಹೋರಾಟವೆಂಬ ಆಡಳಿತಕ್ಕೆ ಸಿಕ್ಕಿಬಿದ್ದಿದೆಯೆಂದು ಹೇಳಬೇಕು. "ಯುದ್ಧವೇ (ಹೋರಾಟವೇ) ಸರ್ವ ಲೋಕದ ತಂದೆ, ಸರ್ವ ಜಗತ್ತಿನ ದೊರೆ." ಈ ಹೋರಾಟ—ಈ ಪರಸ್ಪರ ವಿರೋಧ—ಇಲ್ಲದಿದ್ದರೆ ಪ್ರಪಂಚ ಅದೃಶ್ಯವಾಗುತ್ತಿತ್ತು–ಇದ್ದಲ್ಲಿಯೇ ಕೊಳೆತು ಹಾಳಾಗಿಹೋಗುತ್ತಿತ್ತು. ಯಾವುದಾದರೊಂದು ಕಷಾಯ (ಅರಿಷ್ಟ, ಆಸವ) ಕೂಡ ಚೆನ್ನಾಗಿ ಕಲಕದಿದ್ದರೆ ಅದರಲ್ಲಿ ಬಿದ್ದಿರುವ ದಿನಸುಗಳೆಲ್ಲಾ ಪ್ರತ್ಯೇಕಿಸಿಕೊಳ್ಳುತ್ತವೆ. ಈ ವಿರೋಧ ವಿಪರ್ಯಾಸಗಳೆಲ್ಲಾ ಒಟ್ಟುಗೂಡುವುದರಿಂದ ಸಾಮರಸ್ಯ ವುಂಟಾಗುತ್ತದೆ: ವಾಸ್ತವಿಕವಾಗಿಯೂ, ಈ ವಿರೋಧ, ವಿಪರ್ಯಾಸ, ಪರಿಣಾಮ, ಚಲನಕ್ರಿಯಕಾರಿತ್ವಗಳಿಲ್ಲದಿದ್ದರೆ ಈ ತೆರನಾದ ಕ್ರಮ ಸಮಾ

ಚೀನತೆಗಳಿರುತ್ತಿರಲಿಲ್ಲ. ಕಟ್ಟಕಡೆಯಲ್ಲಿ ಈ ವಿರೋಧಗಳೆಲ್ಲವೂ ವಿಶ್ವ ಮೂಲತತ್ವದಲ್ಲಿ ಒಂದುಗೂಡುತ್ತವೆ: ಆಗ ಸೃಷ್ಟಿಯೆಲ್ಲವೂ ಪ್ರಥಮಸ್ಥಿತಿ ಯಾದ ಅಗ್ನಿಗೆ ಹಿಂದಿರುಗುತ್ತದೆ. (ಈ ಅಗ್ನಿಯೇ ವಿಶ್ವ ಜಗತ್ತಿನಲ್ಲಿ ತೋರುವ ನ್ಯಾಯ ಅಥವಾ ಧರ್ಮ). ಮರಳಿ ಈ ವಿಧವಾದ ಗತಿ ಆರಂಭ ವಾಗುತ್ತದೆ. ಹೀಗೆಂದಮೇಲೆ ಹಿತ-ಅಹಿತ, ದುಷ್ಟ-ಶಿಷ್ಟ ಎರಡೂ ಒಂದೇ ಆಯಿತು; ಜನನ, ಮರಣ; ಜಾಗ್ರುತೆ, ನಿದ್ರೆ; ಯೌವನ, ವಾರ್ಧಿಕ್ಯ— ಈ ದ್ವಂದ್ವಗಳೆಲ್ಲಾ ಒಂದೇ; ಏಕೆಂದರೆ ಈ ದ್ವಂದ್ವಗಳಲ್ಲಿ ಒಂದು ಮತ್ತೊಂದಾಗಿ ಪರಿಣಮಿಸುತ್ತದೆ. "ಈಶ್ವರನ ದೃಷ್ಟಿಯಲ್ಲಿ ಎಲ್ಲವೂ ನ್ಯಾಯವೆ, ಎಲ್ಲವೂ ಸುಂದರವೆ, ಎಲ್ಲವೂ ಒಳ್ಳೆಯದೆ, ಏಕೆಂದರೆ ಅವನು ಸಮಸ್ತ ವಸ್ತುಗಳನ್ನೂ ಅವು ಯಾವರೀತಿಯಲ್ಲಿರಬೇಕೋ ಆ ಸ್ಥಿತಿಯ ಲ್ಲಿಡುತ್ತಾನೆ; ಪ್ರತಿ ಒಂದು ವಸ್ತುವನ್ನೂ ಆತನ ವಿಶ್ವಜಗತ್ತಿನ ಸಮ್ಮೇಲ ನಕ್ಕೆ ಸರಿಹೋಗುವಂತೆ ಪರಿಪೂರ್ಣ ಮಾಡುತ್ತಾನೆ. ಲೋಕದ ಜನ ರಾದರೋ ಆತನ ಆಳಿಕೆಯಲ್ಲಿ ಕೆಲವು ನ್ಯಾಯುವಾದುವೆಂದೂ, ಮತ್ತೆ ಕೆಲವು ನ್ಯಾಯರಹಿತವಾದುವೆಂದೂ ಭಾವಿಸುತ್ತಾರೆ."

ಈ ಕಾರಣದಿಂದ ವಿಶ್ವವ್ಯಾಪಾರ ಆಕಸ್ಮಿಕವೆಂದಾಗಲಿ ನಿಯಮ ರಹಿತವಾದುದೆಂದಾಗಲಿ ಹೇಳಕೂಡದು. ಅದು 'ನಿಯಮಿತ ಪರಿಮಾ ಣಕ್ಕೆ' ಅನುಸಾರವಾಗಿ ನಡೆಯುತ್ತದೆ. ಅಂದರೆ ಪ್ರಕೃತಿ ನಿಬಂಧನೆ ಗಳನ್ನೆಡೆಬಿಡದೆ ಹಿಂಬಾಲಿಸುತ್ತದೆ. "ಈ ಒಂದು ಪ್ರಕೃತಿ ವ್ಯಾಪಾರ ಕ್ರಮ (ಧರ್ಮ) ದೇವತೆಗಳಲ್ಲಾಗಲಿ, ಮಾನವರಲ್ಲಾಗಲಿ ಯಾರೂ ಸೃಜಿ ಸಿದುದಲ್ಲ; ಅದು ಆದಿಮಧ್ಯಾಂತರಹಿತವಾದದ್ದು, ನಿಯಮಿತ ಪರಿಮಾಣ ಕ್ಕನುಸಾರವಾಗಿ ಬೆಳಗುತ್ತ, ತದನುಸಾರವಾಗಿ ಅಳಿದುಹೋಗುತ್ತ, ತಿರುಗುವ ಕ್ಷರರಹಿತವಾದ ಜ್ಯೋತಿ." ಅಂದರೆ ನಿಯಮ ನಿಬಂಧನ ಬದ್ಧವಾದ ಈ ಪ್ರಕೃತಿಯನ್ನು ಯಾರೂ ಎಂದೂ ಸೃಜಿಸಿದರೆಂದು ಹೇಳುವು ದಕ್ಕಾಗುವುದಿಲ್ಲ. ಅದು ತನ್ನಲ್ಲಿ ಅಂತರ್ಗತವಾಗಿರುವ ಧರ್ಮಕ್ಕನುಸಾರ ವಾಗಿ ಸ್ವಯಂಸೃಜಿತವಾಗಿ ಪ್ರಕಾಶವಾಗುತ್ತಲೂ, ಸ್ವಯಂಲಯವಾಗಿ ಅಳಿಸಿಹೋಗುತ್ತಲೂ, ಹಿಂದೆ ನಾವು ಹೇಳಿದ ವ್ಯುತ್ಕ್ರಮ ಸೃಷ್ಟಿ ಲಯಧರ್ಮವನ್ನು ಅನುಸರಿಸುತ್ತದೆ. ಹೀಗೆಂದಮೇಲೆ ಹಿರಾಕ್ಲಿಟಸಿನ

ವಿಶ್ವವ್ಯಾಪಾರ ಪ್ರಾಚೀನ ಬೌದ್ಧತತ್ತ್ವದ ಧರ್ಮಕ್ಕೆ ಸಮನಾಯಿತು. (ಒಂದು ಪರ್ಯಾಯದಲ್ಲಿ ನಮ್ಮ ಸಾಂಖ್ಯದರ್ಶನದ ಮೂಲ ಪ್ರಕೃತಿಗೂ ಸಮನಾಯಿತು. ಹೇಗೆಂದರೆ ಸಾಂಖ್ಯಪ್ರಕೃತಿಯಲ್ಲಿರುವ ಮಹತ್ತೆಂಬುದೆ ಹಿರಾಕ್ಲಿಟಸಿನ ವಿಶ್ವವ್ಯಾಪಾರದ 'ನಿಯಮಿತಪರಿಮಾಣ' ಅಥವಾ ಕ್ರಮ–ಧರ್ಮವಾಯಿತು. ಸಾಂಖ್ಯಪ್ರಕೃತಿಯಂತೆಯೇ ಹಿರಾಕ್ಲಿಟಸಿನ ಪ್ರಕೃತಿಯೂ ಶುದ್ಧ ಕ್ರಿಯಾಸ್ವರೂಪವಾದುದು(Pure activity). ಸಾಂಖ್ಯಸಿದ್ಧಾಂತದ ಪುರುಷನೇ ಹಿರಾಕ್ಲಿಟಸಿನ ಸಿದ್ಧಾಂತದಲ್ಲಿರುವ ಈಶ್ವರ—ಸೃಷ್ಟಿಕರ್ತನಲ್ಲ, ಸೃಷ್ಟಿಧರ್ಮವನ್ನು ಜರುಗಿಸುವ ಮೇಲ್ವಿಚಾರಕ). ಬೌದ್ಧತತ್ತ್ವದಲ್ಲಿರುವಂತೆಯೇ ಜಗತ್ತೆಲ್ಲವೂ ಅಶಾಶ್ವತ, ಕ್ಷಣಭಂಗುರವಾದುದು; ಪ್ರತಿಕ್ಷಣದಲ್ಲಿಯೂ ಪರಿಣಾಮಾವಸ್ಥೆಗೆ ಸಿಲುಕಿದುದು. ಹಿರಾಕ್ಲಿಟಸಿನ ಮೂಲತತ್ತ್ವವಾದ ಅಗ್ನಿಯಂತೆಯೇ ಬೌದ್ಧರೂ ಜಗತ್ತಿನ ಪರಿಣಾಮಸ್ಥಿತಿಯನ್ನೂ ಕ್ಷಣಭಂಗುರತೆಯನ್ನೂ ಸೂಚಿಸುವ ಸಲುವಾಗಿ ಮೇಣದ ಬೆಳಕನ್ನೂ ಹರಿಯುವ ನದಿಯನ್ನೂ ದೃಷ್ಟಾಂತವಾಗಿ ತೆಗೆದುಕೊಳ್ಳುತ್ತಾರೆ. ಹಿರಾಕ್ಲಿಟಸಿನ ಪ್ರಕೃತ್ಯಂತರ್ಗತ ಧರ್ಮವೇ (ನಿಯಮಿತಪರಿಮಾಣ) ಬೌದ್ಧರ ಕರ್ಮವೆಂಬ ಪ್ರಪಂಚದ ಧರ್ಮ.

ಈ ಸ್ವಾಭಾವಿಕ ಧರ್ಮವನ್ನೇ ಹಿರಾಕ್ಲಿಟಸನು ಕೆಲವು ವೇಳೆ "ದೈವಯೋಗ"ದ ಅಥವಾ "ನ್ಯಾಯದೇವತೆ"ಯ ಫಲವೆಂದು ಹೇಳುತ್ತಾನೆ. ಇದರಿಂದ ಪ್ರಕೃತಿವ್ಯಾಪಾರ ನಿರರ್ಗಳವಾದ ವಿಧಿವಶವೆಂದೂ (necessity) 'ಸ್ವೇಚ್ಛಾಪ್ರವೃತ್ತಿರಹಿತವಾದುದೆಂದೂ ಸೂಚಿಸಿದಂತಾಯಿತು. ವಿಶ್ವವ್ಯಾಪಾರವೆಲ್ಲವೂ ಪರಿಣಾಮಮಯವೂ ಕ್ಷಣಿಕವೂ ಆಗಿರುವುದು ಸರಿಯಷ್ಟೆ; ಈ ಪರಿಣಾಮ ರಾಶಿಯಲ್ಲೆಲ್ಲಾ, ಈ ತೆರಪಿಲ್ಲದೆ ವಿನಾಶವಾಗುತ್ತಿರುವ ಕ್ಷರಪ್ರಪಂಚದಲ್ಲೆಲ್ಲಾ, ಈ ವಿರೋಧ ವಿಪರ್ಯಾಸಗಳ ಮಧ್ಯದಲ್ಲೆಲ್ಲಾ, ಅಕ್ಷರವಾಗಿಯೂ, ಅವಿಚ್ಛಿನ್ನವಾಗಿಯೂ ಆಳತಕ್ಕದ್ದು, ಸಮಸ್ತ ದ್ವಂದ್ವ ಪರ್ಯವಸ್ಥೆ ಪರಿಣಾಮ ಗತಿ ಚಲನೆಗಳಿಗೂ ಮೂಲಾಧಾರವಾದ ಈ 'ನಿಯಮಿತಪರಿಮಾಣ' ಅಥವಾ ಸ್ವಾಭಾವಿಕ ಧರ್ಮ(ಕ್ರಮ)ಒಂದೇ; ಇದೇ ಪ್ರಪಂಚವಸ್ತುಗಳಲ್ಲಿರುವ ಪ್ರಜ್ಞಾನ

ಅಥವಾ ಪರಿಜ್ಞಾನ— ನಿಗೂಢವಾದ ಚಿತ್ತವಿಶೇಷ — ಎಂದೆನಿಸಲ್ಪಡುವುದು. ಇದೇ ಅಂಡ ಪಿಂಡ ಬ್ರಹ್ಮಾಂಡಗಳನ್ನಾಳುವ ವಿಶ್ವಜಗತ್ತಿನ ಈಶ್ವರನೆಂದೆನಿಸಲ್ಪಡುವುದು. ಆದುದರಿಂದ ಹಿರಾಕ್ಲಿಟಸಿನ ಮೂಲತತ್ವ ಜ್ಞಾನೈಕಕಾರಣವಾದುದು; ಜಡವಾದ ಪಂಚಭೂತಗಳಲ್ಲಿ ಒಂದಲ್ಲ, ಸಚೇತನವೂ ಜ್ಞಾನಮಯವೂ ಆದುದು. "ಸರ್ವವನ್ನೂ ವಿಶ್ವಜಗತ್ತಿನ ಸಮ್ಮೇಳನಕ್ಕೆ ಸಾಟಿಹೊಂದುವಂತೆ ಸುಸೂತ್ರವಾಗಿ ನಡಸುವ ಆ ಚಿತ್ಸ್ವರೂಪವನ್ನರಿತುಕೊಳ್ಳುವುದೊಂದೇ ನಿಜವಾದ ವಿವೇಕ." ಪಾಶ್ಚಾತ್ಯಪಂಡಿತರಲ್ಲಿ ಕೆಲವರು ಹಿರಾಕ್ಲಿಟಸನು ತನ್ನ ಮೂಲತತ್ವವನ್ನು ಸ್ವಯಂಪ್ರಜ್ಞೆಯುಳ್ಳ ಚಿತ್ತಾಗಿ ಎಣಿಸಲಿಲ್ಲವೆಂದು ಅಭಿಪ್ರಾಯಪಡುತ್ತಾರೆ: ಆದರೆ ಈ ವಿಧವಾದ ಅಭಿಪ್ರಾಯ ಈ ಪಂಡಿತೋತ್ತಮರ ಡೊಂಕು ಬುದ್ಧಿಯನ್ನು ನಿದರ್ಶಿಸುವುದೇ ವಿನಾ ಸೂಕ್ಷ್ಮತತ್ವಜ್ಞನಾದ ಹಿರಾಕ್ಲಿಟಸಿನ ಬೋಧನೆಗೆ ಕುಂದನ್ನೇನೂ ಉಂಟುಮಾಡುವುದಿಲ್ಲ.

ಈ ವಿಧವಾದ ವಿಶ್ವಸಿದ್ಧಾಂತವನ್ನೇ ಹಿರಾಕ್ಲಿಟಸನು ತನ್ನ ಮನಶ್ಶಾಸ್ತ್ರಕ್ಕೂ ನೀತಿಶಾಸ್ತ್ರಕ್ಕೂ ತಳಹದಿಯನ್ನಾಗಿ ಮಾಡುತ್ತಾನೆ. ಮನುಷ್ಯನ ಜೀವಾತ್ಮ ವಿಶ್ವಾತ್ಮದ (Universal Soul) ಒಂದು ಭಾಗ; ಅದರಿಂದ ಪೋಷಣೆ ಹೊಂದತಕ್ಕದ್ದು. ಉಚ್ಛ್ವಾಸದಿಂದಲೂ ಪಂಚೇಂದ್ರಿಯಗಳ ಮೂಲಕವೂ ಆ ವಿಶ್ವಾತ್ಮವನ್ನು ನಾವು ಪ್ರತಿ ಕ್ಷಣವೂ ಆಸ್ವಾದನೆಮಾಡುತ್ತೇವೆ. ಯಾವ ಜೀವ ಅತ್ಯಂತ ಉಷ್ಣಸ್ಥಿತಿಯಲ್ಲಿದ್ದು ಜಲರಹಿತವಾಗಿರುವುದೋ ಅದೇ ಶ್ರೇಷ್ಠತಮವಾದ ಜೀವ, ಮತ್ತು ಅಗ್ನಿತತ್ವಮೂಲವಾದ ವಿಶ್ವಾತ್ಮಕ್ಕೆ ಸಮಾನವಾಗಿರುವಂತಹುದು (ಜಲರಹಿತವಾಗಿ ಉಷ್ಣಸ್ಥಿತಿಯಲ್ಲಿರುವುದೆಂದರೆ ಇಂದ್ರಿಯನಿಗ್ರಹಮಾಡಿ ರಾಗದ್ವೇಷಾದಿಗಳೆಂಬ ಅರಿಷಡ್ವರ್ಗಗಳಿಂದ ಬಿಡುಗಡೆ ಹೊಂದಿರತಕ್ಕದ್ದು ಎಂದು ಅರ್ಥ). ಇಂದ್ರಿಯಲಬ್ಧವಾದ ಜ್ಞಾನ ಸ್ವಾಭಾವಿಕ ಬುದ್ಧಿಗಿಂತಲೂ ಕೀಳಾದುದು; ಚಕ್ಷುರಾದಿಂದ್ರಿಯಗಳು ಪ್ರಾಮಾಣಿಕವಲ್ಲ— ಅಂದರೆ ವಿವೇಚನಾರಹಿತವಾದ ಇಂದ್ರಿಯಜ್ಞಾನದಿಂದ ಗುಪ್ತವಾಗಿರುವ ಸತ್ಯವನ್ನು ತಿಳಿಯಲಾಗುವುದಿಲ್ಲ.

ಮನುಷ್ಯನಲ್ಲಿ ಪ್ರಧಾನಾಂಶವಾಗಿರತಕ್ಕದ್ದು ಆತ್ಮವೇ. ಈ ಆತ್ಮ ಈಶ್ವರಾತ್ಮಕ್ಕೆ ಸಂಬಂಧಪಟ್ಟದ್ದು. ಮನುಷ್ಯನು ಸರ್ವ ವಸ್ತುಗಳಲ್ಲಿಯೂ ಅಂತರ್ಗತವಾದ ಈ ಪ್ರಕೃತಿಧರ್ಮಕ್ಕೆ, ಈ ವಿಶ್ವಚಿತ್ತಿಗೆ, ಅಧೀನನಾಗಿರಬೇಕು. ವಿವೇಚನಾಪೂರ್ವಕವಾದ ಜ್ಞಾನಬದ್ಧವಾದ ಜೀವನವನ್ನು ನಡಸುವುದೇ ಧರ್ಮಮಾರ್ಗಾವಲಂಬನ. ಈ ಜ್ಞಾನ ಸಾರ್ವಜನಿಕವಾದುದು — ವಿಶ್ವಜಗತ್ತಿಗೆಲ್ಲಾ ಏಕಮಾತ್ರವಾದುದು. ಧರ್ಮವನ್ನು ಗೌರವಿಸಿ, ಇಂದ್ರಿಯನಿಗ್ರಹಮಾಡಿ, ಶಮದಮಾದಿಗಳನ್ನು ಹೊಂದಿರುವುದೇ–ಜ್ಞಾನಬದ್ಧವಾದ ನಡತೆಯನ್ನು ಪಡೆದಿರುವುದೇ–ಸದಾಚಾರ(Morality)ಎನಿಸುವುದು. "ತಮ್ಮ ಪ್ರಾಣರಕ್ಷಣೆಗೆ ಬಡಿದಾಡುವಂತೆ ತಮ್ಮ ಸ್ವಧರ್ಮಕ್ಕೆ ಜನರು ಬಡಿದಾಡಲೇಬೇಕು." "ಸೌಶೀಲ್ಯವೇ ಮನುಷ್ಯನ ರಕ್ಷಕದೇವತೆ." "ದಾವಾಗ್ನಿಯನ್ನಾರಿಸುವಂತೆಯೇ ವಿಷಯಲಂಪಟತ್ವವನ್ನೂ ಕಾತರತೆಯನ್ನೂ ಅಡಗಿಸಬೇಕು." "ಇಂದ್ರಿಯನಿಗ್ರಹವೆಂಬುದು ಅತಿ ದುಸ್ಸಾಧ್ಯ, ಏಕೆಂದರೆ ಇಂದ್ರಿಯ ಏನನ್ನು ಬಯಸುತ್ತದೆಯೋ ಅದು ಆತ್ಮವನ್ನು ಮಾರಿಕೊಳ್ಳುತ್ತದೆ." "ಧೀಮಂತನೂ ಶ್ರೇಷ್ಠತರನೂ ಆದ ಮಾನವನೊಬ್ಬನಿದ್ದರೆ ಅವನನ್ನು ಸಾವಿರ ಆಳಂತೆ ನಾನು ಭಾವಿಸುತ್ತೇನೆ."

## (೨) ಇಲಿಯಾಟಿಕರ ಮತ

ಹಿರಾಕ್ಲಿಟಸನು ವಸ್ತುಪರಿಣಾಮ ಮತ್ತು ಚಲನೆ ಇವುಗಳೇ ಮುಖ್ಯ ತತ್ವಗಳೆಂದು ಬೋಧಿಸಿದನು. ಇಲಿಯಾಟಿಕರು ಇದರ ವಿರೋಧ ಪಕ್ಷವನ್ನು ವಹಿಸಿ ಪರಿಣಾಮ ಮತ್ತು ಚಲನೆ ಎಂಬ ಭಾವಗಳು ಅಚಿಂತ್ಯವೆಂದೂ ಪ್ರಪಂಚದ ಮೂಲತತ್ವ ಅವ್ಯಯವೂ ಅಚಲವೂ ಪರಿಣಾಮರಹಿತವೂ ಆಗಿರಬೇಕೆಂದೂ ಸಾಧಿಸುವರು. ದಕ್ಷಿಣ ಇಟಲಿಯಲ್ಲಿರುವ, ಈ ಶಾಖೆಯ ಸ್ಥಾಪಕನಾದ ಪಾರ್ಮಿನೈಡೀಸ್ ಎಂಬ ಜ್ಞಾನಿಯ ವಾಸಸ್ಥಾನವಾದ, ಇಲಿಯ ಎಂಬ ಪಟ್ಟಣದಿಂದ ಈ ಶಾಖೆಯವರಿಗೆ ಇಲಿಯಾಟಿಕರು ಎಂಬ ಹೆಸರು ಬಂದಿತು. ಈ ತತ್ವವಿಕಾಸದಲ್ಲಿ ಮೂರು ಪ್ರಸ್ಥಾನಗಳನ್ನು ಕಾಣಬಹುದು. (೧) ಇದರ ಮೂಲಪುರುಷನಾದ

ಕ್ಸೆನೊಫನೀಸ್ ಎಂಬವನು ಇದರ ಪ್ರಧಾನತತ್ವವನ್ನು ದೇವಜ್ಞಾನ ಶಾಸ್ತ್ರ (Theology) ರೀತಿಯಾಗಿ ಬೋಧಿಸುವನು. (೨) ಪಾರ್ಮೆನೈಡೀಸ್ ಎಂಬವನು ಅದನ್ನು ಸ್ಥಿತಿತತ್ವಶಾಸ್ತ್ರವನ್ನಾಗಿ(Ontology)ಬೆಳಸಿ ದರ್ಶನವನ್ನು ಪೂರ್ತಿಗೊಳಿಸುತ್ತಾನೆ. (೩) ಜೀನೋ ಮತ್ತು ಮೆಲಿಸ್ಸಸ್ ಎಂಬವರು ಈ ಸಿದ್ಧಾಂತರಕ್ಷಕರಾಗಿ ತಮ್ಮ ತರ್ಕವಾದಗಳಿಂದ ಪೂರ್ವ ಪಕ್ಷದವರನ್ನೆಲ್ಲಾ ಸೋಲಿಸುವರು.

ಕ್ಸೆನೊಫನೀಸನು ಬಹುತರವಾಗಿ ಮತಸಿದ್ಧಾಂತಿಯೇ ಹೊರತು ತತ್ವವಿಮರ್ಶಕನೆಂದು ಹೇಳಲಾಗುವುದಿಲ್ಲ. ಪೈಥಾಗೊರಾಸಿನಂತೆಯೇ ಈತನು ತನ್ನ ಕಾಲದ ಮತಸುಧಾರಣೆಯ ಚಳವಳಿಯ ಸಂಸ್ಕಾರಕ್ಕೆ ಒಳಪಟ್ಟವನಾದನು. ತನ್ನ ಕಾಲದಲ್ಲಿ ಹರಡಿದ್ದ ಬಹುದೈವಾರಾಧನೆಯನ್ನೂ (Polytheism) ಅದಕ್ಕೆ ಸಂಬಂಧಿಸಿದ ದೈವಮಾನವಾಧ್ಯಾರೋಪವನ್ನೂ (Anthropomorphism)ಖಂಡಿಸಿ ಈಶ್ವರನ ಏಕತ್ವವನ್ನೂ(Unity) ಅಕ್ಷರತ್ವವನ್ನೂ ನಿರ್ವಿಕಾರತೆಯನ್ನೂ(Unchangeableness) ಉದ್ಘೋಷಿಸುತ್ತಾನೆ. "ಆದರೆ ಮಾನವರೋ ತಮ್ಮಂತೆಯೇ ದೇವತೆಗಳು ಹುಟ್ಟುವರೆಂದೂ ತಮ್ಮ ರೂಪವನ್ನೇ ಧರಿಸುವರೆಂದೂ ಭಾವಿಸುತ್ತಾರೆ. ನಿಜವೇ ಸರಿ; ಹಾಗೆಯೇ ಎತ್ತುಗಳೂ ಸಿಂಹಗಳೂ ಇತರ ಪ್ರಾಣಿಗಳೂ ಹಸ್ತಗಳನ್ನು ಹೊಂದಿ ಮನುಷ್ಯರಂತೆಯೇ ಚಿತ್ರಬರೆಯುವುದನ್ನು ತಿಳಿದಿದ್ದರೆ ಅಶ್ವಗಳು ದೇವತೆಗಳನ್ನು ಅಶ್ವಗಳಹಾಗೂ ಎತ್ತುಗಳು ಎತ್ತುಗಳಹಾಗೂ ಚಿತ್ರಿಸುತ್ತಿದ್ದುವು. ಪ್ರತಿಯೊಂದು ಪ್ರಾಣಿಯೂ ತನ್ನ ರೂಪಿನಂತೆಯೇ ದೇವತೆಗಳ ರೂಪವನ್ನು ಬರೆಯುತ್ತಿದ್ದಿತು. ಇದರಂತೆಯೇ ಈಥಿಯೋಪಿಯನರು(ಅಚ್ಚಕಪ್ಪುಜನರು) ತಮ್ಮ ದೇವರುಗಳನ್ನು ಕೃಷ್ಣವರ್ಣದವರು ಮತ್ತು ಚಪ್ಪಟೆಯಾದ ಮೂಗುಳ್ಳವರೆಂದೂ, ಥ್ರೇಷಿಯನರು ತಮ್ಮ ದೇವರು ಕೆಂಪುಕೂದಲು ಮತ್ತು ನೀಲನಯನವುಳ್ಳವರೆಂದೂ, ಭಾವಿಸುತ್ತಾರೆ." ನಿಜಾಂಶವೇನಂದರೆ ರೂಪಿನಲ್ಲಿಯೂ ಚಿತ್ತದಲ್ಲಿಯೂ ಮರ್ತ್ಯರಿಗೆ ಬೇರೆಯಾಗಿ ಈಶ್ವರನು ಅದ್ವಿತೀಯನು; ಪ್ರಯಾಸವಿಲ್ಲದೆ ತನ್ನ ಮನಶ್ಶಕ್ತಿಯಿಂದ ಆತನು ಸಮಸ್ತ ಪ್ರಪಂಚವನ್ನಾಳುತ್ತಾನೆ. ಆತನು ಒಂದೇ ಸ್ಥಳದಲ್ಲಿ ನೆಲೆಯಾಗಿದ್ದು ಅಚಲನಾಗಿರುವನು; ನಮ್ಮ ಹಾಗೆ

ಪಂಚೇಂದ್ರಿಯಗಳ ಮೇರೆಯಿಂದ ಬಾಧಿಸಲ್ಪಟ್ಟು ಅಲ್ಪಜ್ಞತೆಯಿಂದಿರದೆ ಸರ್ವಜ್ಞನಾಗಿದ್ದಾನೆ. ಆತನು ಅದ್ವಯನು, ಆದಿರಹಿತನು, ನಿತ್ಯನು. ಆತನನ್ನುಳಿದು ಬೇರೆಯಾವುದೂ ಇಲ್ಲದುದರಿಂದ ಆತನನ್ನು ಅಪಾರನೆಂದು ಹೇಳಬಹುದು. ಆದರೆ ನಿರಾಕಾರನಾದ ಅನಂತನಲ್ಲ—ಪರಿಪೂರ್ಣರೂಪವಾದ ಗೋಳಾಕಾರನೆಂದು ಹೇಳಬೇಕು. ಒಟ್ಟಿನಲ್ಲಿ ಆತನು ಅಚಲನು—ಏಕೆಂದರೆ ಆತನ ಸತ್ವಸಮಾಕಾರದೊಡನೆ (Unity of being) ಚಲನೆಯೆಂಬುದು ಸಲ್ಲದ ವಿಷಯ: ಆದರೂ ಆಂತರಿಕವಾಗಿ ಆತನ ಶರೀರದ ಅವಯವಗಳಲ್ಲಿ ಚಲನೆ ಅಥವಾ ಚಂಚಲತ್ವವಿದೆಯೆಂದು ಹೇಳಬೇಕು.

ಈಶ್ವರನು ಏಕಮಾತ್ರಸತ್ತನೂ ಸರ್ವಸ್ವನೂ ಆಗಿ ಯಾವ ಜ್ಜಗತ್ತಿನ ನಿತ್ಯಮೂಲತತ್ವವೂ ಆವಾಸಸ್ಥಾನವೂ ಆಗಿದ್ದಾನೆಂದು ಹೇಳುವುದರಿಂದ ಕ್ಸೆನೊಫನೀಸನು ವಿಶ್ವಬ್ರಹ್ಮವಾದಿಯೇ ಸರಿ (Pantheist). ಈಶ್ವರನೇ ಜಗತ್ತು; ಆತನು ಶುದ್ಧ ಆತ್ಮಸ್ವರೂಪನಲ್ಲ, ಸಜೀವ ಪ್ರಪಂಚಸ್ವರೂಪನು (ಸಪ್ರಪಂಚನು).

## ಪಾರ್ಮಿನೈಡೀಸಿನ ಸ್ಥಿತಿತತ್ವಶಾಸ್ತ್ರ (Ontology)

ಹಿರಾಕ್ಲಿಟಸನು ವಸ್ತುಪ್ರಪಂಚವೆಲ್ಲವೂ ಸದಾ ಪರಿಣಾಮ ಹೊಂದುತ್ತಿರುವುದೆಂದೂ; ಅಗ್ನಿ ನೀರಾಗಿಯೂ; ನೀರು ಪೃಥಿವಿಯಾಗಿಯೂ ಮರಳಿ ಪೃಥಿವಿ ನೀರಾಗಿಯೂ ನೀರು ಅಗ್ನಿಯಾಗಿಯೂ ಪರಿಣಮಿಸುವುದೆಂದೂ ಒಂದೇ ಕಾಲದಲ್ಲಿ ವಸ್ತುಗಳಿದ್ದರೂ ಇಲ್ಲವೆನ್ನಬಹುದೆಂದೂ ಬೋಧಿಸಿದನು. ಇದು ಹೇಗೆ ಸಾಧ್ಯ? ಎಂದು ಪಾರ್ಮಿನೈಡೀಸನು ಪ್ರಶ್ನೆಮಾಡುತ್ತಾನೆ. ಒಂದೇ ವಸ್ತು ಏಕಕಾಲದಲ್ಲಿಯೇ ಇರುವುದು ಮತ್ತು ಇಲ್ಲದಿರುವುದು ಹೇಗೆ? ವಸ್ತುಗಳು ತಮ್ಮ ಸ್ವಭಾವ ಗುಣಗಳನ್ನು ಬದಲಾಯಿಸುವುದಂದರೇನು? ಒಂದು ಗುಣ ಪ್ರತ್ಯೇಕವಾದ ಮತ್ತೊಂದು ಗುಣವಾಗುವುದು ಸಾಧ್ಯವೇ? ಇದೆಲ್ಲಾ ಸಾಧ್ಯವೆಂದು ಹೇಳಿದರೆ ಒಂದಾನೊಂದು ವಸ್ತು ಇರುವುದು ಇಲ್ಲವೆಂತಲೂ, ಶೂನ್ಯದಿಂದ (Nothing) ವಸ್ತುವೊಂದು ಹುಟ್ಟುವುದೆಂದೂ ಹೇಳಿ

ದಂತಾಗುವುದು. ಸತ್ತೆಂಬುದು ಪರಿಣಮಿಸುವುದಾದರೆ, ಪರಿಣಾಮ (ರೂಪಾಂತರ) ಅಸತ್ತಿನಿಂದ ಉತ್ಪನ್ನವಾಗಿರಬೇಕು, ಇಲ್ಲವೇ ಸತ್ತಿನಿಂದಲೇ ಜನಿಸಿರಬೇಕು. ಅಸತ್ತಿನಿಂದಾದರೆ ಶೂನ್ಯದಿಂದ ಹುಟ್ಟಿರಬೇಕು. (ಇದು ಅಸಿದ್ಧ, ಹೇಗೆಂದರೆ, ಶೂನ್ಯದಿಂದ ವಸ್ತುವೊಂದು ಹುಟ್ಟಲಾರದು) ಸತ್ತಿನಿಂದಾದರೆ ಅಲ್ಲಿಗೆ ಸ್ವರೂಪದಿಂದಲೇ ಜನಿಸಿದಹಾಗಾಯಿತು: ಎಂದರೆ ತನಗೆ ತಾನೇ ಸಮವಾಯಿತು. ಸತ್ತೆಂಬುದು ವಿಕಾರವನ್ನು ಪಡೆಯಲಿಲ್ಲವೆಂದು ಹೇಳಿದಂತಾಯಿತು.

ಆದುದರಿಂದ ಸತ್ತಿನಿಂದ ಎಂದಿಗೂ ಸತ್ತೇ ಫಲಿಸುವುದು. ಯಾವ ವಸ್ತುವೂ ಸ್ವರೂಪಕ್ಕೆ ವ್ಯತಿರಿಕ್ತವಾದ ಅನ್ಯವಸ್ತುವಾಗಲಾರದು, ಸ್ಥಿತಿಯಾಗಿರುವುದೆಲ್ಲಾ ಇದುವರೆಗೂ ಹಾಗೆಯೇ ಇದ್ದಿತು, ಇನ್ನು ಮುಂದೆಯೂ ಹಾಗೆಯೇ ಇರುವುದು—ಎಂಬ ಈ ಅಂಶಗಳೆಲ್ಲಾ ಸ್ವತಸ್ಸಿದ್ಧ. ಈ ಕಾರಣದಿಂದ ಜಗತ್ತಿನಲ್ಲಿ ನಿತ್ಯ, ನಿರುತ್ಪನ್ನ, ನಿರ್ವಿಕಾರ ಸತ್ವ ಒಂದೇ ಒಂದಿರಬೇಕು. ಅದು ಸಂಪೂರ್ಣವಾಗಿ ಏಕಸ್ವರೂಪವಾಗಿರುವುದರಿಂದಲೂ, ಅದರಲ್ಲಿ ಸತ್ತುಳಿದು ಮತ್ತಾವುದೂ ಇಲ್ಲದಿರೋಣದರಿಂದಲೂ, ಅದು ಅಖಂಡ ಅವಿಚ್ಛಿನ್ನವಾಗಿರಬೇಕು. ಮತ್ತು ಅದು ಅಚಲವಾಗಿರಬೇಕು. ಏಕೆಂದರೆ, ಸತ್ತು ಭವರೂಪವನ್ನು ಧರಿಸದು; ಪರಿಣಮಿಸದು, ಅಥವಾ ಅದೃಶ್ಯವಾಗದು; ಅಲ್ಲದೆ ಅದು ಚಲಿಸುವುದಕ್ಕೆ ಪಕ್ಕಗಳಲ್ಲಾಗಲಿ ಹಿಂಭಾಗ ಮುಂಭಾಗದಲ್ಲಾಗಲಿ ಶೂನ್ಯ(ಸ್ಥಳ, ದಿಕ್, ದೇಶ) ಯಾವುದೂ ಇಲ್ಲ. ಮತ್ತು ಸತ್ತು, ಚಿತ್ತು ಎರಡೂ ಒಂದೇ, ಹೇಗೆಂದರೆ ಯಾವುದು ಚಿಂತನೀಯವಲ್ಲವೋ ಅದು ಇರದು; ಯಾವುದು ಇಲ್ಲವೋ ಅಥವಾ ಅಸತ್ತೋ ಅದು ಅಚಿಂತ್ಯ. ಎಂದರೆ ಚಿತ್ತೂ, ಸತ್ತೂ ಏಕವಾದುವು: ಯಾವುದು ಚಿಂತ್ಯವೋ ಅದು ಸತ್ತುಳ್ಳದ್ದು. ಸತ್ಯಸತ್ವ ಸಚೇತನವಾದುದು (ಚಿತ್ತುಳ್ಳದ್ದು), ಈ ಕಾರಣದಿಂದಲೂ ಸತ್ತುಚಿತ್ತು ಎರಡೂ ಒಂದೇ ಆಯಿತು.

ಸತ್ತು ಅಥವಾ ಸತ್ಯಸತ್ವ ಏಕಜಾತೀಯವೂ (Homogeneous) ಅಖಂಡವೂ ಅನಿರ್ಣೀತವೂ, ಅವ್ಯಯವೂ, ನಿರ್ವಿಕಾರವೂ, ಚಿದ್ರೂಪವೂ ಆಗಿರಬೇಕು (ಗೋಳಾಕಾರವಾಗಿದೆಯೆಂದು ಹೇಳುವುದು ಆಲಂಕಾರಿಕ

ಮಾತ್ರವೇ). ಪರಿಣಾಮವೆಲ್ಲವೂ, ಭಿನ್ನಸ್ವರೂಪವೆಲ್ಲವೂ, ಅಚಿಂತ್ಯ. ಆದುದರಿಂದ ಇಂದ್ರಿಯಪ್ರಪಂಚ ಯಥಾರ್ಥವಲ್ಲ. ಇಂದ್ರಿಯ ಗೋಚರ ವಾದುದನ್ನು ನಿಜವೆಂದೆಣಿಸುವುದು ಸತ್ತಿಗೂ ಅಸತ್ತಿಗೂ ಏಕತ್ವವನ್ನು ಹೇಳಿದಂತಾಗುವುದು. ಈ ತರ್ಕದಲ್ಲಿ ಹೇತುರೂಪವಾದ ಜ್ಞಾನವೇ ಪ್ರಾಧಾನ್ಯ: ಮಾನವ ಚಿದ್ವ್ಯಾಪಾರಕ್ಕೆ ಯಾವುದು ವಿರೋಧವೋ ಅದು ಅಸಿದ್ಧ, ಅಸತ್ಯ.

ಇಂದ್ರಿಯಜ್ಞಾನಾಧಾರದ ಮೇಲೆ ಹೇಳಿರುವ ಮತ್ತೊಂದು ಸಿದ್ಧಾಂತದ ಪ್ರಕಾರ ಪಾರ್ಮಿನೈಡೀಸನು ಸತ್ತು ಅಸತ್ತು ಎರಡೂ ನಿಜ ವೆಂದು ಒಪ್ಪಿಕೊಳ್ಳುತ್ತಾನೆ. ಇದರಿಂದ ಚಲನೆ ಪರಿಣಾಮವೆರಡೂ ಸಿದ್ಧ. ಉಷ್ಣ ಮತ್ತು ಪ್ರಕಾಶ, ಶೈತ್ಯ ಮತ್ತು ಅಂಧಕಾರ ಎಂಬ ಈ ಎರಡು ತತ್ವಗಳಿಂದ ಪ್ರಪಂಚ ಉತ್ಪನ್ನವಾಯಿತು. ಆದರೆ ಆತನ ಹೇಳಿಕೆಯ ಪ್ರಕಾರ ಇದು ಸತ್ಯಸಿದ್ಧಾಂತವಲ್ಲ. ಬರಿಯ ಇಂದ್ರಿಯಗಳ ತೋರಿಕೆ ಮಾತ್ರವೇ. ಹಿಂದೆ ಹೇಳಿದಂತೆ ಇಂದ್ರಿಯಜ್ಞಾನ ಸತ್ಯಸ್ಥಿತಿ ಯನ್ನು ಕಾಣಿಸುವುದಿಲ್ಲ.

ಪಾರ್ಮಿನೈಡೀಸಿನ ಸತ್ಯಸಿದ್ಧಾಂತದ ಪ್ರಕಾರ ಬುದ್ಧಿಬದ್ಧವಾದ ಮಾರ್ಗದಲ್ಲಿ ವಿಮರ್ಶೆಮಾಡಿದರೆ, ಪ್ರಪಂಚ ಪರಿಣಾಮರಹಿತವೂ ಅಚಲವೂ ಆದ ಏಕತ್ವವಾಗಿರಬೇಕೆಂದು ಕಂಡುಬರುವುದು. ಇಂದ್ರಿಯ ಜ್ಞಾನವನ್ನು ಆಧಾರವಾಗಿಟ್ಟುಕೊಂಡರೆ ನಾನಾವಿಧ ವಸ್ತುಪರಿಣಾಮ ಮಯುವಾಗಿರುವ ಪ್ರಪಂಚ ತೋರುವುದು: ಆದರೆ ಈ ನಾನಾತ್ವ ಪ್ರಪಂಚ ಬರಿಯ ತೋರಿಕೆಯ, ಜನಸಾಮಾನ್ಯಸಿದ್ಧವಾದ, ಪ್ರಪಂಚ ಮಾತ್ರವೇ. ಇಂಥ ಪ್ರಪಂಚ ಹೇಗೆ ಸ್ಥಿತಿಗೆ ಬಂದಿತೋ, ಇಂಥ ಪ್ರಪಂಚವನ್ನು ನಾವು ಕಾಣುವುದು ಹೇಗೆ ಸಾಧ್ಯವೋ—ಇದನ್ನು ಮಾತ್ರ ಪಾರ್ಮಿನೈಡೀಸನು ಹೇಳುವುದಿಲ್ಲ.

## ಜೀನೋ ಎಂಬವನ ತರ್ಕ ಸಿದ್ಧಾಂತ

ಇಲಿಯಾನಗರದ ರಾಜನೀತಿಕುಶಲನೂ, ಪಾರ್ಮಿನೈಡೀಸಿನ ಶಿಷ್ಯನೂ ಆದ ಜೀನೋ ಎಂಬವನು, ಇಲಿಯಾಟಿಕರ ಸಿದ್ಧಾಂತದ

ಪೂರ್ವಪಕ್ಷದ ವೈಪರೀತ್ಯವನ್ನು (ಆಭಾಸವನ್ನು) ಪ್ರದರ್ಶಿಸುವುದರ ಮೂಲಕ ಆ ಸಿದ್ಧಾಂತದ ವಿವೇಕವನ್ನು ವ್ಯಕ್ತಪಡಿಸಲು ಪ್ರಯತ್ನ ಪಡುವನು.

ನಾನಾತ್ವವನ್ನೂ(Plurality) ಚಲನೆಯನ್ನೂ ನಿಜವೆಂದು ನಂಬಿದರೆ ಅನೇಕ ವಿಧವಾದ ವಿಪರ್ಯಾಸಗಳಿಗೆ ನಾವು ಗುರಿಯಾಗುವೆವು ಎಂಬುದೇ ಇವನ ಅಭಿಮತ. ಇಂಥ ಭಾವನೆಗಳು ಸ್ವವಿಘಾತಗಳಾದುದರಿಂದ (self-contradictory) ಅವುಗಳನ್ನು ನಿಜವೆಂದು ನಂಬಲಾಗದು. ಹೇಗೆಂದರೆ, ನಾನಾವಿಧವಸ್ತುಗಳಿದ್ದರೆ ಇವು ಅಪರಿಮಿತವಾಗಿ ಸೂಕ್ಷ್ಮವಾಗಿರಬೇಕು, ಇಲ್ಲವೆ ಅಪಾರವಾಗಿ ಮಹತ್ತರವಾಗಿರಬೇಕು; ಅಪರಿಮಿತವಾಗಿ ಸೂಕ್ಷ್ಮವೇಕೆಂದರೆ, ಅವುಗಳನ್ನು ನಾವು ಅಸಂಖ್ಯಾತವಾಗಿ ಭಾವಿಸಬಹುದು, ಆದರೂ ಪರಿಮಾಣವೇನೋ ದೊರಕುವುದಿಲ್ಲ; ಅಪಾರ ಮಹತ್ತರವೇಕೆಂದರೆ ಈ ಪ್ರತಿ ಒಂದು ಭಾಗಕ್ಕೂ ಅಸಂಖ್ಯಾತವಾದ ಅಂಶಗಳನ್ನು ಕೂಡಿಸಬಹುದು. ನಾನಾತ್ವ ಏಕಕಾಲದಲ್ಲಿಯೇ ಅಪರಿಮಿತವಾಗಿ ಸೂಕ್ಷ್ಮವೆಂದೂ ಅಪಾರವಾಗಿ ಮಹತ್ತರವೆಂದೂ ಹೇಳುವುದು ಬುದ್ಧಿಹೀನತೆ: ಆದುದರಿಂದ ಇದನ್ನು ನಾವು ತ್ಯಜಿಸಬೇಕು. ಈ ಕಾರಣಗಳಿಂದಲೇ ಚಲನೆಯೂ ಆಕಾಶವೂ (Space) ಅಸಾಧ್ಯ. ಸಮಸ್ತ ಸತ್ತೂ ಆಕಾಶದಲ್ಲಿಥೆಯೆಂದು ಹೇಳೋಣ. ಆಗ್ಗೆ ಈ ಆಕಾಶವಿರಲು ಬೇರೊಂದು ಆಕಾಶವಿರಬೇಕಾಯಿತು. ಹೀಗೆ ಅನಂತವಾಗಿ ಅವಕಾಶಗಳನ್ನು ಊಹಿಸಬೇಕಾಗುವುದು. ಇದರಂತೆಯೇ, ಒಂದಾನೊಂದು ವಸ್ತು ಪ್ರದೇಶದಲ್ಲಿ ಚಲಿಸುತ್ತಿದೆಯೆಂದು ನಂಬೋಣ. ಚಲಿಸುವುದಕ್ಕೆ ಪ್ರಾರಂಭಿಸಿ ಕೊಂಚದೇಶವನ್ನು ಅದು ದಾಟಬೇಕಾದರೆ, ಮೊದಲು ಆ ದೇಶದಲ್ಲಿ ಅರ್ಧದೇಶವನ್ನು ಅದು ದಾಟಿರಬೇಕು; ಇದನ್ನು ದಾಟಿರಬೇಕಾದರೆ ಅದರಲ್ಲರ್ಧ ದೇಶವನ್ನು ಮುಗಿಸಿರಬೇಕು. ಇದೇ ರೀತಿಯಾಗಿ ಅನಂತವಾಗಿ ದಾಟಬೇಕಾಗುವುದು. ಹೀಗೆಂದಮೇಲೆ ಆ ವಸ್ತು ಎಲ್ಲಿಯೂ ಚಲನೆ ಮಾಡಲೇ ಆರದು. ಚಲನೆಯೆಂಬುದೇ ಅಸಾಧ್ಯಭಾವನೆಯಾಯಿತು. ಇದನ್ನು ದೃಷ್ಟಾಂತಪಡಿಸಲು ಜೀನೋ ಅನೇಕ ಉದಾಹರಣೆಗಳನ್ನು ಕೊಡುತ್ತಾನೆ. ಅಕಿಲೀಸ್ ಎಂಬವನು

ಗ್ರೀಸ್‌ದೇಶದ ಪುರಾಣಪ್ರಸಿದ್ಧನಾದ ಭೀಮನು. ಅಕಿಲೀಸೂ ಒಂದು ಆಮೆಯೂ ಓಡುವ ಪಂಥವನ್ನು ಹೂಡಿದರೆ, ಅಕಿಲೀಸು ಆಮೆಯನ್ನೆಂದಿಗೂ ಹಿಂದು ಹಾಕಲಾರ; ಏಕೆಂದರೆ ಆಮೆ ಮೊದಲು ಕೊಂಚ ದೂರ ಚಲಿಸಿದೆ ಎಂದಿಟ್ಟುಕೊಳ್ಳೋಣ; ಅಕಿಲೀಸನು ಅಷ್ಟು ದೇಶವನ್ನು ನಡೆಯುವಷ್ಟರೊಳಗಾಗಿ ಆಮೆ ಇನ್ನಷ್ಟು ದೇಶವನ್ನು ದಾಟಿರುವುದು; ಇದನ್ನು ಅಕಿಲೀಸನು ಮುಗಿಸುವಷ್ಟರಲ್ಲಿಯೇ ಆಮೆ ಮತ್ತಷ್ಟು ಮುಂಜರಿಯುವುದು: ಹೀಗಾಗಿ ಕೊನೆಗೆ ಅಕಿಲೀಸನೇ ಸೋಲುವನು. ಎಸೆದ ಬಾಣ ಸ್ಥಾವರ ಸ್ಥಿತಿಯಲ್ಲಿಯೇ ಇರುವುದು; ಹೇಗೆಂದರೆ ಅದು ಸ್ವಲ್ಪ ದೇಶವನ್ನು ಹಾರಬೇಕಾದರೆ ಆ ದೇಶದ ಪ್ರತಿಯೊಂದು ಅಂಶವನ್ನೂ ದಾಟಿರಬೇಕು. ದೇಶ ಅಪರಿಮಿತವಾಗಿ ವಿಭಾಗಿಸಲ್ಪಡುವುದಾದುದರಿಂದ, ಬಾಣ ಅಸಂಖ್ಯಾತವಾದ ದೇಶಾಂಶಗಳನ್ನು ಸರಿದುಹೋಗಬೇಕಾಯಿತು. ಎಂದಮೇಲೆ ಅದು ಇದ್ದಲ್ಲಿಯೇ ಇದೆಯೆಂದಾಯಿತು.

## ಅಧ್ಯಾಯ ೬.

## ಪರಿಣಾಮ ವಿವರಣೆ

ಪ್ರಾಚೀನ ವೈಜ್ಞಾನಿಕರೆಲ್ಲ ಯಾವ ವಸ್ತುವೂ ಹೊಸದಾಗಿ ಜನಿಸಲಾರದೆಂದೂ, ನಿಶ್ಶೇಷವಾಗಿ ನಾಶವಾಗದೆಂದೂ—ನಿರಾಧಾರಸೃಷ್ಟಿ, ನಿರ್ನಾಮನಾಶ—ಇವೆರಡೂ ಅಸಿದ್ಧವೆಂದೂ ತಮ್ಮ ಸಿದ್ಧಾಂತಗಳಲ್ಲಿ ಸೂಚಿಸಿದ್ದರು. ಆದರೂ ಅವರು ಪ್ರಜ್ಞಾಪೂರ್ವಕವಾಗಿ ಈ ತತ್ವವನ್ನು ಬೋಧಿಸಲಿಲ್ಲ: ವಿಮರ್ಶೆಮಾಡದೆ ಅದನ್ನು ಉಪಯೋಗಿಸುತ್ತಿದ್ದರು. ಅದು ಅವರ ಸಿದ್ಧಾಂತಗಳಲ್ಲಿ ಗುಪ್ತವಾಗಿದ್ದಿತೇ ಹೊರತು ಪ್ರಕಾಶಕ್ಕೆ ಬಂದಿರಲಿಲ್ಲ. ಇಲಿಯಾಟಿಕರಾದರೋ ಸಂಪೂರ್ಣ ಪ್ರಜ್ಞೆಯಿಂದ ಅದನ್ನು ಉದ್ಘೋಷಿಸಿ ಹೇಳಿದರು. ವಿಮರ್ಶಪೂರ್ವಕವಾಗಿ ಅದರ ನಿಜಾಂಶವನ್ನು ಪರಿಶೀಲಿಸಿ, ಈ ತತ್ವವನ್ನು ಸಮಸ್ತ ಸಿದ್ಧಾಂತದ ಮೂಲಾಧಾರವನ್ನಾಗಿ ಮಾಡಿದರು. ಯಾವುದೂ ಹುಟ್ಟದು, ಯಾವುದೂ ನಾಶವಾಗದು; ಒಂದು ಗುಣ ಮತ್ತೊಂದು ಗುಣವಾಗುವುದೆಂಬುದು

ಸುಳ್ಳು—ಏಕೆಂದರೆ, ಹಾಗಾಗಬೇಕಾದರೆ ಮೊದಲಿನ ಗುಣ ವಿನಾಶವಾಗಿ ಹೊಸದೊಂದು ಗುಣ ಸೃಷ್ಟಿಮಾಡಲ್ಪಡಬೇಕು. ಸತ್ಯಸತ್ವ ಅಕ್ಷರವಾಗಿಯೂ ನಿರ್ವಿಕಾರವಾಗಿಯೂ ಇರತಕ್ಕುದು: ಪರಿಣಾಮ-ವಿಕಾರವೆಲ್ಲಾ ಇಂದ್ರಿಯಗಳ ಠಕ್ಕು (ಕಲ್ಪನೆ).

ಹೀಗಿದ್ದರೂ ಪದಾರ್ಥಗಳು ತಮ್ಮ ನಿಜರೂಪದಲ್ಲಿರುವ ಹಾಗೂ ತೋರುತ್ತವೆ, ರೂಪಾಂತರವನ್ನು ಹೊಂದುವಂತೆಯೂ ಕಾಣುತ್ತವೆ. ಈ ವಿರೋಧಭಾವಗಳನ್ನು ಸರಿಪಡಿಸುವುದು ಹೇಗೆ? ತತ್ವಶಾಸ್ತ್ರ ಈ ಸಮಸ್ಯೆಯನ್ನು ಈ ಪರ್ಯವಸ್ಥೆಯಲ್ಲಿ ಬಿಡಲಾರದು. ಸೃಷ್ಟಿ ಸ್ಥಾವರವೇ ಜಂಗಮವೇ ಎಂಬ ಪ್ರಶ್ನೆಯನ್ನು ಹೇಗಾದರೂ ಬಗೆಹರಿಸಬೇಕು. ಹಿರಾಕ್ಲಿಟಸಿನ ಮತ್ತು ಪಾರ್ಮಿನೈಡೀಸಿನ ಈಚಿನ ಜ್ಞಾನಿಗಳು ಇದನ್ನೇ ತಮ್ಮ ಕಾರ್ಯವನ್ನಾಗಿಟ್ಟುಕೊಂಡರು.

ಅವರು ಕೊಡುವ ವಿವರಣೆ ಏನೆಂದರೆ: ನಿರ್ವಿಶಿಷ್ಟ ಪರಿಣಾಮವೆಂಬುದು (absolute change) ಅಸಾಧ್ಯಭಾವನೆ: ಇಷ್ಟರಮಟ್ಟಿಗೆ ಇಲಿಯಾಟಿಕರು ನಿಜಾಂಶವನ್ನು ಅರಿತಿರುವರು. ಒಂದಾನೊಂದು ವಸ್ತು ಶೂನ್ಯವಸ್ತುವಿನಿಂದ ಉತ್ಪನ್ನವಾಗುವುದೆಂದೂ, ಶೂನ್ಯವಸ್ತುವಾಗುವುದೆಂದೂ, ನಿರ್ವಿಶಿಷ್ಟವಾಗಿ ಪರಿಣಾಮಪಡೆಯುವುದೆಂದೂ ಹೇಳುವುದು ತಿಳಿಗೇಡಿತನವಷ್ಟೆ. ಆದರೂ ವಿಶಿಷ್ಟಾರ್ಥದಲ್ಲಿ ಉತ್ಪತ್ತಿ-ಕ್ಷಯ, ಬೆಳವಣಿಗೆ-ಪರಿಣಾಮ, ಎಂದು ಹೇಳಲು ನಮಗೆ ಹಕ್ಕಿದೆ. ವಸ್ತುಮೂಲವೂ, ನಿರುತ್ಪನ್ನವೂ, ನಿತ್ಯವೂ, ಅವಿನಶ್ವರವೂ ಆದ ಸತ್ವಾಂಶಗಳು ಅಥವಾ ಅಣುಗಳುಂಟು:(Particles of Reality). ಇವು ಪರಿಣಮಿಸುವುದಾಗಲಿ ರೂಪಾಂತರವನ್ನು ಹೊಂದುವುದಾಗಲಿ ಇಲ್ಲ: ಇವು ಇಲಿಯಾಟಿಕರು ಹೇಳಿದಂತೆ ಸ್ಥಿತಿರೂಪದಲ್ಲಿಯೇ ಇರತಕ್ಕವು. ಆದರೆ ಈ ಸತ್ವಾಂಶಗಳು ಪರಸ್ಪರ ಸಂಯೋಗ ಹೊಂದಿ ವಸ್ತುಗಳಾಗುವುವು; ಹಾಗೆಯೇ ಪರಸ್ಪರ ವಿಭಿನ್ನವಾಗಿ ವಸ್ತುಗಳು ಪ್ರತ್ಯೇಕಿಸಿ ಮೂಲಾಂಶಗಳಿಗೆ ಹಿಂತಿರುಗುವುದೂ ಉಂಟು. ಸತ್ವಾಂಶಗಳ ಸಂಯೋಗದಿಂದ ವಸ್ತುಗಳು ಉತ್ಪತ್ತಿಯಾಗುವುವು, ಸತ್ವಾಂಶಗಳ ವಿಯೋಗದಿಂದ ವಸ್ತುಗಳು ವಿಭಕ್ತವಾಗಿ ನಾಶವಾಗುವುವು. ಅಂದರೆ ಸತ್ವಾಂಶಗಳು ತಮ್ಮ

ಪರಸ್ಪರ ಸಂಬಂಧಗಳನ್ನು ಬದಲಾಯಿಸಬಲ್ಲವೇ ಹೊರತು ತಾವೇ ಉತ್ಪನ್ನವಾಗುವುದಾಗಲಿ, ನಾಶಹೊಂದುವುದಾಗಲಿ, ಸ್ವಭಾವ ವ್ಯತ್ಯಾಸ ವಾಗುವುದಾಗಲಿ ಇಲ್ಲ. ಮೂಲಸತ್ವಾಂಶಗಳ ಈ ಪರಸ್ಪರ ಸಂಬಂಧ ಬದಲಾವಣೆಯೇ ಪರಿಣಾಮವೆನಿಸುವುದು. ಹೀಗೆಂದಮೇಲೆ ನಿರ್ವಿಶಿಷ್ಟ ಪರಿಣಾಮ—ಸ್ವಭಾವಾಂತರವೆಂಬುದು—ಅಸಾಧ್ಯವಾಯಿತು ; ವಿಶಿಷ್ಟ ಪರಿಣಾಮ, ಸಂಬಂಧವ್ಯತ್ಯಾಸವೆಂಬುದು ಸಿದ್ಧ. ಉತ್ಪತ್ತಿ ಎಂದರೆ ಸತ್ವಾಂಶಸಂಯೋಗ, ನಾಶವೆಂದರೆ ಸತ್ವಾಂಶವಿಯೋಗ ; ಪರಿಣಾಮ ವೆಂದರೆ ಸಂಬಂಧವ್ಯತ್ಯಾಸ.

ಎಂಪಿಡೋಕ್ಲಿಸ್, ಅನಾಕ್ಸಗೊರಾಸ್, ವೈಶೇಷಿಕರು,[೧]—ಇವರೆಲ್ಲಾ ಹಿರಾಕ್ಲಿಟಸ್ ಮತ್ತು ಇಲಿಯಾಟಿಕರು ಚರ್ಚಿಸಿದ್ದ ಪರಿಣಾಮಸಮಸ್ಯೆಗೆ ಮೇಲ್ಕಂಡ ಉತ್ತರವನ್ನೇ ಸೂಚಿಸುತ್ತಾರೆ: ನಿರ್ವಿಶಿಷ್ಟ ಪರಿಣಾಮ ಅಸಾಧ್ಯವೆಂದೂ ವಿಶಿಷ್ಟಪರಿವರ್ತನೆ ಸಿದ್ಧವೆಂದೂ ತೀರ್ಮಾನಿಸು ತ್ತಾರೆ. ಆದರೆ ಈ ಕೆಳಗೆ ಕಂಡ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದ ರಲ್ಲಿ ಇವರು ಭಿನ್ನಾಭಿಪ್ರಾಯವುಳ್ಳವರಾಗುತ್ತಾರೆ. (೧) ಸತ್ವಾಂಶಗಳ ಸಂಯೋಗದಿಂದ ಪ್ರಪಂಚ ಉತ್ಪನ್ನವಾಗುವುದು ಸರಿಯಷ್ಟೆ. ಈ ಸತ್ವಾಂಶಗಳ ಸ್ವಭಾವವೇನು ? (೨) ಯಾವ ಕಾರಣವಿಶೇಷದಿಂದ ಸತ್ವಾಂಶಗಳ ಸಂಯೋಗ ವಿಯೋಗಗಳುಂಟಾಗುತ್ತವೆ ? ಎಂಪಿಡೋ ಕ್ಲಿಸ್ ಮತ್ತು ಅನಾಕ್ಸಗೊರಾಸ್-ಇವರ ಮತಪ್ರಕಾರ ಮೂಲಸತ್ವಗಳು ನಿರ್ಣೀತವಾದ ಗುಣವಿಶೇಷಗಳನ್ನು ಹೊಂದಿರುತ್ತವೆ ; ವೈಶೇಷಿಕರ ಸಿದ್ಧಾಂತದಲ್ಲಿ ಸತ್ವಾಂಶಗಳು ಗುಣರಹಿತವಾದುವು. ಎಂಪಿಡೋಕ್ಲಿಸನು ಗುಣಯುಕ್ತವಾದ ನಾಲ್ಕು ಸತ್ವಾಂಶಗಳುಂಟೆಂದು ಹೇಳುತ್ತಾನೆ: ಪೃಥಿವಿ, ಅಪ್, ತೇಜಸ್, ವಾಯು ; ಅನಾಕ್ಸಗೊರಾಸನು ಇಂಥ ಗುಣ ಯುಕ್ತವಾದ ಸತ್ವಗಳು ಅಸಂಖ್ಯಾತವಾಗಿರುವುವೆಂದು ಬೋಧಿಸುತ್ತಾನೆ.

---

೧ ಇವರನ್ನು "ಅಟೊಮಿಸ್ಟ್ಸ್" (Atomists) ಎಂದು ಆಂಗ್ಲಭಾಷೆಯಲ್ಲಿ ಕರೆಯುತ್ತಾರೆ. ಇವರ ಪರಮಾಣುಸಿದ್ಧಾಂತ ನಮ್ಮ ಷಡ್ದರ್ಶನಗಳಲ್ಲಿ ಒಂದಾದ ವೈಶೇಷಿಕ ಮತದ ಸಿದ್ಧಾಂತವನ್ನು ಬಹುಮಟ್ಟಿಗೆ ಹೋಲುವುದರಿಂದ ಸುಲಭ ಪ್ರಯೋಗದ ಸಲುವಾಗಿ ಇವರನ್ನು "ವೈಶೇಷಿಕರು" ಎಂದು ಇಲ್ಲಿ ಕರೆದಿದೆ.

ಎಂಪಿಡೋಕ್ಲಿಸನ ಸಿದ್ಧಾಂತದ ಪ್ರಕಾರ ಪ್ರೇಮ ಮತ್ತು ದ್ವೇಷ (ಆಕರ್ಷಣೆ, ವಿಕರ್ಷಣೆ)ಎಂಬ ಕಲ್ಪಿತಶಕ್ತಿವಿಶೇಷಗಳೆರಡು ಮೂಲಸತ್ವಗಳನ್ನು ಪರಸ್ಪರ ಸಂಧಿಸುವಂತೆಯೂ ಬೇರೆಬೇರೆಯಾಗುವಂತೆಯೂ ಮಾಡುತ್ತವೆ. ಅನಾಕ್ಸಗೊರಾಸಿನ ಮತಪ್ರಕಾರ ಈ ಸತ್ವಾಂಶಗಳಲ್ಲದೆ, ಅವುಗಳಿಂದ ಬೇರೆಯಾಗಿರುವ ಚಿಚ್ಛಕ್ತಿವಿಶೇಷವೊಂದು ಈ ಸತ್ವಗಳನ್ನು ಸಂಯುಕ್ತವಾಗುವಂತೆಯೂ ವಿಭಿನ್ನವಾಗುವಂತೆಯೂ ಮಾಡುತ್ತದೆ. ವೈಶೇಷಿಕರಾದರೋ ಸಂಯೋಗವಿಯೋಗಗಳು (ಚಲನಶಕ್ತಿ) ಸತ್ವಾಂಶಗಳಲ್ಲಿಯೇ ಸ್ವಾಭಾವಿಕವಾಗಿ ಅಡಗಿರುವುವೆಂದು ಅಭಿಪ್ರಾಯಪಡುತ್ತಾರೆ.

## (೧) ಎಂಪಿಡೋಕ್ಲಿಸ್

ಎಂಪಿಡೋಕ್ಲಿಸನ ಸಿದ್ಧಾಂತದ ಪ್ರಕಾರ ಸಂಯೋಗ ವಿಯೋಗಗಳಲ್ಲದೆ ಉತ್ಪತ್ತಿ ನಾಶವೆಂಬುದು ಅಸಿದ್ಧ. ಪರಸ್ಪರ ಭೇದಸ್ವಭಾವಗಳುಳ್ಳ–ಪೃಥಿವಿ, ಅಪ್, ತೇಜಸ್, ವಾಯುಗಳೆಂಬ ಚತುರ್ಭೂತಗಳಿವೆ. ಈ "ಮೂಲ ಬೇರುಗಳು" ನಿರುತ್ಪನ್ನವಾಗಿಯೂ, ನಿರ್ವಿಕಾರವಾಗಿಯೂ, ನಿರವ್ಯಯವಾಗಿಯೂ ಇವೆ. ಈ ಭೂತಗಳ ಸಮ್ಮೇಲನದಿಂದ ವಸ್ತುಗಳುಂಟಾಗುತ್ತವೆ; ಇವುಗಳ ವಿಂಗಡದಿಂದ ವಸ್ತುಗಳು ನಾಶವಾಗುತ್ತವೆ. ಪ್ರತಿಯೊಂದು ವಸ್ತುವಿಗೂ ರೋಮಕೂಪಗಳಂತಿರುವ ಸೂಕ್ಷ್ಮರಂಧ್ರಗಳಿರುವುದರಿಂದ ಒಂದು ವಸ್ತುವಿನಿಂದ ಸೂಕ್ಷ್ಮವಾಹಿನಿಗಳು (effusions) ಹೊರಟು ಮತ್ತೊಂದು ವಸ್ತುವಿನ ರಂಧ್ರಗಳಲ್ಲಿ ಸೇರಿಕೊಳ್ಳುತ್ತವೆ. ಈ ರೀತಿಯಾಗಿ ವಸ್ತುಗಳು ಇತರ ವಸ್ತುಗಳ ಮೇಲೆ ತಮ್ಮ ಶಕ್ತಿಪ್ರಯೋಗವನ್ನುಂಟುಮಾಡುತ್ತವೆ.

ಆದರೆ ಈ ಚತುರ್ಭೂತಗಳು ಪರಸ್ಪರ ಕೂಡುವಂತೆಯೂ, ಪ್ರತ್ಯೇಕವಾಗುವಂತೆಯೂ ಮಾಡತಕ್ಕ ಕಾರಣ ಯಾವುದು? ಎಂಪಿಡೋಕ್ಲಿಸನು ಪ್ರೇಮ, ದ್ವೇಷ ಎಂಬ ಎರಡು ಶಕ್ತಿವಿಶೇಷಗಳನ್ನು ಕಾರಣಭೂತಗಳನ್ನಾಗೆಣಿಸುತ್ತಾನೆ. ಯಥಾರ್ಥವಾಗಿ ಆಕರ್ಷಣ – ವಿಕರ್ಷಣಗಳೆಂದು ಹೇಳಲ್ಪಡುವ ಈ ಶಕ್ತಿದ್ವಯಗಳು ಸತತವೂ ವಸ್ತುಗಳನ್ನು

ಉತ್ಪತ್ತಿಮಾಡುತ್ತಲೂ ವಸ್ತುಗಳನ್ನು ನಾಶಪಡಿಸುತ್ತಲೂ ಜೊತೆಯಾಗಿಯೇ ಕೆಲಸಮಾಡುತ್ತವೆ. ಆದಿಯಲ್ಲಿ ಚತುರ್ಭೂತಗಳೆಲ್ಲಾ ಒಟ್ಟುಗೂಡಿಕೊಂಡು ಪರಿಪೂರ್ಣವಾದ ಗೋಳಾಕೃತಿಯಾಗಿದ್ದುವು. ಈ ಗೋಳ ಆನಂದಪೂರ್ಣನಾದ ದೇವರೊಬ್ಬನ ಶರೀರವಾಗಿದ್ದಿತು. ಈತನಲ್ಲಿ ಪ್ರೇಮಾಂಶವೇ ಅಧಿಕವಾಗಿದ್ದಿತು. ಕಾಲಕ್ರಮದಲ್ಲಿ ದ್ವೇಷ ಅಥವಾ ವೈಮನಸ್ಯವೆಂಬುದು ಪ್ರವೇಶಿಸಿ ಪ್ರತಿ ಒಂದು ಭೂತವನ್ನೂ ಚೆದರಿಸಿ, ವಸ್ತುಗಳ ಉತ್ಪತ್ತಿಯಿಲ್ಲದೆ, ಪ್ರತಿ ಒಂದು ಭೂತವೂ ತನ್ನಷ್ಟಕ್ಕೆ ತಾನೇ ವಾಸಮಾಡಿಕೊಂಡಿರುವಂತೆ ಮಾಡಿತು. ಈ ಸಂದರ್ಭದಲ್ಲಿ ಪ್ರೇಮ ಅಥವಾ ಮೈತ್ರಿಯೆಂಬುದು ಈ ಪ್ರಳಯರೂಪವಾದ ಅನಾಹುತವನ್ನು ಹೊಕ್ಕು ಸುಳಿಯೋಪಾದಿಯಲ್ಲಿ ಗಿರಗಿರನೆ ತಿರುಗುವ ಚಲನೆಯೊಂದನ್ನುಂಟುಮಾಡಿತು. ಇದರಿಂದ ಸ್ವಜಾತೀಯಗಳಾದ, ಒಂದೇ ಸ್ವಭಾವವುಳ್ಳ ಸತ್ವಾಂಶಗಳೆಲ್ಲವೂ ಸಂಯೋಗವಾಗಲು ಅವಕಾಶವುಂಟಾಯಿತು. ಫಲಿತಾಂಶದಲ್ಲಿ ವಾಯು ಅಥವಾ ಆಕಾಶವೆಂಬುದು ಮೊದಲು ಉತ್ಪನ್ನವಾಗಿ ಅಂತರಿಕ್ಷದ ದಿಙ್ಮಂಡಲ ಅಥವಾ ಚಕ್ರವಾಳವಾಯಿತು; ಅನಂತರದಲ್ಲಿ ಅಗ್ನಿ ಉತ್ಪನ್ನವಾಗಿ ನಕ್ಷತ್ರಮಂಡಲವಾಯಿತು; ತದನಂತರ ಭೂಮಿ ಅತ್ಯಧಿಕವಾಗಿ ಒತ್ತಲ್ಪಡಲು ಜಲವೆಂಬುದು ಹೊರಟು ಸಮುದ್ರಗಳುಂಟಾದುವು; ಕಡೆಯಲ್ಲಿ ಈ ಸಮುದ್ರಗಳ ಜಲವನ್ನು ಗಗನದ ಅಗ್ನಿಜ್ವಾಲೆ ಹೀರಿದ್ದರಿಂದ ವಾಯುಮಂಡಲವಾಯಿತು. ಈರೀತಿಯಾದ ಸಂಯೋಗ ಗತಿ ಪ್ರೇಮದ ಬಲದಿಂದ ಪುನಃ ಭೂತಗಳೆಲ್ಲವೂ ಒಟ್ಟುಗೂಡಿ ಆನಂದಮಯವಾದ ಗೋಳವಾಗುವ ಪರ್ಯಂತರವೂ ನಡೆಯುತ್ತಿರುವುದು; ಅಂದು ಮರಳಿ ಭಿನ್ನಭೇದಗಳಾಗಲು ಪ್ರಾರಂಭವಾಗುವುದು. ಈ ತೆರನಾಗಿ ಸೃಷ್ಟಿಸ್ಥಿತಿಲಯಗಳು ವ್ಯುತ್ಕ್ರಮವಾಗಿ ನಡೆಯುತ್ತಿರುವುವು.

ಎಂಪಿಡೋಕ್ಲಿಸನು ಸರ್ವಚೇತನವಾದದ ಪ್ರಕಾರ ಸರ್ವಪದಾರ್ಥಗಳಿಗೂ ಮನಶ್ಶಕ್ತಿಯುಂಟೆಂದು ಹೇಳುತ್ತಾನೆ. ಈತನ ಮತವನ್ನು ಸಾವಧಾನವಾಗಿ ಪರಿಶೀಲಿಸಿದರೆ ಆರ್ಯರ ಸಾಂಖ್ಯಸಿದ್ಧಾಂತ ನೆನಪಿಗೆ ಬರುವುದು. ಸರ್ವಭೂತಗಳೂ ಕಲೆತಿರುವಾಗ ಆನಂದಪರಿಪೂರ್ಣವಾದ

ಗೋಳವೊಂದಿದ್ದಿತೆಂದು ಎಂಪಿಡೋಕ್ಲಿಸನು ಹೇಳುವಾಗ ಸತ್ವರಜಸ್ತಮೋಗುಣಗಳು ಸಮತೂಕವಾಗಿರುವ ಸ್ಥಿತಿಯಲ್ಲಿದ್ದ ಸಾಂಖ್ಯರ ಮೂಲಪ್ರಕೃತಿ ಜ್ಞಾಪಕಕ್ಕೆ ಬರುವುದು. ಎಂಪಿಡೋಕ್ಲಿಸನ ಪ್ರೇಮ ಮತ್ತು ದ್ವೇಷವೆಂಬ ಶಕ್ತಿವಿಶೇಷಗಳೇ ಸಾಂಖ್ಯರ ಸತ್ವರಜಸ್ತಮೋಗುಣಗಳಾದುವು. (ಈ ಗುಣಗಳ ನಿಜಸ್ವರೂಪದ ವಿಚಾರವಾಗಿ ವಿವಾದವಿರುವುದು ನಿಜ; ಆದರೆ ಈ ಚರ್ಚೆ ಇಲ್ಲಿ ಅಪ್ರಕೃತ). ಈ ಮೂಲ ಪ್ರಕೃತಿಯಲ್ಲಿ ಸತ್ವಗುಣವೇ ಪ್ರಾಧಾನ್ಯವಾಗಿರುವುದು. ಕ್ರಮೇಣ, ಎಂಪಿಡೋಕ್ಲಿಸನ ಗೋಳದಲ್ಲಿ ದ್ವೇಷವೆಂಬುದು ಪ್ರವೇಶಿಸಿ ಭೂತಗಳನ್ನು ಚೆದರಿಸುವ ಹಾಗೆ ಪ್ರಧಾನದಲ್ಲಿ ರಜೋಗುಣ ವೃದ್ಧಿಹೊಂದಿ ಚಲನ ಶಕ್ತಿಯನ್ನುಂಟುಮಾಡಿ ವಸ್ತುಪ್ರಪಂಚ ಉತ್ಪನ್ನವಾಗುವುದಕ್ಕೆ ಕಾರಣವಾಗುವುದು. ಆದರೆ ಸಾಂಖ್ಯರ ಪ್ರಕೃತಿ ಪುರುಷನ ಭೋಗದ ಸಲುವಾಗಿ ಪರಿಣಾಮವ್ಯಾಪಾರದಲ್ಲಿ ಹೊಕ್ಕರೂ ವಸ್ತುತಃ ಸ್ವತಂತ್ರ ತತ್ವವಾಗಿರುವುದು; ಎಂಪಿಡೋಕ್ಲಿಸನ ಸಿದ್ಧಾಂತದಲ್ಲಿಯೋ ಅಂದರೆ ಚತುರ್ಭೂತಸಮ್ಮಿಳಿತವಾದ ಗೋಳಾಕಾರಪ್ರಕೃತಿ ಆನಂದ ಪರಿಪೂರ್ಣನಾದ ಈಶ್ವರನ ಶರೀರವೆಂದೆಣಿಸಲ್ಪಟ್ಟಿರುವುದು.

## (೨) ಅನಾಕ್ಸಗೊರಾಸ್ (ಕ್ರಿ. ಪೂ. ೫೦೦-೪೨೮)

ಏಷಿಯಾಮೈನರಿನಲ್ಲಿರುವ ಕ್ಲಾಜಿಮೊನೆ ಎಂಬ ಸ್ಥಳದವನಾದ ಅನಾಕ್ಸಗೊರಾಸ್ ಎಂಬ ಜ್ಞಾನಿ ಅಥೆನ್ಸ್ ನಗರದಲ್ಲಿ ನೆಲಸಿ ಪ್ರಖ್ಯಾತನಾದ ಪೆರಿಕ್ಲಿಸ್ ಎಂಬ ರಾಜನೀತಿಕುಶಲನ ಮಿತ್ರನಾಗಿದ್ದನು. ಪೆರಿಕ್ಲಿಸನ ಶತ್ರುಪಕ್ಷದವರು ಆತನ ರಾಜ್ಯಭಾರಕ್ರಮವನ್ನು ನಿಂದಿಸುವುದಕ್ಕಾಗಿ ಅನಾಕ್ಸಗೊರಾಸನು ನಾಸ್ತಿಕನೆಂದೂ ಪೆರಿಕ್ಲಿಸನು ನಾಸ್ತಿಕ ರಕ್ಷಕನೆಂದೂ ಅಪವಾದ ತಂದರು. ಈ ಕಾರಣದಿಂದ ಅನಾಕ್ಸಗೊರಾಸನು ಮುವ್ವತ್ತುವರುಷ ತಾನು ಅಥೆನ್ಸ್ ನಗರದಲ್ಲಿದ್ದರೂ ಕಡೆಗೆ ಅದನ್ನು ಬಿಟ್ಟು ಲಾಂಪ್ಸಾಕಸ್ ಎಂಬ ಸ್ಥಳಕ್ಕೆ ಹೋಗಿ ಅಲ್ಲಿ ಕ್ರಿ. ಪೂ. ೪೨೮ ರಲ್ಲಿ ಮರಣವನ್ನೈದಿದನು. ಈತನು ವಿಖ್ಯಾತನಾದ ಗಣಿತಜ್ಞನಾಗಿಯೂ ಖಗೋಳಶಾಸ್ತ್ರಜ್ಞನಾಗಿಯೂ ತತ್ವಜ್ಞಾನಿಯಾಗಿಯೂ

ಇದ್ದನು. ಈತನು ಸುಲಭವಾದ ಗದ್ಯಶೈಲಿಯಲ್ಲಿ ಬರೆದಿರುವ 'ಪ್ರಕೃತಿ ವಿಚಾರ' ಎಂಬ ಪುಸ್ತಕದಲ್ಲಿ ಪ್ರಾಮುಖ್ಯಭಾಗಗಳು ನಮಗೆ ದೊರೆತಿವೆ.

ಎಂಪಿಡೋಕ್ಲಿಸನಂತೆ ಪರಿಣಾಮ ಅಥವಾ ರೂಪಾಂತರವೆಂಬ ವಸ್ತುಸ್ಥಿತಿಯ ರಹಸ್ಯವನ್ನು ಸ್ಪಷ್ಟಪಡಿಸುವುದೇ ಅನಾಕ್ಸಗೊರಾಸಿನ ಅಭೀಷ್ಟ. ಇಲಿಯಾಟಿಕರು ಹೇಳಿದಂತೆ ನಿರ್ವಿಶಿಷ್ಟಪರಿಣಾಮ ಅಸಾಧ್ಯಭಾವನೆಯೆಂದೂ, ಯಾವ ಗುಣವೂ ಮತ್ತೊಂದು ಗುಣವಾಗಲಾರದೆಂದೂ, ಸತ್ಯ ಸತ್ವಸ್ವರೂಪದಲ್ಲಿ ನಿತ್ಯವಾದುದಾಗಿಯೂ ವಿಕಾರರಹಿತವಾದುದಾಗಿಯೂ ಇರಬೇಕೆಂದೂ ಇವನು ಒಪ್ಪಿಕೊಂಡನು. ಆದರೆ ವಸ್ತುಗಳು ಪರಿಣಾಮವನ್ನೇನೋ ಹೊಂದುತ್ತವೆಂಬುದು ಅನುಭವಸಿದ್ಧ. ಆದರೂ ಈ ಪರಿಣಾಮ ಭೂತಗಳ ಸಂಯೋಗ ವಿಯೋಗರೂಪವಾದ ಸಂಬಂಧ ವ್ಯತ್ಯಾಸವೇ ವಿನಾ ವಸ್ತುಸ್ವರೂಪಾಂತರವೆಂಬುದೇನೋ ಅಸಿದ್ಧ. ಮೂಲಭೂತಗಳು ನಾಲ್ಕಕ್ಕಿಂತ ಅಧಿಕವಾಗಿರಬೇಕು: ಈ ಪರಿಯಾದ ಅನೇಕ ವಿಧವಾದ ವ್ಯತ್ಯಾಸಗಳೂ, ನಾನಾ ಪದಾರ್ಥ ಗುಣವಿಶೇಷಗಳೂ ತುಂಬಿರುವ ನಮ್ಮ ಪ್ರಪಂಚ ನಾಲ್ಕೇ ನಾಲ್ಕು ಮೂಲಭೂತಗಳಿಂದ ಉಂಟಾಗಿದೆಯೆಂದು ಹೇಳಲಾಗುವುದಿಲ್ಲ. ಇದೂ ಅಲ್ಲದೆ ಪೃಥಿವಿ, ವಾಯು, ಅಗ್ನಿ, ಜಲಗಳು ಇತರ ಪದಾರ್ಥಗಳ ಸಮ್ಮೇಲನದಿಂದ ಉಂಟಾಗಿರುವುದರಿಂದ ಮೂಲಭೂತಗಳೆಂದಿಗೂ ಆಗಲಾರವು. ಈ ಕಾರಣಗಳಿಂದ ಅನಾಕ್ಸಗೊರಾಸನು ಅಸಂಖ್ಯಾತವಾದ, ಸಮಸ್ತವಿಧವಾದ ರೂಪ, ವರ್ಣ, ವಾಸನೆಗಳುಳ್ಳ ಅತಿಸೂಕ್ಷ್ಮರೂಪದ ಪರಮಾಣುಗಳನ್ನು ತನ್ನ ಮೂಲಸತ್ವಗಳನ್ನಾಗಿ ಎಣಿಸಿದನು. ಮಾಂಸ, ರೋಮ, ರಕ್ತ, ಎಲುಬು, ಚಿನ್ನ, ಬೆಳ್ಳಿ, ಇವೇ ಮೊದಲಾಗಿ ಪ್ರಪಂಚದಲ್ಲಿ ಯಾವದ್ವಿಶಿಷ್ಟವಸ್ತುಗಳೂ ಸ್ವಜಾತೀಯವಾದ ಸತ್ವಾಂಶಗಳನ್ನುಳ್ಳುವೆಂದು ಹೇಳಿದನು. ಇಂಥ ಅಪರಿಮಿತ ಸೂಕ್ಷ್ಮವಾದ, ಆದರೂ ಅವಿಭಕ್ತವಲ್ಲದ ಪರಮಾಣುಗಳು ನಿರುತ್ಪನ್ನವಾದುವು ಮತ್ತು ವಿಕಾರರಹಿತವಾದುವು: "ಹಾಗಿಲ್ಲದಿದ್ದರೆ ಯಾವುದು ಮಾಂಸವಲ್ಲವೋ ಅದರಿಂದ ಮಾಂಸ ಯಾವರೀತಿಯಲ್ಲಿ ಉತ್ಪನ್ನವಾದೀತು?" ಈ ಸತ್ವಾಂಶಗಳ ಪರಿಮಾಣ ಮತ್ತು ಗುಣವಿಶೇಷವೆರಡೂ ಸ್ಥಿರವಾದುದ

ರಿಂದ ಹೊಸದಾಗಿ ಸೇರಿಸುವುದಕ್ಕಾಗಲಿ, ಇರುವುದನ್ನು ಕಡಮೆಮಾಡು ವುದಕ್ಕಾಗಲಿ ಸಾಧ್ಯವಿಲ್ಲ. ಪ್ರಾಯಶಃ ಅನಾಕ್ಸಗೊರಾಸನು ಈ ಕೆಳಗೆ ಕಂಡ ರೀತಿಯಲ್ಲಿ ವಿಚಾರಮಾಡಿರಬೇಕು: ನಮ್ಮ ಶರೀರ ಮಾಂಸ, ಮಜ್ಜ, ಎಲುಬು, ರಕ್ತ, ಚರ್ಮ ಇವುಗಳಿಂದ ಮಾಡಲ್ಪಟ್ಟಿರುತ್ತದೆ. ಈ ಪದಾರ್ಥಗಳು ತಮ್ಮ ಪ್ರಕಾಶದಲ್ಲಿಯೂ, ಶೈತ್ಯೋಷ್ಣದಲ್ಲಿಯೂ, ಕಾಠಿಣ್ಯಮೃದುತ್ವದಲ್ಲಿಯೂ ಪರಸ್ಪರ ವ್ಯತ್ಯಾಸವುಳ್ಳವುಗಳಾಗಿವೆ. ಶರೀರ ಆಹಾರದಿಂದ ಪೋಷಿಸಲ್ಪಡುವುದರಿಂದ ನಾವು ತೆಗೆದುಕೊಳ್ಳುವ ಆಹಾರ ಮೇಲೆ ಹೇಳಿದ ಪದಾರ್ಥಗಳನ್ನೊಳಗೊಂಡಿರಬೇಕು. ಆದರೆ ಆಹಾರ ಪೃಥಿವಿ, ಅಪ್, ತೇಜಸ್, ವಾಯುಗಳಿಂದ ತನಗೆ ಬೇಕಾದ ಪದಾರ್ಥಗಳನ್ನು ತೆಗೆದುಕೊಳ್ಳುವುದರಿಂದ ಈ ಪೃಥ್ವ್ಯಾದಿಗಳು ಆಹಾ ರಾಂಶಗಳನ್ನು ಒಳಗೊಂಡಿರಬೇಕು. ಆದುದರಿಂದ ಸ್ಥಿರುತ್ಪನ್ನವಾದ ಮೂಲಭೂತಗಳೆಂದು ಎಂಪಿಡೋಕ್ಲಿಸನು ಭಾವಿಸಿದ ಪೃಥ್ವ್ಯಾದಿಗಳು ವಾಸ್ತವವಾಗಿಯೂ ಅತ್ಯಂತ ಸಂಕೀರ್ಣವಾದುವು: ಸಮಸ್ತವಿಧವಾದ ಪದಾರ್ಥಗಳ ಸೂಕ್ಷ್ಮಾಂಶಗಳನ್ನೊಳಗೊಂಡಿರುವ ಯಥಾರ್ಥ ತೊಟ್ಟಿ ಗಳೇ ಆಗಿರಬೇಕು: ನಮ್ಮ ಶರೀರದಲ್ಲಿ ಕಂಡುಬರುವ ವಸ್ತುವಿಶೇಷ ಗಳನ್ನೆಲ್ಲಾ ಒಳಗೊಂಡಿರಬೇಕು, ಇಲ್ಲವಾದರೆ ನಮ್ಮ ಶರೀರದಲ್ಲಿ ಚರ್ಮ, ಮಾಂಸ, ರಕ್ತ, ಎಲುಬು ಇವು ಹೇಗೆತಾನೆ ಉತ್ಪನ್ನವಾಗುವುವು?

ಆದಿಯಲ್ಲಿ, ಅಂದರೆ ಲೋಕಗಳುಂಟಾಗುವುದಕ್ಕೆ ಪೂರ್ವದಲ್ಲಿ, ಅನಾಕ್ಸಗೊರಾಸನ ಅಂಕುರ ಅಥವಾ ಬೀಜಗಳೆಂದು ಕರೆಯುವ ಅಪರಿ ಮಿತ ಸೂಕ್ಷ್ಮವಾದ ದ್ರವ್ಯಾಂಶಗಳು (ಅಣುಗಳೆಂದು ನಾವು ಹೇಳ ಬಹುದು) ಪರಸ್ಪರ ವಿಂಗಡಿಸಲ್ಪಡದೆ, ಜಗತ್ತನ್ನು ತುಂಬಿಕೊಂಡು ಸಮ್ಮಿಳಿತವಾಗಿದ್ದುವು. ಅಂದರೆ ಆದಿಯಲ್ಲಿದ್ದ ವಸ್ತುರಾಶಿ ಅಸಂಖ್ಯಾತ ವಾದ ಅಪರಿಮಿತಸೂಕ್ಷ್ಮವಾದ ಬೀಜಗಳಿಂದ ಕೂಡಿತ್ತು. ಈಗಿರುವ ಪ್ರಪಂಚ ಈ ವಸ್ತುರಾಶಿಯು ಸೂಕ್ಷ್ಮಾಂಶಗಳ ಪರಸ್ಪರ ಸಂಯೋಗ ವಿಯೋಗಗಳಿಂದ ಫಲಿತವಾದುದು. ಆದರೆ ಪ್ರಳಯರೂಪವಾಗಿದ್ದ ಈ ವಸ್ತುರ್ರಾಶಿಯಲ್ಲಿ ಕೂಡಿಕೊಂಡಿದ್ದ ಬೀಜಗಳನ್ನು ಪ್ರತ್ಯೇಕಿಸಿ ಅವು ಗಳಿಂದ ಕ್ರಮಸಮೀಚೀನತೆಗಳುಳ್ಳ ಈ ಪ್ರಪಂಚ ಸೃಷ್ಟಿಯಾಗುವಂತೆ

ಮಾಡಿದ ಕಾರಣ ಯಾವುದು ? ಸೂಕ್ಷ್ಮಾಂಶಗಳ ಪರಸ್ಪರ ಸ್ಥಾನಭೇದ ಅಥವಾ ಚಲನೆಯೆಂಬುದೇ. ಆದರೂ ಈ ಸೂಕ್ಷ್ಮಾಂಶಗಳು ಚಲಿಸು ವಂತೆ ಮಾಡಿದ್ದು ಯಾವುದು ? ಮೂಲವಸ್ತುರಾಶಿಯಲ್ಲಿ ಅತಿ ತೀವ್ರವಾದ ಮತ್ತು ಬಲವತ್ತರವಾದ ಚಲನೆಯೊಂದು ಒಂದಾನೊಂದು ಪ್ರದೇಶದಲ್ಲಿ ಹುಟ್ಟಿ ಆ ಸ್ಥಳದಲ್ಲಿದ್ದ ಬೀಜಗಳನ್ನೆಲ್ಲಾ ಪ್ರತ್ಯೇಕಮಾಡಿತು. ಈ ಚಲನೆ ಮುಂದುಮುಂದುವರಿಯುತ್ತಾ ಸ್ವಜಾತೀಯ ಸೂಕ್ಷ್ಮಾಂಶ ಗಳನ್ನೆಲ್ಲಾ ಒಂದುಗೂಡಿಸಿ ವಸ್ತುರಾಶಿಯ ಆದ್ಯಂತದವರೆಗೂ ಹರ ಡಿತು. ಪ್ರಥಮಾವರ್ತನೆ ವಸ್ತುರಾಶಿಯಲ್ಲಿ ಸಾಂದ್ರ ಮತ್ತು ವಿರಳ, ಉಷ್ಣ ಮತ್ತು ಶೀತ, ಪ್ರಕಾಶ ಮತ್ತು ಮಸಕು, ಮುಂತಾದ ದ್ವಂದ್ವಗಳು ಒಂದಕ್ಕೊಂದು ವಿಭಿನ್ನವಾಗಿ, ಸಾಂದ್ರವಾಗಿಯೂ ತೇವ ವುಳ್ಳದ್ದಾಗಿಯೂ, ಶೀತವಾಗಿಯೂ, ಮಸಕಾಗಿಯೂ ಇದ್ದ ಭಾಗ ಈಗ ನಮ್ಮ ಭೂಮಿ ಇರುವ ಕಡೆಯಲ್ಲಿಯೂ ; ವಿರಳವಾಗಿಯೂ, ಉಷ್ಣವಾಗಿಯೂ, ಪ್ರಕಾಶವಾಗಿಯೂ ಇದ್ದ ಒಣಗಿದ ಭಾಗ ಆಕಾಶ ದಂತ್ಯದಲ್ಲಿಯೂ ಹೋಗಿ ನಿಲ್ಲುವಂತೆ ಮಾಡಿತು. ಈ ತೆರನಾದ ವಿಯೋಗ ಗತಿ ಮುಂದುವರಿದು. ಕ್ರಮೇಣ ಗಗನಮಂಡಲದಲ್ಲಿ ನಕ್ಷತ್ರಗಳೂ ಗೋಳಗಳೂ ಉಂಟಾದುವು. ಸೂರ್ಯನ ಉಷ್ಣಕಿರಣಗಳು ತೇವವಾಗಿದ್ದ ಭೂಮಿಯನ್ನು ಕ್ರಮೇಣ ಗಟ್ಟಿಮಾಡಿತು ; ಇಂಥ ಭೂಪ್ರದೇಶಗಳಲ್ಲಿ ಸುರಿಯುವ ಮಳೆಯಿಂದ ಬಿದ್ದ ಬೀಜವಿಶೇಷಗಳು ಪ್ರಪಂಚದಲ್ಲಿ ಜೀವ ರಾಶಿಗಳು ಉತ್ಪನ್ನವಾಗುವುದಕ್ಕೆ ಕಾರಣವಾದುವು.

ಈ ರೀತಿಯಲ್ಲಿ ಅತ್ಯಂತ ಸಂಕೀರ್ಣವಾಗಿರುವ ವರ್ತಮಾನ ಜಗತ್ತು ಪ್ರಥಮಾವರ್ತನೆಯಿಂದುಂಟಾದ ಅನೇಕಾನೇಕ ಚಲನಗತಿಗಳ ಫಲ ವಾಗಿದೆ. ಆದರೆ ಆ ಪ್ರಥಮಾವರ್ತನೆಯ ಮೂಲಕಾರಣವೇನು ? ಎಂಪಿಡೋಕ್ಲಿಸನು ಹೇಳಿದಂತೆ ಸೃಷ್ಟಿಗತಿಯ ಪ್ರಥಮಚಲನೆಯನ್ನು ವಿವರಿಸಲು ಪ್ರೇಮ ಮತ್ತು ದ್ವೇಷವೆಂಬ ಶಕ್ತಿವಿಶೇಷಗಳನ್ನು ಅನಾಕ್ಸ ಗೊರಾಸನು ಒಪ್ಪುವುದಿಲ್ಲ. ಇವುಗಳಿಗೆ ಬದಲಾಗಿ ಮೂಲಬೀಜ ಗಳಿಂದ ಸಂಪೂರ್ಣವಾಗಿ ಬೇರೆಯಾದ, ಇತರ ಯಾವ ವಿಧವಾದ ವಸ್ತು ಗಳೊಡನೆಯೂ ಬೆರೆಯದ ಅಥವಾ ಸಂಬಂಧವಿಲ್ಲದ, ಮನಸ್ಸು ಅಥವಾ

ಆತ್ಮವೆಂಬ ಚಿಚ್ಛಕ್ತಿವಿಶೇಷವನ್ನು ತರುತ್ತಾನೆ. ಈ ಚಿದ್ವಿಶೇಷ ಕೇವಲ ಏಕಮಾತ್ರತತ್ವವಾಗಿಯೂ ಅಖಂಡವಾಗಿಯೂ ಇದ್ದು ಮೂಲ ದ್ರವ್ಯವನ್ನು ಚೈತನ್ಯಯುತವಾಗಿ ಮಾಡಲು ಶಕ್ತಿಯುಳ್ಳ ಸೃಷ್ಟಿನಿಯಾಮಕ ಶಕ್ತಿಯೆಂದು ಹೇಳಬಹುದು. ಇದು ಸ್ವಾಭಾವಿಕವಾಗಿ ಸಚೇತನವಾದ, ಪ್ರಪಂಚದ ಸರ್ವಚೈತನ್ಯ ಚಲನೆಗಳಿಗೂ ಮೂಲಾಧಾರವಾದ, ವಸ್ತು: ಇದು ಭೂತಭವಿಷ್ಯದ್ವರ್ತಮಾನಗಳಲ್ಲಿ ಸಕಲವನ್ನೂ ಅರಿತದ್ದಾಗಿ ಸರ್ವಕ್ಕೂ ಕಾರಣಭೂತವಾಗಿ ಸರ್ವವನ್ನೂ ಶಕ್ತಿಯಿಂದ ಆಳತಕ್ಕದ್ದಾಗಿದೆ.

ಅನಾಕ್ಸಗೊರಾಸನು ತನ್ನ "ಮನಸ್ಸು" ಅಥವಾ "ಆತ್ಮ"(Spirit) ಎಂಬ ತತ್ವಕ್ಕೆ ಯಥಾರ್ಥವಾದ ಶುದ್ಧ ಆತ್ಮಸ್ವರೂಪವೆಂದು ಅರ್ಥಮಾಡಿದನೋ, ಅಥವಾ ಬಹು ಸೂಕ್ಷ್ಮವಾದ ದ್ರವ್ಯ (ಮೂಲಭೂತ) ಎಂದು ಅರ್ಥಮಾಡಿದನೋ, ಇಲ್ಲವೆ ಅದು ಪೂರ್ಣ ಭೌತವೂ ಅಲ್ಲದ ಶುದ್ಧ ಆತ್ಮಸ್ವರೂಪವೂ ಅಲ್ಲದ ದ್ವಂದ್ವ ಸ್ವಭಾವವುಳ್ಳ ತತ್ವವೆಂದು ತಿಳಿದನೋ, ಈ ವಿಚಾರವನ್ನು ನಿಶ್ಚಯಮಾಡಲು ಸಾಧ್ಯವಿಲ್ಲದೆ ಅವನ ವ್ಯಾಖ್ಯಾನಕಾರರೆಲ್ಲಾ ಭಿನ್ನಾಭಿಪ್ರಾಯವುಳ್ಳವರಾಗಿರುತ್ತಾರೆ. ಈ ತತ್ವದ ಸ್ವರೂಪವಿಚಾರದಲ್ಲಿ ಈತನು ಕೆಲವುವೇಳೆ ಅಸಮಂಜಸವಾಗಿ ಒಕ್ಕಣಿಸಿದ್ದರೂ—ಕೆಲವು ಕಡೆ ಅದು ಎಲ್ಲಾ ಪದಾರ್ಥಗಳಿಗಿಂತಲೂ ಅತ್ಯಂತ ಸೂಕ್ಷ್ಮವಾದ ದ್ರವ್ಯವೆಂದು ಹೇಳುತ್ತಾನೆ—ವಸ್ತುಸ್ಥಿತಿಯಲ್ಲಿ ಅದು ಸರ್ವ ದ್ರವ್ಯಕ್ಕೂ ಅನನ್ಯವಾದ, ಮತ್ತೆ ಯಾವ ವಸ್ತುವಿನೊಡನೆಯೂ ಸಂಯೋಗವಾಗದ, ತತ್ವವಿಶೇಷವೆಂಬುದೇನೋ ನಿಸ್ಸಂಶಯವಾಗಿ ಉದಾಹೃತವಾಗಿದೆ. ಈತನ ಮತವನ್ನು ನಾವು ಅವ್ಯಕ್ತ ದ್ವೈತವೆಂದು ಹೇಳಬಹುದು. ದ್ವೈತವೆಂಬುದು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಚಿತ್ತೇನೋ ಸೃಷ್ಟಿಗತಿಯನ್ನು ಆರಂಭಮಾಡಿತು, ಆದರೆ ಸೃಷ್ಟಿಯಲ್ಲಿ ಸಜೀವ ರೂಪಗಳಲ್ಲೆಲ್ಲಾ—ಖನಿಜಧಾತುಗಳಲ್ಲಿಯೂ ಕೂಡ—ಅದೇ ಚಿತ್ತು ಸಾಕ್ಷಾತ್ಕಾರವಾಗಿದೆ. ಇತರ ಕಾರಣಗಳಿಂದ ವಿವರಿಸಲು ಸಾಧ್ಯವಿಲ್ಲದ ಚಲನ ಗತಿಗಳೆಲ್ಲೆಲ್ಲುಂಟೋ ಅಲ್ಲೆಲ್ಲಾ ಆ ಚಲನ ಗತಿಗಳಿಗೆ ಚಿತ್ತು ಕಾರಣಭೂತವಾಗಿದೆಯೆಂದು ಅನಾಕ್ಸಗೊರಾಸನು ಹೇಳುತ್ತಾನೆ.

ಆವರಿಸಿಕೊಂಡಿರುವ ವಸ್ತುರಾಶಿಯಲ್ಲಿ ಅದಿದೆ. ಆಧುನಿಕ ಶಬ್ದಗಳನ್ನು ಉಪಯೋಗಿಸುವುದಾದರೆ ಅನಾಕ್ಸಗೊರಾಸಿನ ಚಿತ್ತು ಅತೀಂದ್ರಿಯವಾಗಿಯೂ (ದ್ರವ್ಯಾತೀತ)ದ್ರವ್ಯಾಂತರ್ಗತವಾಗಿಯೂ (transcendent, immanent) ಇದೆಯೆಂದು ಹೇಳಬೇಕು: ವಿಶ್ವೇಶ್ವರಮತವೋ ವಿಶ್ವಬ್ರಹ್ಮವಾದವೋ (Theism or Pantheism) ಹೇಳಲಾಗುವುದಿಲ್ಲ. ಅನಾಕ್ಸಗೊರಾಸಿನ ಅನಿರ್ಣೀತವಾದ ಈ ಸಿದ್ಧಾಂತವನ್ನುಕುರಿತು ಅರಿಸ್ಟಾಟಲ್ ಎಂಬ ತತ್ವಜ್ಞಾನಿ ಹೀಗೆಂದು ವಿಮರ್ಶೆಮಾಡಿರುವನು. "ಪ್ರಪಂಚಸೃಷ್ಟಿಯನ್ನು ಸಾಧಿಸುವುದಕ್ಕೆ ಒಂದು ಸಾಧನವನ್ನಾಗಿ ಅನಾಕ್ಸಗೊರಾಸನು ತನ್ನ ಚಿತ್ತೆಂಬ ತತ್ವವನ್ನುಪಯೋಗಿಸುತ್ತಾನೆ. ಯಾವುದಾದರೊಂದು ವಸ್ತು ಹೇಗುಂಟಾಯಿತು ? ಎಂಬ ಪ್ರಶ್ನೆಗೆ ಬೇರೆ ವಿಧವಾದ ಕಾರಣವನ್ನು ಸೂಚಿಸಲು ಸಾಧ್ಯವಿಲ್ಲದಿದ್ದರೆ ಅದರ ವಿವರಣೆಗೆ ಚಿತ್ತನ್ನೆಳೆಯುತ್ತಾನೆ: ಆದರೆ ಉಳಿದ ಸಂದರ್ಭಗಳಲ್ಲೆಲ್ಲಾ ವಸ್ತುಪರಿಣಾಮವನ್ನು ವಿವರಿಸಲು ಚಿತ್ತಲ್ಲದ ಬೇರೆ ಯಾವಯಾವುದೋ ಕಾರಣಗಳನ್ನು ತರುತ್ತಾನೆ." ವಸ್ತುಸ್ಥಿತಿಯೇನೆಂದರೆ, ಅನಾಕ್ಸಗೊರಾಸನು ಸೃಷ್ಟಿವಿವರಣೆಮಾಡಲು ಪ್ರಾಕೃತಿಕ ಅಥವಾ ಸ್ವಾಭಾವಿಕ ಕಾರಣಗಳನ್ನೇ (Mechanical causes) ಉಪಯೋಗಿಸಬೇಕೆಂದಿರುವವನು ಯತ್ನವಿಲ್ಲದ ಕೊನೆಯುಪಕ್ಷದಲ್ಲಿ ಚಿತ್ತೆಂಬ ಅನನ್ಯತತ್ವದ ಸಹಾಯವನ್ನು ಕೋರುತ್ತಾನೆ.

### (೩) ವೈಶೇಷಿಕರು (Atomists)

ಎಂಪಿಡೋಕ್ಲಿಸನೂ ಅನಾಕ್ಸಗೊರಾಸನೂ ತಮ್ಮ ಬೋಧನೆಗಳಿಂದ, ಪ್ರಪಂಚವನ್ನು ಸ್ವಾಭಾವಿಕ—ವೈಜ್ಞಾನಿಕ—ರೀತಿಯಲ್ಲಿಯೇ ಅವಲೋಕನಮಾಡುವ, ಆಧುನಿಕ ವಿಜ್ಞಾನಶಾಸ್ತ್ರದಲ್ಲಿ ಪ್ರಸಿದ್ಧಿಗೊಂಡಿರುವ, " ಪರಮಾಣುಸಿದ್ಧಾಂತ "(Atomic Theory) ಎಂಬ ಸಿದ್ಧಾಂತದ ವಿಕಸನಕ್ಕೆ ಅವಕಾಶವನ್ನುಂಟುಮಾಡಿದರು. ಅವರ ಬೋಧನೆಗಳಾದರೋ ಅನೇಕ ವಿಷಯಗಳಲ್ಲಿ ದೋಷಯುಕ್ತವಾಗಿದ್ದುದರಿಂದ ಆ ದೋಷಗಳನ್ನೆಲ್ಲಾ ಪರಿಹರಿಸಿ ಸಮಂಜಸವನ್ನಾಗಿ ಮಾಡುವುದೇ ವೈಶೇಷಿಕರ

ಕರ್ತವ್ಯವಾಯಿತು. ಮೂಲಭೂತಗಳಾದ ಸೂಕ್ಷ್ಮಾಂಶಗಳನ್ನು ಜಗತ್ತಿನ ಮೂಲಸತ್ವಾಂಶಗಳೆಂದು ವೈಶೇಷಿಕರೊಪ್ಪಿಕೊಂಡರೂ ಎಂಪಿಡೋಕ್ಲಿಸನೂ ಅನಾಕ್ಸಗೊರಾಸನೂ ಅವುಗಳಿಗೆ ಆರೋಪಿಸಿದ ಗುಣವಿಶೇಷಗಳನ್ನೂ ಆ ಸತ್ವಾಂಶಗಳು ಅನ್ಯವಾದ ದೇವತೆಗಳಿಂದ ಅಥವಾ ಚಿದ್ವಿಶೇಷದಿಂದ ಗತಿಯನ್ನು ಹೊಂದುವುವೆಂಬ ಸಿದ್ಧಾಂತವನ್ನೂ ಎಷ್ಟುಮಾತ್ರಕ್ಕೂ ಒಪ್ಪಿಕೊಳ್ಳುವುದಿಲ್ಲ. ಪೃಥಿವಿ, ಅಪ್, ತೇಜಸ್, ವಾಯುಗಳೆಂಬುವು ಸಮಸ್ತ ವಸ್ತುಗಳ ಮೂಲಾಧಾರಗಳಲ್ಲ; ನಾನಾವಿಧವಾದ ಗುಣವಿಶೇಷಗಳನ್ನು ಹೊಂದಿರುವ ಅಸಂಖ್ಯಾತವಾದ ಬೀಜಗಳೆಂಬುವು ಮೊದಲೇ ಇಲ್ಲ. ಇಂಥ ವಸ್ತುಗಳು ಮೂಲಭೂತಗಳೆಂದಿಗೂ ಆಗಲಾರವು, ಇವೇ ಮಿಶ್ರಜನಿತವಾದುವು. ಅಗೋಚರವಾದ, ಅಭೇದ್ಯವಾದ, ಅವಿಭಾಜ್ಯವಾದ ರೂಪ ತೂಕ ಗಾತ್ರಗಳಲ್ಲಿ ಮಾತ್ರ ವ್ಯತ್ಯಸ್ತವಾದ ಪರಮಾಣುಗಳೇ ನಿಜವಾದ ಸತ್ವಾಂಶಗಳಾಗಿರಬೇಕು. ಈ ಪರಮಾಣುಗಳಿಗೆ ಚಲನಶಕ್ತಿಯೆಂಬುದು ನೈಜವಾದುದು.

ಈ ವೈಶೇಷಿಕ ಮತವನ್ನು ಸ್ಥಾಪಿಸಿದವರು ಲುಸಿಪ್ಪಸ್ ಮತ್ತು ಡೆಮಾಕ್ರಿಟಸ್ ಎಂಬವರು. ಇವರ ಜೀವನಚರಿತ್ರೆಯ ವಿಷಯವಾಗಿ ನಮಗೆ ತಿಳಿದುಬಂದಿರುವುದು ಬಹು ಸ್ವಲ್ಪ. ಲುಸಿಪ್ಪಸನು ಮೈಲಿಟಸ್ ನಗರದಿಂದ ಬಂದು ಇಲಿಯಾ ಎಂಬ ಸ್ಥಳದಲ್ಲಿ ಜೀನೋ ಎಂಬವನ ಶಿಷ್ಯನಾಗಿದ್ದನು. ಡೆಮಾಕ್ರಿಟಸ್ ಎಂಬವನು ಅಬ್ಡೀರಾ ಎಂಬ ಸ್ಥಳದಲ್ಲಿ ಕ್ರಿ.ಪೂ. ೪೬೦ ರಲ್ಲಿ ಜನಿಸಿ ೩೭೦ ರಲ್ಲಿ ಕಾಲವಾದನು. ಈತನು ಅನೇಕ ದೇಶಗಳ ಸಂಚಾರಮಾಡಿ ಶಕ್ತಿಶಾಸ್ತ್ರ(Physics), ಅಧ್ಯಾತ್ಮ ಶಾಸ್ತ್ರ, ನೀತಿಶಾಸ್ತ್ರ, ಇತಿಹಾಸ ಮುಂತಾದವುಗಳ ವಿಷಯವಾಗಿ ಅನೇಕ ಗ್ರಂಥಗಳನ್ನು ರಚಿಸಿದನು. ಈತನು ಪ್ರಸಿದ್ಧ ಗಣಿತಿಯೂ ಆಗಿದ್ದನು.

ಇಲಿಯಾಟಿಕರು ಸಾಧಿಸಿದಂತೆಯೇ ನಿರ್ವಿಶಿಷ್ಟ ಪರಿಣಾಮ ಅಚಿಂತ್ಯವೆಂದೂ, ಸತ್ಯಸತ್ವ ಸ್ವರೂಪದಲ್ಲಿ ನಿತ್ಯವಾಗಿಯೂ, ಅವಿನಶ್ವರವಾಗಿಯೂ, ವಿಕಾರರಹಿತವಾಗಿಯೂ ಇರಬೇಕೆಂದೂ ವೈಶೇಷಿಕರು ಅನುಮೋದಿಸುತ್ತಾರೆ. ಆದರೂ ಪ್ರತಿ ಕ್ಷಣದಲ್ಲಿಯೂ ವಸ್ತುಗಳು ಪರಿಣಾಮಹೊಂದು

ತ್ತಿರುವುವೆಂಬುದೂ, ವಸ್ತುಗಳು ಚಲಿಸುತ್ತಿರುತ್ತವೆಂಬುದೂ ಅನುಭವಸಿದ್ಧವಾದ ವಿಷಯಗಳು. ಚಲನೆಯೂ ಪರಿಣಾಮವೂ ಶೂನ್ಯಸ್ಥಾನ (Space) ಇಲ್ಲದಿದ್ದರೆ ಹೇಗೆ ಸಂಭವಿಸಬಲ್ಲವು ? ಈ ಶೂನ್ಯವನ್ನೇ ಪಾರ್ಮಿನೈಡೀಸನು ಅಸತ್ತೆಂದು ಕರೆದನು. ಆದುದರಿಂದ ಅಸತ್ತು ಅರ್ಥಾತ್ ಶೂನ್ಯಸ್ಥಾನವೆಂಬುದು ನಿಜ; ಭೌತ ವಸ್ತುಗಳಿರುವಂತೆ ಅಸತ್ತೆಂಬುದಿಲ್ಲದಿದ್ದರೂ—ಅಂದರೆ ಇಂದ್ರಿಯದೃಶ್ಯವಾದ ಶರೀರವನ್ನು ಹೊಂದದಿದ್ದರೂ—ಅಸತ್ತೆಂಬುದು ಅಭಾವಸ್ವರೂಪವಲ್ಲ. ಸ್ಥಿತಿರೂಪವೆಂಬುದು ಈ ಕಾರಣದಿಂದ ಎರಡು ವಿಧವಾಯಿತು: ಇಂದ್ರಿಯ ದೃಶ್ಯಗಳಾದ ಭೌತ ವಸ್ತುರೂಪ ಮತ್ತು ಇಂದ್ರಿಯ ದೃಶ್ಯವಲ್ಲದ ಶೂನ್ಯಸ್ಥಿತಿರೂಪ. ಶಾರೀರಕ ರೂಪವನ್ನು ಧರಿಸದಿದ್ದರೂ ಒಂದಾನೊಂದು ವಸ್ತು ವಾಸ್ತವಿಕವಾಗಿಯೂ ಇರಬಹುದು. ಈ ಪರ್ಯ್ಯಾಯದಲ್ಲಿ ಸತ್ತೆಂಬುದು (ಭೌತಸ್ಥಿತಿ) ಅಸತ್ತಿಗಿಂತಲೂ (ಶೂನ್ಯಸ್ಥಿತಿ) ಲೇಶಾಂಶವೂ ಹೆಚ್ಚು ವಾಸ್ತವಿಕವಲ್ಲ (real). ಆದುದರಿಂದ ಸತ್ತು ಮತ್ತು ಅಸತ್ತು—ಭರಿತವೂ ಮತ್ತು ಶೂನ್ಯವೂ—ಎರಡೂ ನಿಜ ; ಹೀಗೆಂದಮೇಲೆ ಸತ್ಯಸತ್ವದ ಸ್ವರೂಪವೇನಾಯಿತು ? ಇಲಿಯಾಟಿಕರು ಹೇಳಿದಂತೆ ಸತ್ಯಸತ್ವ ಅಖಂಡವಾಗಿಯೂ, ಅವಿಭಕ್ತವಾಗಿಯೂ, ಅಚಲವಾಗಿಯೂ ಇರಲಾರದು : ಶೂನ್ಯದೇಶಗಳಿಂದ ಪರಸ್ಪರ ಪ್ರತ್ಯೇಕಿಸಲ್ಪಟ್ಟ, ಅಸಂಖ್ಯಾತವಾದ ಸತ್ವಾಂಶಗಳೇ ಸತ್ಯಸತ್ವದ ಸ್ವರೂಪವಾಗಿರಬೇಕು.

ಈ ಸತ್ವಾಂಶಗಳಲ್ಲಿ ಪ್ರತಿ ಒಂದೂ ಅವಿಭಾಜ್ಯ, ಅಭೇದ್ಯ, ಶುದ್ಧ : ಒಂದು ಪರಮಾಣುವೆಂದು ಹೇಳಬಹುದು. ಆಧುನಿಕ ವೈಜ್ಞಾನಿಕರು ಯೋಚಿಸುವಂತೆ ಪರಮಾಣುವೆಂಬುದು ಗಣಿತಶಾಸ್ತ್ರದ ಬಿಂದುವಲ್ಲ; ಶಕ್ತಿಪ್ರಯೋಗದ ಕೇಂದ್ರವೂ ಅಲ್ಲ (centre of force) ; ಅದಕ್ಕೆ ಪರಿಮೇಯತ್ವ( extension ) ಉಂಟು ; ಗಣಿತಪ್ರಕಾರವಾಗಿ ಅವಿಭಾಜ್ಯವಲ್ಲದಿದ್ದರೂ ವಸ್ತುತಃ ಅವಿಭಾಜ್ಯ, ಅಂದರೆ ಅದರ ಮಧ್ಯೆ ಶೂನ್ಯ ದೇಶಗಳಿಲ್ಲ. ಸರ್ವಪರಮಾಣುಗಳೂ ಏಕಲಕ್ಷಣವುಳ್ಳವು : ಎಂಪಿಡೋಕ್ಲೀಸನು ಹೇಳಿದಂತೆ ಅವು ಪೃಥಿವಿ, ಅಪ್, ತೇಜಸ್, ವಾಯುಗಳಲ್ಲ. ನಿರ್ಣಯಗುಣಗಳುಳ್ಳ, ಭೇದಸ್ವಭಾವವುಳ್ಳ ಬೀಜಗಳೂ ಅಲ್ಲ; ಅತಿ ಸೂಕ್ಷ್ಮ

ವಾದ, ಸಾಂದ್ರವಾದ, ಪರಸ್ಪರ ರೂಪದಲ್ಲಿಯೂ, ಗಾತ್ರದಲ್ಲಿಯೂ, ತುಲನದಲ್ಲಿಯೂ, ಸ್ಥಾನವ್ಯವಸ್ಥೆಯಲ್ಲಿಯೂ ವ್ಯತ್ಯಸ್ತಗಳಾದ ಭೌತ ಅಣುಗಳಷ್ಟೆ. ಅವು ನಿರುತ್ಪನ್ನವಾದುವು, ನಾಶರಹಿತವಾದುವು, ಪರಿಣಾಮರಹಿತವಾದುವು. ಅವು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿಯೇ ಎಂದೆಂದಿಗೂ ಇರತಕ್ಕವು. ಹೀಗೆಂದಮೇಲೆ ಪಾರ್ಮಿನೈಡೀಸಿನ ಸತ್ಯಸತ್ವಕ್ಕೂ ವೈಶೇಷಿಕರ ಸತ್ಯಸತ್ವಕ್ಕೂ ಇರುವ ವ್ಯತ್ಯಾಸವೇನು? ಪಾರ್ಮಿನೈಡೀಸಿನ ಸತ್ತೆಂಬುದೇ ಒಡೆದು ಚೂರುಚೂರಾದ, ಕಡೆಯಲ್ಲಿ ಅವಿಭಾಜ್ಯವಾದ, ಪರಸ್ಪರ ಶೂನ್ಯದೇಶಗಳಿಂದ ವಿಭಿನ್ನವಾದ ವೈಶೇಷಿಕರ ಪರಮಾಣುಗಳು.

ಇಂಥ ಸ್ವರೂಪವುಳ್ಳ ಪರಮಾಣುಗಳಿಂದಲೂ, ಶೂನ್ಯ ದೇಶಗಳಿಂದಲೂ ಪ್ರಪಂಚದ ವಸ್ತುಗಳು ಉತ್ಪನ್ನವಾಗಿವೆ. ಸಮಸ್ತ ವಸ್ತುಗಳೂ ಪರಮಾಣುಗಳ ಮತ್ತು ಶೂನ್ಯದೇಶಗಳ ಸಂಯೋಗಫಲ; ಉತ್ಪತ್ತಿ ಎಂದರೆ ಸಂಯೋಗ, ನಾಶವೆಂದರೆ ವಿಯೋಗ. ಹಾಗಾದರೆ ಪ್ರಪಂಚ ವಸ್ತುಗಳಲ್ಲಿ ಪರಸ್ಪರ ಭೇದ ಹೇಗುಂಟಾಯಿತೆಂದರೆ, ಪರಮಾಣುಗಳು ಮೇಲೆ ಹೇಳಿದಂತೆ ಆಕಾರದಲ್ಲಿಯೂ, ಗಾತ್ರದಲ್ಲಿಯೂ ತೂಕದಲ್ಲಿಯೂ, ಸ್ಥಾನವ್ಯವಸ್ಥೆಯಲ್ಲಿಯೂ ಪರಸ್ಪರ ವಿಭಿನ್ನವಾಗಿರುವುದರಿಂದ ವಸ್ತುಭೇದ ಉಂಟಾಯಿತು. ಅವು ಪರಸ್ಪರ ಸಂಪರ್ಕದಿಂದ, ಅಂದರೆ ಒತ್ತಾಯದಿಂದ—ಅಥವಾ ಒಂದು ವಸ್ತುವಿನ ಸ್ರಾವಕಗಳು ಮತ್ತೊಂದು ವಸ್ತುವನ್ನು ತಾಡನಮಾಡುವುದರಿಂದ—ತಮ್ಮ ಶಕ್ತಿ ಪ್ರಯೋಗವನ್ನುಂಟುಮಾಡುತ್ತವೆ. ಈ ಪರಮಾಣುಗಳು ತಮ್ಮಲ್ಲಿ ನೈಜವಾಗಿ ಅಡಗಿರುವ ಚಲನಶಕ್ತಿಯಿಂದ ಪರಸ್ಪರ ಸಂಧಿಸುತ್ತವೆ ಮತ್ತು ವಿಭಕ್ತವಾಗುತ್ತವೆ. "ಕಾರಣವಿಲ್ಲದೆ ಪ್ರಪಂಚದಲ್ಲಿ ಯಾವುದೂ ಸಂಭವಿಸುವುದಿಲ್ಲ; ಪ್ರತಿ ಒಂದೂ ಕಾರಣಾಂತರದಿಂದಲೇ ಮತ್ತು ಆವಶ್ಯಕವಾಗಿಯೇ". ಆದರೆ ಈ ಚಲನೆಯೋ ಅಂದರೆ ಅದು ಪರಮಾಣುಗಳಂತೆ ನಿರುತ್ಪನ್ನವಾದುದು; ಪರಮಾಣುಗಳು ಅನಾದಿಯಾಗಿ ಚಲನೆಯಲ್ಲಿರುತ್ತವೆ, ಸ್ಥಾವರಸ್ಥಿತಿಯನ್ನು ಅವು ಕಂಡುದೇ ಇಲ್ಲ. ಏಕಲಕ್ಷಣವುಳ್ಳ ಪರಮಾಣುಗಳಿಗೆ ಪರಸ್ಪರ ಸಂಯೋಗವೆಂತು ಸಾಧ್ಯವೆಂದರೆ ಕೆಲವು

ಅಣುಗಳು ಕೊಂಡಿಯಾಕಾರದಲ್ಲಿಯೂ, ಮತ್ತೆ ಕೆಲವು ಸಂದು ಗೆರೆಗಳುಳ್ಳವುಗಳಾಗಿಯೂ ಇರುವುದರಿಂದ ಒಂದಕ್ಕೊಂದು ಸಮ್ಮಿಳಿತವಾಗುತ್ತವೆ.

ಪ್ರಪಂಚಗಳ ಕ್ರಮಸೃಷ್ಟಿ ಈ ರೀತಿಯಾಗಿ ವಿವರಿಸಲ್ಪಟ್ಟಿದೆ. ಪರಮಾಣುಗಳು ತೂಕವುಳ್ಳವುಗಳಾಗಿರುವುದರಿಂದ ಅಧೋಮುಖಿಗಳಾಗುತ್ತವೆ; ಆದರೆ ಈ ಮಧ್ಯೆ ಹೆಚ್ಚು ತೂಕವುಳ್ಳ ಅಣುಗಳ ಶೀಘ್ರಪತನದಿಂದ ಲಘುತರವಾದ ಅಣುಗಳು ಊರ್ಧ್ವಮುಖವಾಗಿ ಒಯ್ಯಲ್ಪಡುತ್ತವೆ. ಈ ವಿಧವಾದ ಸಂಘರ್ಷಣದಿಂದ ಸುಳಿಯಾಕಾರದ ಚಲನೆಯೊಂದು ಉತ್ಪತ್ತಿಯಾಗಿ ಎಲ್ಲಾ ಭಾಗದಲ್ಲಿಯೂ ಹರಡುತ್ತ ಸಮತೂಕವುಳ್ಳ ಪರಮಾಣುಗಳೆಲ್ಲಾ ಒಂದೇಕಡೆ ಸೇರುವಂತೆ ಮಾಡುವುದರಿಂದ ಭಾರವಾಗಿರುವ ಅಣುಗಳೆಲ್ಲಾ ಮಧ್ಯಭಾಗದಲ್ಲಿ ಕೂಡಿ ಆದಿಯಲ್ಲಿ ವಾಯು, ಅನಂತರ ನೀರು, ತದನಂತರ ಘನವಾದ ಭೂಮಿ ಉಂಟಾಗುವಂತೆಯೂ; ಲಘುತರವಾದ ಅಣುಗಳು ಪರಿಧಿಯಲ್ಲಿ ಸೇರಿ ಗಗನಮಂಡಲದ ಅಗ್ನಿಗಳೂ ಆಕಾಶವೂ ಸೃಷ್ಟಿಯಾಗುವಂತೆಯೂ ಮಾಡುವುದು—ಈ ರೀತಿಯಲ್ಲಿ ಅನೇಕಾನೇಕ ಪ್ರಪಂಚಗಳು ಸೃಷ್ಟಿಯಾಗುತ್ತವೆ.

ಶಬ್ದ, ಸ್ಪರ್ಶ, ರಸ, ಗಂಧ, ವರ್ಣ ಮುಂತಾದ ವಸ್ತುವಿಶೇಷಣಗಳು ವಸ್ತುಗಳಲ್ಲಿಯೇ ಇಲ್ಲ; ಅವು ವಸ್ತುವಿನ ಪರಮಾಣುಗಳು ನಮ್ಮ ಇಂದ್ರಿಯಗಳ ಕೂಡ ಸಂಯೋಗವಾಗುವುದರ ಫಲವಷ್ಟೆ. ಸ್ವರೂಪಕ್ಕನುಸಾರವಾಗಿ ಪರಮಾಣುಗಳು ನಾವು ಹಿಂದೆಯೇ ಹೇಳಿರುವ ಅಭೇದ್ಯತೆ, ರೂಪ, ಗಾತ್ರ ಇವು ಹೊರತು ಮತ್ತೆ ಯಾವ ಗುಣಗಳನ್ನೂ ಹೊಂದಿಲ್ಲ. ಈ ಕಾರಣದಿಂದ ಇಂದ್ರಿಯಾವಲೋಕನ ವಸ್ತುಗಳ ನಿಜವಾದ ಜ್ಞಾನವನ್ನು ಕೊಡುವುದಿಲ್ಲ; ವಸ್ತುಗಳು ಯಾವರೀತಿಯಲ್ಲಿ ನಮ್ಮ ಇಂದ್ರಿಯಗಳ ಸಂಬಂಧವನ್ನು ಪಡೆಯುತ್ತವೆಂಬುದನ್ನು ಮಾತ್ರ ತಿಳಿಸುತ್ತದೆ. ಪರಮಾಣುಗಳನ್ನು ನಾವು ಇಂದ್ರಿಯಗಳಿಂದ ನೋಡಲಾರೆವು, ಆದರೆ ಅವುಗಳ ಸ್ಥಿತಿಗತಿಗಳನ್ನು ಕುರಿತು ಆಲೋಚಿಸಬಲ್ಲೆವು. ಇಂದ್ರಿಯಾವಲೋಕನ ಅಸ್ಪಷ್ಟ, ಅವಾಸ್ತವ ಜ್ಞಾನ; ಚಿದಾವಲೋಕನ ಇಂದ್ರಿಯ

ಜ್ಞಾನವನ್ನು ದಾಟಿ ಪರಮಾಣುವಿನ ಹೃದಯವನ್ನು ಭೇದಿಸುವುದರಿಂದ ನಿಜವಾದ, ವಾಸ್ತವಜ್ಞಾನವೆನಿಸಿಕೊಳ್ಳುವುದು. ಪುರಾತನ ಗ್ರೀಕ್ ತತ್ವಜ್ಞಾನಿಗಳಂತೆ ಡೆಮಾಕ್ರಿಟಸನೂ ಹೈತುಕವಾದಿ (Rationalist). ಆದರೆ ಇಂದ್ರಿಯಜ್ಞಾನವನ್ನು ಪಡೆಯದಿದ್ದರೆ ಚಿಂತನೆ ಹುಟ್ಟುವುದೇ ಇಲ್ಲ: ಇಂದ್ರಿಯಗಳು ದೊರಕಿಸುವ ಜ್ಞಾನವನ್ನು ನಮ್ಮ ವಿಜ್ಞಾನದಿಂದ ಅಥವಾ ಬುದ್ಧಿಶಕ್ತಿಯಿಂದ ಸಮಾಲೋಚನೆಮಾಡಿದರೆ ಅಂದು ವಸ್ತುಸ್ವರೂಪ ಜ್ಞಾನ ಸ್ಫೂರ್ತಿಯಾಗುವುದು.

## ಡೆಮಾಕ್ರಿಟಸ್ಸಿನ ಸ್ವರ್ಣ ವಚನಗಳು

(೧) ಲೋಕವ್ಯವಹಾರಜ್ಞಾನದಿಂದ ನಾವು ಪಡೆಯುವ ಫಲಗಳು ಮೂರು: ನಿಧಾನವಾಗಿ ಆಲೋಚಿಸುವುದು; ವಿಷಯಕ್ಕೆ ಸರಿಯಾಗಿ ಮಾತನಾಡುವುದು; ನ್ಯಾಯವಾದುದನ್ನು ನಡಸುವುದು.

(೨) ಜೀವನದ ತಿರುಳನ್ನು ಸವಿಯಬೇಕೆಂದಿರುವವನು ಹೆಚ್ಚು ವಿಚಾರಗಳ ಗೊಂದಲಕ್ಕೆ ಹೋಗಬಾರದು, ಮತ್ತು ತಾನು ಮಾಡುವ ಕಾರ್ಯದಲ್ಲಿಯೂ ತನ್ನ ಸ್ವಾಭಾವಿಕ ಶಕ್ತಿಯನ್ನು ಮೀರಿ ಮಾಡುವ ಆಶೆ ಇರಬಾರದು. ಅದೃಷ್ಟ ಕೂಡಿಬಂದು ತನ್ನನ್ನು ಉನ್ನತಪದವಿಗಳಿಗೆ ಏರಿಸುವ ಸಂಭವ ಒದಗಿದಾಗಲೂ ಸಹ, ಮನುಷ್ಯನು ಉಕ್ಕಿಬರುವ ಮಹತ್ಕಾಂಕ್ಷೆಗಳನ್ನು ಹಿಡಿತಕ್ಕೆ ತಂದು, ತನ್ನ ಎಲ್ಲೆಯನ್ನು ತಾನು ತಿಳಿದು, ಭಾಗ್ಯಲಕ್ಷ್ಮಿಯನ್ನು ಹೋಗಿಬಾರೆಂದು ಹೇಳಬೇಕೇ ಹೊರತು ತನ್ನ ಶಕ್ತಿಗೆ ಮೀರಿ ನಡೆಯಲು ಪ್ರಯತ್ನ ಪಡಬಾರದು. ಏಕೆಂದರೆ ಅತಿಯಾಗಿ ಊದಿಹೋಗಿರುವ ಮನುಷ್ಯನಿಗಿಂತಲೂ ಸಾಧಾರಣ ಗಾತ್ರವುಳ್ಳ ಮನುಷ್ಯನೇ ಕ್ಷೇಮ.

(೩) ಆತ್ಮೋನ್ನತಿಯ ಅರ್ಥಗಳನ್ನು (goods) ಬಯಸುವವನು ದೈವೀಸಂಪತ್ತನ್ನು ಬಯಸುತ್ತಾನೆ; ದೈಹಿಕಾರ್ಥಗಳನ್ನು ಕಾಮಿಸುವವನು ನಶ್ವರವಾಗುವುದನ್ನೇ ಕೋರುತ್ತಾನೆ.

(೪) ದುಷ್ಟರನ್ನು ತಡೆದು ನಿಲ್ಲಿಸುವುದು ಒಳ್ಳೆಯದು; ಕಡೆಗೆ ಅವರ ದುಷ್ಟ ಕಾರ್ಯಗಳಲ್ಲಿ ಸೇರದಿರುವುದಾದರೂ ಒಳ್ಳೆಯದು.

(೫) ಜನರು ತಮ್ಮ ನಿಜವಾದ ಸೌಖ್ಯವನ್ನು ಕಾಣುವುದು ಕಾಯಶಕ್ತಿಯಲ್ಲಾಗಲಿ ಸುವರ್ಣಪುಷ್ಪದಲ್ಲಾಗಲಿ ಅಲ್ಲ; ಧರ್ಮವರ್ತನದಲ್ಲಿ ಮತ್ತು ಸಂಪೂರ್ಣ ಜ್ಞಾನದಲ್ಲಿ ಮಾತ್ರವೇ.

(೬) ಪಾಪಕರ್ಮಗಳನ್ನೆಸಗುವುದನ್ನು ಬಿಡು—ಆದರೆ ಭಯದಿಂದಲ್ಲ, ಕರ್ತವ್ಯ ಜ್ಞಾನದಿಂದ.

(೭) ಮಾಡಿದ ದುಷ್ಕರ್ಮಗಳಿಗೆ ಪಶ್ಚಾತ್ತಾಪ ಪಡುವುದೇ ಜೀವನದ ಮೈಗಾವಲು.

(೮) ಅನ್ಯಾಯವನ್ನು ಅನುಭವಿಸುವವನಿಗಿಂತಲೂ ಅನ್ಯಾಯವನ್ನು ಮಾಡುವವನು ಹೆಚ್ಚು ನಿರ್ಭಾಗ್ಯನು.

(೯) ತನಗಿಂತಲೂ ಕೀಳಾದವರ ಕೈಕೆಳಗಿರುವುದು ಬಹು ಕಷ್ಟಪ್ರಸಂಗ.

(೧೦) ಎಷ್ಟೋ ಜನ ವಿದ್ಯೆಯನ್ನು ಕಲಿಯದವರು ಬುದ್ಧಿವಂತರಾಗಿ ಬಾಳುತ್ತಾರೆ. ಎಷ್ಟೋ ಜನ ಹೇಯಕೃತ್ಯಗಳನ್ನೆಸಗುವವರು ಭಾಷಣ ಪಾಂಡಿತ್ಯ ಭೂಷಣರೆನಿಸಿಕೊಳ್ಳುತ್ತಾರೆ.

(೧೧) ಮೂರ್ಖರು ದೌರ್ಭಾಗ್ಯದಿಂದಲೇ ಬುದ್ಧಿ ಕಲಿಯುವರು.

(೧೨) ಸತ್ಕರ್ಮಗಳನ್ನು ಮಾಡಿ ತೋರಿಸಲು ನಾವು ಶ್ರಮಪಡಬೇಕೇ ಹೊರತು, ಅವುಗಳ ತರ್ಕದಲ್ಲಲ್ಲ.

(೧೩) ಕಾಯಶಕ್ತಿ ಯಾರ ಘನತೆ ಎಂದರೆ—ಹೇರು ಹೊರುವ ಪ್ರಾಣಿಗಳದು; ಮನುಷ್ಯರಲ್ಲಿಯೋ ಎಂದರೆ—ಸೌಜನ್ಯವೇ ನಿಜವಾದ ದೊಡ್ಡತನ.

(೧೪) ಇತರರ ತಪ್ಪುಗಳಿಗಿಂತ ನಿನ್ನ ತಪ್ಪುಗಳನ್ನು ತಿದ್ದಿಕೊಳ್ಳುವುದು ಲೇಸು.

(೧೫) ಕ್ರಮಗೊಳಿಸಿದ ಶೀಲವನ್ನುಳ್ಳವರು ಕ್ರಮಗೊಂಡ ಜೀವನವನ್ನೇ ಬಾಳುತ್ತಾರೆ.

(೧೬) ಒಳ್ಳೆಯತನ ಅಂದರೆ ಕೇಡುಮಾಡದಿರುವುದೇ ಅಲ್ಲ, ಕೇಡುಮಾಡಲು ಬಯಸದೇ ಇರುವುದು.

(೧೭) ಪಾಂಡಿತ್ಯವುಳ್ಳವರು ಬಹುಮಂದಿ, ವಿವೇಕವುಳ್ಳವರು ಬಹು ಕಡಮೆ.

(೧೮) ವಿವೇಕವಿಲ್ಲದಿದ್ದರೆ ಕೀರ್ತಿಗೌರವಗಳೂ ಧನಕನಕಾದಿಗಳೂ ಅಪಾಯಕರವಾದ ಆಸ್ತಿ.

(೧೯) ದುಡ್ಡುಮಾಡುವುದರಿಂದ ಫಲವಿಲ್ಲದೇ ಇಲ್ಲ; ಆದರೆ ಅನ್ಯಾಯಮಾರ್ಗದಲ್ಲಿ ಅದನ್ನು ಮಾಡುವುದಕ್ಕಿಂತ ಹೇಯವಾದುದು ಯಾವುದೂ ಇಲ್ಲ.

(೨೦) ಒಬ್ಬ ಮನುಷ್ಯನು ಪ್ರಾಮಾಣಿಕನೇ ಅಲ್ಲವೇ ಎಂಬುದನ್ನು ಅವನ ನಡತೆಯಿಂದಲೇ ಅಲ್ಲ, ಅವನ ಅಪೇಕ್ಷೆಗಳಿಂದಲೇ ತಿಳಿದುಕೊಳ್ಳಬಹುದು.

(೨೧) ಕಪಟಿಗಳು — 'ಖೋಟಾ' ಜನರು — ಆಡಂಬರವಾಗಿ ಮಾತಾಡುತ್ತಾರೆ, ಕೈಯಲ್ಲಿ ಏನೂ ಹರಿಯುವುದಿಲ್ಲ.

(೨೨) ನನಗೆ ಅನ್ಯಾಯಮಾಡುವವನು ನನ್ನ ಶತ್ರುವಲ್ಲ, ಅನ್ಯಾಯಮಾಡಲೆಳಸುವವನು ನನ್ನ ಶತ್ರು.

(೨೩) ಪರಕೀಯರ ಶತ್ರುತ್ವಕ್ಕಿಂತಲೂ ನಮ್ಮ ಬಂಧುಬಳಗದವರ ಶತ್ರುತ್ವ ಅತಿ ಘೋರವಾದದ್ದು.

(೨೪) ತಿಳಿಗೇಡಿಗಳಾದ ಒಂದು ಗುಂಪು ಜನರ ಸಹವಾಸಕ್ಕಿಂತಲೂ ತಿಳಿವಳಿಕೆಯುಳ್ಳ ಒಬ್ಬನ ಸ್ನೇಹವೇ ಮೇಲು.

(೨೫) ಗುಣವಂತನೂ ವಿಶ್ವಾಸವುಳ್ಳವನೂ ಆದ ಒಬ್ಬ ಮಿತ್ರನನ್ನಾದರೂ ಪಡೆಯದೆ ಇರತಕ್ಕ ಮನುಷ್ಯನು ಬದುಕಲು ಅರ್ಹನಲ್ಲ.

(೨೬) ಒಳ್ಳೆಯದನ್ನರಸು, ಬಹು ಕಷ್ಟಪಟ್ಟರೆ ಅದು ಸಿಕ್ಕಬಹುದು; ನೀನು ಹುಡುಕದೆಯೇ ಕೆಟ್ಟದ್ದು ಕಣ್ಣಿಗೆ ಬೀಳುತ್ತದೆ.

(೨೭) ಸಾವಿರದಳಕ್ಕೆ ಸರದಾರನಾದರೇನು, ಹೆಂಗಸಿಗೆ ಕಾಸ್ತಾರನಾಗುವುದೇ ಪುರುಷನಿಗೆ ಅವಮಾನದ ಕೊನೆ.

(೨೮) ಜನರು ತಮ್ಮ ಅವಿವೇಕಕ್ಕೆ ನೆವ ಹೇಳುವುದಕ್ಕಾಗಿ ಅದೃಷ್ಟವನ್ನು ಆರಾಧ್ಯ ವಿಗ್ರಹವೆಂದೆಣಿಸುತ್ತಾರೆ. ವಿವೇಕದ ಮುಂದೆ ಅದೃಷ್ಟ ಗೆಲ್ಲಲಾರದು. ಚುರುಕು ಬುದ್ಧಿಯೂ ತೀವ್ರದೃಷ್ಟಿಯೂ ಜೀವನದಲ್ಲಿ ಎಷ್ಟೋ ವಿಷಯಗಳನ್ನು ಸರಿಮಾಡಬಲ್ಲವು.

(೨೯) ಅತ್ಯಂತ ಪ್ರಾಮುಖ್ಯವಾದ ಎಷ್ಟೋ ವಿಷಯಗಳಲ್ಲಿ ನಾವು ಪ್ರಾಣಿಗಳ ಶಾಲೆಗೆ ಹೋಗಿ ಶಿಕ್ಷಣವನ್ನು ಹೊಂದಬೇಕು: ಜೇಡರ ಹುಳುವಿನಿಂದ ನೂಲುವುದನ್ನೂ ನೇಯುವುದನ್ನೂ, ಬಾನಕ್ಕಿಯಿಂದ ಮನೆ ಕಟ್ಟುವುದನ್ನೂ, ಹಂಸದಿಂದಲೂ 'ಬುಲ್‌ಬುಲ್' ಪಕ್ಷಿಯಿಂದಲೂ ಹಾಡುವುದನ್ನೂ ಕಲಿಯಬೇಕು.

(೩೦) ತಿಳಿಗೇಡಿತನದ, ಧರ್ಮಶ್ರದ್ಧೆ ಇಲ್ಲದ, ಅಳತೆಗೆಟ್ಟ, ಕಾಕು ಜೀವನವನ್ನು ದುಷ್ಟ ಜೀವನವೆಂದು ಕರೆಯಬಾರದು, ವಿಶೇಷವಾಗಿ ಲಂಬಿಸಿದ ಮರಣಯಾತನೆ, ಎಂದೆನ್ನಬೇಕು.

(೩೧) ಧರ್ಮಬುದ್ಧಿಯುಳ್ಳ ಮನುಷ್ಯನು ಯಾವಾಗಲೂ ಧರ್ಮವಾದ ನ್ಯಾಯಸಮ್ಮತವಾದ ಕಾರ್ಯಗಳಲ್ಲಿಯೇ ಆಸಕ್ತಿಯುಳ್ಳವನಾದುದರಿಂದ ರಾತ್ರಿ ಹಗಲೂ ಸಂತುಷ್ಟನಾಗಿ, ಬಲಶಾಲಿಯಾಗಿ, ಚಿಂತಾರಹಿತನಾಗಿರುತ್ತಾನೆ. ಆದರೆ ಧರ್ಮಶ್ರದ್ಧೆಯಿಲ್ಲದ ಮನುಷ್ಯನು ತಾನು ಮಾಡಬೇಕಾದ ಅನೇಕ ಕರ್ತವ್ಯ ಕರ್ಮಗಳನ್ನು ಮಾಡದೆ ಬಿಡುವುದರಿಂದ, ಇಂಥವನಿಗೆ ಸತ್ಕರ್ಮಗಳ ನೆನಪೇ ಇಲ್ಲದೆ, ಸಂತೋಷವೆಂಬುದೇ ಇಲ್ಲದೆ, ಯಾವಾಗಲೂ ವ್ಯಾಕುಲವೇ, ಆತ್ಮನಿಂದೆಯೇ, ಎದುರಾಗಿ ನಿಲ್ಲುತ್ತದೆ.

(೩೨) ಹಿಂದಿನಕಾಲದಂತೆಯೇ ಈಗಲೂ ದೇವತೆಗಳು ಮನುಷ್ಯರಿಗೆ ಒಳ್ಳೆಯದನ್ನೇ ಮಾಡುತ್ತಾರೆ; ನಾಶಕರವಾದ, ಕೇಡುತರುವ ಅಥವಾ ನಿರುಪಯೋಗವಾದ ಫಲಗಳನ್ನು ಕೊಡುವುದಿಲ್ಲ. ಇವು ಹಿಂದಿನಕಾಲದಂತೆಯೇ ಈಗಲೂ

ದೇವತೆಗಳ ಪ್ರಸಾದವಲ್ಲ: ಮನುಷ್ಯರೇ ತಮ್ಮ ಅಂಧತನದಿಂದಲೂ ಮೂರ್ಖತನದಿಂದಲೂ ಇವುಗಳಮೇಲೆ ಎಡವಿ ಬೀಳುತ್ತಾರೆ.

(೩೩) ಯುವಕರಿಗೆ ನಾವು ಬೋಧಿಸಬಹುದಾದ ವಿಷಯಗಳಲ್ಲೆಲ್ಲಾ ಅತ್ಯಂತ ದುಷ್ಪರಿಣಾಮಕಾರಿಯಾದದ್ದು ವಿಷಯವಿಲಾಸ; ಹೇಗೆಂದರೆ, ದುರುಳತನಕ್ಕೆ ತವರುಮನೆಯಾದ ಭೋಗಗಳು ಯಾವಯಾವುವು ಉಂಟೋ, ಅವುಗಳಿಗೆಲ್ಲಾ ಅದೇ ಮೂಲ.

(೩೪) ಜಾಣನು ತನ್ನಲ್ಲಿಲ್ಲದಿರುವ ವಸ್ತುಗಳಿಗೆ ಹಲುಬುವುದಕ್ಕೆ ಬದಲಾಗಿ, ತನ್ನಲ್ಲಿರುವುದರಿಂದಲೇ ಸುಖ ಪಡೆಯುತ್ತಾನೆ.

(೩೫) ಅತ್ಯಂತ ಅಪರೂಪವಾಗಿ ಬರತಕ್ಕ ಸುಖಗಳೇ ಅತ್ಯಂತ ಆನಂದವನ್ನೀಯುತಕ್ಕವುಗಳು.

(೩೬) ಮಿತಾಚಾರವನ್ನು ಮರೆತೆಯಾದರೆ, ಉತ್ಕಟ ಸುಖಗಳೇ ಉತ್ಕಟ ದುಃಖಗಳಾಗುತ್ತವೆ.

(೩೭) ಮಾನವರು ತಮ್ಮ ಪ್ರಾರ್ಥನೆಗಳಲ್ಲಿ ದೇವತೆಗಳನ್ನು ಆರೋಗ್ಯಭಾಗ್ಯವನ್ನು ಕೊಡುವಂತೆ ಬೇಡಿಕೊಳ್ಳುತ್ತಾರೆ—ಇದು ತಮ್ಮ ಕೈಯಲ್ಲಿಯೇ ಇದೆಯೆಂದು ಅವರಿಗೆ ಗೊತ್ತಿಲ್ಲ. ತಮ್ಮ ರಾಗದ್ವೇಷಾದಿಗಳಿಂದ ಪ್ರೇರಿತರಾಗಿ ಅತಿ ಕಾಮುಕರಾಗುವುದರಿಂದ, ತಮ್ಮ ಆರೋಗ್ಯವನ್ನು ತಾವೇ ಸೂರೆಗೊಳ್ಳುತ್ತಾರೆ.

(೩೮) ಮಿತಭೋಗದಿಂದಲೂ ಜೀವನ ಸಮಕಟ್ಟಿನಿಂದಲೂ ಮನುಷ್ಯರು ಶಾಂತಿ ಸಮಾಧಾನಗಳನ್ನು ಹೊಂದುತ್ತಾರೆ. ತೀರ ಬಡತನವೂ ಐಶ್ವರ್ಯಾಧಿಕ್ಯವೂ ಜನರನ್ನು ಕ್ಷೋಭೆಗೀಡುಮಾಡಿ ಅವರ ಹೃದಯವನ್ನು ತಲ್ಲಣಗೊಳಿಸುವುವು. ಹೀಗೆ ತಳಮಳಗೊಂಡ ಆತ್ಮರುಗಳಿಗೆ ಶಾಂತಿಯೂ ಇಲ್ಲ, ಸ್ಥಿರಬುದ್ಧಿಯೂ ಇಲ್ಲ. ಆದುದರಿಂದ ಮನುಷ್ಯನು ತನಗೆ ಸಾಧ್ಯವಾದ ವಿಚಾರಗಳಿಗೆ ಮಾತ್ರ ವಿಶೇಷ ಗಮನಕೊಟ್ಟು, ತನಗೆ ದೊರಕುವ ಅವಕಾಶಗಳಲ್ಲೇ ತೃಪ್ತಿ ಹೊಂದಬೇಕಲ್ಲದೆ; ಪ್ರಪಂಚವೆಲ್ಲಾ ಯಾರನ್ನು ಕಂಡು ಕರುಬುತ್ತದೋ, ಯಾರನ್ನು ಹೆಚ್ಚು ಮಾನ್ಯರೆಂದು ಭಾವಿಸುತ್ತದೋ, ಅಂಥವರನ್ನೇ ಯಾವಾಗಲೂ ಜ್ಞಾಪಕಕ್ಕೆ ತಂದುಕೊಳ್ಳಕೂಡದು, ಸೋಮಾರಿಯಾಗಿ ಕುಳಿತು ಅವರ ಕನಸನ್ನೇ ಕಾಣಕೂಡದು. ಇದಕ್ಕೆ ಬದಲಾಗಿ ವಿಶೇಷ ಕಷ್ಟಪಡುವವರ ಜೀವನವನ್ನೇ ಅವಲೋಕಿಸಿ, ಅವರ ಕಷ್ಟಗಳನ್ನೆಲ್ಲಾ ತನ್ನ ಚಿತ್ತರಂಗದಲ್ಲಿ ಕಾಂತಿಯುಕ್ತವಾಗಿ ಚಿತ್ರಿಸಿ, ಅವರಿಗಿಂತ ತನ್ನ ಸದ್ಯದ ಸ್ಥಿತಿ ಎಷ್ಟು ಮೇಲಾಗಿದೆ ಎಂಬುದನ್ನು ಮನಗಾಣಿಸಿಕೊಂಡು ಹಿಗ್ಗಬೇಕು. ಹೀಗೆ ಮಾಡುವುದರಿಂದ ತನ್ನ ಸ್ಥಿತಿಯೇ ಇತರರು ನೋಡಿ ಕರುಬುವಷ್ಟು ಶ್ರೇಷ್ಠವಾದುದಾಗಿ ಕಾಣುವುದಲ್ಲದೆ, ಮೇಲೆಮೇಲೆ ಬೇಕೆಂದು ಆಶಿಸಿ ಹೃದಯದಲ್ಲಿ

ಯಾತನೆಪಡಬೇಕಾದ ಪ್ರಸಂಗವೂ ತನಗೆ ತಪ್ಪುವುದು. ಇದನ್ನು ಏಕೆ ಹೇಳುವೆನೆಂದರೆ, ಶ್ರೀಮಂತರಾಗಿ, ಭಾಗ್ಯಲಕ್ಷ್ಮಿಯ ಪ್ರಸಾದವನ್ನು ಪಡೆದವರೆಂದು ಇತರರಿಂದ ಗಣಿಸಲ್ಪಟ್ಟವರಾಗಿ, ಇರುವವರನ್ನು ನೋಡಿ, ನೆನೆನೆನೆದು, ಪದೇಪದೇ ಅವರ ಸ್ವಪ್ನ ಬಿದ್ದು, ಯಾರು ಹಲುಬುತ್ತಾರೋ ಅಂಥವರು ತಮ್ಮ ಅಡಗಲಾರದ ಆಶೋತ್ತರಗಳ ದೆಸೆಯಿಂದ ಯಾವಾಗಲೂ ಹೊಸ ಯುಕ್ತಿಗಳನ್ನು ಹೂಡುತ್ತಲೇ ಇರುತ್ತಾರೆ, ಕಡೆಯಲ್ಲಿ ಶಾಸನವಿರೋಧವಾದ ಯಾವುದಾದರೂ ಒಂದು ಜೀವದಾಶೆ ತೊರೆದ ಘೋರಕೃತ್ಯವನ್ನು ಮಾಡುವುದರಲ್ಲಿ ಇವರ ಯತ್ನ ಪರ್ಯವಸಾನ ಹೊಂದುತ್ತದೆ. ಆದುದರಿಂದ ಇತರರ ಭಾಗ್ಯವನ್ನು ನಾವು ಬಯಸಬಾರದು, ನಮಗಿಂತ ಹೆಚ್ಚಾಗಿ ಹೊಂದಿರುವವರನ್ನು ನೋಡಿ ನಾವು ಹೊಟ್ಟೆಕಿಚ್ಚು ಪಡಬಾರದು; ನಮಗಿಂತ ಬೀಳಾದ ಬಾಳುಳ್ಳವರ ಜೀವನದೊಂದಿಗೆ ನಮ್ಮ ಜೀವನವನ್ನು ಹೋಲಿಸಿಕೊಂಡು, ಅವರ ಕಷ್ಟಕಾರ್ಪಣ್ಯಗಳನ್ನೆಲ್ಲಾ ಚೆನ್ನಾಗಿ ಮನವರಿಕೆಮಾಡಿಕೊಂಡು, ಅವರಿಗಿಂತ ನಾವು ಇಷ್ಟು ಚೆನ್ನಾಗಿ ಬಾಳಿ ಬದುಕುತ್ತೇವಲ್ಲಾ ಎಂದು ಸಂತೋಷಪಟ್ಟು ನಾವು ನಿಜವಾಗಿಯೂ ಪುಣ್ಯಶಾಲಿಗಳೆಂದು ಭಾವಿಸಿಕೊಳ್ಳಬೇಕು. ಹೀಗೆ ಮಾಡುವುದರಿಂದ ಹೆಚ್ಚು ಸಮಾಧಾನಸ್ಥಿತಿಯಲ್ಲಿ ನಾವು ಜೀವನವನ್ನು ಕಳೆಯಬಹುದು, ಅಲ್ಲದೆ ಸಂಶಯ, ಅಸೂಯೆ, ದುರಾಶೆ, ಮನಃಕಷಾಯ — ಮೊದಲಾದ ಜೀವನದ ಅನೇಕ ಹೆಮ್ಮಾರಿಗಳನ್ನು ಓಡಿಸಬಹುದು.

(೩೯) ದೇಹಸಂಬಂಧವಾದ ಭೋಗಗಳಲ್ಲೇ ಆನಂದಪಡತಕ್ಕವರ, ತಿನ್ನುವುದರಲ್ಲಿಯೂ ಕುಡಿಯುವುದರಲ್ಲಿಯೂ ಕಾಮದಲ್ಲಿಯೂ ಮಿತಿಯನ್ನರಿಯದವರ, ಅನುಭವವಿದೇ—ಈ ಸುಖಗಳು ಬಹಳ ಸ್ವಲ್ಪಕಾಲ ನಿಲ್ಲುತ್ತವೆ—ತಿನ್ನುವಷ್ಟು, ಕುಡಿಯುವಷ್ಟು ಕಾಲಮಾತ್ರವೇ ಅವುಗಳ ಸ್ವಾರಸ್ಯ—ಆದರೆ ಅನಂತರ ಬರುವ ನೋವುಗಳೋ ಎಂದರೆ ಬಹು ಬಗೆಯವು ಮತ್ತು ದೀರ್ಘಕಾಲ ನಿಲ್ಲತಕ್ಕವು. ಅನುಭವಿಸಿದ ವಸ್ತುಗಳಿಗೇ ಪುನಃಪುನಃ ನಮ್ಮ ತೃಷ್ಣೆ ಹಿಂದಿರುಗುತ್ತದೆ; ಅನುಭವಿಸಿದ ಕೂಡಲೇ ಅವುಗಳ ಸುಖ ಹಾರಿಹೋಗುತ್ತದೆ, ಅನಂತರ ಅವುಗಳಿಂದೇನೂ ಉಪಯೋಗವಿಲ್ಲ. ಸುಖ ಅಲ್ಪ—ಅದಕ್ಕೆ ಪಡುವ ಆಶೆಯೇನೋ ಕೊನೆಗಾಣದ್ದು.

(೪೦) ಇತರ ಎಲ್ಲಾ ವಿಧವಾದ ಹವಣಿಕೆಗಳಿಗಿಂತಲೂ ದೇಶೋನ್ನತಿಯ ಹಂಬಲೇ ನಮಗೆ ಹೆಚ್ಚಾಗಿರಬೇಕು. ಏಕೆಂದರೆ ನಮ್ಮನಮ್ಮ ಸ್ವಂತ ಮೇಲ್ಮೆಗಿಂತಲೂ ಸಮಗ್ರ ಜನಾಂಗದ ಏಳಿಗೆಯೇ ಮುಖ್ಯವಾದದ್ದು. ಆದುದರಿಂದ ನ್ಯಾಯವನ್ನು ಬಿಟ್ಟು ನಾವು ಪರಸ್ಪರ ಕಚ್ಚಾಡಬಾರದು, ಜನಾಂಗದ ಏಳಿಗೆಗೆ

ವಿರುದ್ಧವಾದ ಯಾವ ಹಕ್ಕುಬಾಧ್ಯತೆಗಳಾಗಲಿ ನಮಗೆ ಸೇರಿದ್ದೆಂದು ಕಿತ್ತಾಡಬಾರದು, ರಾಜ್ಯದಾಡಳಿತಗಳು ಸುಸ್ಥಿತಿಯಲ್ಲಿದ್ದರೆ ಅದೇ ನಮ್ಮ ಅಭಯಪ್ರದವಾದ ಮೈಗಾವಲು. ಇತರ ಎಲ್ಲಾ ವಿಷಯಗಳನ್ನೂ ಈ ಒಂದು ಮಾತಿನಲ್ಲಿ ಹೇಳುತ್ತೇನೆ ಕೇಳು: ರಾಜ್ಯ ಆರೋಗ್ಯಸ್ಥಿತಿಯಲ್ಲಿದ್ದರೆ ಎಲ್ಲವೂ ಅಭಿವೃದ್ಧಿ ಹೊಂದುತ್ತದೆ; ರಾಜ್ಯ ಕುಲಗೆಟ್ಟುಹೋದರೆ, ಎಲ್ಲವೂ ಹಾಳಾಗುತ್ತದೆ.

## ಅಧ್ಯಾಯ ೭

### ಸೋಫಿಸ್ಟರ ಕಾಲ (Sophists)

ದೈವೋತ್ಪತ್ತಿ ಮತ್ತು ಪ್ರಪಂಚಸೃಷ್ಟಿ ಸಿದ್ಧಾಂತಗಳ ಕಾಲದಿಂದೀಚೆಗೆ ತತ್ವಶಾಸ್ತ್ರ ಗ್ರೀಸ್‌ದೇಶದಲ್ಲಿ ಪ್ರವರ್ಧಮಾನಸ್ಥಿತಿಗೆ ಬಂದಿತ್ತು. ಪ್ರಪಂಚದ ಮತ್ತು ಜೀವನದ ವಿಷಯವಾಗಿ ಜನರು ತಿಳಿದುಕೊಂಡಿದ್ದ ಪುರಾತನ ಭಾವನೆಗಳೆಲ್ಲಾ ತತ್ವಶಾಸ್ತ್ರದ ಸಂಸ್ಕಾರಬಲದಿಂದ ಮಾರ್ಪಾಡಾಗಿ ನೂತನಸಿದ್ಧಾಂತಗಳು ಏರ್ಪಟ್ಟುವು. ಎಷ್ಟು ಬಲವಾಗಿ ಜೀವನದ ಹಳೆಯ ರೀತಿಗಳು ಸಂಸ್ಕಾರಹೊಂದಿದುವೆಂಬುದನ್ನು, ತಿಳಿಯಬೇಕಾದರೆ, ಪ್ರಪಂಚವೆಲ್ಲಾ ದೇವರುದಿಂಡರುಗಳಿಂದಲೂ ಕಲ್ಪನಾವ್ಯಕ್ತಿಗಳಿಂದಲೂ ತುಂಬಿರುವುದೆಂಬ ಪುರಾತನ ನಂಬಿಕೆಗೂ ವೈಶೇಷಿಕರ ಸ್ವಭಾವಸಿದ್ಧಾಂತಕ್ಕೂ ಇರುವ ವ್ಯತ್ಯಾಸವನ್ನು ಪರಿಶೀಲಿಸಬೇಕು. ಅದರಲ್ಲಿಯೂ ಈ ತೆರನಾದ ನಿರರ್ಗಳವಾದ ವಿಚಾರಾಕಾಂಕ್ಷೆ ತತ್ವಶಾಸ್ತ್ರಮತಗಳೊಂದರಲ್ಲಿಯೇ ಅಲ್ಲ, ಜೀವನದ ಅನೇಕ ವಿಧವಾದ ಇತರ ಹವ್ಯಾಸಗಳಲ್ಲಿಯೂ ಕೂಡ ಹರಡಿ ಶಿಥಿಲವಾದ ನಂಬಿಕೆಗಳನ್ನೂ ನಡತೆಗಳನ್ನೂ ತಿದ್ದುವ ಪ್ರಯತ್ನದಲ್ಲಿ ಫಲಿಸಿತು. ಚರಿತ್ರೆ, ಸಾಹಿತ್ಯ, ಭೂಗೋಳ, ವೈದ್ಯ—ಇವೇ ಮುಂತಾದ ಅನೇಕ ಭಾಗಗಳಲ್ಲಿ—ವಿಮರ್ಶಾಪೇಕ್ಷೆ ತಲೆದೋರಿ ನೂತನ ಮಾರ್ಗಗಳನ್ನು ಕಾಣಿಸಿತು. ಸಾಹಿತ್ಯದಲ್ಲಿ ಈಸ್ಕೈಲಸ್, ಸೊಫೋಕ್ಲಿಸ್, ಯೂರಿಪಿಡಿಸ್; ಚರಿತ್ರೆಯಲ್ಲಿ ಹೆರೊಡೋಟಸ್, ಥುಸಿಡೈಡೀಸ್; ವೈದ್ಯದಲ್ಲಿ ಹಿಪ್ಪಾಕ್ರಟೀಸ್ ಎಂಬವರು ಈ ನೂತನ ಸಂಸ್ಕಾರಪ್ರದರ್ಶಕರೆಂದು ಹೇಳಬಹುದು.

ಗ್ರೀಕರ ತತ್ವಶಾಸ್ತ್ರ ಚರಿತ್ರೆಯಲ್ಲಿ ಈಗ ನಾವು ಸಮಾಲೋಚನೆ ಮಾಡಲು ಉದ್ಯಮಿಸಿರುವ ಕಾಲವೆಂತಹುದೆಂದರೆ: ಶ್ರೇಷ್ಠವಾದ ತತ್ವದರ್ಶನಗಳನ್ನು ಸ್ಥಾಪಿಸಲು ಮನವೊಡಂಬಡದೆ, ಯಾವುದನ್ನೂ ಸಂಪೂರ್ಣವಾಗಿ ಪರಿಶೋಧನೆಮಾಡಲು ಶಕ್ತಿಯಿಲ್ಲದೆ, ಜನರು ಮೇಲ್ಮೇಲೆ ತೋರಿಬರುವ ಭೇದಭಾವಗಳನ್ನೂ ವಿರೋಧಗಳನ್ನೂ ಕಂಡು ಇಂಥ ನ್ಯೂನಾತಿರೇಕಗಳನ್ನು ಖಂಡಿಸಿ, ಪ್ರಪಂಚತತ್ವಪರಿಶೋಧನಾವಿಚಾರ

ದಲ್ಲಿ ಪರಿಷ್ಕಾರಭಾವಗಳನ್ನು ಪಡೆಯುವುದು ಸಾಧ್ಯವಿಲ್ಲವೆಂದು ತೀರ್ಮಾನಿಸಿ, ಹಳೆಯ ಸಿದ್ಧಾಂತಗಳನ್ನೆಲ್ಲಾ ಒತ್ತಿಡುವ ಕಾಲವೆಂದು ಹೇಳಬಹುದು. ಆದರೂ ಜನಜೀವನಕ್ಕೆ ಸಂಬಂಧಪಟ್ಟ ವಿಷಯಗಳಲ್ಲೆಲ್ಲಾ ನೂತನ ರೀತಿಯ ನಿಯಮಗಳೂ ಕಾಯಿದೆಗಳೂ ಅಸಂಖ್ಯಾತವಾಗಿ ಹೊರಬಿದ್ದುವು. ವಿಚಾರಮಾಡಬೇಕೆಂಬ ಆಕಾಂಕ್ಷೆಯೇನೋ ಜೀವನದ ಸರ್ವಭಾಗಗಳಲ್ಲಿಯೂ ತಲೆದೋರಿತು: ರಾಜ್ಯದ ಮೂಲ ಮತ್ತು ಉದ್ದೇಶ, ಶೀಲಾಚಾರದ ನಿಯಮಗಳು, ಮತ, ಕಲೆ, ವಿದ್ಯಾಭ್ಯಾಸ, ಈ ಮುಂತಾದ ವಿಚಾರಗಳಲ್ಲೆಲ್ಲಾ ವಿಮರ್ಶಾಪೇಕ್ಷೆ ಅಂಕುರಿಸಿತು. ಅಲ್ಲದೆ ತದ್ವಿಚಾರಗಳಿಗೆ ಸಂಬಂಧಿಸಿದ ಕೈಪಿಡಿಗಳೂ ಅನೇಕಾನೇಕವಾಗಿ ಹುಟ್ಟಿದುವು. ಜೀವನದ ಪ್ರತಿಯೊಂದು ನಡೆವಳಿಕೆಯಲ್ಲಿಯೂ— ಬಾಣಸಿಗನ ಕರ್ತವ್ಯ ಮೊದಲುಗೊಂಡು, ಕಲಾವೈಭವವನ್ನು ಪ್ರದರ್ಶಿಸುವ ವಸ್ತುನಿರ್ಮಾಣದಲ್ಲಿಯೂ, ಅಂಗವ್ಯಾಯಾಮ ಮೊದಲುಗೊಂಡು ಜಯಪ್ರದವಾದ ಯುದ್ಧಕಾರ್ಯಗಳನ್ನು ಹೂಡುವುದರಲ್ಲಿಯೂ — ವಿಧವಿಧವಾದ ನಿಯಮಗಳುಂಟಾದುವು; ಸಾಧ್ಯವಾದೆಡೆಯಲ್ಲೆಲ್ಲಾ ಶಾಸ್ತ್ರೀಯ ಪದ್ಧತಿಗಳು ಏರ್ಪಟ್ಟುವು. ತತ್ವಶಾಸ್ತ್ರದ ಸಂಸ್ಕಾರ ಜನಜೀವನವನ್ನು ಬಹುಭಾಗದಲ್ಲಿ ಮಾರ್ಪಡಿಸುತ್ತಿತ್ತು. ಗ್ರೀಕರ ತತ್ವಶಾಸ್ತ್ರಾಭ್ಯುದಯಸೂಚಕವಾದ ಸ್ವತಂತ್ರ ವಿವೇಚನ ಮತ್ತು ವಿಮರ್ಶಸ್ವಭಾವ ಜ್ಞಾನಪ್ರಪಂಚದ ಸರ್ವಭಾಗದಲ್ಲಿಯೂ ವ್ಯಾಪಿಸಿ ಪ್ರೌಢತರವಾದ ಒಂದು ವಿದ್ಯಾಭ್ಯಾಸ ತಲೆದೋರಲು ಕಾರಣವಾಯಿತು. ಆದರೆ ಈ ವಿಧವಾದ ಜ್ಞಾನ ಪರಿಪಕ್ವವಾಗುವುದಕ್ಕೆ ಪೂರ್ವದಲ್ಲಿ ಮನುಷ್ಯನ 'ಮನೋವ್ಯಾಪಾರ ಅನೇಕ ತಪ್ಪುದಾರಿಗಳಲ್ಲಿ ಪ್ರವರ್ತಿಸಬೇಕಾಗಿತ್ತು. ಇನ್ನುಮುಂದೆ ನಾವು ಗ್ರೀಕರ ಚರಿತ್ರೆಗೂ ಪ್ರಪಂಚದ ನಾಗರೀಕತೆಗೂ ಬಹುಮುಖ್ಯವೆನಿಸುವ ಕ್ರಿ. ಪೂ. ೫ ನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಚಾರವಾಗಿದ್ದ ತತ್ವಶಾಸ್ತ್ರದ ಸ್ಥಿತಿಗತಿಗಳನ್ನು ವಿಶದಪಡಿಸಲು ಪ್ರಯತ್ನಪಡುತ್ತೇವೆ.

ಗ್ರೀಕ್‌ಜನರ ರಾಜಕೀಯ, ನೈತಿಕ, . ತಾತ್ವಿಕ, ಮತೀಯ ವಿಚಾರಗಳಲ್ಲಿ ಸ್ವತಂತ್ರವ್ಯಕ್ತಿಭಾವವೊಂದು(Individualism) ಕ್ರಮೇಣ

ವೃದ್ಧಿಹೊಂದುತ್ತಿದ್ದುದನ್ನು ನಾವು ಪರಿಶೀಲಿಸಿದ್ದೇವಷ್ಟೆ. ಜೀವನಪದ್ಧತಿಗಳ ಹೊಸ ಬದಲಾವಣೆಗಳಿಗೆ ಮುಖ್ಯಕಾರಣವೆನಿಸಿದ ವಿಮರ್ಶಾಪೇಕ್ಷೆ ಅವರ ಸಾಹಿತ್ಯಪ್ರಪಂಚದಲ್ಲಿಯೂ ಕೆಲಸಮಾಡಲು ಹತ್ತಿತೆಂದು ಹೇಳಬಹುದು. ಕ್ರಿಸ್ತಪೂರ್ವ ಆರನೆಯ ಶತಮಾನದ ಕವಿಗಳಾದ ಹೆಸಿಯಡ್ ಮೊದಲಾದವರು ತಮ್ಮ ಕಾವ್ಯಗಳಲ್ಲಿ ಆ ಕಾಲದ ಜನರ ಪದ್ಧತಿ ಮತ್ತು ನಡವಳಿಕೆ, ಅವರ ರಾಜಕೀಯ, ಸಾಮಾಜಿಕ ಸಂಸ್ಥೆಗಳು, ಅವರ ಮತಸಂಬಂಧವಾದ ಅಭಿಪ್ರಾಯ ಮತ್ತು ಆಚಾರಗಳು, ಆ ಜನರು ನಂಬಿ ಭಜಿಸುತ್ತಿದ್ದ ದೇವರುದಿಂಡರುಗಳ ಉತ್ಪತ್ತಿ, ಸ್ವರೂಪ ಮತ್ತು ನಡತೆ—ಇವೇ ಮುಂತಾದ ವಿಷಯಗಳನ್ನು ಕುರಿತು ಜಿಜ್ಞಾಸೆಮಾಡಲು ತೊಡಗಿದರು. ಈಶ್ವರನ ವಿಷಯವಾಗಿ ನಿಷ್ಕಳಂಕವಾದ ಜ್ಞಾನವನ್ನು ವೃದ್ಧಿಪಡಿಸಿ ತಮ್ಮ ದೇವೋತ್ಪತ್ತಿ ಮತ್ತು ಪ್ರಪಂಚಸೃಷ್ಟಿಸಿದ್ಧಾಂತಗಳ ಮೂಲಕ ನಿಜವಾದ ತತ್ವಶಾಸ್ತ್ರಾಭ್ಯುದಯಕ್ಕೆ ದಾರಿ ತೋರಿಸಿದರು. ಕ್ರಿಸ್ತಪೂರ್ವ ಆರನೆಯ ಶತಮಾನದ ತತ್ವಶಾಸ್ತ್ರದಲ್ಲಿ ಸ್ವತಂತ್ರವಾಗಿ ತತ್ವವಿಮರ್ಶೆ ಮಾಡುವ ಸ್ವಭಾವ ಬಹುತರವಾಗಿ ಪರಿಪಕ್ವವಾದಂತೆ ಕಂಡುಬರುವುದು. ಈ ಕಾಲದಲ್ಲಿಯೂ ಕ್ರಿಸ್ತಪೂರ್ವ ಐದನೆಯ ಶತಮಾನದ ಪೂರ್ವಾರ್ಧದಲ್ಲಿಯೂ ಭೌತಶಾಸ್ತ್ರವೂ ಪ್ರಕೃತಿತತ್ವಶಾಸ್ತ್ರವೂ ವಿಶೇಷವಾಗಿ ತಲೆಯೆತ್ತುತ್ತವೆ. ಪ್ರಪಂಚವೆಂಬುದರ ಅರ್ಥವಿವರಣೆಮಾಡಲು ಅನೇಕಪ್ರಯತ್ನಗಳು ನಡೆಯುತ್ತವೆ; ಜಗತ್ತೆಂಬ ಒಗಟನ್ನು ಬಿಡಿಸಲು ವಿಧವಿಧವಾದ ದರ್ಶನಗಳೇರ್ಪಡುತ್ತವೆ; ಪ್ರಪಂಚದ ಸ್ಥಿತಿಗತಿಗಳೇ ಅತ್ಯಂತ ಪ್ರಾಮುಖ್ಯವಾದ ಸಮಸ್ಯೆಯಾಗಿ ಅಧ್ಯಾತ್ಮವಿಚಾರವನ್ನು ಕುರಿತ ಸಿದ್ಧಾಂತಗಳಿಗೆ ಅನುಗುಣವಾಗಿ ಮಾನವ ವಿಚಾರಗಳು ನಿರ್ಣಯಹೊಂದುತ್ತವೆ.

ಕ್ರಿಸ್ತಪೂರ್ವ ಐದನೆಯ ಶತಮಾನದಲ್ಲಿ ಗ್ರೀಕರು ಹೊಂದಿದ ರಾಜಕೀಯ ಮತ್ತು ಆರ್ಥಿಕ ಅನುಭವಗಳಿಂದ ಆ ಜನರ ತತ್ವಜ್ಞಾನಿಗಳಲ್ಲಿ ಅಧಿಕವಾಗಿ ಕಂಡುಬರುವ ಜ್ಞಾನೋದಯ ಅಭಿವೃದ್ಧಿಪಡೆಯಿತು. ಕ್ರಿ.ಪೂ. ೫೦೦ ರಿಂದ ೪೪೯ರ ವರೆಗೂ ಪರ್ಷಿಯಾದವರೊಡನೆ ನಡದ ಯುದ್ಧಗಳು ಅಥೆನ್ಸ್ ಎಂಬ ಪಟ್ಟಣವನ್ನು ಸಮುದ್ರರಾಣಿಯನ್ನಾಗಿಯೂ, ಗ್ರೀಸ್ ದೇಶದಲ್ಲಿ ಜ್ಞಾನ, ವಾಣಿಜ್ಯ ಕಲಾಭಿವೃದ್ಧಿಗಳಿಗೆ

ಕೇಂದ್ರಸ್ಥಾನವನ್ನಾಗಿಯೂ ಮಾಡಿದುವು. ಕವಿಗಳು, ಕಲಾಕೋವಿದರು, ವಿದ್ಯಾಬೋಧಕರು, ತತ್ವಜ್ಞಾನಿಗಳು ತಂಡೋಪತಂಡವಾಗಿ ಈ ಪಟ್ಟಣವನ್ನು ಹೊಕ್ಕು ಧನಿಕರಾದ ಆ ಪುರನಿವಾಸಿಗಳಿಗೆ ಆನಂದ ಮತ್ತು ಜ್ಞಾನಾನುಭವಗಳನ್ನುಂಟುಮಾಡಿಕೊಡಲು ತೊಡಗಿದರು. ವೈಭವವುಳ್ಳ ಕಟ್ಟಡಗಳೂ, ಪ್ರತಿಕೃತಿಗಳೂ, ಜನರ ಆಹ್ಲಾದದಿಂದ ಮೆರೆಯುತ್ತಿದ್ದ ರಂಗಸ್ಥಳಗಳೂ ಪಟ್ಟಣವನ್ನು ಅಲಂಕರಿಸಿದ್ದುವು. ಕ್ರಿಸ್ತಪೂರ್ವ ಐದನೆಯ ಶತಮಾನದ ಉತ್ತರಾರ್ಧದಲ್ಲಿ ಅಥೆನ್ಸ್ ನಗರದಲ್ಲಿ ವಾಸಮಾಡುತ್ತಿದ್ದ ಪೆರಿಕ್ಲಿಸ್, ಅನಾಕ್ಸಗೊರಾಸ್, ಥುಸಿಡೈಡೀಸ್, ಫಿಡಿಯಸ್, ಸೊಫೊಕ್ಲಿಸ್, ಯೂರಿಪಿಡೀಸ್, ಅರಿಸ್ಟೊಫೆನೀಸ್, ಹಿಪ್ಪೊಕ್ರಟಿಸ್, ಸಾಕ್ರಟಿಸ್—ಮುಂತಾದ ಅಂಶಪುರುಷರನ್ನು ನಾವು ಪರಿಗಣಿಸಿದ್ದೇ ಆದರೆ ಯುದ್ಧದಲ್ಲಿ ಸತ್ತವರ ಶವಸಂಸ್ಕಾರ ಸಂದರ್ಭದಲ್ಲಿ ಪೆರಿಕ್ಲಿಸನು ಮಾಡಿದ "ಅಥೆನ್ಸ್ ಗ್ರೀಸ್ ದೇಶದ ವಿದ್ಯಾಶಾಲೆ" ಎಂಬ ಭಾಷಣದ ನುಡಿಗಳ ದರ್ಪವನ್ನು ನಾವು ಅರಿತುಕೊಳ್ಳಬಹುದು.

ನಿರ್ಭಯವಾದ ವಿಷಯವಿಮರ್ಶೆ ಮತ್ತು ಕರ್ಮಾನುಷ್ಠಾನಗಳಿಗೆ ಉತ್ತೇಜನಕೊಟ್ಟ ಆರ್ಥಿಕ ಸುಧಾರಣೆಗಳೂ ಪ್ರಜಾಪ್ರಭುತ್ವ ಸಂಸ್ಥೆಗಳೂ ಜನರಲ್ಲಿ ಅಧಿಕಾರದ ಹಂಬಲನ್ನೂ ಮತ್ತು ಅಧಿಕಾರವನ್ನೊದಗಿಸುವ ಧನ, ಯಶಸ್ಸು, ಜ್ಞಾನ, ಶಕ್ತಿ ಮುಂತಾದುವುಗಳ ಹವಣಿಕೆಯನ್ನೂ ಉಂಟುಮಾಡಿದುವು. ಮತ, ನೀತಿ, ರಾಜಧರ್ಮ, ತತ್ವಶಾಸ್ತ್ರ, ವಿಜ್ಞಾನ, ಕುಶಲಕಲೆ–ಇವೇ ಮೊದಲಾದುವುಗಳ ವಿಷಯವಾಗಿ ಪ್ರಚಾರದಲ್ಲಿದ್ದ ಜನರ ಪುರಾತನ ನಂಬಿಕೆಗಳೂ ಅಭಿಪ್ರಾಯಗಳೂ ವಿಮರ್ಶೆ ಹೊಂದಿದುವು; ಅನೇಕ ಭಾಗಗಳಲ್ಲಿ ಪ್ರಾಚೀನ ತಳಹದಿಗಳು ಅಲ್ಲಾಡಿದುವು; ಖಂಡನಾಪೇಕ್ಷೆ ಎಲ್ಲೆಲ್ಲಿ ನೋಡಿದರೂ ಪ್ರಸರಿಸ ಹತ್ತಿತು. ಈಗ ಜನಿಸಿದ ನೂತನ ಜ್ಞಾನಮಾರ್ಗಗಳಲ್ಲಿ ಶಿಕ್ಷಣವನ್ನು ಪಡೆಯಬೇಕೆಂಬ ಆಶೆ ಬಲವತ್ತರವಾಯಿತು; ಜನಸಾಮಾನ್ಯವನ್ನು ಒಲಿಸಿ ಮನಗಾಣಿಸಬೇಕೆಂಬ ಕುತೂಹಲವುಳ್ಳವರಿಗೆ ದೇಶಸೇವೆ ಮಾರ್ಗದರ್ಶಕವಾಯಿತು; ಸಭಾಪಾಂಡಿತ್ಯ, ಅಲಂಕಾರಶಾಸ್ತ್ರ, ತರ್ಕಶಾಸ್ತ್ರ—ಇವುಗಳ ಕ್ರಮಾಭ್ಯಾಸ ಅತ್ಯಂತಾವಶ್ಯಕವಾಯಿತು.

ಈಗ ನಾವು ವರ್ಣಿಸುತ್ತಿರುವ ಕಾಲವನ್ನು ಗ್ರೀಕರ ಜ್ಞಾನೋದಯದ ಕಾಲವೆಂದು ಹೇಳಬಹುದು. ಜನರ ಈ ನೂತನ ಚಿತ್ತಪರಿಸ್ಥಿತಿಯ ದೆಸೆಯಿಂದ ವ್ಯಕ್ತಿಪೌರುಷ (Individualism) ವಿಕಸಿತವಾಗುವುದಕ್ಕೆ ದಾರಿಯಾಯಿತೆಂದು ತಿಳಿಯಬಹುದು. ಪ್ರಾಚೀನ ಕಾಯಿದೆ ಕಟ್ಟಳೆಗಳು, ಪದ್ಧತಿ ನಂಬಿಕೆಗಳು—ಇವುಗಳನ್ನು ಪುರುಷನು ಸ್ವಬುದ್ಧಿಯಿಂದ ಪರೀಕ್ಷಿಸಯತ್ನಿಸಿ, ಪುರಾತನತ್ವವೇ ಧರ್ಮ ಸೂಕ್ಷ್ಮದ ಗುಟ್ಟೆಂಬುದನ್ನು ನಂಬದೆ, ಹಿರಿಯರ ಮಾತೇ—ಅಧಿಕಾರದ ಬಲವೇ — ಶ್ರೇಯೋಭಿವೃದ್ಧಿಯ ಮಾರ್ಗವೆಂದೆಣಿಸದೆ, ಸ್ವತಂತ್ರವಾಗಿ ವಿಷಯವಿಮರ್ಶೆಮಾಡಿ, ಸ್ವಪರಾಕ್ರಮದಿಂದ ಕಾರ್ಯನಿರ್ವಾಹಗೊಳಿಸಲೆಳಸಿ, ಪಂಗಡ ಬಲದ ಹಂಗಿನಿಂದ ತಪ್ಪಿಸಿಕೊಂಡು ತನ್ನ ಮೋಕ್ಷವನ್ನು ತಾನೇ ಸಾಧಿಸಲು ಪ್ರಯತ್ನಪಟ್ಟನು. ಈ ವಿಧವಾದ ಕಾಲಸ್ಥಿತಿ ಖಂಡನ—ಯಥಾರ್ಥ ಪರಿಶೋಧನ–ಜ್ಞಾನ ಕೆಲವು ಸಂದರ್ಭಗಳಲ್ಲಿ ಅತ್ಯಂತ ಹಿತಕರವಾದುದಾದರೂ ಅದನ್ನೇ ಸರ್ವಧರ್ಮದ ಸೂತ್ರವಾಗೆಣಿಸತೊಡಗಿದರೆ ವೈಪರೀತ್ಯಗಳುಂಟಾಗುವುದರಲ್ಲಿ ಸಂದೇಹವೇ ಇಲ್ಲ. ಇಂಥ ಪ್ರವರ್ತನೆಯ ಫಲರೂಪವಾಗಿ ಕೆಲವು ಕಡೆ ಶ್ಲೇಷೋಕ್ತಿಪ್ರಯೋಗ, ಸೂಕ್ಷ್ಮಭೇದನಿರೂಪಣಗಳೂ, ಮತ್ತೆ ಕೆಲವೆಡೆಗಳಲ್ಲಿ ಮನೋವೈಶಾಲ್ಯ—ಉದಾರಭಾವ—ತಪ್ಪಿ ಸಂಕುಚಿತಭಾವವೂ, ಅಹಂಕಾರ, ಮಮಕಾರವೂ ತಲೆದೋರಿದುವು. ನಾನು ಯಾವುದನ್ನು ನಿಜವೆಂದೆಣಿಸಿರುವೆನೋ ಅದೇ ನಿಜ ; ಯಾವುದು ಧರ್ಮವೆಂದು ನಾನು ನಂಬಿರುವೆನೋ ಅದೇ ಧರ್ಮ. ಯಾರೊಬ್ಬರ ಮತಕ್ಕಿಂತ ಬೇರೊಬ್ಬರ ಮತ ಯಾವುದೂ ಶ್ರೇಷ್ಠವಿಲ್ಲ ; ಒಬ್ಬನ ಮತವೆಷ್ಟು ಸಮ್ಮತವಾದುದೋ ಮತ್ತೊಬ್ಬನ ಮತವೂ ಅಷ್ಟೇ ಸಮ್ಮತ; ಒಬ್ಬನ ನಡೆವಳಿಕೆ ಎಷ್ಟು ಸೂಕ್ತವೋ ಮತ್ತೊಬ್ಬನ ನಡೆವಳಿಕೆಯೂ ಅಷ್ಟೇ ಸೂಕ್ತವಾದುದು. ಈ ವಿಧವಾದ ಭಾವೋದಯವುಂಟಾಗಿರುವ ವೇಳೆಯಲ್ಲಿ ಯಾರ ಮತವೂ, ಯಾರ ನಂಬಿಕೆಯೂ, ಅಷ್ಟೊಂದು ಗಣನೆಗೆ ಬರಲಿಲ್ಲವೆಂದರೆ ಆಶ್ಚರ್ಯಜನಕವಾಗಲಾರದು. ಸಿದ್ಧಾಂತಲೋಕದಲ್ಲಿ ಸರ್ವಥಾ ಸಂಶಯಭಾವವೂ, ಕಾರ್ಯಪ್ರಪಂಚದಲ್ಲಿ ಸ್ವಾರ್ಥಪರತೆಯೂ ಆಳುತ್ತಿದ್ದುವೆಂದರೂ ಅತಿಶಯೋಕ್ತಿಯಾಗಲಾರದು. ಥುಸಿಡೈಡೀಸ್

ಎಂಬ ಚರಿತ್ರಕಾರನು ಈ ಕಾಲದ ಶೋಚನೀಯವಾದ ಸ್ಥಿತಿಯನ್ನು ಕುರಿತು ಈ ರೀತಿ ವರ್ಣಿಸಿರುವನು: "ವಾಡಿಕೆಯಲ್ಲಿರುವ ಪದಗಳ ಅರ್ಥ ಪ್ರಯೋಗಿಸುವವರ ಇಷ್ಟಬಂದಂತೆ ಬದಲಾಯಿಸಲ್ಪಡುತ್ತಿತ್ತು; ದೂರಾಲೋಚನೆಯಿಲ್ಲದೆ, ಪ್ರಜ್ಞೆತಪ್ಪಿ ನುಗ್ಗುವ ದುಡುಕುಪ್ರವೇಶಿಯೇ ಪರಮ ಹಿತೈಷಿಯಾದ ಗೆಳೆಯನು; ಮಿತವನ್ನರಿತ ವಿವೇಚನಾಪರನೇ ಪರಮ ಹೇಡಿ; ನ್ಯಾಯವಾದ ಮಾತಿಗೆ ಒಳಗಾಗುವವನಾದರೋ ಕೆಲಸಕ್ಕೆ ಬಾರದ ಶುದ್ಧ ಹುಚ್ಚನು. ಜನರು ಎಷ್ಟು ದೌಷ್ಟ್ಯವನ್ನೂ, ವಿಶ್ವಾಸಘಾತುಕತನವನ್ನೂ ತೋರ್ಪಡಿಸುವರೋ ಅಷ್ಟು ಹೆಚ್ಚಾಗಿ ವಿಶ್ವಾಸಪರರಾಗುವರು; ಪಿತೂರಿ, ಒಳಸಂಚುಗಳಲ್ಲಿ ಜಯಶೀಲನಾದವನೇ ಸರ್ವಪ್ರಿಯನು; ಆದರೆ ಇಂಥ ಘಾತುಕತನವನ್ನೂ ಕೆಡುಕುಗಳನ್ನೂ ನಿವಾರಣೆ ಮಾಡಲು ಪ್ರಾಮಾಣಿಕತನದಿಂದ ಯಾರಾದರೂ ಪ್ರಯತ್ನಪಟ್ಟರೆ ಅವರೇ ಪರಮದ್ರೋಹಿಗಳು. ಆಣೆಭಾಷೆಗಳನ್ನಾದರೋ ಲಕ್ಷ್ಯದಲ್ಲಿಡುವವರೇ ಇಲ್ಲ: ಒಂದು ಸಂದರ್ಭದಲ್ಲಿ ಮಾಡಿದ ಪ್ರಮಾಣ ತದನಂತರವೂ ಪ್ರಮಾಣವಾಗಿಯೇ ಇರಬೇಕೆಂದು ಯಾರೂ ಭಾವಿಸುವುದಿಲ್ಲ. ಹಾಗೂ ಯಾವನಾದರೂ ಒಬ್ಬನಿಗೆ ಭಾಷೆ ಕೊಟ್ಟು ಮಾತಿಗೆ ತಪ್ಪುವುದರ ಮೂಲಕ ಅವನನ್ನು ಮೋಸಗೊಳಿಸುವುದಾದರೆ ಮತ್ತೂ ಸಂತೋಷವೇ ಆಯಿತು".

ಅರಿಸ್ಟೊಫೆನೀಸನೂ ತನ್ನ ಹಾಸ್ಯರಸದ ನಾಟಕಗಳಲ್ಲಿ ಇದೇ ಚಿತ್ರವನ್ನು ವರ್ಣಿಸುತ್ತಾನೆ. "ಪ್ರಾಚೀನ ಶಿಕ್ಷಣ ಕಾಲಕ್ರಮೇಣ ಬಹುಮಟ್ಟಿಗೆ ಸಡಿಲವಾಗಿಹೋಗಿತ್ತು. ಧನಿಕರು ಸೋಮಾರಿಗಳೂ, ದುಂದುಗಾರರೂ ಆಗಿದ್ದರು; ಬಡವರು ದಂಗೆಕೋರರಾಗಿದ್ದರು; ಯುವಕರು ತಮ್ಮ ಗುರುಹಿರಿಯರ ವಿಷಯದಲ್ಲಿ ಹೆಚ್ಚುಹೆಚ್ಚಾಗಿ ಸೊಕ್ಕು ತೋರಿಸಹತ್ತಿದರು; ಮತಪದ್ಧತಿಗಳನ್ನಂತೂ ಹಾಸ್ಯಮಾಡುವವರೇ ವಿನಾ ಗೌರವಿಸುವವರು ಯಾರೂ ಇರಲಿಲ್ಲ; ಎಲ್ಲಿ ನೋಡಿದರೂ ಎಲ್ಲಾ ವರ್ಗದ ಜನರಲ್ಲಿಯೂ ಧನವನ್ನು ಕೂಡಿಹಾಕಿಕೊಂಡು ಅದನ್ನು ಇಂದ್ರಿಯ ಭೋಗಗಳಲ್ಲಿ ವೆಚ್ಚಮಾಡಬೇಕೆಂಬ ಸಾಮಾನ್ಯಾಕಾಂಕ್ಷೆ ಬೇರಿಟ್ಟು ಕೊಂಡಿತ್ತು".

ಆ ಕಾಲಸ್ಥಿತಿಯ ವಿಚಿತ್ರ ಚಿತ್ರದಲ್ಲಿ ಒಂದು ದೃಶ್ಯ—ಸ್ವಯಂ ಸಂಕಲ್ಪವುಳ್ಳವರ, ವ್ಯಕ್ತಿ ಪೌರುಷಪ್ರಕಾಶಕರ, ಸ್ವೇಚ್ಛಾಪ್ರವರ್ತಕರ, ಧನವಿದ್ಯಾಪೇಕ್ಷಿಗಳ, ಸುಧಾರಕರ ತಂಡ. ಮತ್ತೊಂದು, ಹಳೆಯ ಆಚಾರ ವ್ಯವಹಾರಗಳನ್ನು ಬಿಡದೆ ಅನುಸರಿಸಿಕೊಂಡು, ಈ ನೂತನ ಚಿತ್ತಪರ್ಯ ವಸ್ಥೆ, ಈ ನೂತನ ವಿದ್ಯೆ, ಈ ನೂತನ ಸುಗುಣ—ಏನು, ದುರ್ಗುಣ—ಸಂಪತ್ತಿ—ಇವುಗಳನ್ನು ನಿಂದನೀಯವಾಗೆಣಿಸುತ್ತಿದ್ದ ಪ್ರಾಚೀನ ಸಂತುಷ್ಟರ ತಂಡ. ಮೇಲೆ ವಿವರಿಸಿದ ಜ್ಞಾನವಿಕಾಸಹೇತುಗಳಾದ ಅವಲಂಬನೆಗಳು ದುರ್ವೃತ್ತ, ದುಶ್ಶೀಲ, ದೌರ್ಜನ್ಯಗಳಿಗೆ ಕಾರಣಭೂತಗಳಾಗಿ, ಯುವಕರನ್ನು ಕೇಡಿಗರ ಮಾರ್ಗಕ್ಕೆ ಎಳೆದೊಯ್ಯುವುವೆಂದು ಈ ಪೂರ್ವಾಚಾರದವರ ಅಭಿಪ್ರಾಯ.

"ಸೋಫಿಸ್ಟ್ಸ" ಎಂಬವರೇ ಈಗ ನಾವು ವರ್ಣಿಸುತ್ತಿರುವ ನೂತನ ಜ್ಞಾನೋದಯಕಾಲದ ಪ್ರತಿನಿಧಿಗಳು. 'ಸೋಫಿಸ್ಟ್' ಎಂಬ ಪದ ಆರಂಭದಲ್ಲಿ "ಬುದ್ಧಿವಂತ", "ಯುಕ್ತಿವಂತ" ಎಂಬರ್ಥವನ್ನು ಕೊಡುತ್ತಿತ್ತು. ಆದುದರಿಂದ "ಸೋಫಿಸ್ಟ್" ಎಂದರೆ ಒಂದರ್ಥದಲ್ಲಿ 'ವಿದ್ವಾಂಸನು' ಅಥವಾ 'ಪಂಡಿತನು' ಎಂದು ಹೇಳಬಹುದು. ಆದರೆ ಈಗ ನಾವು ವರ್ಣಿಸುತ್ತಿರುವ ಕಾಲದಲ್ಲಿ, ದೇಶಪರ್ಯಟನ ಮಾಡುತ್ತ, ಹೋದಕಡೆಯಲ್ಲೆಲ್ಲಾ ವೇತನವನ್ನು ಪಡೆದು ಜನರಿಗೆ ವಾಕ್ಚಾತುರ್ಯದಲ್ಲಿಯೂ, ಸೂಕ್ಷ್ಮ ಬುದ್ಧಿಪ್ರಯೋಗದಲ್ಲಿಯೂ ಬೋಧನೆಯನ್ನು ಮಾಡುತ್ತ, ಯೋಗ್ಯರಾಗಿದ್ದ ಯುವಕರನ್ನು ರಾಜ್ಯಕಾರ್ಯ ಪ್ರವರ್ತನೆಗೆ ಅನುಗೊಳಿಸುತ್ತ—ಈ ವಿಧವಾದ ವೃತ್ತಿಗಳನ್ನೇ ಅವಲಂಬಿಸುತ್ತಿದ್ದ ಬೋಧಕರಿಗೆ 'ಸೋಫಿಸ್ಟ್ಸ' ಎಂಬ ನಾಮಕರಣವಾಗಿತ್ತು. ಕಾಲಕ್ರಮದಲ್ಲಿ ಈ ಬೋಧಕರು ತಮ್ಮ ಉಪದೇಶಕ್ಕೆ ವೇತನವನ್ನು ಪಡೆಯುತ್ತಿದ್ದುದರಿಂದಲೂ, ಅವರಲ್ಲಿ ಕೆಲವರು ವಿಪರೀತ ಸುಧಾರಣೆಗಳನ್ನು ತಂದು ಪುರಾತನ ಪದ್ಧತಿಗಳನ್ನು ನಿರ್ಮೂಲವಾಗಿ ನಾಶಮಾಡಲೆಳಸಿದುದರಿಂದಲೂ, 'ಸೋಫಿಸ್ಟ್' ಎಂಬ ಪದ ಕೇವಲ ನಿಂದನೀಯಾರ್ಥವನ್ನು ಸೂಚಿಸತೊಡಗಿತು. ಇವರು ಬೋಧಿಸುತ್ತಿದ್ದ ಸಿದ್ಧಾಂತವನ್ನೂ, ಅನುಸರಿಸುತ್ತಿದ್ದ ನಡೆವಳಿಕೆಯನ್ನೂ ಪರಿಗಣಿಸಿದರೆ ಇವರ

ಮತಕ್ಕೂ ಹಿಂದೂ ತತ್ವಶಾಸ್ತ್ರ ಚರಿತ್ರೆಯಲ್ಲಿ ಕಂಡುಬರುವ ಚಾರ್ವಾಕರ ಮತಕ್ಕೂ ಬಹುಭಾಗದಲ್ಲಿ ಸಮಾನತೆ ಕಂಡುಬರುವುದು. ಪ್ಲೇಟೋವಿನ ಪ್ರಸಿದ್ಧವಾದ "ಸಂವಾದಗಳು" (Dialogues) ಎಂಬ ಗ್ರಂಥದಲ್ಲಿನ 'ಪ್ರೊಟಾಗೊರಾಸ್', 'ಗಾರ್ಜಿಯಾಸ್', 'ಸೋಫಿಸ್ಟ್', 'ಥಿಯಾಟಿಟಸ್', 'ರಿಪಬ್ಲಿಕ್' ಎಂಬ ಪ್ರಕರಣಗಳಲ್ಲಿ ಈ ಸೋಫಿಸ್ಟರ ಸಿದ್ಧಾಂತವನ್ನು ವಿಶದವಾಗಿ ಅರಿಯಬಹುದು. ತಮ್ಮ ಉಪದೇಶದ ವಿಚಾರದಲ್ಲಿ ಇವರು ಬಹು ಘನತರವಾದ ಅಭಿಪ್ರಾಯವನ್ನುಳ್ಳವರಾಗಿದ್ದರು. "ನನ್ನ ಸಂಗಡ ನೀನು ಕಲೆತು ಕಲಿಯುವವನಾದರೆ, ನೀನು ನನ್ನ ಬಳಿ ಬಂದ ದಿವಸವೇ ಪೂರ್ವಕ್ಕಿಂತಲೂ ಹೆಚ್ಚು ಬುದ್ಧಿಶಾಲಿಯಾಗಿಯೂ, ವಿವೇಕಿಯಾಗಿಯೂ ಹಿಂದಿರುಗುವೆ" ಎಂಬದಾಗಿ ಪ್ರೊಟಾಗೊರಾಸ್ ಎಂಬ ಸೋಫಿಸ್ಟನು ಒಬ್ಬ ಯುವಕನಿಗೆ ಅಪ್ಪಣೆ ಕೊಡಿಸಿದನಂತೆ. ಅದು ಹೇಗೆ ಎಂದು ಸಾಕ್ರಟೀಸನು ಪ್ರಶ್ನೆಮಾಡಲು ಪ್ರೊಟಾಗೊರಾಸ್ ಉತ್ತರ ಕೊಡುತ್ತಾನೆ: "ಆ ಯುವಕನು ನನ್ನ ಬಳಿಗೆ ಬಂದದ್ದೇ ಆದರೆ, ತಾನು ಏನನ್ನು ಕಲಿಯಲು ಅಪೇಕ್ಷಿಸಿ ಬರುತ್ತಾನೆಯೋ ಅದನ್ನು ಕಲಿತೇ ಕಲಿಯುವನು. ಅದು ಯಾವುದೆಂದರೆ, ತನ್ನ ಸ್ವಂತ ಮತ್ತು ಜನಾಂಗದ ಕೆಲಸಗಳಲ್ಲಿ ವಿವೇಕ ಅಥವಾ ಜಾಣತನ. ತನ್ನ ಮನೆಗೆಲಸಗಳನ್ನು ಬಹು ಸಮಿಾಚೀನವಾದ ರೀತಿಯಲ್ಲಿ ನಡಸುವುದಕ್ಕೂ, ರಾಜಕಾರ್ಯಸಂದರ್ಭಗಳಲ್ಲಿ ಹಿತಕರವಾದ ರೀತಿಯಲ್ಲಿ ಮಾತನಾಡಿ ಕಾರ್ಯನಿರ್ವಾಹ ಮಾಡುವುದಕ್ಕೂ ಶಕ್ತಿಯುಳ್ಳವನಾಗುವನು." ಈ ತೆರನಾಗಿ ಗಣ್ಯನೆನಿಸಿಕೊಳ್ಳಬೇಕಾದರೆ ಪ್ರತಿಯೊಬ್ಬ ಯುವಕನೂ ತರ್ಕದಲ್ಲಿಯೂ, ವ್ಯಾಕರಣದಲ್ಲಿಯೂ, ಅಲಂಕಾರದಲ್ಲಿಯೂ, ಸಭಾಪಾಂಡಿತ್ಯದಲ್ಲಿಯೂ ಪ್ರಾವೀಣ್ಯತೆಯನ್ನು ಪಡೆಯಬೇಕಾಗಿತ್ತು. ಇಂಥ ಶಾಸ್ತ್ರಗಳಲ್ಲಿ ಉಪದೇಶ ಕೊಡಬೇಕಾಗುವುದೆಂದು ತಿಳಿದು ಸೋಫಿಸ್ಟರು ಅವುಗಳನ್ನು ಕ್ರಮದಿಂದ ಅಭ್ಯಾಸ ಮಾಡತೊಡಗಿದರು. ಅಲ್ಲದೆ ಧಾರ್ಮಿಕ ಮತ್ತು ರಾಜಕೀಯ ವಿಚಾರಗಳಿಗೆ ವಿಶೇಷ ಗಮನವನ್ನಿತ್ತು ಪ್ರಾಚೀನ ಆಚಾರವ್ಯವಹಾರಗಳನ್ನು ಸುಧಾರಿಸಲು ಪ್ರಯತ್ನಪಟ್ಟುದರಿಂದ ನೈತಿಕಶಾಸ್ತ್ರವೂ ರಾಜ್ಯಸಿದ್ಧಾಂತವೂ (Theory of the

State) ವೃದ್ಧಿಯನ್ನೈದಲು ಅವಕಾಶವಾಯಿತು. ಕಡೆಕಡೆಯಲ್ಲಿ ಜನರ ಧರ್ಮಬುದ್ಧಿ ಕಡಮೆಯಾದ ಹಾಗೆಲ್ಲಾ, ನ್ಯಾಯದಿಂದಾಗಲಿ, ಅನ್ಯಾಯದಿಂದಾಗಲಿ, ಕಾರ್ಯಸಿದ್ಧಿಯಾಗುವುದೇ ಪ್ರಾಮುಖ್ಯವೆಂಬ ಭಾವನೆ ತಲೆದೋರಿದ ಹಾಗೆಲ್ಲಾ, ಸೋಫಿಸ್ಟರು ತಮ್ಮ ಶಿಷ್ಯರನ್ನು ತರ್ಕದಲ್ಲಿ ಬಲಾಢ್ಯರನ್ನಾಗಿ ಮಾಡುವುದೇ ದೊಡ್ಡ ಕೆಲಸವೆಂದು ತಿಳಿದು ಈ ಉದ್ದೇಶವನ್ನು ಸಫಲಗೊಳಿಸುವ ಪ್ರಯತ್ನದಲ್ಲಿ ವಿಪರೀತ ಕಟ್ಟಳೆಗಳನ್ನು ಆಚರಿಸತೊಡಗಿದರು. ವಾದದಲ್ಲಿ ಎದುರಾಳಿಯನ್ನು ಹೇಗಾದರೂ ಮಾಡಿ, ಯುಕ್ತಿಯಿಂದಾಗಲಿ ಕುಯುಕ್ತಿಯಿಂದಾಗಲಿ ಸೋಲಿಸುವುದೇ, ತಿರುಳಿಲ್ಲದ ಪಂಥವನ್ನು ಹೂಡಿ ಅದರಲ್ಲಿ ತಿರುಳುಂಟೆಂದು ವಾಗ್ವೈಖರಿಯಿಂದ ಸಾಧಿಸಿ ತೋರಿಸಿಕೊಡುವುದೇ, ಎದುರುಪಕ್ಷದವನನ್ನು ಶ್ಲೇಷೆಯೇ ಮೊದಲಾದ ಶಬ್ದಜಾಲತಂತ್ರಗಳಿಂದ ಮರುಳು ಮಾಡಿ, ನೋಡುವವರೆಲ್ಲಾ ಕೈಚಪ್ಪಾಳೆ ಹಾಕಿ ನಗುವಂತೆ ಭಂಗಪಡಿಸುವುದೇ– ಇದೇ ಶಿಷ್ಯನಿಗೆ ಕಲಿಸಿಕೊಡುವ ವಿದ್ಯೆಯಾಯಿತು.

ಗಾರ್ಜಿಯಾಸ್ ಎಂಬ ಸೋಫಿಸ್ಟನು "ಪ್ರಕೃತಿ ಅಥವಾ ಅಸತ್ತನ್ನು ಕುರಿತದ್ದು" ಎಂಬ ತನ್ನ ಗ್ರಂಥದಲ್ಲಿ ತನ್ನ ಸಿದ್ಧಾಂತವನ್ನು ಈ ಕೆಳಗೆ ಕಂಡ ಮೂರು ಪ್ರಮೇಯಗಳಲ್ಲಿ ಸಾರುತ್ತಾನೆ: ಒಂದನೆಯದು, ಸತ್ತೆಂಬುದು ಯಾವುದೂ ಇಲ್ಲ (ಎಲ್ಲವೂ ಶೂನ್ಯವೆಂದರ್ಥ); ಎರಡನೆಯದು, ಯಾವುದಾದರೂ ಇದ್ದರೂ ನಾವು ಅದನ್ನು ತಿಳಿಯುವಹಾಗಿಲ್ಲ; ಮೂರನೆಯದು, ಅಕಸ್ಮಾತ್ ಯಾವನಾದರೂ ಅದನ್ನು ತಿಳಿದುಕೊಂಡರೂ, ಅದು ರಹಸ್ಯವಾಗಿದ್ದು ಬಿಡುವುದು, ಏಕೆಂದರೆ, ಅದನ್ನು ಇತರರಿಗೆ ತಿಳಿಯಪಡಿಸಲು ಆತನು ಅಶಕ್ತನಾಗಿರುವನು."

ಪ್ಲೇಟೋವಿನ 'ಪ್ರೊಟಾಗೊರಾಸ್' ಎಂಬ ಸಂವಾದದಿಂದ ಕೆಳಗೆ ಕೊಟ್ಟಿರುವ ಉಲ್ಲೇಖನ ಅಥೆನ್ಸಿನ ಯುವಕರು ಸೋಫಿಸ್ಟರನ್ನು ಮೊದಮೊದಲು ಎಷ್ಟು ಉತ್ಸಾಹ ಆತುರಗಳಿಂದ ಎದುರುಗೊಂಡು ಅವರ ಶಿಷ್ಯರಾಗಲು ಬೇಡಿಕೊಳ್ಳುತ್ತಿದ್ದರೆಂಬುದನ್ನೂ, ಪ್ಲೇಟೋ ಪ್ರೊಟಾಗೊರಾಸ್ ಎಂಬ ವಿಖ್ಯಾತ ಸೋಫಿಸ್ಟನ ಮುಖೇನ ಅವರ ಕಸಬನ್ನು ಹೇಗೆ ವರ್ಣಿಸುತ್ತಾನೆಂಬುದನ್ನೂ ಸ್ಪಷ್ಟಪಡಿಸುತ್ತದೆ.

"ಕಳೆದ ರಾತ್ರಿ—ಇಂದಿನ ಬೆಳಗ್ಗೆ ಬಹು ಮುಂಜಾನೆಯಲ್ಲಿಯೇ ಎಂದು ಹೇಳಬೇಕು — ಅಪೊಲೊಡೋರಸ್ಸಿನ ಮಗನೂ, ಫೇಸನ್ನಿನ ಸಹೋದರನೂ ಆದ ಹಿಪ್ಪೊಕ್ರಟಿಸ್ ಎಂಬ ಯುವಕನು ನನ್ನ ಬಾಗಿಲ ಬಳಿ ತನ್ನ ದೊಣ್ಣೆಯಿಂದ ಅಸಾಧ್ಯವಾದ ಸಪ್ಪಳಮಾಡಿದನು ; ಯಾರೋ ಬಾಗಿಲು ತೆಗೆದಿರಬೇಕು, ಒಡನೆಯೇ ಆತನು ಒಳಗೆ ನುಗ್ಗಿ ಬಂದು, "ಸಾಕ್ರಟೀಸ್, ಏನು ಎಚ್ಚರವಾಗಿದ್ದೀಯೋ, ನಿದ್ದೆಹೋಗುತ್ತಿದ್ದೀಯೋ ?" ಎಂದು ಕೂಗಿಕೊಂಡನು.

ಆತನ ಕಂಠವನ್ನು ನಾನು ತಕ್ಷಣವೇ ಗುರುತಿಸಿ : "ನೀನೇ ಹಿಪ್ಪೊಕ್ರಟಿಸ್, ಏನು ಸಮಾಚಾರ ?" ಎಂದೆನು.

"ಶುಭಸಮಾಚಾರ ; ಶುಭವಿಲ್ಲದೆ ಮತ್ತೇನು" ಎಂದು ಆತನು ಉತ್ತರವಿತ್ತನು.

"ಸಂತೋಷ", ಎಂದು ನಾನು ಹೇಳಿ, "ಆದರೆ ಸಮಾಚಾರವೇನು ? ಅಲ್ಲದೆ ಈ ಅವೇಳೆಹೊತ್ತಿನಲ್ಲಿ ಇಲ್ಲಿ ಬಂದ ಕಾರಣವೇನು ?" ಎಂದು ಕೇಳಿದೆನು. ಇದಕ್ಕೆ ಆತನು ನನ್ನ ಹತ್ತಿರ ಸರಿದುಬಂದು : "ಪ್ರೊಟಾಗೊರಾಸನು ಬಂದಿದ್ದಾನೆ" ಎಂದು ಪಿಸುಗುಟ್ಟಿದನು.

"ಹೌದು, ಅವನು ಎರಡು ದಿನಗಳಿಗೆ ಮುಂಚೆಯೇ ಬಂದನು. ಅವನು ಬಂದುದನ್ನು ನೀನು ಕೇಳಿದ್ದು ಈಗಲೇ ಏನು ?"

"ದಿಟ, ಈಗತಾನೇ—ಅಂದರೆ ನಿನ್ನೆಯದಿನ ಸಾಯಂಕಾಲದವರೆಗೂ ನನಗೆ ಗೊತ್ತಿರಲಿಲ್ಲ".

ಹಾಗೆಂದುಕೊಂಡೇ ಉರುಳುಮಂಚವನ್ನು ತಡವರಿಸುತ್ತಾ ನನ್ನ ಪಾದಗಳ ಬಳಿ ಕುಳಿತುಕೊಂಡು ಮುಂದೆ ಹೇಳತೊಡಗಿದನು :

"ನಿನ್ನೆಯ ದಿನ ಸಂಜೆ ಬಹಳ ಹೊತ್ತಾದಮೇಲೆ, ಓನೋಏನಿಂದ ನಾನು ಹಿಂತಿರುಗಿ ಬಂದಾಗ—ಅಲ್ಲಿಗೆ ನಾನು ಓಡಿಹೋಗಿದ್ದ ಸಾಟರಸ್ ಎಂಬ ನನ್ನ ಭೃತ್ಯನನ್ನು ಹಿಡಿದುತರಲು ಹೋಗಿದ್ದೆನು : ಈ ವಿಷಯವನ್ನು ನಿನಗೆ ಮೊದಲೇ ತಿಳಿಸಬೇಕೆಂದಿದ್ದೆನು, ಆದರೆ ಮಧ್ಯೆ ಯಾವಯಾವುದೋ ಪ್ರಸಂಗಗಳು ಬಂದೊದಗಿದುವು—ಇರಲಿ, ಓನೋಏನಿಂದ ನಾನು ಹಿಂತಿರುಗಿ ಬಂದಮೇಲೆ ರಾತ್ರಿ ಭೋಜನಮಾಡಿ ಮಲಗಲು ಸಿದ್ಧನಾಗು

ತ್ತಿದ್ದ ಸಮಯದಲ್ಲಿ ನನ್ನ ಸಹೋದರನು "ಪ್ರೊಟಾಗೊರಾಸನು ಬಂದಿದ್ದಾನೆ" ಎಂದು ನನ್ನೊಡನೆ ಹೇಳಿದನು. ತಕ್ಷಣವೇ ನಿನ್ನ ಬಳಿಗೆ ಬರಬೇಕೆಂದಿದ್ದೆನು, ಆದರೆ ರಾತ್ರಿ ಬಹಳ ಹೊತ್ತಾಗಿಬಿಟ್ಟಿತ್ತು. ಆದರೇನು, ನನ್ನ ಆಯಾಸಪರಿಹಾರವಾಗಿ ಕಣ್ಣು ತೆರೆದೆನೋ ಇಲ್ಲವೋ ಆ ಕೂಡಲೇ ಹಾಸಿಗೆಯಿಂದೆದ್ದು ನೇರವಾಗಿ ಇಲ್ಲಿಗೆ ಬಂದೆನು".

ಅವನು ಮರುಳಾದ ಸಾಹಸಿಯೆಂದು ತಿಳಿದಿದ್ದ ನಾನು, "ಹಾಗಾದರೆ ಏನು ವಿಷಯ? ಪ್ರೊಟಾಗೊರಾಸನು ಏನಾದರೂ ನಿನ್ನಮೇಲೆ ದರೋಡೆ ನಡೆಸಿದ್ದಾನೇನು?" ಎಂದು ಕೇಳಿದೆನು.

ಅದಕ್ಕವನು ನಗುತ್ತಾ: "ದಿಟವಾಗಿಯೂ, ಸಾಕ್ರಟೀಸ್, ನನಗೆ ಕೊಡದೆ ತಾನೇ ಇಟ್ಟುಕೊಂಡಿರುವ ವಿವೇಕವನ್ನು ಸುಲಿಗೆ ಮಾಡಿದ್ದಾನೆ" ಎಂದು ಹೇಳಿದನು.

"ಇದೇನು ಹೀಗೆ ಹೇಳುತ್ತೀಯೆ, ನೀನು ಆತನಿಗೆ ಹಣ ಕೊಟ್ಟು ಅವನೊಡನೆ ಸ್ನೇಹ ಬೆಳಸಿದ್ದೇ ಆದರೆ, ಆತನು ನಿನ್ನನ್ನೂ ತನ್ನಂತೆಯೇ ವಿವೇಕಶಾಲಿಯಾಗಿ ಮಾಡುವನು" ಎಂದು ನಾನು ಹೇಳಿದೆನು.

ಅದಕ್ಕವನು ನುಡಿದನು: "ಹಾಗಾಗಲೆಂದೇ, ಸಾಕ್ರಟೀಸ್, ನಾನು ದೇವರನ್ನು ಪ್ರಾರ್ಥಿಸುತ್ತಿರುವುದು! ನನ್ನ ಹತ್ತಿರ ಇರುವುದನ್ನೆಲ್ಲಾ ಆತನು ತೆಗೆದುಕೊಳ್ಳಲಿ, ಬೇಕಾದರೆ, ನನ್ನ ಸ್ನೇಹಿತರ ಹತ್ತಿರ ಇರುವುದನ್ನೆಲ್ಲಾ ತೆಗೆದುಕೊಳ್ಳಲಿ. ಅದಕ್ಕೋಸ್ಕರವಾಗಿಯೇ—ನನ್ನ ಪರವಾಗಿ ನೀನು ಆತನೊಡನೆ ಮಾತನಾಡಲೆಂದೇ—ಈಗ ನಾನು ನಿನ್ನ ಬಳಿಗೆ ಬಂದಿರುವುದು. ನೋಡು, ಸಾಕ್ರಟೀಸ್, ನಾನಿನ್ನೂ ಚಿಕ್ಕವ, ಅಲ್ಲದೆ ಪ್ರೊಟಾಗೊರಾಸನನ್ನು ಹಿಂದೆ ಯಾವಾಗಲೂ ನಾನು ನೋಡಿಯೂ ಇಲ್ಲ, ಅವನ ಭಾಷಣವನ್ನು ಕೇಳಿಯೂ ಇಲ್ಲ (ಆತನು ಹಿಂದೆ ಯಾವಾಗಲೋ ಅಥೆನ್ಸಿಗೆ ಬಂದಿದ್ದಾಗ ನಾನಿನ್ನೂ ಮಗು); ಸಮಸ್ತ ಜನರೂ ಆತನನ್ನು ಹೊಗಳುತ್ತಾರೆ; ಬಲು ಸುಶಿಕ್ಷಿತನಾದ ಪ್ರೌಢವಾಗ್ಮಿಯೆನ್ನುತ್ತಾರೆ. ಈ ಕ್ಷಣವೇ ನಾವು ಆತನ ಬಳಿಗೆ ಏಕೆ ಹೋಗಬಾರದು? ಹೋದೆವಾದರೆ ಅವನು ಮನೆಯಲ್ಲಿಯೇ ಇರುತ್ತಾನೆ. ಹಿಪ್ಪಾನಿಕಸ್ಸಿನ ಮಗನಾದ ಕ್ಯಾಲಿಯಾಸಿನ ಮನೆಯಲ್ಲಿಳಿದುಕೊಂಡಿದ್ದಾನೆಂದು ಹೇಳುತ್ತಾರೆ: ನಡೆ, ಹೋಗೋಣ."

"ಏನು, ಇಷ್ಟುಹೊತ್ತಿಗೇನೇ, ಒಳ್ಳೆಯ ಮಹರಾಯನಪ್ಪ ನೀನು! ಇನ್ನೂ ಮುಂಜಾನೆಗೆ ಬಹಳ ಹೊತ್ತಿದೆ. ಆದರೂ ಎದ್ದು ಬೆಳಗಿನ ಝಾವದವರೆಗೂ ಬೇಕಾದರೆ ಅಂಗಳದಲ್ಲಿ ಸುತ್ತಾಡಿಕೊಂಡಿದ್ದು ಕಾದಿರೋಣ; ಕೋಳಿ ಕೂಗುತ್ತಲೇ ಹೋಗುವ. ಪ್ರೊಟಾಗೊರಾಸನು ಸಾಮಾನ್ಯವಾಗಿ ಮನೆಯಲ್ಲಿಯೇ ಇರುತ್ತಾನೆ, ಆದ್ದರಿಂದ ನಮಗೆ ಸಿಕ್ಕಿಯೇ ಸಿಕ್ಕುತ್ತಾನೆ; ಭಯಪಡಬೇಕಾದ್ದೇನೂ ಇಲ್ಲ."

ಅದೇರೀತಿಯಾಗಿ ನಾವು ಎದ್ದು ಅಂಗಳದಲ್ಲಿ ಸುತ್ತಾಡಿದೆವು. ಅವನ ಮನಸ್ಸಿನ ಧೃಢವನ್ನು ಪರೀಕ್ಷಿಸಬೇಕೆಂದು ನನಗೆ ಕುತೂಹಲ ಬಂದುದರಿಂದ ಆತನಿಗೆ ಪ್ರಶ್ನೆಗಳನ್ನು ಹಾಕಲು ಉಪಕ್ರಮಿಸಿದೆನು. "ಹಿಪ್ಪೊಕ್ರಟೀಸ್, ಪ್ರೊಟಾಗೊರಾಸಿನ ಬಳಿಗೆ ನೀನು ಹೋಗಿ ಅವನಿಗೆ ನಿನ್ನ ಹಣವನ್ನು ಸುರಿಯಬೇಕೆಂದಿರುವೆಯಲ್ಲಾ, ಹೇಳು, ನೀನು ಹೋಗಬೇಕೆಂದಿರುವ ಆ ಪುರುಷನು ಎಂತಹವನು? ಆತನು ನಿನ್ನನ್ನು ಏನಾಗಿ ಮಾಡುತ್ತಾನೆಂದು ನಿನ್ನ ನಂಬಿಕೆ? ಈಗ ದೃಷ್ಟಾಂತಕ್ಕೋಸ್ಕರವಾಗಿ, ಕಾಸ್‌ನಗರದ ಹಿಪ್ಪೊಕ್ರಟೀಸಿನ ಬಳಿಗೆ ನೀನು ಹೋಗಿ ಅವನಿಗೆ ನಿನ್ನ ಹಣವನ್ನು ಸುರಿಯಲು ಸಿದ್ಧನಾಗಿದ್ದೆಯೆಂದಿಟ್ಟುಕೊಳ್ಳೋಣ. ಅವನು ಏನೆಂದು ತಿಳಿದು ಅವನಿಗೆ ನೀನು ಹಣ ಕೊಡುವೆ? ಎಂದು ಯಾರೋ ನಿನ್ನನ್ನು ಕೇಳಿದರೆಂಬುದಾಗಿ ಊಹಿಸು. ಆಗ ನೀನು ಏನು ಉತ್ತರ ಹೇಳುತ್ತಿದ್ದೆ?"

"ಅವನು ವೈದ್ಯನೆಂಬುದಾಗಿ ತಿಳಿದು ಅವನಿಗೆ ಹಣ ಕೊಡುತ್ತೇನೆ, ಎಂದು ಹೇಳುತ್ತಿದ್ದೆ."

"ಅವನು ನಿನ್ನನ್ನು ಏನುಮಾಡುವನು?"

"ವೈದ್ಯನನ್ನಾಗಿ ಮಾಡುವನು."

"ಅಥವಾ ಆರ್ಗೋಸಿನ ಪಾಲಿಕ್ಲೀಟಸ್, ಇಲ್ಲವೆ ಆಥೆನ್ಸಿನ ಫಿಡಿಯಾಸ್, ಇವರ ಬಳಿಗೆ ನೀನು ಹೋಗಿ ಅವರಿಗೆ ಹಣ ಕೊಡಲು ಮನಸ್ಸು ಮಾಡಿದ್ದೆ ಎಂದಿಟ್ಟುಕೊ. ಯಾರೋ ನಿನ್ನನ್ನು ಕೇಳಿದರು—ಪಾಲಿಕ್ಲೀಟಸನೂ, ಫಿಡಿಯಾಸನೂ ಯಾರು? ಅವರಿಗೇಕೆ ನಿನ್ನ ಹಣವನ್ನು ಕೊಡುತ್ತೀಯೆ?—ಎಂದು. ನೀನು ಹೇಗೆ ಉತ್ತರ ಕೊಡುತ್ತಿದ್ದೆ?"

" ಅವರು ಶಿಲ್ಪಿಗಳೆಂದು ಹೇಳುತ್ತಿದ್ದೆ. "

" ಅವರು ನಿನ್ನನ್ನು ಏನಾಗಿಮಾಡುವರು ? "

" ಶಿಲ್ಪಿಯನ್ನಾಗಿ, ಸಂದೇಹವೇನು ? "

" ಒಳ್ಳೆಯದು, ಈಗ ನೀನೂ ನಾನೂ ಪ್ರೊಟಾಗೊರಾಸಿನ ಬಳಿಗೆ ಹೋಗಿ ನಿನ್ನ ಪರವಾಗಿ ಅವನಿಗೆ ಹಣ ಕೊಡಲು ಸನ್ನದ್ಧರಾಗಿದ್ದೇವೆ.... ........ಈ ರೀತಿ ನಾವು ಉತ್ಸಾಹಭರಿತರಾಗಿ ನಮ್ಮ ಇಷ್ಟಸಿದ್ಧಿಗೆ ಹೊರಡುತ್ತಿರುವಾಗ ಯಾರಾದರೂ ನಮ್ಮನ್ನು ಹಿಡಿದು ನಿಲ್ಲಿಸಿ : ಸಾಕ್ರಟೀಸ್–, ಹಿಪ್ಪೊಕ್ರಟೀಸ್, ಪ್ರೊಟಾಗೊರಾಸನು ಯಾರು, ಅವನ ಕೆಲಸವೇನು, ಅವನಿಗೇಕೆ ನೀವು ಹಣ ಕೊಡಲು ಹೋಗುತ್ತಿರುವಿರಿ ? ಎಂದು ಕೇಳಿದರೆ, ನಾವು ಹೇಗೆ ಉತ್ತರವೀಯಬೇಕು ? ಫಿಡಿಯಾಸನು ಶಿಲ್ಪಿಯೆಂಬುದೇನೋ ನನಗೆ ಗೊತ್ತು, ಹೋಮರ್ ಕವಿ ; ಆದರೆ ಪ್ರೊಟಾಗೊರಾಸಿನ ನಾಮಕರಣ ಯಾವುದು ? ಜನರು ಅವನನ್ನು ಏನೆಂದು ಕರೆಯುತ್ತಾರೆ ? "

" ಅವನನ್ನು ಸೋಫಿಸ್ಟನೆಂದು ಕರೆಯುತ್ತಾರೆ. "

" ಹಾಗಾದರೆ ಈಗ ನಾವು ಅವನಿಗೆ ಸೋಫಿಸ್ಟನಾಗಿರುವುದಕ್ಕೋಸ್ಕರ ಹಣವನ್ನು ಕೊಡಲುದ್ಯುಕ್ತರಾಗಿದ್ದೇವೆ ? "

" ನಿಶ್ಚಯ ".

" ಆಗಲಿ, ಈಗ ಮತ್ತೊಂದು ಪ್ರಶ್ನೆ ಕೇಳಿದರೆನ್ನೋಣ. ' ನಿನ್ನ ವಿಚಾರ ಹೇಗಪ್ಪಾ ? ಪ್ರೊಟಾಗೊರಾಸನನ್ನು ನೀನು ನೋಡಲು ಹೋದರೆ ನಿನ್ನನ್ನು ಅವನು ಏನನ್ನಾಗಿ ಮಾಡುವನು ? ' "

ಈ ಪ್ರಶ್ನೆಗೆ ಅವನು, ಮುಖದಲ್ಲಿ ಕೊಂಚ ನಾಚಿಕೆ ಕಂಡುಬರುತ್ತಿರಲು (ಆಗತಾನೇ ಬೆಳಕು ಹರಿಯುತ್ತಿದ್ದುದರಿಂದ ಅವನ ಮುಖವನ್ನು ನಾನು ನೋಡಲಾಗುತ್ತಿತ್ತು), ಉತ್ತರವಿತ್ತನು : "ಹಿಂದಿನ ದೃಷ್ಟಾಂತಗಳಿಗೂ ಇದಕ್ಕೂ ವ್ಯತ್ಯಾಸವಿಲ್ಲವೆಂಬ ಪಕ್ಷದಲ್ಲಿ, ಆತನು ನನ್ನನ್ನು ಸೋಫಿಸ್ಟನನ್ನಾಗಿ ಮಾಡುತ್ತಾನೆಂದು ಅಂದುಕೊಂಡಿದ್ದೇನೆ."

"ಅಯ್ಯೋ-ದೇವರೇ, ಹಿಪ್ಪೊಕ್ರಟೀಸ್, ನಿನ್ನ ಸರಿಯುವರ ಮುಂದೆ ಸೋಫಿಸ್ಟನೆಂದೆನಿಸಿಕೊಂಡು ನಿಲ್ಲಲು ನಿನಗೆ ಸಂಕೋಚವಾಗುವುದಿಲ್ಲವೆ?"

" ವಾಸ್ತವ, ಸಾಕ್ರಟೀಸ್, ನಿಜಾಂಶವನ್ನು ಹೇಳಬೇಕಾದರೆ, ನನಗೆ ನಾಚಿಕೆಯೇ............ "

" ನೀನು ಏನುಮಾಡುತ್ತಿದ್ದೀಯೆ ಎಂಬುದು ನಿನಗೆ ಗೊತ್ತಿದೆಯೇ ಎಂದು ನಾನು ಕೌತುಕಪಡುತ್ತೇನೆ. "

" ಏನುಮಾಡುತ್ತಿದ್ದೇನೆ? "

" ಹೇಳುತ್ತೇನೆ, ಕೇಳು. ನೀನು ನಿನ್ನ ಆತ್ಮವನ್ನು ಸೋಫಿಸ್ಟನೆಂದು ಹೆಸರುವಾಸಿಯಾಗಿರುವವನ ವಶಕ್ಕೆ ಒಪ್ಪಿಸಲು ತೊಡಗಿರುತ್ತೀಯೆ. ಆದರೂ ಸೋಫಿಸ್ಟನೆಂದರೆ ಯಾರು ಎಂಬುದು ನಿನಗೆ ಗೊತ್ತಿದೆಯೆಂದು ನಾನು ನಂಬಲಾರೆ; ಆ ಪಕ್ಷದಲ್ಲಿ ನಿನ್ನ ಆತ್ಮವನ್ನು ಯಾರ ವಶಕ್ಕೆ ಒಪ್ಪಿಸುತ್ತಿದ್ದೀಯೆ ಎಂಬುದು ಕೂಡ ನಿನಗೆ ಗೊತ್ತಿಲ್ಲ; ಯಾವುದನ್ನು ಆಶ್ರಯಿಸಿ ನೀನು ಹೋಗುತ್ತಿದ್ದೀಯೋ ಅದು ಒಳ್ಳೆಯದೇ ಕೆಟ್ಟದೇ ಎಂಬುದು ಮೊದಲೇ ಗೊತ್ತಿಲ್ಲ."

" ಅದು ನನಗೆ ಗೊತ್ತಿದೆಯೆಂದು ನಾನು ನಿಜವಾಗಿಯೂ ತಿಳಿಯುತ್ತೇನೆ. "

" ಹಾಗಾದರೆ ಈಗ ಹೇಳು, ಪ್ರೊಟಾಗೊರಾಸ್ ಯಾರೆಂದು ನೀನು ಊಹಿಸುತ್ತೀಯೆ? "

" ಆತನ ಹೆಸರೇ ಹೇಳುವಂತೆ ಅವನೊಬ್ಬ ವಿವೇಕ ವಿಚಾರಗಳನ್ನು ತಿಳಿದ ಪುರುಷನೆಂದು ಭಾವಿಸುತ್ತೇನೆ. "

" ಹೌದು........ಆದರೆ ಸೋಫಿಸ್ಟನ ವಿವೇಕ ಯಾವುದು........? "

" ....ಜನರನ್ನು ವಾಕ್ಚತುರರನ್ನಾಗಿಮಾಡುವುದೇ ಅವನ ವಿದ್ಯೆ....."

" ಹಾಗಾದರೆ ಯಾವ ವಿಚಾರವನ್ನು ಕುರಿತು ಸೋಫಿಸ್ಟನು ಜನರನ್ನು ವಾಕ್ಚತುರರನ್ನಾಗಿ ಮಾಡುತ್ತಾನೆ? ತನಗೆ ಯಾವುದು ಚೆನ್ನಾಗಿ ಗೊತ್ತುಂಟೋ ಆ ವಿಚಾರದಲ್ಲಲ್ಲವೇ? "

" ಅದನ್ನು ಧಾರಾಳವಾಗಿ ಒಪ್ಪಬಹುದು. "

" ಹಾಗಾದರೆ ಸೋಫಿಸ್ಟನು ಚೆನ್ನಾಗಿ ತಿಳಿದುಕೊಂಡಿರುವ, ಮತ್ತು ತನ್ನ ಶಿಷ್ಯರೂ ಚೆನ್ನಾಗಿ ತಿಳಿದುಕೊಳ್ಳುವಂತೆ ಮಾಡುವ, ವಿಚಾರ ಯಾವುದು? "

" ನಿಜವಾಗಿಯೂ, ಸಾಕ್ರಟೀಸ್, ಅದನ್ನು ನಾನು ಹೇಳಲಾರೆ. "

ಆಗ ನಾನು ಹೇಳತೊಡಗಿದೆನು : "ನಿನಗೆ ತಟ್ಟಬಹುದಾದ ಅಪಾಯದ ವಿಚಾರವಾಗಿಯಾದರೂ ನಿನಗೆ ಜ್ಞಾನವಿದೆಯೇ? ನಿನ್ನ ದೇಹವನ್ನು, ಅದಕ್ಕೆ ಒಳ್ಳೆಯದನ್ನಾಗಲಿ ಕೆಡುಕನ್ನಾಗಲಿ ಮಾಡಬಹುದಾದ, ಒಬ್ಬಾನೊಬ್ಬನ ವಶಕ್ಕೆ ಒಪ್ಪಿಸಬೇಕಾಯಿತೆಂದೆನ್ನು ; ಆಗ ನೀನು ಸಾವಧಾನವಾಗಿ ಯೋಚಿಸಿ ನಿನ್ನ ಮಿತ್ರರ ಮತ್ತು ಬಂಧುಗಳ ಅಭಿಪ್ರಾಯವನ್ನು ಕೇಳುತ್ತಿರಲಿಲ್ಲವೇ? ಅವನ ವಶಕ್ಕೆ ನಿನ್ನ ದೇಹವನ್ನು ಒಪ್ಪಿಸಬೇಕೇ ಬೇಡವೇ ಎಂಬ ವಿಷಯದಲ್ಲಿ ನೀನು ಬಹಳ ದಿನಗಳು ವಿಚಾರ ಮಾಡುತ್ತಿರಲಿಲ್ಲವೆ? ಆದರೆ ಈಗಲೋ ನಿನ್ನ ಆತ್ಮದ ಪ್ರಶ್ನೆ ಬಂದಿರುವಾಗ—ಯಾವುದನ್ನು ನೀನು ನಿನ್ನ ದೇಹಕ್ಕಿಂತ ಅತ್ಯಧಿಕ ಬೆಲೆಯುಳ್ಳುದೆಂದು ನಂಬಿರುವೆಯೋ, ಯಾವುದರ ಮೇಲುಬೀಳಿನ ಮೇಲೆ ನಿನ್ನ ಸಕಲ ಸೌಭಾಗ್ಯ ಸಂಪತ್ತೂ ನಿಂತಿದೆಯೋ—ಅಂಥ ನಿನ್ನ ಆತ್ಮದ ಪ್ರಶ್ನೆ ಬಂದಿರುವಾಗ, ನಿನ್ನ ತಂದೆಯೊಡನೆ ಆಗಲಿ ಸಹೋದರನೊಡನೆ ಆಗಲಿ, ಇಲ್ಲವೆ ನಿನ್ನ ಮಿತ್ರರಾಗಿರತಕ್ಕ ನಮ್ಮಲ್ಲಿ ಯಾರೊಡನೆ ಆಗಲಿ ಇದರ ವಿಚಾರವಾಗಿ ನೀನು ಆಲೋಚನೆ ಮಾಡಲೇ ಇಲ್ಲ. ಅದಕ್ಕೆ ಬದಲಾಗಿ, ಈ ಪರಕೀಯನು ಅಥೆನ್ಸಿನಲ್ಲಿ ಕಾಲಿಟ್ಟನೋ ಇಲ್ಲವೋ, ತತ್‌ಕ್ಷಣದಲ್ಲಿಯೇ ನೀನು ನಿನ್ನ ಆತ್ಮವನ್ನು ಆತನ ವಶಕ್ಕೆ ಒಪ್ಪಿಸಿಬಿಡುತ್ತೀಯೆ. ನೀನೇ ಹೇಳುವಂತೆ, ಸಾಯಂಕಾಲ ಅವನು ಬಂದನೆಂದು ಕೇಳುತ್ತೀಯೆ, ಮರುದಿನ ಪ್ರಾತಃಕಾಲಕ್ಕೇ ಅವನ ಬಳಿಗೆ ಹೋಗುತ್ತೀಯೆ: ಆತನ ಶಿಷ್ಯನಾಗಬೇಕೋ ಬೇಡವೋ ಎಂಬ ವಿಚಾರದಲ್ಲಿ ನೀನು ಹಿಂದುಮುಂದು ನೋಡುವುದಿಲ್ಲ, ಯಾರ ಅಭಿಪ್ರಾಯವನ್ನೂ ಕೇಳುವುದಿಲ್ಲ. ಏನೇ ಆಗಲಿ ಆತನ ಶಿಷ್ಯನಾಗಬೇಕೆಂದು ಸಂಕಲ್ಪ ಮಾತ್ರ ಮಾಡಿಬಿಟ್ಟಿರುತ್ತೀಯೆ. ಮತ್ತು ಈ ಸಂಕಲ್ಪವನ್ನು ಈಡೇರಿಸಿಕೊಳ್ಳುವುದಕ್ಕಾಗಿ ನಿನ್ನ ಸ್ವಂತ ಆಸ್ತಿಯನ್ನು ಮಾತ್ರವೇ ಅಲ್ಲ, ನಿನ್ನ ಸ್ನೇಹಿತರ ಆಸ್ತಿಯನ್ನು ಕೂಡ ವೆಚ್ಚ ಮಾಡಲು ಸಿದ್ಧನಾಗಿರುತ್ತೀಯೆ. ಮತ್ತು ಇದರ ವೈಚಿತ್ರ್ಯವೇನೆಂದರೆ, ಇಷ್ಟಕ್ಕೆಲ್ಲಾ ನೀನು ಸನ್ನದ್ಧನಾಗಿರುವಾಗ, ನೀನೇ ಒಪ್ಪಿಕೊಳ್ಳುವಂತೆ, ಅವನು ಯಾರೆಂಬುದು ಕೂಡ ನಿನಗೆ ಗೊತ್ತಿಲ್ಲ, ಮತ್ತು ಅವನ ಸಂಗಡ

ನೀನೆಂದೂ ಮಾತಾಡಿಯೂ ಇಲ್ಲ: ಅವನನ್ನು ಸೋಫಿಸ್ಟನೆಂದೇನೋ ಕರೆಯುತ್ತೀಯೆ, ಆದರೆ ಸೋಫಿಸ್ಟನೆಂದರೆ ಯಾರೆಂಬದು ನಿನಗೆ ಗೊತ್ತಿಲ್ಲ ವೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಹೀಗೆಲ್ಲಾ ಇರುವಾಗ, ನೀನು ಅವನ ಶಿಷ್ಯನಾಗಲು ಹೊರಟಿರುವೆ."

ನಾನು ಈ ರೀತಿ ಮಾತನಾಡಿದುದನ್ನು ಆತನು ಕೇಳಿ: "ಹೌದು, ಸಾಕ್ರಟೀಸ್, ನೀನು ಹೇಳುವುದು ವಾಸ್ತವವೇ" ಎಂದನು. ನಾನು ಮುಂದುವರಿದೆನು: "ಹಿಪ್ಪೊಕ್ರಟೀಸ್, ಸೋಫಿಸ್ಟನೆಂದರೆ, ಆತ್ಮದ ಆಹಾರ ಸಾಮಾಗ್ರಿಗಳಲ್ಲಿ ಒಟ್ಟೊಟ್ಟಾಗಿಯೂ, ಚಿಲ್ಲರೆ ಚಿಲ್ಲರೆ ಯಾಗಿಯೂ ವ್ಯಾಪಾರಮಾಡುವವನೆಂದಲ್ಲವೆ ಅರ್ಥ? ನನಗೇನೋ ಅದೇ ಅವನ ಸ್ವಭಾವವೆಂದು ಕಾಣುತ್ತದೆ." "ಆತ್ಮದ ಆಹಾರ ಸಾಮುಗ್ರಿ ಎಂದರೇನು, ಸಾಕ್ರಟೀಸ್?"

"ಜ್ಞಾನವೇ ಆತ್ಮದ ಆಹಾರವೆನ್ನುವ ವಿಷಯದಲ್ಲಿ ಸಂದೇಹ ವೇನಿದೆ? ಆದರೆ ಸೋಫಿಸ್ಟನು ತಾನು ಮಾರುವ ಸಾಮುಗ್ರಿಯನ್ನು ಹೊಗಳುವುದರಲ್ಲಿ ನಮ್ಮನ್ನು ಮೋಸಪಡಿಸದಂತೆ ನಾವು ಜಾಗರೂಕರಾಗಿರ ಬೇಕು. ದೇಹದ ಆಹಾರಸಾಮಾಗ್ರಿಗಳನ್ನು ಒಟ್ಟೊಟ್ಟಾಗಿಯೂ ಚಿಲ್ಲರೆ ಯಾಗಿಯೂ ಮಾರುವ ವರ್ತಕರು, ತಮ್ಮ ಪದಾರ್ಥಗಳಲ್ಲಿ ನಿಜವಾಗಿಯೂ ದೇಹಕ್ಕೆ ಅನುಕೂಲವಾದುವುಗಳು ಯಾವುವು, ಅನಾನುಕೂಲವಾದುವು ಗಳು ಯಾವುವು, ಎಂಬುದನ್ನು ತಿಳಿಯದೆ ಸಿಕ್ಕಿದ್ದನ್ನೆಲ್ಲಾ ಸರ್ವೋತ್ತಮ ವಾದುದೆಂದು ಹೊಗಳುತ್ತಾರಲ್ಲವೇ? ಅವರ ಗಿರಾಕಿಗಳೋ ಅಂದರೆ, ಅವರಲ್ಲಿ ಯಾರಾದರೂ ಶಿಕ್ಷಕರೋ ಅಥವಾ ಚಿಕಿತ್ಸಕರೋ ಸಾಮಾನು ಗಳನ್ನು ಕೊಳ್ಳಲು ಬಂದರೆ ಅವರಿಗೆ ಈ ವಿಷಯ ಗೊತ್ತಾಗುತ್ತದೆಯೇ ಹೊರತು, ಉಳಿದವರು ಯಾರು ಬಂದರೂ ಸಾಮಾನ್ಯವಾಗಿ ಅವರಿಗೆ ಗೊತ್ತಾಗುವುದಿಲ್ಲ. ಅದರಂತೆಯೇ ಜ್ಞಾನಸಾಮುಗ್ರಿಗಳನ್ನು ಹೊತ್ತು ಕೊಂಡು ಪಟ್ಟಣಗಳನ್ನೆಲ್ಲಾ ಸುತ್ತುಹಾಕುವ ವರ್ತಕರು ಬೇಕಾದವರಿಗೆ ಅವನ್ನು ಮಾರುವಾಗ ಎಲ್ಲವನ್ನೂ ಒಂದೇ ಸರಣಿಯಲ್ಲಿ ಹೊಗಳುತ್ತಾರೆ. ಅವರಲ್ಲಿ ಅನೇಕರಿಗೆ ತಮ್ಮ ಸಾಮುಗ್ರಿಗಳಿಂದ ಆತ್ಮದ ಮೇಲೆ ಯಾವ ಪರಿಣಾಮವುಂಟಾಗುತ್ತದೆ ಎಂಬುದು ಗೊತ್ತಿರುವುದಿಲ್ಲ ಎಂದು ಹೇಳು

ವುದರಲ್ಲಿ ಆಶ್ಚರ್ಯವೇನು ? ಅವರ ಗಿರಾಕಿಗಳಲ್ಲಿಯೂ ಕೂಡ—ಯಾರಾದರೂ ಆತ್ಮಚಿಕಿತ್ಸಕನಿದ್ದರೆ ಅವನಿಗೆ ತಿಳಿಯುತ್ತದೆಯೇ ಹೊರತು—ಉಳಿದವರಿಗೆ ಇದರ ಅರಿವೇ ಇರುವುದಿಲ್ಲ. ಆದುದರಿಂದ ಆತ್ಮಕ್ಕೆ ಶ್ರೇಯಸ್ಕರವಾದುದು ಯಾವುದು, ಅರಿಷ್ಟವನ್ನು ತರುವುದು ಯಾವುದು, ಎಂಬ ವಿಚಾರದಲ್ಲಿ ನಿನಗೆ ಪರಿಶ್ರಮವಿದ್ದರೆ ನೀನು ನಿರ್ಭಯನಾಗಿ ಪ್ರೊಟಾಗೊರಾಸಿನ ಅಥವಾ ಇನ್ನುಯಾರ ಬಳಿಯಲ್ಲಾದರೂ ಜ್ಞಾನವನ್ನು ಕೊಂಡುಕೊಳ್ಳಬಹುದು ; ಅದಿಲ್ಲದೆ ಹೋದರೆ—ನನ್ನ ಮಿತ್ರನೆ, ನಾನು ಖಂಡಿತವಾಗಿಯೂ ಹೇಳುತ್ತೇನೆ, ದುಡುಕಬೇಡ, ಸ್ವಲ್ಪ ನಿಧಾನಿಸು. ನಿನ್ನ ಪರಮ ಕಲ್ಯಾಣ-ಪ್ರಿಯತಮ-ವಿಚಾರಗಳಲ್ಲಿ ಜೂಜಾಡಬೇಡ. ನಾನು ಹೀಗೇಕೆ ಹೇಳುತ್ತೇನೆಂದರೆ, ಆಹಾರಪಾನೀಯಗಳನ್ನು ಕೊಂಡುಕೊಳ್ಳುವುದಕ್ಕಿಂತ, ಜ್ಞಾನವನ್ನು ಕೊಂಡುಕೊಳ್ಳುವುದರಲ್ಲಿ ಹೆಚ್ಚು ಅಪಾಯವುಂಟು. ಆಹಾರಪಾನೀಯಗಳನ್ನು ಒಟ್ಟಿಗೆ ಮಾರುವವನಿಂದಲೋ ಚಿಲ್ಲರೆ ಅಂಗಡಿಯವನಿಂದಲೋ ಕೊಂಡುಕೊಂಡು ಅವುಗಳನ್ನು ಬೇರೆ ಪಾತ್ರೆಗಳಲ್ಲಿ ತುಂಬಿಕೊಂಡು ಹೊತ್ತುಕೊಂಡುಹೋಗುವೆ ; ಅನ್ನ ರೂಪದಲ್ಲಿ ಅವು ನಿನ್ನ ದೇಹವನ್ನು ಪ್ರವೇಶಿಸುವುದಕ್ಕೆ ಮೊದಲು ಅವುಗಳನ್ನು ನೀನು ಮನೆಗೆ ತೆಗೆದುಕೊಂಡುಹೋಗಿ ಇರಿಸುವೆ ; ಪ್ರಾಯಶಃ ಅನುಭವವುಳ್ಳ ಮಿತ್ರರನ್ನು ಯಾರಾದರೂ ಕರೆದು ಅವರಿಗೆ ತೋರಿಸುವೆ, ಅವರು ಆ ಪದಾರ್ಥಗಳಲ್ಲಿ ಸೇವನೆಮಾಡಲು ಯಾವುದು ಅರ್ಹವಾದುದು, ಯಾವುದು ಅನರ್ಹವಾದುದು, ಎಷ್ಟು ಸೇವಿಸಬಹುದು, ಮತ್ತು ಯಾವಾಗ, ಎಂಬ ವಿಷಯಗಳನ್ನೆಲ್ಲಾ ನಿನಗೆ ತಿಳಿಸುವರು. ಇಷ್ಟಾದಮೇಲೆ ಅವುಗಳನ್ನು ಕೊಂಡುಕೊಳ್ಳುವುದರ ಅಪಾಯ ನಿನಗೆ ಅಷ್ಟಾಗಿ ತಟ್ಟುವುದಿಲ್ಲ. ಆದರೆ ಜ್ಞಾನಸಾಮಗ್ರಿಗಳನ್ನು ನೀನು ಕೊಂಡಮೇಲೆ ಅವುಗಳನ್ನು ಬೇರೆ ಪಾತ್ರೆಗಳಲ್ಲಿ ಹೊತ್ತುಕೊಂಡು ಹೋಗಲಾಗುವುದಿಲ್ಲ ; ಅವುಗಳ ಕ್ರಯವನ್ನು ನೀನು ಸಲ್ಲಿಸಿದ ಒಡನೆಯೇ ಅವು ನಿನ್ನ ಆತ್ಮವನ್ನು ಪ್ರವೇಶಿಸುವುವು-ಅನಂತರ ನಿನಗೆ ಅವುಗಳಿಂದ ಹೆಚ್ಚು ಮೇಲ್ಮೆಯೇ ಉಂಟಾಗಲಿ, ಹೆಚ್ಚು ಹಾನಿಯೇ ತಟ್ಟಲಿ, ನಿನ್ನ ದಾರಿಯನ್ನು ಹಿಡಿದುಕೊಂಡು ನೀನು ಹೋಗಬೇಕಾಗುವುದು. ಈ ಕಾರಣದಿಂದ ನಾವು ನಿಧಾನಿಸಿ ವಿಚಾರಮಾಡ

ಬೇಕು ಮತ್ತು ನಮ್ಮ ಹಿರಿಯರ ಸಲಹೆಯನ್ನು ಕೇಳಬೇಕು: ನಾವೋ ಇನ್ನೂ ಬಲು ಸಣ್ಣ ವಯಸ್ಸಿನವರು—ಇಂತಹ ಮಹದ್ವಿಚಾರವನ್ನು ನಿರ್ಧರಿಸಲು ಬಲು ಸಣ್ಣವರು. ಸರಿ, ಹೊತ್ತಾಯಿತು, ನಡೆ, ನಾವು ಉದ್ದೇಶಿಸಿದಂತೆ ಹೋಗೋಣ, ಪ್ರೊಟಾಗೊರಾಸನು ಹೇಳುವುದನ್ನು ಕೇಳೋಣ. ಅವನನ್ನು ಕೇಳಿದಮೇಲೆ ನಾವು ಇತರರೊಡನೆ ಆಲೋಚಿಸಿ ಅವರ ಸಲಹೆ ಕೇಳಬಹುದು-ಕ್ಯಾಲಿಯಾಸಿನ ಮನೆಯಲ್ಲಿ ಪ್ರೊಟಾಗೊರಾಸೊಬ್ಬನೇ ಅಲ್ಲ, ಎಲ್ಲಿಸಿನ ಹಿಪ್ಪಿಯಸ್ಸೂ,—ನನಗೆ ಸರಿಯಾಗಿ ಜ್ಞಾಪಕವಿದ್ದರೆ—ಸಿಯಾಸಿನ ಪ್ರಾಡಿಕಸ್ಸೂ ಮತ್ತು ಇತರ ಇನ್ನೂ ಅನೇಕ ವಿದ್ವಾಂಸರೂ ಇರುವರು."

ಇದಕ್ಕೆ ನಾವು ಒಪ್ಪಿ ಪ್ರಯಾಣ ಹೊರಟೆವು. ಕ್ಯಾಲಿಯಾಸಿನ ಮನೆ ಪಡಸಾಲೆಯನ್ನು ಸೇರಿದೊಡನೆಯೇ, ದಾರಿಯಲ್ಲಿ ನಾವು ಹೋಗುತ್ತಿರುವಾಗ ನಮ್ಮಿಬ್ಬರಿಗೂ ಬಿದ್ದಿದ್ದ ಒಂದು ಚರ್ಚೆಯನ್ನು ಪೂರ್ತಿಗೊಳಿಸಲು ಅಲ್ಲಿ ನಿಂತೆವು; ಚರ್ಚೆ ಪೂರ್ತಿಯಾಗಿ ನಾವಿಬ್ಬರೂ ಒಂದು ನಿಶ್ಚಯಕ್ಕೆ ಬರುವವರೆಗೂ ಅಲ್ಲಿಯೇ ಮಾತಾಡುತ್ತ ನಿಂತಿದ್ದೆವು. ಅಲ್ಲಿದ್ದ ದ್ವಾರಪಾಲಕನು ನಾವು ಮಾತಾಡುತ್ತಿದ್ದುದನ್ನು ಕೇಳಿರಬೇಕು—ಸೋಫಿಸ್ಟರ ಹಾವಳಿಯಿಂದ ಅವನ ತಲೆ ಚಿಟ್ಟುಕಟ್ಟಿಹೋಗಿರಬೇಕೆಂದು ಕಾಣುತ್ತದೆ—ಪರಂತು, ನಾವು ಬಾಗಿಲನ್ನು ತಟ್ಟಿದಾಗ ಅವನು ಬಾಗಿಲು ತೆರೆದು ನಮ್ಮನ್ನು ನೋಡಿದನೋ ಇಲ್ಲವೋ ಒಡನೆಯೇ "ಬಂದರು ಈ ಹಾಳು ಸೋಫಿಸ್ಟರು," ಎಂದು ಗೊಣಗುಟ್ಟಿಕೊಂಡು, "ಯಜಮಾನರು ಮನೆಯಲ್ಲಿಲ್ಲ", ಎಂದು ನಾವು ಕೇಳುವುದಕ್ಕೆ ಮೊದಲೇ ಜವಾಬು ಹೇಳಿ, ತನ್ನ ಎರಡು ಕೈಗಳಿಂದಲೂ ಕದವನ್ನು ಬಲವಾಗಿ ಬಡಿದು ಮುಚ್ಚಿಬಿಟ್ಟನು. ನಾವು ಪುನಃ ಕದ ತಟ್ಟಿದೆವು; ಆದರೇನು, ಆ ಪುರುಷನು ಕದ ತೆಗೆಯದೆಯೇ ಒಳಗಿನಿಂದಲೇ, "ಯಜಮಾನರು ಮನೆಯಲ್ಲಿಲ್ಲವೆಂದು ಹೇಳಿದ್ದು ಕೇಳಿಸಲಿಲ್ಲವೇನಿರೋ ನಿಮಗೆ?" ಎಂದು ಗರ್ಜಿಸಿದನು.

"ಅಯ್ಯಾ, ಮಹಾರಾಯ, ಘಾಬರಿಪಡಬೇಕಾದ್ದೇನೂ ಇಲ್ಲ; ನಾವು ಸೋಫಿಸ್ಟರಲ್ಲ, ಕ್ಯಾಲಿಯಾಸನ್ನು ನೋಡಲೂ ಬಂದಿಲ್ಲ. ನಾವು

ನೋಡಬೇಕೆಂದಿರುವುದು ಪ್ರೊಟಾಗೊರಾಸನನ್ನು ; ದಯವಿಟ್ಟು ನಾವು ಬಂದಿದ್ದೇವೆಂದು ಹೇಳು ಹೋಗು" ಎಂದೆನು. ಕಟ್ಟಕಡೆಯಲ್ಲಿ ಬಹಳ ಹೊತ್ತು ಪಂಚಾಯಿತಿ ಆದಮೇಲೆ ಆ ಮನುಷ್ಯನನ್ನು ಬಾಗಿಲು ತೆರೆವಂತೆ ಒಡಂಬಡಿಸಿದೆವು.

ನಾವು ಒಳಕ್ಕೆ ಪ್ರವೇಶಿಸಿದಾಗ ಕೈಸಾಲೆಯ ಒಂದು ಹುಸಿಯಲ್ಲಿ ಪ್ರೊಟಾಗೊರಾಸನು ಶತಪಥ ತುಳಿಯುತ್ತಿದ್ದನು. ಅವನ ಒಂದು ಪಾರ್ಶ್ವದಲ್ಲಿ ಹಿಪ್ಪಾನಿಕಸ್ಸಿನ ಮಗ ಕ್ಯಾಲಿಯಾಸನೂ, ತಾಯಿಯ ಕಡೆ ಇವನ ಸಹೋದರನೂ, ಪೆರಿಕ್ಲೀಸನ ಮಗನೂ ಆದ ಪರೇಲಸನೂ ಗ್ಲಾಕನ್ನಿನ ಮಗ ಚಾರ್ಮಿಡಿಸನೂ ನಡೆಯುತ್ತಿದ್ದರು ; ಮತ್ತೊಂದು ಪಾರ್ಶ್ವದಲ್ಲಿ ಪೆರಿಕ್ಲೀಸಿನ ಇನ್ನೊಬ್ಬ ಮಗನಾದ ಕ್ಸಾಂತಿಪಸ್ಸನೂ, ಫೈಲೊಮಿಲಸ್ಸಿನ ಮಗನಾದ ಫಿಲಿಪ್ಪಿಡೀಸನೂ, ಪ್ರೊಟಾಗೊರಾಸಿನ ಶಿಷ್ಯರಲ್ಲೆಲ್ಲಾ ಅಗ್ರಗಣ್ಯನಾದ ಮತ್ತು ಸೋಫಿಸ್ಟ್ರಿಯನ್ನೇ ತನ್ನ ಕಸಬನ್ನಾಗಿ ಮಾಡಿಕೊಳ್ಳಲು ಉದ್ದೇಶಿಸಿರುವ ಮೆಂಡಿಯದ ಆಂಟಿಮೋರಸನೂ ಹೆಜ್ಜೆ ಹಾಕುತ್ತಿದ್ದರು. ಶ್ರೋತೃಗಳ ಒಂದು ಪರಿವಾರ ಅವನನ್ನು ಹಿಂಬಾಲಿಸಿತ್ತು : ಅವರಲ್ಲಿ ಮುಕ್ಕಾಲುಪಾಲು ಜನ ಪ್ರೊಟಾಗೊರಾಸನು ನಾನಾ ದೇಶಗಳಿಗೆ ಹೋಗಿದ್ದಾಗ, ಆರ್ಫ್ಯೂಸಿನಂತೆ ತನ್ನ ಕೋಕಿಲಕಂಠದಿಂದ ಆಕರ್ಷಿಸಿದ್ದ ವಿದೇಶೀಯರು. ಹಲವು ಮಂದಿ ಅಥೆನ್ಸ್ ಪುರನಿವಾಸಿಗಳೂ ಅದರಲ್ಲಿದ್ದರು. ಅವರು ಹೆಜ್ಜೆ ಹಾಕುತ್ತಿದ್ದ ಖಚಿತರೀತಿಯನ್ನು ನೋಡಿ ನನಗೆ ಬಹಳ ವಿನೋದವಾಯಿತು : ಅವನ ಹಾದಿಗೆ ಅವರು ಸಿಕ್ಕಿಬೀಳುತ್ತಲೇ ಇರಲಿಲ್ಲ ; ಅವನೂ ಅವನ ಜೊತೆಯಲ್ಲಿದ್ದವರೂ ಹಿಂದಿರುಗಿದಾಗಲೆಲ್ಲಾ ಶ್ರೋತೃವೃಂದದವರು ಕ್ರಮವಾಗಿ ವಿಭಾಗಿಸಿಕೊಂಡು ಎರಡು ಪಕ್ಕಗಳಿಗೂ ಸರಿದುಹೋಗುತ್ತಿದ್ದರು ; ಅವನು ಯಾವಾಗಲೂ ಮುಂದುಗಡೆ ಇರುತ್ತಿದ್ದನು, ಅವರು ಮತ್ತೆ ತಿರುಗಿಕೊಂಡು ಒಟ್ಟುಗೂಡಿ ಕ್ರಮರೀತಿಯಲ್ಲಿ ಅವನನ್ನು ಹಿಂಬಾಲಿಸಿಕೊಂಡು ಹೋಗುತ್ತಿದ್ದರು.

ಈ ದೃಶ್ಯವನ್ನು ನೋಡಿದಮೇಲೆ ನಾನು ಸರಿಯಾಗಿ ನಾಲ್ಕು ಕಡೆಯೂ ಕಣ್ಣುಬಿಟ್ಟು ನೋಡಲು ಕೈಸಾಲೆಯ ಎದುರಿನ ಹುಸಿಯಲ್ಲಿ ಒಂದು ಗದ್ದಿಗೆಯ ಮೇಲೆ ಇಲಿಯಾ ನಗರದ ಹಿಪ್ಪಿಯಸ್ಸನೂ ಅವನ

ಸುತ್ತಲೂ ಬೆಂಚುಗಳ ಮೇಲೆ ಅಕ್ಯುಮಿನಸ್ಸಿನ ಮಗನಾದ ಎರಿಕ್ಸಿಮೇಕಸ್ಸನೂ, ಮಿರ್ರಿನಸ್ಸಿನ ಫೇಡ್ರುಸನೂ, ಆಂಡ್ರೋಷನ್ನಿನ ಪುತ್ರನಾದ ಆಂಡ್ರಾನನೂ, ಇಲಿಯಾ ನಗರದಿಂದ ಗುರುವನ್ನು ಹಿಂಬಾಲಿಸಿ ಬಂದಿದ್ದ ಪರಕೀಯರೂ ಮತ್ತು ಇನ್ನೂ ಇತರರೂ ಕುಳಿತಿದ್ದುದನ್ನು ಕಂಡೆನು. ಅವರು ಹಿಪ್ಪಿಯಸ್ಸನಿಗೆ ಭೌತ ಮತ್ತು ಖಗೋಳಸಂಬಂಧವಾದ ಪ್ರಶ್ನೆಗಳನ್ನು ಹಾಕುತ್ತಿದ್ದರು, ಅವನು ತನ್ನ ಆಚಾರ್ಯಪೀಠದಿಂದ ಅವರವರ ಪ್ರಶ್ನೆಗಳಿಗೆ ಉತ್ತರ ದಯಪಾಲಿಸುತ್ತಾ ಅವುಗಳ ವಿಚಾರವಾಗಿ ಪ್ರಸಂಗ ಮಾಡುತ್ತಿದ್ದನು.

ಇದಲ್ಲದೆ ಕ್ಯಾಲಿಯಾಸಿನ ಮನೆಯ ಒಂದು ಕೊಠಡಿಯಲ್ಲಿ ಸಿಯಾಸಿನ ಪ್ರಾಡಿಕಸ್ ಎಂಬ ವಿದ್ವಾಂಸನು ಇದ್ದುದು ಗೊತ್ತಾಯಿತು........ ಪ್ರಾಡಿಕಸ್ಸನು ಅಲ್ಲಿ ಹೇರಳವಾಗಿ ರಾಶಿರೂಪದಲ್ಲಿ ಬಿದ್ದಿದ್ದ ಕುರಿ ಚರ್ಮಗಳಲ್ಲಿಯೂ ಹಾಸಿಗೆ ಬಟ್ಟೆಗಳಲ್ಲಿಯೂ ಕೆಲವನ್ನು ಸೆಳೆದು ಹೊದ್ದುಕೊಂಡು ಇನ್ನೂ ಹಾಸಿಗೆಯಲ್ಲಿಯೇ ಬಿದ್ದಿದ್ದನು............ಪ್ರಾಡಿಕಸ್ಸನು ಏನು ಹೇಳುತ್ತಿದ್ದನೋ ಕೇಳಬೇಕೆಂದು ನನಗೆ ಬಹಳ ಕುತೂಹಲವಿತ್ತು, ಏಕೆಂದರೆ ಅವನು ಸಕಲವನ್ನೂ ತಿಳಿದ ಅಂಶಪುರುಷನೆಂದು ನನ್ನ ಭಾವನೆ. ಆದರೆ ನಾನು ಆ ಜನಸಂದಣಿಯನ್ನು ಭೇದಿಸಿಕೊಂಡು ಒಳಗೆ ಹೋಗಲು ಆಗಲಿಲ್ಲ, ಅವನ ಸೊಗಸಾದ ಗಂಭೀರಧ್ವನಿ ಕೊಠಡಿಯಲ್ಲಿ ಸೆಲೆ ಕೊಡುತ್ತಿದ್ದುದರಿಂದ ಅವನ ಮಾತುಗಳು ಹೊರಗೆ ಕೇಳಿಸುತ್ತಲೂ ಇರಲಿಲ್ಲ................

ನಾವು ಒಳಗೆ ಪ್ರವೇಶಿಸಿದ ಮೇಲೆ ಕೊಂಚ ಹೊತ್ತು ಮೇಲಿನ ದೃಶ್ಯಗಳನ್ನೆಲ್ಲಾ ನೋಡುತ್ತಾ ನಿಂತಿದ್ದೆವು, ಅನಂತರ ಪ್ರೊಟಾಗೊರಾಸಿನ ಬಳಿಗೆ ನೇರವಾಗಿ ಹೋದೆವು. ನಾನು ಹೇಳಿದೆ: "ಪ್ರೊಟಾಗೊರಾಸ್, ನನ್ನ ಸ್ನೇಹಿತನಾದ ಹಿಪ್ಪೊಕ್ರಟೀಸನು ನಿನ್ನನ್ನು ನೋಡಲು ಬಂದಿದ್ದಾನೆ."

"ನೀವು ನನ್ನೊಡನೆ ಏಕಾಂತದಲ್ಲಿ ಮಾತನಾಡಬೇಕೆನ್ನುವಿರೋ, ಇಲ್ಲವೆ ಈ ಗೋಷ್ಠಿಯ ಮುಂದೆ ಆಗಬಹುದೋ" ಎಂದು ಆತನು ಕೇಳಿದನು.

" ನಿನ್ನ ಇಷ್ಟದಂತೆ ಆಗಬಹುದು ; ನಾವು ನಿನ್ನ ಬಳಿಗೆ ಬಂದಿರುವ ಕಾರ್ರ್ಯಾರ್ಥವನ್ನು ತಿಳಿದುಕೊಂಡಮೇಲೆ ನಿನಗೆ ಸೂಕ್ತತೋರಿದಂತೆ ಮಾಡಬಹುದು " ಎಂದು ನಾನು ಉತ್ತರ ಕೊಟ್ಟೆನು...........

ಅವನು ಸ್ವಾಭಿಮಾನಭರಿತನೆಂದು ನನಗೆ ಗೊತ್ತಿತ್ತು. ಪ್ರಾಡಿಕಸ್ ಮತ್ತು ಹಿಪ್ಪಿಯಸ್, ಇವರ ಮುಂದೆ ತನ್ನ ಡಂಭ ಪ್ರತಾಪಗಳನ್ನು ತೋರಿಸಿಕೊಳ್ಳುವುದರಲ್ಲಿ ಅವನಿಗೆ ಬಹುಪ್ರಿಯ ; ಅಲ್ಲದೆ ನಾವು ತನ್ನನ್ನು ಸನ್ಮಾನಿಸುತ್ತಿದ್ದೇವೆಂಬುದನ್ನು ಅವರ ಕಣ್ಣಿಗೆ ಕಾಣಿಸಬೇಕೆಂದು ಬಹು ಆಸೆ. ಇದನ್ನೆಲ್ಲಾ ಅರಿತಿದ್ದ ನಾನು : " ನಾವು ಹೇಳುವುದನ್ನು ಕೇಳು ವುದಕ್ಕೆ ಪ್ರಾಡಿಕಸ್ಸನನ್ನೂ ಹಿಪ್ಪಿಯಸ್ಸನನ್ನೂ ಏಕೆ ನಾವು ಕರೆಯ ಕೂಡದು ? " ಎಂದೆನು.

" ಬಹಳ ಒಳ್ಳೆಯದು, ಆಗಬಹುದು, " ಅವನೆಂದನು.

" ನಾವು ಒಂದು ಸಭೆಮಾಡಿ ಅದರಲ್ಲಿ ಈ ವಿಷಯಗಳನ್ನೆಲ್ಲಾ ಏಕೆ ಚರ್ಚಿಸಕೂಡದು ? " ಎಂದು ಕ್ಯಾಲಿಯಾಸನು ಕೇಳಿದನು. ಇದಕ್ಕೆ ಎಲ್ಲರೂ ಒಪ್ಪಿದರು ; ವಿದ್ವನ್ಮಣಿಗಳೆಲ್ಲಾ ಸೇರಿ ಮಾತನಾಡುವುದನ್ನು ಕೇಳುವ ಸುಯೋಗ ಲಭಿಸಿತಲ್ಲಾ, ಎಂದು ಎಲ್ಲರ ಹೃದಯದಲ್ಲಿಯೂ ಆನಂದ ಉಕ್ಕಿ ಹರಿಯುತ್ತಿತ್ತು ; ನಾವೇ ಎಲ್ಲರೂ ಸೇರಿ ಕುರ್ಚಿ ಗಳನ್ನೂ ಬೆಂಚುಗಳನ್ನೂ ಹಿಪ್ಪಿಯಸ್ಸನ ಬಳಿಗೆ ಹೊತ್ತುಕೊಂಡುಹೋಗಿ ಅಲ್ಲಿ ಮೊದಲೇ ಹಾಕಿದ್ದ ಬೆಂಚುಗಳೊಂದಿಗೆ ಜೋಡಿಸಿದೆವು. ಈ ಮಧ್ಯೆ ಕ್ಯಾಲಿಯಾಸನೂ ಆಲ್ಸಿಬಿಯಾಡಿಸ್ಸನೂ ಸೇರಿ ಪ್ರಾಡಿಕಸ್ಸನನ್ನು ಹಾಸಿಗೆ ಯಿಂದೆಬ್ಬಿಸಿ ಅವನನ್ನೂ ಅವನ ಜೊತೆಗಾರರನ್ನೂ ಸಭೆಗೆ ಕರೆದುಕೊಂಡು ಬಂದರು.

ನಾವೆಲ್ಲರೂ ಆಸನಗಳನ್ನು ಅಲಂಕರಿಸಿದಮೇಲೆ, ಪ್ರೊಟಾಗೊರಾ ಸನು ನುಡಿದನು : " ಸಭೆಯುವರೆಲ್ಲರೂ ನೆರೆದಾಯಿತಲ್ಲಾ, ಈಗ ಹೇಳು, ಸಾಕ್ರಟೀಸ್, ಕ್ಷಣಕಾಲದ ಹಿಂದೆ ನೀನು ಒಬ್ಬ ಯುವಕನನ್ನು ಕುರಿತು ಮಾತನಾಡುತ್ತಿದ್ದೆಯಲ್ಲಾ, ಅವನ ವಿಚಾರವೇನು ? "

" ಪ್ರೊಟಾಗೊರಾಸ್........ನಾನು ಬಂದಿರುವ ಕಾರ್ರ್ಯಾರ್ಥವನ್ನು ಪುನಃ ನಿನಗೆ ಅರಿಕೆಮಾಡಿಕೊಳ್ಳುವೆನು. ಈತನು ನನ್ನ ಮಿತ್ರನಾದ

ಹಿಪ್ಪೊಕ್ರಟೀಸ್ ಎಂಬವನು. ನಿನ್ನ ಪರಿಚಯುವನ್ನು ಮಾಡಿಕೊಳ್ಳ ಬೇಕೆಂದು ಅವನಿಗೆ ಆಸೆ. ನಿನ್ನ ಸಹವಾಸದಲ್ಲಿದ್ದರೆ ಅವನಿಗೇನು ಫಲ ಉಂಟಾಗುತ್ತದೆ ಎಂಬುದನ್ನು ಅವನು ತಿಳಿಯಬೇಕೆಂದಿರುವನು. ಇನ್ನು ನಾನು ಹೆಚ್ಚು ಹೇಳಬೇಕಾದುದೇನೂ ಇಲ್ಲ." ಪ್ರೊಟಾಗೊರಾಸನು ಉಪಕ್ರಮಿಸಿದನು: "ಯುವಕನೇ, ನೀನು ನನ್ನ ಸಹಾವಾಸವನ್ನು ಮಾಡಿದ್ದೇ ಆದರೆ, ನನ್ನ ಬಳಿ ಬಂದ ಮೊದಲನೆಯ ದಿನವೇ ನೀನು ಪೂರ್ವಕ್ಕಿಂತಲೂ ಹೆಚ್ಚು ಬುದ್ಧಿಶಾಲಿಯಾಗಿ ಮನೆಗೆ ಹಿಂದಿರುಗುವೆ, ಎರಡನೆಯ ದಿನ ಮೊದಲನೆಯ ದಿನಕ್ಕಿಂತ ಹೆಚ್ಚು ಬುದ್ಧಿಶಾಲಿಯಾಗುವೆ, ಇದೇ ರೀತಿಯಾಗಿ ಪ್ರತಿ ದಿನವೂ ತತ್ಪೂರ್ವಕ್ಕಿಂತಲೂ ಹೆಚ್ಚು ವಿವೇಕ ಶಾಲಿಯಾಗುವೆ."

ಇದನ್ನು ಕೇಳಿದಾಗ ನಾನು ಹೇಳಿದೆನು: "ಪ್ರೊಟಾಗೊರಾಸ್, ನೀನು ಹೀಗೆ ಹೇಳುವುದನ್ನು ಕೇಳಿದರೆ ನನಗೆ ಸ್ವಲ್ಪವೂ ವಿಸ್ಮಯ ಉಂಟಾಗುವುದಿಲ್ಲ; ನಿನ್ನ ವಯಸ್ಸಿನಲ್ಲಿಯೂ ಕೂಡ, ನೀನು ಇಷ್ಟು ಬುದ್ಧಿವಂತನಾಗಿದ್ದರೂ, ಯಾರಾದರೂ ನಿನಗೆ ಹಿಂದೆ ತಿಳಿಯದೆ ಇದ್ದ ವಿಷಯುವನ್ನು ಬೋಧಿಸಲು ಉಪಕ್ರಮಿಸಿದರೆ, ದಿನಂಪ್ರತಿಯಲ್ಲಿಯೂ ನೀನು ಪೂರ್ವಕ್ಕಿಂತ ಅದನ್ನು ಚೆನ್ನಾಗಿ ಕಲಿತೇ ಕಲಿಯುವೆ, ಸಂದೇಹ ವೇನು? ಇದಲ್ಲ ನಾನು ಕೇಳಿದ್ದು–ನನ್ನ ಪ್ರಶ್ನೆಗೆ ಬೇರೆ ವಿಧವಾಗಿ ಉತ್ತರ ಕೊಡು............ನನ್ನ ಪ್ರಶ್ನೆ ಏನೆಂದರೆ: ನಿನ್ನ ಸಂಗಡ ಸೇರಿದ ಮೊದಲ ನೆಯ ದಿನವೇ ಈ ಯುವಕನು ಪೂರ್ವಕ್ಕಿಂತಲೂ ಹೆಚ್ಚು ಬುದ್ಧಿಶಾಲಿ ಯಾಗಿ ಹಿಂದಿರುಗುವನು, ಮತ್ತು ಪ್ರತಿ ದಿನವೂ ಈ ಪ್ರಕಾರವಾಗಿ ಹೆಚ್ಚು ಬುದ್ಧಿವಂತನಾಗುತ್ತಾನೆಂದು ಹೇಳುವೆಯಲ್ಲಾ—ಯಾವುದರಲ್ಲಿ, ಪ್ರೊಟಾಗೊರಾಸ್, ಅವನು ಹೆಚ್ಚು ಬುದ್ಧಿಶಾಲಿಯಾಗುತ್ತಾನೆ? ಯಾವ ವಿಷಯುವನ್ನು ಕುರಿತು?"

ಪ್ರೊಟಾಗೊರಾಸನು ನನ್ನ ಮಾತನ್ನು ಕೇಳಿ ಅದಕ್ಕೆ ಈ ರೀತಿ ಉತ್ತರವಿತ್ತನು: "ನೀನು ನ್ಯಾಯವಾದ ಪ್ರಶ್ನೆಗಳನ್ನು ಹಾಕುತ್ತೀಯ, ಮತ್ತು ನ್ಯಾಯವಾಗಿ ಕೇಳಲ್ಪಟ್ಟ ಪ್ರಶ್ನೆಗಳಿಗೆ ಸಮಾಧಾನ ಹೇಳಲು ನನಗೂ ಸಂತೋಷವೇ. ನಾನು ಇತರ ಸೋಫಿಸ್ಟ್ ಉಪಾಧ್ಯಾಯ

ರಂತಲ್ಲ: ಇವರು ತಮ್ಮ ಶಿಷ್ಯರು ಎಷ್ಟು ಬೇಸತ್ತಿದ್ದರೂ 'ಓದಿದ್ದೇ ಓದೋ ಕಿಸುಬಾಯಿದಾಸ' ಎನ್ನುವಹಾಗೆ ಪುನಃಪುನಃ ಅವರನ್ನು ಗಣಿತ, ಜ್ಯೋತಿಷ, ರೇಖಾಗಣಿತ, ಸಂಗೀತ–ಇವುಗಳಿಗೇ ಎಳೆದೊಯ್ದು (ಇದನ್ನು ಹೇಳುತ್ತಿರುವಾಗ ಅವನು ಹಿಪ್ಪಿಯಸ್ಸಿನ ಕಡೆಗೆ ದೃಷ್ಟಿ ತಿರುಗಿಸಿದನು) ತಮ್ಮ ಏಕನಾದದಿಂದ ಅವರನ್ನು ವಿರಸರನ್ನಾಗಿ ಮಾಡುತ್ತಾರೆ. ಹಿಪ್ಪೊ ಕ್ರಟೀಸನು ನನ್ನ ಬಳಿಗೆ ಬಂದದ್ದೇ ಆದರೆ ಇಂಥ ಕಷ್ಟಕಾಠಿಣ್ಯಗಳಿಂದ ಅವಮಾನ ಪಡಬೇಕಾದ್ದಿಲ್ಲ; ಏನನ್ನು ಕಲಿಯಲಿಚ್ಛಿಸಿ ಬರುತ್ತಾನೋ ಅದನ್ನೇ ಕಲಿಯುವನು. ಅದು ಯಾವುದೆಂದರೆ, ತನ್ನ ಸ್ವಂತ ಮತ್ತು ಜನಾಂಗದ ಕೆಲಸಗಳಲ್ಲಿ ಜಾಣತನ. ತನ್ನ ಮನೆಗೆಲಸಗಳನ್ನು ಬಹು ಸಮೀಚೀನವಾದ ರೀತಿಯಲ್ಲಿ ನಡಸುವುದಕ್ಕೂ, ರಾಜ್ಯಕಾರ್ಯಸಂದರ್ಭ ಗಳಲ್ಲಿ ಸರ್ವೋತ್ತಮವಾದ ರೀತಿಯಲ್ಲಿ ಮಾತನಾಡಿ ಕಾರ್ಯನಿರ್ವಾಹ ಮಾಡುವುದಕ್ಕೂ ಶಕ್ತಿಯುಳ್ಳವನಾಗುವನು."

ನಾನು ಕೇಳಿದೆನು: "ಹಾಗಾದರೆ ನೀನು ರಾಜನೀತಿಶಾಸ್ತ್ರವನ್ನು ಬೋಧಿಸಿ ಜನರನ್ನು ಉತ್ತಮ ನಾಗರಿಕರನ್ನಾಗಿ ಮಾಡುವೆಯೆಂದು ನಿನ್ನ ಅರ್ಥವೋ? ನನ್ನ ಊಹೆ ಸರಿಯೇ?"

"ಅದೇ, ಸಾಕ್ರಟೀಸ್, ನಾನು ಮಾಡಿಕೊಳ್ಳುವ ಆರಿಕೆ."

"ಆ ಪಕ್ಷದಲ್ಲಿ—ಇದರಲ್ಲೇನೂ ಭ್ರಮೆಯಿಲ್ಲವೆನ್ನುವ ಪಕ್ಷದಲ್ಲಿ—ಪ್ರೊಟಾಗೊರಾಸ್, ಸತ್ಯವಾಗಿಯೂ ನೀನು ಘನವಾದ ವಿದ್ಯೆಯನ್ನೇ ಪಡೆದಿರುವೆ. ಆದರೂ—ನನ್ನ ಮನಸ್ಸನ್ನು ಧಾರಾಳವಾಗಿ ನಿನಗೆ ಹೇಳು ತ್ತೇನೆ—ನನಗೇನೋ ಈ ತೆರನಾದ ವಿದ್ಯೆಯನ್ನು ಬೋಧಿಸಲಾಗುತ್ತ ದೆಯೆ ಎಂದು ಸಂದೇಹವೇ—ಹಾಗೂ ನಿನ್ನ ಮಾತನ್ನು ನಂಬದಿರುವುದು ಹೇಗೆ?............"

ತತ್ವಶಾಸ್ತ್ರಾಭ್ಯಾಸದಿಂದ ಫಲಿತವಾದ ಗುಣದೋಷ ವಿಮರ್ಶಾ ಸಕ್ತಿ ಕಡೆಗೆ ತತ್ವಶಾಸ್ತ್ರಾಭ್ಯಾಸಕ್ಕೇ ಕುಂದನ್ನು ತಂದಿಟ್ಟಿತು. ಅಧ್ಯಾತ್ಮ ವಿದ್ಯೆ ತನ್ನ ಮೃತ್ಯುವನ್ನು ತಾನೇ ಬರಮಾಡಿಕೊಂಡಿತು. ಸತ್ಯಸತ್ವದ ನಿಜ ಸ್ವರೂಪವನ್ನು ನಿರೂಪಿಸಬೇಕೆಂದು ಪ್ರಯತ್ನಪಟ್ಟವರಲ್ಲಿ ಯಾರಿಬ್ಬರೂ

ಒಂದೇ ಅಭಿಪ್ರಾಯವನ್ನು ಕೊಟ್ಟಿಲ್ಲ: ಸತ್ಯಸತ್ವ ನೀರಾಗಿರಬೇಕೆಂದೊಬ್ಬನೂ, ವಾಯುವಾಗಿರಬೇಕೆಂದು ಮತ್ತೊಬ್ಬನೂ, ಅಗ್ನಿಯಾಗಿರಬೇಕೆಂದು ಮಗುದೊಬ್ಬನೂ, ಪೃಥ್ವಿಯಾಗಿರಬೇಕೆಂದು ಬೇರೊಬ್ಬನೂ, ಇವೆಲ್ಲವೂ ಕೂಡಿಕೊಂಡು ವಸ್ತುರಾಶಿಯಾಗಿರಬೇಕೆಂದು ಇನ್ನೊಬ್ಬನೂ, ಅಭಿಪ್ರಾಯಪಡುತ್ತಾರೆ. ಪ್ರಪಂಚವೆಲ್ಲಾ ಪರಿಣಾಮಭರಿತವಾಗಿರುವುದೆಂದು ಒಬ್ಬನ ಮತ; ಪ್ರಪಂಚದಲ್ಲಿ ಪರಿಣಾಮವೆಂಬ ಹೆಸರೇ ಇಲ್ಲವೆಂದು ಮತ್ತೊಬ್ಬನ ಮತ. ಇರಲಿ; ಪರಿಣಾಮ ಅಸಂಭವವೆಂದು ಹೇಳೋಣವೆಂದರೆ ಆಗ್ಗೆ ಜ್ಞಾನಸಂಪಾದನೆಯೇ ಅಸಾಧ್ಯವಾಗುವುದು; ಹೇಗೆಂದರೆ ನಿಶ್ಚಲವಾಗಿರುವ ಒಂದು ವಸ್ತುವಿನ ವಿಚಾರವಾಗಿ ಮತ್ತೆ ಯಾವ ವಿಷಯವನ್ನೇ ಆಗಲಿ ವಿಶೇಷಣಮಾಡಿ ಹೇಳಲಾಗುವುದಿಲ್ಲ: ಏಕಸ್ಥಿತಿಯಲ್ಲಿರತಕ್ಕ ವಸ್ತುವೊಂದು ಬಾಹುಳ್ಯವನ್ನು ಹೇಗೆ ಪಡೆದೀತು? ಹಾಗಿಲ್ಲದೆ ವಸ್ತುಸಮಸ್ತವೂ ಪರಿಣಾಮ ಹೊಂದುತ್ತಿರುವುದೆಂದರೂ ಜ್ಞಾನಸಾಧನೆ ಕಷ್ಟವಾಗುವುದು; ಏಕೆಂದರೆ ಯಾವುದೂ ಸ್ಥಿರರೂಪವನ್ನು ಹೊಂದದಿರುವ ಸಂದರ್ಭದಲ್ಲಿ ಒಂದಾನೊಂದು ವಸ್ತು ಹೀಗಿದೆಯೆಂದು ಹೇಳುವುದು ಹೇಗೆ? ಹಾಗೂ ನಮ್ಮ ಇಂದ್ರಿಯ ಸಂಬಂಧವಾಗುವ ಮಟ್ಟಿಗಾದರೂ ನಾವು ವಸ್ತುಜ್ಞಾನವನ್ನು ಪಡೆಯಬಹುದೆಂದರೆ ಅಲ್ಲಿಗೆ ನಾವು ವಸ್ತುವಿನ ಯಥಾರ್ಥಸ್ಥಿತಿ—ಸ್ವರೂಪಗಳನ್ನು ಅರಿತಂತಾಗಲಿಲ್ಲ. ಒಟ್ಟೇನು—ನಾವು ಈ ಪ್ರಪಂಚವೆಂಬ ಒಗಟೆಯನ್ನು ಬಿಡಿಸಲಾರೆವು. ಗಾರ್ಜಿಯಾಸ್ ಎಂಬ ಸೋಫಿಸ್ಟನು "ಪ್ರಕೃತಿ ಅಥವಾ ಅಸತ್ತನ್ನು ಕುರಿತದ್ದು" ಎಂಬ ತನ್ನ ಗ್ರಂಥದಲ್ಲಿ ತನ್ನ ಸಿದ್ಧಾಂತವನ್ನು ಈ ಕೆಳಗೆ ಕಂಡ ಮೂರು ಪ್ರಮೇಯಗಳಲ್ಲಿ ಅಡಕಮಾಡಿರುತ್ತಾನೆ: "ಒಂದನೆಯದು, ಸತ್ತೆಂಬುದು ಯಾವುದೂ ಇಲ್ಲ (ಎಲ್ಲವೂ ಶೂನ್ಯವೆಂದರ್ಥ); ಎರಡನೆಯದು, ಯಾವುದಾದರೂ ಇದ್ದರೂ ನಾವು ಅದನ್ನು ತಿಳಿಯುವ ಹಾಗಿಲ್ಲ; ಮೂರನೆಯದು, ಅಕಸ್ಮಾತ್ ಯಾವನಾದರೂ ಅದನ್ನು ತಿಳಿದುಕೊಂಡರೂ ಅದು ರಹಸ್ಯವಾಗಿಯೇ ಇರತಕ್ಕದ್ದು, ಏಕೆಂದರೆ, ಅದನ್ನು ಇತರರಿಗೆ ತಿಳಿಯಪಡಿಸಲೂ ಆತನು ಅಶಕ್ತನಾಗಿರುವನು." ವಸ್ತುಪರಿಜ್ಞಾನವನ್ನು ಪಡೆಯುವ ವ್ಯಾಪಾರದಲ್ಲಿ ಮಾನವನ ಮನಸ್ಸೂ

ಪ್ರಾಮುಖ್ಯವಾದ ಅಂಗವಾಗಿರುವುದೆಂಬ ಅಂಶ ಈಗೀಗ ಸೋಫಿಸ್ಟನ ದೃಷ್ಟಿಪಥಕ್ಕೆ ಗೋಚರಿಸುವುದು. ಅವನ ಪೂರ್ವಿಕರಾದ ತತ್ವವಿಮರ್ಶಕರೆಲ್ಲರೂ ತತ್ವಶೋಧಕ ಕಾರ್ಯವನ್ನು ಕೈಗೊಳ್ಳಲು ಮಾನವನ ಮನಸ್ಸು ಶಕ್ತಿಯುಳ್ಳದ್ದಾಗಿದೆಯೆಂದು ಪ್ರಾರಂಭದಲ್ಲಿಯೇ ನಂಬಿ ಆ ನಂಬಿಕೆಯ ಮೇಲೆ ವಸ್ತು ವಿಮರ್ಶೆಮಾಡಲು ತೊಡಗಿದ್ದರು. ಈಗ ಸೋಫಿಸ್ಟರಾದರೋ ಆ ಮನಸ್ಸನ್ನೇ ತಮ್ಮ ಪ್ರಧಾನತತ್ವವಾಗೆಣಿಸಿ, ಬಾಹ್ಯ ಪ್ರಪಂಚದ ವಸ್ತುಸ್ಥಿತಿಯನ್ನು ಶೋಧಿಸಲು ಮಾನವನ ಮನಸ್ಸಿಗೆ ಯೋಗ್ಯತೆ ಇಲ್ಲವೆಂದು ಬಗೆದು,ಕಡೆಯಲ್ಲಿ ವಸ್ತುಜ್ಞಾನವೆಲ್ಲಾ ತಿಳಿಯಲು ಪ್ರಯತ್ನಪಡುವ ಪುರುಷನಿಂದ ನಿರ್ಣಯಿಸಲ್ಪಡತಕ್ಕುದಾದ್ದರಿಂದ ಅವನಿಗೆ ಯಾವುದು ಸತ್ಯವೆಂದು ಕಂಡುಬರುತ್ತದೋ ಅವನಿಗೆ ಅದೇ ಸತ್ಯವಾಗಿರಬೇಕೆಂದೂ, ಮನಸ್ಸಂಸ್ಕಾರರಹಿತವಾದ ವಸ್ತು ಯಥಾರ್ಥಜ್ಞಾನವೆಂಬುದು ಬೇರೆ ಇಲ್ಲದುದರಿಂದ ಜ್ಞಾನವೆಂಬುದೆಲ್ಲವೂ ಪ್ರತಿ ಒಬ್ಬ ಪುರುಷನ ಸ್ವಾಭಿಪ್ರಾಯವಷ್ಟೆ, ಎಂದೂ ತೀರ್ಮಾನಿಸಿದರು. "ಎಲ್ಲದರಲ್ಲಿಯೂ ಮಾನವನೇ ತನ್ನ ಸೂತ್ರ, ಮಾನವನೇ ತನ್ನ ಅಳತೆಯ ಕೋಲು" ಹೀಗೆಂದು ಪ್ರೊಟಾಗೊರಾಸನು ಹೇಳಿರುವನು. ಜ್ಞಾನಪ್ರಪಂಚದಲ್ಲಿ ಪ್ರತಿಯೊಬ್ಬನೂ ತನಗೆ ತಾನೇ ಜ್ಞಾನದಾಯಕನು. ತಾನರಿಯಬೇಕಾದ, ತನ್ನ ಮನೋಧೀನದಲ್ಲಿಲ್ಲದಿರುವ, ಪರತಂತ್ರಜ್ಞಾನ ಯಾವುದೂ ಇಲ್ಲ. ಹೀಗೆಂದಮೇಲೆ ಶೀಲವಿಚಾರದಲ್ಲಿಯೂ ಪ್ರತಿಯೊಬ್ಬ ಪುರುಷನೂ ತನಗೆ ತಾನೇ ಮೇಲ್ಪಙ್ತಿಯಾದನು. ಯಥಾರ್ಥಜ್ಞಾನವೇ ಇಲ್ಲವೆಂಬುದಾದರೆ, ನ್ಯಾಯಾನ್ಯಾಯ ಧರ್ಮಾಧರ್ಮ ಜ್ಞಾನವೆಂಬುದೂ ಅಸಿದ್ಧವಷ್ಟೆ. ಆದುದರಿಂದ ಸರ್ವಸಾಮಾನ್ಯವಾದ, ಸರ್ವಸತ್ಯವಾದ, ನೀತಿಧರ್ಮ ಯಾವುದೂ ಇಲ್ಲ. ಆತ್ಮಸಾಕ್ಷಿ ಎಂಬುದೆಲ್ಲಾ ತಮ್ಮತಮ್ಮ ಸ್ವಂತ ವಿಚಾರಗಳು. ಈ ರೀತಿಯಾಗಿ ಪ್ಲೇಟೋ ಎಂಬ ತತ್ವವೇತ್ತನ "ಸಂವಾದಗಳು" ಎಂಬ ಬರವಣಿಗೆಯಲ್ಲಿ ಪೋಲಸ್, ಥ್ರಾಸಿಮಾಕಸ್, ಯೂಥಿಡಿಮಸ್, ಎಂಬ ಸೋಫಿಸ್ಟರು ವಾದಿಸುತ್ತಾರೆ. ನೀತಿಧರ್ಮವೆಂಬುದು ಇವರ ಅಭಿಪ್ರಾಯದಲ್ಲಿ ಕೇವಲ ಸಂಪ್ರದಾಯ ಮಾತ್ರ: ತಮ್ಮ ಇಷ್ಟಗಳನ್ನು ಇತರರು ಅನುಸರಿಸುವಂತೆ ಅವರನ್ನು ಬಲವಂತಪಡಿಸಲು

ಶಕ್ತರಾರೋ, ಅಂಥ ಬಲಿಷ್ಠರ ಇಚ್ಛೆಯೇ ನೀತಿಸೂತ್ರವೆಂಬುದು; ಇಂಥ ನೀತಿಸೂತ್ರಗಳು "ಸ್ವಾಭಾವಿಕಧರ್ಮ"ಕ್ಕೆ (Law of Nature) ವಿರುದ್ಧವಾದುವು; ದೇಶದ ಕಾಯಿದೆಗಳೂ ಕೂಡ ಸ್ವಪ್ರಯೋಜನಕ್ಕಾಗಿ ಬಲಿಷ್ಠರಿಂದ ಮಾಡಲ್ಪಟ್ಟ ನಿಷೇಧಗಳು—ಹೀಗೆಂದು ಕೆಲವು ಸೋಫಿಸ್ಟರ ನಂಬಿಕೆ. ಬಲಾಢ್ಯರೂ ಯೋಗ್ಯರೂ ಆದ ಸ್ವಲ್ಪ ಜನರು ತಮ್ಮ ಹಕ್ಕುಗಳನ್ನು ಸಾಧಿಸಿಕೊಳ್ಳಲು ಅವಕಾಶವಿಲ್ಲದಿರಬೇಕೆಂಬ ಉದ್ದೇಶದಿಂದ ಬಲಹೀನರಾದ ಬಹು ಜನರು ತಮ್ಮ ಸ್ವಾರ್ಥಕ್ಕಾಗಿಯೂ, ಬಲಿಷ್ಠರನ್ನು ತಡೆಯುವುದಕ್ಕಾಗಿಯೂ ಏರ್ಪಡಿಸಿದ ಕಟ್ಟುಗಳೇ ದೇಶದ ಕಾನೂನುಗಳು—ಹೀಗೆಂದು ಕೆಲವು ಸೋಫಿಸ್ಟರ ಮತ.

ಅಂತು ಎರಡು ಪಂಗಡದವರೂ ದೇಶದ ಕಾನುನುಗಳೂ ಸಾಮಾಜಿಕ ನಿಯಮಗಳೂ ಸ್ವಭಾವಕ್ಕೆ ವಿರುದ್ಧವಾದುವುಗಳೆಂದು ಒಪ್ಪುತ್ತಾರೆ. ಎಲ್ಲ ವಿಷಯಗಳಲ್ಲಿಯೂ ಮಾನವನೇ ತನ್ನ ಒರೆಗಲ್ಲೆಂಬ ಸೋಫಿಸ್ಟರ ವೈಶಿಷ್ಟ್ಯ ಸಿದ್ಧಾಂತವನ್ನು (Doctrine of Relativity) ಪರೀಕ್ಷಿಸಿದ್ದಾಯಿತು, ಇನ್ನು ಅದರಂತೆಯೇ ಪ್ರಸಿದ್ಧವಾದ ಮತ್ತು ಅವರಿಂದಲೇ ಹೂಡಲ್ಪಟ್ಟ "ಸಂಪ್ರದಾಯ ಸ್ವಾಭಾವಿಕ ಧರ್ಮಕ್ಕೆ ವಿರೋಧ" (Nature versus Convention) ಎಂಬ ಅವರ ಜಗಳವನ್ನು ಸ್ವಲ್ಪ ಪರೀಕ್ಷಿಸಿದರೆ ಅವರ ಬೋಧನೆಯ ಮುಖ್ಯಾಂಶಗಳನ್ನೆಲ್ಲಾ ತಿಳಿದ ಹಾಗಾಗುವುದು.

ಈ ಜಗಳವನ್ನು ಪ್ರಾರಂಭಿಸಿದವರು ನಮಗಾಗಲೇ ಪರಿಚಿತರಾಗಿರುವ ಎಲ್ಲಿಸಿನ ಹಿಪ್ಪಿಯಸ್ ಮತ್ತು ಆರ್ಕಿಲಾಸ್ ಎಂಬ ಸೋಫಿಸ್ಟ್ ಗುರುಗಳು. ಗ್ರೀಕರಲ್ಲಿ ಬಹು ಪುರಾತನಕಾಲದಿಂದಲೂ ಪ್ರಕೃತಿಯನ್ನು ನಮಗೆ ಸರಳತನವನ್ನು ಕಲಿಸುವ ಮಾತೆ ಎಂದು ಭಾವಿಸಿ ಪೂಜಿಸುವ ಪದ್ಧತಿ ವಾಡಿಕೆಯಲ್ಲಿತ್ತು. ಗ್ರೀಕರ ಮತಧರ್ಮದಲ್ಲಿ ಭೌತ ವ್ಯಾಪಾರಗಳಿಗೂ ನೀತಿನಿಯಮಗಳಿಗೂ ವಿಶೇಷ ಸಂಬಂಧವಿತ್ತು; ಹಿರಾಕ್ಲಿಟಸನೂ ಕೂಡ "ಸಾರ್ವತ್ರಿಕವನ್ನು (ಅಂದರೆ ಸ್ವಭಾವವನ್ನು) ಅನುಸರಿಸು"(Follow the Universal)ಎಂದು ಸಾರಿದ್ದನು. ಇದೆಲ್ಲದರ ಪರಿಣಾಮಫಲವಾಗಿ ಕಡೆಯಲ್ಲಿ ಪ್ರಕೃತಿ ಎಂಬುದು ಸಾರ್ವತ್ರಿಕವಾದ,

ಸರ್ವಸೃಷ್ಟಿಕಾರಣವಾದ, ನಿತ್ಯವಾದ ಶಕ್ತಿಯೆಂದೂ, ದೇವತೆಗಳಿಗಿಂತಲೂ ಶ್ರೇಷ್ಠವಾದುದೆಂದೂ ಪ್ರಾಜ್ಞರು ಯೋಚಿಸಲಾರಂಭಿಸಿದರು. ಪ್ರಕೃತಿಯಲ್ಲಿ ಕಂಡುಬರುವ ಮೂರು ಲಕ್ಷಣಗಳು ನೀತಿಧರ್ಮದ ಸೂತ್ರಗಳಾಗಿರಲು ಅರ್ಹವಾದುವುಗಳೆಂದು ಅವರು ಯೋಚಿಸಿದರು : (೧) ಪ್ರಕೃತಿ ವ್ಯಾಪಾರಗಳ ಸಾರ್ವತ್ರಿಕತೆ ಅಥವಾ ಏಕರೂಪತೆ ; (೨) ಪ್ರತಿಯೊಂದು ವ್ಯಾಪಾರವೂ ಅಥವಾ ಭೌತತತ್ವವೂ ತನ್ನ ಹದ್ದನ್ನು ಮೀರಿ ನಡೆಯದಂತೆ ಕೆಲಸಮಾಡುವ ಪ್ರಕೃತಿಯ ಕ್ರಮಾವಲಂಬನೆ ; (೩) ಒಟ್ಟಿನಲ್ಲಿ ಪ್ರಕೃತಿಯಲ್ಲಿ ಕಂಡುಬರುವ ಸಮತೋಲನ ಅಥವಾ ಸಮುಗಟ್ಟು.

ಈ ರೀತಿಯಾಗಿ ಪ್ರಕೃತಿ ನೀತಿ ಧರ್ಮದ ನೆಲೆಯೆಂದು ಭಾವಿಸಿದ ಮೇಲೆ ಪ್ರಕೃತಿಗೂ ಸಂಪ್ರದಾಯ ಅಥವಾ ಶಾಸನಕ್ಕೂ (Law) ವೈರವೆಂಬ ಭಾವನೆ ತಲೆದೋರಿದ್ದು ಅತಿಶಯವೇನೂ ಅಲ್ಲ. ಪ್ರಕೃತಿ ಸಾರ್ವತ್ರಿಕವಾದುದು ಮತ್ತು ಅನಿವಾರ್ಯವಾದುದು ; ಸಾಂಪ್ರದಾಯಿಕ ಶಾಸನಗಳೋ ಒಂದೊಂದು ದೇಶದಲ್ಲಿ ಒಂದೊಂದು ವಿಧವಾಗಿರುವುವಲ್ಲದೆ ಕೆಲವುವೇಳೆ ಪರಸ್ಪರ ವಿರುದ್ಧವಾಗಿಯೂ ಇರುವುವು. ಈ ವೈವಿಧ್ಯ ವಿರೋಧ ವೈಪರೀತ್ಯಗಳನ್ನು ನೋಡಿ ಹಿಪ್ಪಿಯಸ್ಸನೂ ಆರ್ಕಿಲಾಸನೂ ಜನರಲ್ಲಿ ರೂಢಿಯಲ್ಲಿರುವ ನೀತಿಸೂತ್ರಗಳು ಮಾನವನಿಂದ ಕಲ್ಪಿಸಲ್ಪಟ್ಟ ಆಚಾರ ನಿಯಮಗಳೇ ಹೊರತಾಗಿ ಸ್ವಾಭಾವಿಕ ಧರ್ಮದಿಂದ ಹುಟ್ಟಿದುವಲ್ಲವೆಂದು ತೀರ್ಮಾನಿಸಿದರು. ಗ್ರೀಕರ ದೃಷ್ಟಿಯಲ್ಲಿ ಸ್ವಾಭಾವಿಕವೆಂದರೆ ಯಾವಾಗಲೂ ಸಾರ್ವತ್ರಿಕವೆಂದೇ ಅರ್ಥ. ಆಚಾರಧರ್ಮಗಳು ಸಾರ್ವತ್ರಿಕವಲ್ಲವಾದುದರಿಂದ ಬರಿಯ ಮಾನವಕಲ್ಪಿತ ಪದ್ಧತಿಗಳು : ಅವು ಪವಿತ್ರವೂ ಅಲ್ಲ, ಅವುಗಳನ್ನು ಅನುಸರಿಸಲೇಬೇಕೆಂಬ ನಿಯಮವೇನೂ ಇಲ್ಲ. ಇದಲ್ಲದೆ ವಿಧವಿಧವಾದ ಮತ್ತು ಪರಸ್ಪರ ವಿರುದ್ಧವಾದ ಈ ಕಲ್ಪಿತ ಸಾಮಾಜಿಕ ಸಂಸ್ಥೆಗಳೇ ಎಲ್ಲಿ ನೋಡಿದರೂ ಜನರಲ್ಲಿ ದ್ವೇಷವನ್ನೂ ವಿರೋಧವನ್ನೂ ಹುಟ್ಟಿಸಲು ಕಾರಣವಾಗಿರುವುವು.

ಮಾನವ ಧರ್ಮಾಧರ್ಮಗಳು ಈ ಪ್ರಕಾರವಾಗಿ ವ್ಯತ್ಯಸ್ತಗಳಾಗಿ ಜನರನ್ನು ಬಂಧಿಸಲಾರವು ಎಂದ ಮೇಲೆ ಸ್ವಭಾವಕ್ಕನುಸಾರವಾದ ಧರ್ಮಾಧರ್ಮಗಳು ಯಾವುವು ? ಹಿಪ್ಪಿಯಸ್ಸನು ನಾನಾ ದೇಶಗಳ ಶಾಸನ

ಗಳನ್ನೂ ಪದ್ಧತಿಗಳನ್ನೂ ಪರೀಕ್ಷಿಸಿ ಅವುಗಳಲ್ಲಿ ಸಾರ್ವತ್ರಿಕವಾಗಿದ್ದುವನ್ನೆಲ್ಲಾ ಆರಿಸಿಕೊಂಡು "ಸ್ವಾಭಾವಿಕಧರ್ಮ" ಎಂಬ ಒಂದು ಧರ್ಮಶಾಸ್ತ್ರವನ್ನೇರ್ಪಡಿಸಿದನು. ಸ್ಟೋಯಿಕರು ಇದನ್ನು ಅಭಿವೃದ್ಧಿಪಡಿಸಿ ಪ್ರಚಾರಕ್ಕೆ ತರಲು, ಮುಂದೆ ರೋಮ್ ಚಕ್ರಾಧಿಪತ್ಯದ ಶಾಸನಕಾರರು ಅದನ್ನು ಸ್ವೀಕರಿಸಿ "ಜಸ್ ಜೆನ್ಷಿಯಮ್" (Jus Gentium), ಎಂದರೆ ಸಮಸ್ತ ಜನಾಂಗಗಳ ಸಾಮಾನ್ಯ ಧರ್ಮಗಳು ಎಂದು ಹೆಸರಿಟ್ಟು ಅದನ್ನು ರಾಜ್ಯದಾಡಳಿತಗಳಲ್ಲಿ ರೂಢಿಗೆ ತಂದರು.

ಇರಲಿ. ಸ್ವಭಾವಕ್ಕೂ ಶಾಸನಕ್ಕೂ ಈ ರೀತಿಯಾಗಿ ವಿರೋಧ ಬರಲು ಗ್ರೀಕ್ ಯುವಕರ ಮೇಲೆ ಅದರಿಂದುಂಟಾದ ಪರಿಣಾಮವನ್ನು ವಿವರಿಸಬೇಕೆ? ಪರಂಪರೆಯಿಂದ ನಡೆದುಕೊಂಡು ಬಂದ ಪದ್ಧತಿಗಳು, ನಂಬಿಕೆಗಳು, ಸಂಸ್ಥೆಗಳು — ಇವೆಲ್ಲಾ ಕೇವಲ ಮಾನವಕೃತ—ಇವುಗಳಿಗೆ ಸ್ಥಳೀಯ ಅಥವಾ ತಾತ್ಕಾಲಿಕ ಪ್ರಾಮುಖ್ಯತೆ ಗೌರವಗಳನ್ನು ಕೊಡಬಹುದೇ ವಿನಾ ಪ್ರಕೃತಿ ಧರ್ಮಗಳಿಗಿರುವಂತೆ ಸಾರ್ವತ್ರಿಕ ಮತ್ತು ನಿತ್ಯವಾದ ಪೂಜ್ಯತೆಯನ್ನು ಕೊಡಲಾಗುವುದಿಲ್ಲ—ಎಂದ ಮೇಲೆ, ಎಲ್ಲಿ ನೋಡಿದರೂ ಪ್ರಾಚೀನ ನೀತಿಪದ್ಧತಿಗಳನ್ನು ಹಾಸ್ಯಮಾಡುವವರೇ; ದೇವರೂ ಇಲ್ಲ, ದಿಂಡರೂ ಇಲ್ಲ, ಎಲ್ಲವೂ ದುಡ್ಡು ಕಿತ್ತುಕೊಂಡು ತಿನ್ನಬೇಕೆನ್ನುವ ಪುರೋಹಿತರ ಸ್ವಕಪೋಲಕಲ್ಪಿತ ಪೊಳ್ಳು ಕತೆಗಳೆಂದು ಮತನಂಬಿಕೆಗಳನ್ನು ನಿರಾಕರಿಸುವವರೇ, ಪ್ರಬಲರಾದರೆಂದು ಹೇಳಿದರೆ ಆಶ್ಚರ್ಯವೇನು?

ಈ ವಿಧವಾದ ನೀತಿ ಮತ್ತು ಮತ ಸಂಬಂಧವಾದ ಅವ್ಯವಸ್ಥೆ ಜನರನ್ನು ಬೇರೆಬೇರೆಯಾದ ಮತ್ತು ಪರಸ್ಪರ ವಿರುದ್ಧವಾದ ಎರಡು ಮಾರ್ಗಗಳಿಗೆ ಎಳೆಯಿತು. ಸ್ವಭಾವಕ್ಕೆ ಹಿಂತಿರುಗಬೇಕೆಂದೇನೋ ಎಲ್ಲರೂ ಒಪ್ಪಿದರು. ಆದರೆ ಸ್ವಭಾವದ ಧರ್ಮ ಯಾವುದೆಂಬುದನ್ನು ನಿರ್ಣಯಿಸುವುದರಲ್ಲಿ ಎರಡು ಪಂಗಡಗಳಾದುವು. ಹಿಪ್ಪಿಯಸ್ಸನನ್ನು ಅನುಸರಿಸಿದ ಒಂದು ಪಂಗಡದವರು ಹೇಳಿದರು: ಸ್ವಭಾವವೆಂಬುದು ಮಾನವ ಜಾತಿಗೆಲ್ಲಾ ಏಕರೂಪಳಾದ ಮತ್ತು ಉಪಕಾರಿಯಾದ ಮಾತೆ. ಆದುದರಿಂದ ಜಾತಿಕುಲಸಂಬಂಧವಾದ ಭೇದಭಾವಗಳೆಲ್ಲವನ್ನು ತೊಡೆದು

ಹಾಕಿ ಮಾನವ ಸಹೋದರತ್ವವನ್ನೂ ಸಮಗ್ರಪ್ರಪಂಚದ ಏಕೀಕರಣವನ್ನೂ ಸಾಧಿಸಲು ಪ್ರಯತ್ನಪಡಬೇಕು. "ನಾವೆಲ್ಲರೂ ಸ್ವಭಾವದ ಪ್ರಕಾರ ಬಂಧುಗಳು, ಒಂದು ಮನೆತನದವರು, ಶಾಸನದ ಪ್ರಕಾರವಲ್ಲ; ಮಾನವ ಜಾತಿಗೇ ಘಾತುಕವೆಂದೆನಿಸಿಕೊಂಡಿರುವ ಶಾಸನ ಬಲಾತ್ಕಾರವನ್ನು ಪ್ರಯೋಗಿಸುವುದಲ್ಲದೆ ಸ್ವಭಾವಕ್ಕೆ ವ್ಯತಿರೇಕವಾಗಿಯೂ ಇದೆ"---ಹೀಗೆಂದು ಹಿಪ್ಪಿಯಸ್ಸನು ಒಂದು ಅಮೋಘವಾದ ವಚನದಲ್ಲಿ ಹೇಳಿರುವನು.

ಎರಡನೆಯ ಪಂಗಡದವರು, ನಾನಾ ರಾಷ್ಟ್ರಗಳಿಗೆ ಅನ್ವಯಿಸಬಲ್ಲ ಸಾಮಾನ್ಯಶಾಸನ–ಧರ್ಮ–ಗಳು ಯಾವುವೂ ಇಲ್ಲದಿರುವಾಗ, ಸ್ವಾಭಾವಿಕ ಜೀವನಕ್ಕೆ ಹಿಂದಿರುಗುವುದೆಂದರೆ, ಹಸಿದಹೊತ್ತಿಗೆ ವಶವಾದ ಪಶುವನ್ನು, ಕೋರೆದಾಡೆಗಳಿಂದ ಸಿಗಿದು, ವ್ಯಾಘ್ರನಖಗಳಿಂದ ಬಗಿದು, ಕಾರುವ ರಕ್ತಮಯವಾದ ಶರೀರವನ್ನುಳ್ಳ, ಘೋರ ಮೃಗಜಾತಿಯ ಜೀವನಕ್ಕೆ ಹಿಂದಿರುಗುವುದಲ್ಲವೇ, ಎಂದರ್ಥಮಾಡಿದರು. ಪ್ರಕೃತಿಯಲ್ಲಿ ನಾವು ನೋಡುವ ಧರ್ಮ ಯಾವುದು? ಬಲವೇ ಶೀಲ (Might is right), ಬಲಾಢ್ಯನೇ ಗುಣಾಢ್ಯ, ಶಕ್ತಿವಂತನೇ ಹಕ್ಕುದಾರ. ಆದುದರಿಂದ ಶಕ್ತಿಪ್ರಯೋಗವೇ, ಬಲಪ್ರದರ್ಶನವೇ, ದಬ್ಬಾಳಿಕೆಯೇ, ನಮ್ಮ ಧರ್ಮವಾಗಿರಬೇಕು. ಯಾವನು ಹೆಚ್ಚು ಶಕ್ತಿವಂತನೋ ಅವನೇ ಹೆಚ್ಚು ಬಾಧ್ಯಸ್ಥ: ಅವನು ಎಷ್ಟು ದೋಚಬಲ್ಲನೋ ಅಷ್ಟೂ ಅವನದೇ, ಅವನು ಎಷ್ಟು ತಿಂದು ಅರಗಿಸಿಕೊಳ್ಳಬಲ್ಲನೋ ಅಷ್ಟೂ ಅವನದೇ.

"ಗಾರ್ಜಿಯಾಸ್" ಎಂಬ ಪ್ಲೇಟೋವಿನ ಸಂವಾದದಲ್ಲಿ ಸಾಕ್ರಟೀಸನು ಅನ್ಯಾಯಕಾರಿ ಸುಖಿಯಾಗಿರಲಾರನೆಂದೂ, ಅನ್ಯಾಯವನ್ನು ನಮ್ಮ ಕೈಯಿಂದ ಮಾಡುವುದಕ್ಕಿಂತಲೂ ಪರರ ಕೈಯಿಂದ ಅನುಭವಿಸುವುದು ಉತ್ತಮವೆಂದೂ ಪೋಲಸನೊಡನೆ ಚರ್ಚಿಸಿ ತೀರ್ಮಾನಿಸುವನು–ಉತ್ತರ ಕ್ಷಣದಲ್ಲಿಯೇ ಕ್ಯಾಲಿಕ್ಲಿಸ್ ಎಂಬ ಸೋಫಿಸ್ಟನು ಮೇಲಿನ ಬಲವೇ ಶೀಲವೆಂಬ ಪಂಥವನ್ನು ಹಿಡಿದು ಈ ರೀತಿ ವಾದಿಸುವನು:

"ನಿಜಾಂಶವನ್ನು ಹೇಳಬೇಕಾದರೆ, ಸಾಕ್ರಟೀಸ್, ನೀನು ಸತ್ಯಾನ್ವೇಷಣೆಯೆಂದು ಜಂಭಕೊಚ್ಚಿಕೊಳ್ಳುತ್ತೀಯೆ, ಈಗ ನೀನು ಮಾಡುತ್ತಿ

ರುವ ಧರ್ಮಜಿಜ್ಞಾಸೆಯಲ್ಲಿಯೋ ಅಂದರೆ ಸಾಮಾನ್ಯಜನರ, ಕೀಳುತರದ, ಸ್ವಾಭಾವಿಕವಲ್ಲದ, ಕೇವಲ ಸಂಪ್ರದಾಯಪ್ರಿಯವಾದ ಮಾತುಗಳನ್ನೇ ಆಡುತ್ತಿರುವೆ. ಸಂಪ್ರದಾಯವೂ ಸ್ವಭಾವವೂ ಸಾಧಾರಣವಾಗಿ ಪರಸ್ಪರ ವಿರೋಧಿಗಳು ; ಆದುದರಿಂದ ಯಾವನಾದರೊಬ್ಬನು ತನ್ನ ಹೃದಯದ ನಿಜವಾದ ಅಂತರಂಗವನ್ನು ಮಂದಿಯ ಮುಂದೆ ಹೇಳಲು ನಾಚಿದರೆ, ಅವನು ತನ್ನ ಮಾತನ್ನು ತಾನೇ ನುಂಗಬೇಕಾಗುವುದು. ಯುಕ್ತಿವಂತನಾದ ನೀನು ಇಂತಹ ಸಮಯ ಕಾದುಕೊಂಡಿದ್ದು ಸಂಪ್ರದಾಯರೀತಿಯಾಗಿ ಮಾತನಾಡುತ್ತಿರುವ ಮನುಷ್ಯನಿಗೆ ತಂತ್ರಮಾಡಿ ಸ್ವಭಾವಧರ್ಮದಿಂದ ನಿರ್ಧರಿಸಲ್ಪಡಬೇಕಾಗಿರುವ ಪ್ರಶ್ನೆಯೊಂದನ್ನು ಹಾಕುವೆ ; ಅವನು ಸ್ವಭಾವಧರ್ಮವನ್ನು ಕುರಿತು ಮಾತನಾಡುತ್ತಿದ್ದರೆ, ತಕ್ಷಣವೇ ನೀನು ಸಂಪ್ರದಾಯಕ್ಕೆ ಜಾರಿಹೋಗುವೆ. ಅನ್ಯಾಯವನ್ನು ಮಾಡುವ ಮತ್ತು ಅನುಭವಿಸುವ ವಿಷಯದಲ್ಲಿ ಈಗ ನೀನು ನಡಸಿದ ಚರ್ಚೆ ಈ ನಿನ್ನ ಕುಯುಕ್ತಿಯನ್ನು ದೃಷ್ಟಾಂತಪಡಿಸುತ್ತದೆ. ಪೋಲಸ್ಸನು ಸಂಪ್ರದಾಯ ಪ್ರಕಾರ ಅವಮಾನಕರವಾದುದು ಯಾವುದೋ ಅದನ್ನು ಕುರಿತು ಮಾತನಾಡುತ್ತಿದ್ದಾಗ, ನೀನು ಸ್ವಭಾವಧರ್ಮದ ದೃಷ್ಟಿಯಿಂದ ಅವನ ಮೇಲೆ ಹೋಗಿಬಿದ್ದೆ ; ಸ್ವಭಾವಕ್ಕನುಸಾರವಾಗಿ ಅನ್ಯಾಯವನ್ನು ಅನುಭವಿಸುವುದು ಹೆಚ್ಚು ಅಪಮಾನಕರ, ಏಕೆಂದರೆ, ಅದೇ ಹೆಚ್ಚಿನ ಕೇಡು ; ಆದರೆ ಸಂಪ್ರದಾಯದ ಪ್ರಕಾರ, ಕೇಡನ್ನು ಮಾಡುವುದು ಹೆಚ್ಚು ಅಪಮಾನಕರ. ನ್ಯಾಯವಾಗಿ ನೋಡಿದರೆ, ಅನ್ಯಾಯವನ್ನು ಅನುಭವಿಸುವುದು ಮನುಷ್ಯನೆಂದೆನಿಕೊಂಡವನಿಗೆ ಬಂದದ್ದಲ್ಲ, ಗುಲಾಮನಿಗೆ ಬಂದದ್ದು. ಮತ್ತು ಇಂಥ ಗುಲಾಮನು—ಅನ್ಯಾಯಕ್ಕೆ ತುತ್ತಾಗಿ ಕಾಲಿನಿಂದ ತುಳಿಯಲ್ಪಟ್ಟಾಗಲೂ ಸಹ ಮೇಲಕ್ಕೆದ್ದು ತನ್ನನ್ನಾಗಲಿ ತನಗೆ ಬೇಕಾದ ಇತರರನ್ನಾಗಲಿ ಬದುಕಿಸಿಕೊಳ್ಳಲಾರದಂಥ ನಿರ್ಬಲ ಪ್ರಾಣಿ— ಬದುಕಿರುವುದಕ್ಕಿಂತ ಸಾಯುವುದೇ ಲೇಸು. ನನ್ನ ಈ ಮಾತಿನ ಅರ್ಥವೇನು ಎಂದು ಕೇಳುತ್ತೀಯೋ, ಹೇಳುತ್ತೇನೆ, ಕೇಳು. ಬಲಹೀನರಾದ ಹೆಚ್ಚು ಜನರೇ ದೇಶದ ಶಾಸನನಿರ್ಮಾಣಕರು ; ಇವರು ತಮ್ಮ ಸ್ವಂತ ಪ್ರಯೋಜನಕ್ಕಾಗಿಯೇ ಕಾನೂನುಗಳನ್ನು ನಿರ್ಮಿಸಿ

ಪುರಸ್ಕಾರ ತಿರಸ್ಕಾರಗಳನ್ನು ಹಂಚುವರು, ಬಲಿಷ್ಠರಾದವರನ್ನೂ ತಮ್ಮನ್ನು ದಾಟಿ ಮುಂದೆಮುಂದೆ ಸಾಗಿಹೋಗುವವರನ್ನೂ ಬೆದರಿಸಿ ತಮ್ಮನ್ನು ಕೆಳಗೆ ಹಾಕದಂತೆ ನೋಡಿಕೊಳ್ಳುವರು. ಅಪ್ರಾಮಾಣಿಕತೆ ನಾಚಿಕೆಗೇಡೆಂದೂ ಅನ್ಯಾಯವೆಂದೂ ಇವರು ಕೂಗುತ್ತಾರೆ: ಅನ್ಯಾಯ ಹೇಗೆ? ನೆರೆಹೊರೆಯವರಿಗಿಂತಲೂ ಹೆಚ್ಚಾಗಿ ಸಂಪಾದಿಸಬೇಕೆಂಬ ಒಬ್ಬನ ಆಶೆಯೇ ಇವರ ದೃಷ್ಟಿಯಲ್ಲಿ ಅನ್ಯಾಯ; ಏಕೆಂದರೆ ತಮ್ಮ ಕೀಳುತನ ತಮಗೆ ಚೆನ್ನಾಗಿ ತಿಳಿದಿರುವುದರಿಂದ ಸದ್ಯದಲ್ಲಿ ಬಲಿಷ್ಠರೊಡನೆ ಸಮತ್ವ ಸಿಕ್ಕಿದರೆ ಸಾಕು ಇವರಿಗೆ. ಈ ಕಾರಣದಿಂದ ಅನೇಕರಿಗಿಂತ ಹೆಚ್ಚು ಸಂಪಾದಿಸಿಕೊಳ್ಳಬೇಕೆಂಬ ಪ್ರಯತ್ನವನ್ನು ಸಾಂಪ್ರದಾಯಿಕವಾಗಿ ನಾಚಿಕೆಗೇಡೆಂದೂ ಅನ್ಯಾಯವೆಂದೂ ಹೇಳುತ್ತಾರೆ. ಆದರೆ ಪ್ರಕೃತಿಯಲ್ಲಿ ಎಲ್ಲಿ ನೋಡಿದರೂ ಉತ್ತಮರು ಕೀಳಾದವರಿಗಿಂತಲೂ, ಬಲಿಷ್ಠರಾದವರು ಬಲಹೀನರಾದವರಿಗಿಂತಲೂ, ಹೆಚ್ಚಾಗಿ ಹೊಂದಿರುವುದೇ ನ್ಯಾಯವೆಂಬುದು ವ್ಯಕ್ತಪಡುತ್ತದೆ. ಅಲ್ಲದೆ ಮನುಷ್ಯರಲ್ಲಿಯೂ ಮೃಗಗಳಲ್ಲಿಯೂ, ಒಟ್ಟೇನು, ಪಟ್ಟಣಗಳಲ್ಲೆಲ್ಲಾ ಮತ್ತು ಜನಾಂಗಗಳಲ್ಲೆಲ್ಲಾ, ನ್ಯಾಯವೆಂದರೆ, ಉತ್ಕೃಷ್ಟರಾದವರು ನಿಕೃಷ್ಟರಾದವರ ಮೇಲೆ ತಮ್ಮ ಆಳಿಕೆ ನಡಸಿ ಅವರಿಗಿಂತಲೂ ಹೆಚ್ಚು ಹೊಂದಿರುವುದೇ—ಎಂದು ಸ್ಪಷ್ಟವಾಗಿ ಕಂಡುಬರುತ್ತದೆ. ಷರ್ಕ್ಸೀಸನು (Xerxes) ಗ್ರೀಸ್‌ದೇಶದ ಮೇಲೆ ದಂಡೆತ್ತಿ ಬಂದನಲ್ಲಾ, ಅವನ ತಂದೆ ಸಿಥಿಯನ್ನರನ್ನು ಜಯಿಸಲೆಳಸಿ ಬಂದನಲ್ಲಾ, (ಇಂತಹ ಉದಾಹರಣೆಗಳು ಇನ್ನೂ ಲೆಕ್ಕವಿಲ್ಲದಷ್ಟಿವೆ)—ಯಾವ ನ್ಯಾಯವನ್ನು ಅನುಸರಿಸಿ ಇವರು ಹೀಗೆ ಬಂದು ಬಿದ್ದರು? ಹಾಗಲ್ಲ, ಇಂತಹ ಪುರುಷರೇ ಸ್ವಭಾವಕ್ಕನುಸಾರವಾಗಿ ನಡೆಯುವವರು; ಮತ್ತು—ಹೌದು, ದೇವರಾಣೆಗೂ—ಇವರ ನಡತೆಯೇ ಸ್ವಭಾವಧರ್ಮಕ್ಕನುಸಾರವಾಗಿ ಇರತಕ್ಕುದು; ನಾವು ಕಲ್ಪನೆ ಮಾಡಿ ನಮ್ಮ ಸ್ವಜನರ ಮೇಲೆ ಧರ್ಮವೆಂದು ವಿಧಿಸುತ್ತೇವಲ್ಲಾ, ಪ್ರಾಯಶಃ ಆ ಧರ್ಮಕ್ಕನುಸಾರವಾಗಿ ಇರಲಾರದು. ಇದು ಯಾವ ಧರ್ಮವೋ, ಕಾಣೆ, ನಾವು ಮಾಡತಕ್ಕುದು; ಸ್ವಜನರಲ್ಲಿ ಉತ್ತಮರಾದವರನ್ನೂ ಅತ್ಯಂತ ಬಲಿಷ್ಠರಾದವರನ್ನೂ ಆರಿಸಿಕೊಂಡು ಅವರ

ಪ್ರಾಯದಶೆ ಮೊದಲುಗೊಂಡು ಅವರನ್ನು ಸಿಂಹದ ಮರಿಗಳನ್ನು ಪಳಗಿಸು ವಂತೆ ಈಲುಮಾಡಿ ವಶಮಾಡಿಕೊಂಡು, ಅವರ ಕಿವಿಗಳನ್ನು ಮಧುರ ಮಾತುಗಳಿಂದ ಮುಗ್ಧಗೊಳಿಸಿ, ಸಮತ್ವದಿಂದಲೇ ನೀವು ತೃಪ್ತರಾಗಿರ ಬೇಕು, ಸರ್ವಸಮವಾದದ್ದು ಯಾವುದೋ ಅದೇ ಗೌರವವಾದದ್ದು ಮತ್ತು ನ್ಯಾಯವಾದದ್ದು, ಎಂದು ಅವರಿಗೆ ಸದಾ ಬೋಧಿಸುತ್ತೇವಲ್ಲಾ! ಇಂತಹ ಸಂದರ್ಭದಲ್ಲಿ, ಸಾಕಾದಷ್ಟು ಶಕ್ತಿ ಹೊಂದಿದವನು ಒಬ್ಬ ಸಿದ್ಧಿದ್ದರೆ ಅವನು ಇದನ್ನೆಲ್ಲಾ ಒದರಿಬಿಟ್ಟು, ಕೊಡಹಿಕೊಂಡು, ಈ ಸಂಕೋಲೆಗಳನ್ನೆಲ್ಲಾ ಕಿತ್ತಾಚೆಗೆ ಒಗೆಯುತ್ತಿದ್ದ; ನಮ್ಮ ಸಂಪ್ರದಾಯಗಳನ್ನೂ ವಶೀಕರಣ ಮಂತ್ರಗಳನ್ನೂ ಮೋಹನಾಸ್ತ್ರಗಳನ್ನೂ—ಸ್ವಭಾವಕ್ಕೆ ವಿರುದ್ಧವಾದ ಧರ್ಮಗಳನ್ನೆಲ್ಲಾ–ಕಾಲುಕೆಳಗೆ ಹಾಕಿ ತುಳಿದು ತಳ್ಳುತ್ತಿದ್ದ; ಈಗ ನಮ್ಮ ಗುಲಾಮಗಿರಿಗೆ ಸಿಕ್ಕಿಕೊಂಡಿರುವವರು ಯಾರೋ ಅವರೆಲ್ಲಾ ಆಗ ದಂಗೆ ಎದ್ದು ನಮ್ಮ ಮೇಲೆ ಧಣಿಗಳಾಗುತ್ತಿದ್ದರು; ಸ್ವಾಭಾವಿಕನ್ಯಾಯದ ಬೆಳಕು ಆಗ ಎಲ್ಲ ಕಡೆಯಲ್ಲಿಯೂ ಪ್ರಕಾಶಿಸುತ್ತಿತ್ತು. ಪಿಂಡಾರ್ ಎಂಬ ಕವಿ ತನ್ನ ಕಾವ್ಯದಲ್ಲಿ ಹೇಳಿರುವ ಅಭಿಪ್ರಾಯವಿದೇ ಎಂದು ನನಗೆ ತೋರುತ್ತದೆ: "ಧರ್ಮವೆಂಬುದು ಎಲ್ಲರಿಗೂ—ಮರ್ತ್ಯರಿಗಾಗಲಿ ಅಮರರಿಗಾಗಲಿ— ದೊರೆ; ಅದು ಬಲವನ್ನು ಶೀಲವನ್ನಾಗಿ ಮಾಡುತ್ತದೆ, ಉದ್ದಂಡತನದಿಂದ ದಬ್ಬಾಳಿಕೆಯನ್ನು ನಡಸುತ್ತದೆ; ಹರ್ಕ್ಯುಲೀಸನ ಪರಾಕ್ರಮ ಕೃತ್ಯಗಳೇ ಇದಕ್ಕೆ ನಿದರ್ಶನಗಳಲ್ಲವೇ, ಹೇಗೆಂದರೆ...."—ಏನೋ, ಅವನ ಸ್ವಂತ ಮಾತುಗಳು ನನಗೆ ಸರಿಯಾಗಿ ಜ್ಞಾಪಕವಿಲ್ಲ,ಆದರೆ ಅವನರ್ಥವೇನೆಂದರೆ, ಹರ್ಕ್ಯುಲೀಸನು ಗೆರಿಯಾನಿನ ಎತ್ತುಗಳನ್ನು ತಾನು ಕೊಂಡುಕೊಳ್ಳ ದಿದ್ದರೂ, ಮತ್ತು ಗೆರಿಯಾನನು ಅವುಗಳನ್ನು ತನಗೆ ಕೊಡದಿದ್ದರೂ, ಬಲಾತ್ಕಾರದಿಂದ, ಸ್ವಾಭಾವಿಕ ಹಕ್ಕೆಂಬ ಧರ್ಮಕ್ಕನುಸಾರವಾಗಿ, ಹೊಡೆದುಕೊಂಡು ಹೋದನು; ಬಲಹೀನರ ಮತ್ತು ಕೀಳಾದವರ ಎತ್ತು ಗಳು ಮತ್ತು ಇತರ ಆಸ್ತಿಪಾಸ್ತಿಗಳು ನ್ಯಾಯವಾಗಿ ಬಲಾಢ್ಯರಿಗೂ ಮೇಲಾದವರಿಗೂ ಸೇರದೆ ಮತ್ತೆ ಯಾರಿಗೆ ಸೇರಬೇಕು?...."

"ರಿಪಬ್ಲಿಕ್" ಎಂಬ ಪ್ಲೇಟೋವಿನ ಸಂವಾದದಲ್ಲಿ, ಥ್ರಾಸಿಮಾ ಕಸ್ ಎಂಬ ಸೋಫಿಸ್ಟನು ಇದೇ ಸರಣಿಯಲ್ಲಿ ಮಾತನಾಡುತ್ತಾನೆ.

ನ್ಯಾಯ ವರ್ತನೆ ಅಥವಾ ಧರ್ಮ ಎಂದರೇನು ಎಂಬುದೇ ಸಾಕ್ರಟೀಸನ ಪ್ರಶ್ನೆ. ಇದಕ್ಕೆ ಪೋಲಿಮಾರ್ಕಸ್ ಎಂಬ ಯುವಕನು, ನ್ಯಾಯವೆಂದರೆ ಕೊಟ್ಟವರ ಒಡವೆ ಹಿಂತಿರುಗಿ ಕೊಡುವುದು, ನಮ್ಮ ಮಿತ್ರರಿಗೆ ಒಳ್ಳೆಯದು ಮಾಡುವುದು, ಶತ್ರುಗಳಿಗೆ ಕೆಡುಕು ಮಾಡುವುದು, ಈ ಮೊದಲಾದ ಸಾಮಾನ್ಯ ಉತ್ತರಗಳನ್ನು ಕೊಡುವನು. ಸಾಕ್ರಟೀಸನು ಅವುಗಳೆಲ್ಲಾ ಅಸಮಂಜಸವಾದುವುಗಳೆಂದು ತೋರಿಕೊಡುವನು. ಆಗ "ದೈತ್ಯ ಥ್ರಾಸಿಮಾಕಸನು" ಹುಲಿಯಹಾಗೆ ಎದ್ದು ಅವರ ಮೇಲೆ ಬಿದ್ದು, ಹುಚ್ಚುಮುಂಡೆಗಳೆಂದು ಅವರನ್ನೆಲ್ಲಾ ಬೈದು, ನ್ಯಾಯದ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಸಾರುವನು. "ಬಲಾಢ್ಯನ ಪ್ರಯೋಜನವೇ, ಅವನ ಆದಾಯವೇ, ನ್ಯಾಯವಲ್ಲದೆ ಮತ್ತೆ ಬೇರೆಯಲ್ಲ." ಹೀಗೆಂದರೆ ಅರ್ಥವೇನೆಂದು ಸಾಕ್ರಟೀಸನು ಕೇಳುವನು.

"....ಅನೇಕ ವಿಧವಾದ ಸರ್ಕಾರಗಳಿರುವುದನ್ನು ನೀನು ಕೇಳಿಲ್ಲವೆ? ಆಶಾಧಿಪತ್ಯಗಳು, ಪ್ರಜಾಪ್ರಭುತ್ವಗಳು, ಶ್ರೀಮಂತರ ದರ್ಬಾರು–ಹೀಗೆ ಸರ್ಕಾರ ಅನೇಕ ರೂಪಗಳನ್ನು ಪಡೆದಿರುವುದು ನೀನು ಕಂಡಿಲ್ಲವೆ?"

"ಹೌದು, ನನಗೆ ಗೊತ್ತುಂಟು."

"ಸರ್ಕಾರವೆಂದರೆ ರಾಜ್ಯವನ್ನು ಆಳತಕ್ಕ ಅಧಿಕಾರಿಗಳು?"

"ಹೌದು."

"ಅಂದಮೇಲೆ, ಪ್ರಜಾಪ್ರಭುತ್ವ, ಶ್ರೀಮಂತರ ದರ್ಬಾರು, ಘಾತುಕರ ದೌಲತ್ತು, ಈ ನಾನಾವಿಧ ಸರ್ಕಾರದವರು ತಮ್ಮತಮ್ಮ ಇಷ್ಟ ಪ್ರಯೋಜನಗಳಿಗನುಸಾರವಾಗಿ ಕಾನೂನುಗಳನ್ನು ಮಾಡುತ್ತಾರೆ. ಹೀಗೆ ತಮ್ಮ ಪ್ರಯೋಜನಾರ್ಥವಾಗಿ ಮಾಡಿದ ಕಾನೂನುಗಳನ್ನು ಪ್ರಜೆಗಳು ಅನುಸರಿಸುವುದೇ ದೇಶದ ನ್ಯಾಯವೆಂದೆಣಿಸಲ್ಪಡುವುದು. ಯಾರಾದರೂ ಅವುಗಳನ್ನು ಅನುಸರಿಸದಿದ್ದರೆ, ಅಂತಹವರು ಶಾಸನನಿರೋಧಿಗಳೆಂದೂ ನ್ಯಾಯವಿರೋಧಿಗಳೆಂದೂ ಶಿಕ್ಷಿಸಲ್ಪಡುವರು. ನಾನು ಆಡಿದ ಮಾತಿನ ಅರ್ಥವಿದೇ: ಪ್ರತಿ ಒಂದು ರಾಜ್ಯದಲ್ಲಿಯೂ ನ್ಯಾಯವೆಂಬ ತತ್ವ ಒಂದೇ, ಅದು ಯಾವುದೆಂದರೆ ಸರ್ಕಾರದ ಪ್ರಯೋಜನ ಅಥವಾ ಉದ್ದೇಶ; ಸರ್ಕಾರ ಯಾವಾಗಲೂ ಬಲಿಷ್ಠರ ದರ್ಬಾರಾದುದರಿಂದ,

ಎಲ್ಲಾ ಕಡೆಯಲ್ಲಿಯೂ ನ್ಯಾಯದ ಅರ್ಥ ಒಂದೇ, ಬಲಿಷ್ಠರ ಪ್ರಯೋಜನವೇ ನ್ಯಾಯ."

ಈ ಸಿದ್ಧಾಂತವನ್ನು ಸಾಕ್ರಟೀಸನು ಏಕಾಏಕಿ ಒಪ್ಪುವುದಿಲ್ಲ. ಸರ್ಕಾರವೆಂಬುದು ದುರ್ಬಲರಾದ ಪ್ರಜೆಗಳ ಉಪಯೋಗಕ್ಕಾಗಿರುವುದು, ಬಲಿಷ್ಠರಾದ ಪದವೀಧರರ ಸ್ವಂತ ಪ್ರಯೋಜನಕ್ಕಲ್ಲ; ವೈದ್ಯನೂ ಹಡಗು ನಡಸುವವನೂ ರೋಗಿಗಳ ಮತ್ತು ನಾವಿಕರ ಶ್ರೇಯಕ್ಕಾಗಿ ದುಡಿಯುವರೇ ವಿನಾ ತಮ್ಮ ಸ್ವಾರ್ಥಸಾಧನೆಗಲ್ಲ; ಈ ಕರ್ತವ್ಯ ಪರಿಪಾಲನೆಯ ಮಧ್ಯೆ ಅವರೂ ಅಲ್ಪಸ್ವಲ್ಪ ಪ್ರತಿಫಲವನ್ನು ಪಡೆಯಬಹುದು, ಆದರೆ ಹೀಗೆ ಪ್ರತಿಫಲವನ್ನು ಪಡೆಯುವುದೇ ಅವರ ಕರ್ತವ್ಯದ ಪ್ರಥಮೋದ್ದೇಶವಲ್ಲ; ಆದುದರಿಂದ ನ್ಯಾಯವೆಂಬುದು ಬಲಿಷ್ಠರ ಪ್ರಯೋಜನವಲ್ಲ, ಎಲ್ಲ ಜನರ—ಅದರಲ್ಲಿಯೂ ಬಲಹೀನರಾದ ಬಹು ಮಂದಿಯ—ಮೇಲ್ಮೆಯನ್ನು ಸಾಧಿಸುವುದೇ ನ್ಯಾಯ, ಎಂದು ಸಾಕ್ರಟೀಸನು ವಾದಿಸುವನು.

"ನೀನು ಎಂತಹ ಎಳೆನಿಂಬೆಕಾಯಿ, ಸಾಕ್ರಟೀಸ್! ಪಾಪ, ನೀನೇನು ಮಾಡೀಯೆ, ಬಾಯಲ್ಲಿ ಬೆರಳಿಟ್ಟರೆ ಅದನ್ನು ಕಚ್ಚುವುದನ್ನು ಕೂಡ ಕಲಿಸಿಲ್ಲ ನಿನ್ನ ದಾದಿ ನಿನಗೆ."

"ಅದೇಕೆ ಹಾಗೆ ಹೇಳುತ್ತೀಯೆ?"

"ಇನ್ನೇನು ಮತ್ತೆ ನೀನು ಹೇಳುವುದು. ಕುರಿ ಕಾಯುವವನೂ ದನ ಮೇಯಿಸುವವನೂ ಕುರಿಗಳ ಮತ್ತು ದನಕರುಗಳ ಮೇಲ್ಮೆಗಾಗಿಯೇ ಅವುಗಳನ್ನು ಪೋಷಿಸುವರೇ ವಿನಾ ತಮ್ಮ ಅಥವಾ ತಮ್ಮ ಯಜಮಾನರ ಪ್ರಯೋಜನಕ್ಕಾಗಿ ಅಲ್ಲ, ಎಂದು ನೀನು ತಿಳಿದಿರುವ ಹಾಗೆ ಕಾಣುತ್ತದೆ. ಕುರಿ ಕೊಬ್ಬಿದಷ್ಟೂ ಕುರುಬನಿಗೆ ಲಾಭ ಎಂಬ ಗಾದೆಯನ್ನು ನೀನು ಕೇಳಿಯೇ ಇಲ್ಲವೋ? ಇದರಂತೆಯೇ ರಾಜ್ಯಪರಿಪಾಲಕರು—ತಾವು ನಿಜವಾಗಿಯೂ ಪದವೀಧರರಾಗಿದ್ದರೆ—ತಮ್ಮ ಪ್ರಜೆಗಳನ್ನು ಕುರಿಗಳ ಹಾಗೆ ಭಾವಿಸದೆ, ಹಗಲೂ ರಾತ್ರಿಯೂ ತಮ್ಮ ಆದಾಯವನ್ನೇ ಎಣಿಸದೆ, ಸದಾ ತಮ್ಮ ಪ್ರಜೆಗಳ ಹಿತವನ್ನೇ ಚಿಂತಿಸುತ್ತ ಕುಳಿತಿರುವರೆಂದು ನೀನು ಯೋಚಿಸುತ್ತೀಯೇನು? ಹಾಗಲ್ಲವೇ ಅಲ್ಲ; ವಾಸ್ತವವಾಗಿಯೂ

ನ್ಯಾಯವೆಂಬುದು ಇನ್ನೊಬ್ಬನಿಗೆ ಆಗತಕ್ಕ ಅನುಕೂಲ, ಅಂದರೆ, ಆಳುವವರ ಅಧಿಕಾರಿಗಳ, ಪ್ರಯೋಜನ, ಮತ್ತು ಆಳಾದವನ, ಪ್ರಜೆಯ, ಪ್ರತಿಕೂಲ; ಅನ್ಯಾಯವೋ ಇದಕ್ಕೆ ವ್ಯತಿರಿಕ್ತವಾದುದು. ಅನ್ಯಾಯಕಾರಿ[೧] ನ್ಯಾಯಶೀಲನೂ ಸರಳಮತಿಯೂ ಆದವನ ಮೇಲೆ ಯಾವಾಗಲೂ ದರ್ಬಾರು ನಡಸತಕ್ಕವನು; ಏಕೆಂದರೆ ಆತನು ಸ್ವಾಭಾವಿಕವಾಗಿ ಬಲಿಷ್ಠನು, ಆದುದರಿಂದ ಬಲಹೀನರಾದವರೆಲ್ಲಾ ಅವನ ಕೈಕೆಳಗಿದ್ದುಕೊಂಡು ಅವನ ಇಷ್ಟವನ್ನೇ ಸಲ್ಲಿಸುತ್ತ, ತಮಗೆ ಕಷ್ಟವಿರಲಿ, ನಷ್ಟವಿರಲಿ, ಅವನ ಸೌಖ್ಯಕ್ಕೋಸ್ಕರವಾಗಿಯೇ ದುಡಿಯುವರು. ಇದಲ್ಲದೆ, ಅಯ್ಯೋ ಬೆಪ್ಪ ಚೊಕ್ಕ, ನಿನಗೆ ಇಷ್ಟುಮಾತ್ರ ಗೊತ್ತಿಲ್ಲವಲ್ಲ! ಅನ್ಯಾಯಕಾರಿಯೊಡನೆ ನ್ಯಾಯವಂತನನ್ನು ಹೋಲಿಸಿ ನೋಡಿದರೆ, ನ್ಯಾಯವಂತನು ಯಾವಾಗಲೂ ನಷ್ಟ ಹೊಂದತಕ್ಕವನೇ. ಮೊದಲು "ಖಾಸಗಿ" ಒಪ್ಪಂದಗಳನ್ನು ತೆಗೆದುಕೊಳ್ಳೋಣ: ಎಲ್ಲೆಲ್ಲಿ ಅನ್ಯಾಯಕಾರಿ ನ್ಯಾಯವಂತನೊಂದಿಗೆ ಪಾಲುದಾರನಾಗಿರುವನೋ, ಅಲ್ಲೆಲ್ಲಾ ಪಾರೀಖತ್ತಾದ ಮೇಲೆ ಅನ್ಯಾಯಕಾರಿಯೇ ಹೆಚ್ಚಾಗಿ ತಿಂದಿರುವನು, ನ್ಯಾಯಶೀಲನು ಯಾವಾಗಲೂ ನಿರ್ಭಾಗ್ಯನೇ. ಇನ್ನು ಅವರವರ ರಾಜ್ಯ ವ್ಯವಹಾರಗಳಲ್ಲಿಯೂ ಹೀಗೆಯೇ: ವರಮಾನದ ತೆರಿಗೆ ಕೊಡಬೇಕಾಗಿಬಂದಾಗ, ಇಬ್ಬರ ಆದಾಯವೂ ಒಂದೇ ಇದ್ದರೂ, ನ್ಯಾಯಶೀಲನು (ಪ್ರಾಮಾಣಿಕನಾದುದರಿಂದ) ಹೆಚ್ಚು ತೆರಿಗೆ ತೆರುತ್ತಾನೆ, ನೀತಿರಹಿತನು (ಆದಾಯದ ವಿಷಯದಲ್ಲಿ ಸುಳ್ಳು ಹೇಳಿ) ಕೊಡುವುದು ಕಡಮೆ; ಆದರೆ ಸರ್ಕಾರದಿಂದ ಆದಾಯ ಪಡೆಯಬೇಕಾದ ಸಂದರ್ಭದಲ್ಲಿ, ಮೊದಲನೆಯವನಿಗೆ ಏನೂ ಸಿಗುವುದೇ ಇಲ್ಲ, ಎರಡನೆಯವನು ದೋಚಿಕೊಳ್ಳುತ್ತಾನೆ. ಇಬ್ಬರೂ ಸರಕಾರದಲ್ಲಿ ಉದ್ಯೋಗ ಪಡೆದರೆಂದಿಟ್ಟುಕೊಳ್ಳೋಣ, ಆಗ ನಡೆಯುವುದನ್ನು ಗಮನಿಸು: ಪ್ರಾಮಾಣಿಕನು ತನ್ನ ಸ್ವಂತ ಬದುಕು ಬಾಳನ್ನೆಲ್ಲಾ ಉಪೇಕ್ಷಿಸಿ, ಇನ್ನೂ ಇತರ ವಿಧದಲ್ಲಿಯೂ ನಷ್ಟ ಹೊಂದಿ, ತನ್ನ ಕರ್ತವ್ಯವನ್ನು ನೆರವೇರಿಸಬೇಕೆಂಬ ಉದ್ದೇಶದಿಂದ ಸರಕಾರಕ್ಕೆ ತನ್ನ ಜೀವಿತವನ್ನೆಲ್ಲಾ ಅರೆದು ಸುರಿಯುತ್ತಾನೆ—ಆದರೂ ಇದರಿಂದ

೧. ಸಾಕ್ರಟೀಸನು ಹೇಳುವ ಅರ್ಥದಲ್ಲಿ ಅನ್ಯಾಯಕಾರಿಯಾದವನು.

ಅವನಿಗೇನೂ ಲಾಭ ಬರುವುದಿಲ್ಲ. ಇಷ್ಟೇ ಅಲ್ಲದೆ ಅವನು ಪ್ರಾಮಾಣಿಕ ನಾಗಿದ್ದು ತನ್ನ ಸ್ನೇಹಿತರಿಗೂ ಪರಿಚಿತರಿಗೂ ಅನ್ಯಾಯದ ಮಾರ್ಗ ಗಳಲ್ಲಿ ಸಹಾಯ ಮಾಡಲು ಒಡಂಬಡುವುದಿಲ್ಲವಾದುದರಿಂದ ಎಲ್ಲರೂ ಅವನನ್ನು ನಿಂದಿಸಿ ದ್ವೇಷಿಸುತ್ತಾರೆ. ಅಪ್ರಾಮಾಣಿಕನ ವಿಷಯದಲ್ಲಿಯೋ ಅಂದರೆ ಇದೆಲ್ಲವೂ ತಲೆಕೆಳಗಾಗುವುದು. ಆದರೆ ನಾನು ಮೊದಲೇ ಹೇಳಿದಂತೆ ವಿಸ್ತಾರವಾದ ಪ್ರಮಾಣದಲ್ಲಿ ನಡೆಯುವ ಅನ್ಯಾಯವನ್ನು ಕುರಿತು ನಾನು ಮಾತಾಡುತ್ತಿರುವುದು—ಇದರಲ್ಲಿ ತಾನೆ ಧೂರ್ತನ ಲಾಭ ಅತ್ಯಂತ ಸ್ಪಷ್ಟವಾಗಿ ವ್ಯಕ್ತವಾಗುವುದು. ನನ್ನ ಮಾತಿನ ಅರ್ಥ ತಿಳಿಯಬೇಕಾದರೆ, ಯಾವ ವರ್ತನೆಯಿಂದ ಅಪರಾಧಿಯಾದ ದುಷ್ಟನು ಮಾನವಕೋಟಿಯಲ್ಲೆಲ್ಲಾ ಅತ್ಯಂತ ಸೌಖ್ಯವಂತನೆಂದೆನಿಸಿ ಕೊಳ್ಳುವನೋ, ಹಾಗೂ ನಷ್ಟ ಹೊಂದಿದವರು, ಅಂದರೆ ಅನ್ಯಾಯ ಮಾಡಲು ಹಿಂಜರಿದವರು, ಅತ್ಯಂತ ನಿರ್ಭಾಗ್ಯರೂ ದುಃಖಾಕ್ರಾಂತರೂ ಆಗುವರೋ, ಅಂತಹ ಅನ್ಯಾಯದ ಪರಾಕಾಷ್ಠರೂಪವಾದ—ಹೆಚ್ಚು ಹೇಳಬೇಕೇ, "ಆಶಾಧಿಪತ್ಯ"[೧]ಗಳೆಂಬ ಘಾತುಕ ದೌಲತ್ತನ್ನು ಪರೀಕ್ಷಿಸು, ಗೊತ್ತಾಗುತ್ತದೆ. ಇಲ್ಲಿ ನಾಯಕರೆಂದೆನಿಸಿಕೊಳ್ಳುವ ಘಾತುಕರು ಮೋಸದಿಂದಲೂ, ಬಲೋದ್ಬಂಧದಿಂದಲೂ, ಪರರ ಆಸ್ತಿಯನ್ನು—ಕೊಂಚಕೊಂಚವಾಗಿ ಅಲ್ಲ—ಆದ್ಯಂತ ಪರಿಪೂರ್ಣವಾಗಿ ಕೊಳ್ಳೆ ಹೊಡೆಯುತ್ತಾರೆ: ಅವರಿಗೆ ಇದು ಪವಿತ್ರವಾದುದು, ಇದು ಅಪವಿತ್ರವಾದುದು, ಇದು 'ಖಾಸಗಿ', ಇದು ಸಾರ್ವಜನಿಕವಾದುದು, ಎಂಬ ಭೇದವೇ ಇಲ್ಲ. ಇಂತಹ ಕೃತ್ಯಗಳನ್ನು ಯಾರಾದರೂ ಒಂದೊಂದಾಗಿ ಮಾಡಿದರೆ, ಅವರನ್ನು ಅಪರಾಧಿಗಳೆಂದು ಶಿಕ್ಷಿಸಿ, ಬಹು ವಿಧವಾಗಿ ಅವಮಾನಪಡಿಸಿ, ಆವರವರ ದುಷ್ಟತನಕ್ಕನುಗುಣವಾಗಿ ಅವರನ್ನು ದೇವಸ್ಥಾನದ ದರೋಡೆಕಾರರೆಂದೂ, ಮಾನವಗಳ್ಳರೆಂದೂ, ಕನ್ನಗಳ್ಳರೆಂದೂ, ದಗಾಖೋರರೆಂದೂ, ಚೋರರೆಂದೂ ಕರೆಯುವರು. ಆದರೆ ಮೇಲೆ ಹೇಳಿದಂತಹ ಘಾತುಕನೊಬ್ಬನು ಪುರಜನರ ಆಸ್ತಿಪಾಸ್ತಿಗಳನ್ನು ಲೂಟಿ ಮಾಡಿಕೊಂಡದ್ದೂ ಅಲ್ಲದೆ ಅವರನ್ನು ಗುಲಾಮರನ್ನಾಗಿಯೂ ಮಾಡಿಬಿಟ್ಟರೆ,

೧ ಈಗಿನ ಕಾಲದ "ಡಿಕ್ಟೇಟರ್ ಷಿಪ್ಸ್" ಎಂಬ ದಬ್ಬಾಳಿಕೆಯ ಪ್ರಭುತ್ವಗಳು.

ಆಗ, ಈ ನಾಗರಿಕರು ಮಾತ್ರವೇ ಅಲ್ಲ, ಈ ಅನ್ಯಾಯದ ಪರಮೋತ್ಕರ್ಷವನ್ನು ಕೇಳಿದವರೆಲ್ಲಾ, ಭಲಾ ಶಹಬ್ಬಾಸ್, ಎಂದು ಚಪ್ಪಾಳೆ ಹೊಡೆದು ಇಂತಹ ಮನುಷ್ಯನನ್ನು ಮೇಲೆ ಹೇಳಿದ ಯಾವ ರೀತಿಯಲ್ಲಿಯೂ ಬಯ್ಯದೆ ಅದಕ್ಕೆ ಬದಲಾಗಿ, ಎಷ್ಟು ಧೀಮಂತ! ಎಷ್ಟು ಶ್ರೀಮಂತ! ಎಂತಹ ಶ್ರೀಗಾರವಂತ! ಎಂದು ಕೊಂಡಾಡುವರು. ಕಾರಣವೇನೆಂದರೆ, ಮರುಳೇ, ಹೇಳುವೆನು ಕೇಳು, ಸಾಧಾರಣವಾಗಿ ಜನರು ತಾವೆಲ್ಲಿ ಅನ್ಯಾಯವರ್ತನೆಗೆ ತುತ್ತಾಗುತ್ತೇವೋ ಎಂಬ ಭಯದಿಂದ ಅದನ್ನು ಖಂಡಿಸುತ್ತಾರೆಯೇ ಹೊರತು, ಅದು ಕೆಟ್ಟದೆಂಬ ಪಾಪಭೀತಿಯಿಂದಲ್ಲ. ಅಂದ ಮೇಲೆ, ಸಾಕ್ರಟೀಸ್, ನಾನು ಹಿಂದೆಯೇ ತೋರಿಕೊಟ್ಟಂತೆ, ಸಾಕಾದಷ್ಟು ವಿಸ್ತಾರವಾದ ಪ್ರಮಾಣದಲ್ಲಿ ನಡೆಯುವುದಾದರೆ ಅನ್ಯಾಯ ನ್ಯಾಯವರ್ತನೆಗಿಂತ ಅಧಿಕ ಬಲವುಳ್ಳದ್ದೂ, ನಿರಾತಂಕವಾದದ್ದೂ ಜಯಪ್ರದವಾದದ್ದೂ ಆಗುವುದು; ಮತ್ತು ನಾನು ಮೊದಲು ಹೇಳಿದಂತೆ ಘಟ್ಟಿಗರಾದವರ ಅನುಕೂಲ ಯಾವುದೋ ಅದೇ ನ್ಯಾಯ; ಅನ್ಯಾಯವಾದರೋ ಪ್ರತಿ ಒಬ್ಬನ ಸ್ವಂತ ಲಾಭ ಮತ್ತು ಹಿತವನ್ನು ಕುರಿತದ್ದು."

ಸ್ವಭಾವಕ್ಕೂ ಸಂಪ್ರದಾಯಕ್ಕೂ ಹತ್ತಿದ ಈ ಜಗಳ ಗ್ರೀಸಿನಲ್ಲಿ ಕೆಲಕಾಲ ನಿಂತು ಕಡೆಯಲ್ಲಿ ಸಂಪ್ರದಾಯದ ಬಲವೇ ಹೆಚ್ಚೆನಿಸಿತು. ಆದರೆ ಈ ಫಲಿತಾಂಶದಲ್ಲಿ ಸಂಪ್ರದಾಯವೆಂದರೆ ಅನೂಚಾನವಾಗಿ ನಡೆದುಬಂದ ಪದ್ಧತಿಯೆಂದು ಅರ್ಥ ಮಾಡಬಾರದು; ಮಾನವನು ತನ್ನ ಮೇಲ್ಮೆಗೆಂದು ಯಾವಯಾವ ಸಂಸ್ಥೆಗಳನ್ನು ಏರ್ಪಡಿಸಿದರೂ ಅವು ಸ್ವಾಭಾವಿಕ ಧರ್ಮಕ್ಕಿಂತ ಹೆಚ್ಚು ಬೆಲೆಯುಳ್ಳವು ಎಂಬ ಮಾನವಾಧಿಕ್ಯ—ಅಥವಾ ಮಾನವ ಶ್ರೇಷ್ಠತಾವಾದ (Humanism) ಎಂದು ತಿಳಿಯಬೇಕು.[೧]

---

೧. ಈ ಮಾನವಶ್ರೇಷ್ಠತಾವಾದ (ಮಾನವ ಪಂಥ)ದ ಆಂತರಿಕ ತತ್ತ್ವವನ್ನೂ, ಇದು ಪೂರ್ವ (ಗ್ರೀಕರ) ಕಾಲದಲ್ಲಿ ತಾಳಿದ ಮತ್ತು ಆಧುನಿಕ ಕಾಲದಲ್ಲಿ ತಾಳುತ್ತಿರುವ ರೂಪಾಂತರಗಳನ್ನೂ, ತಿಳಿಯಲಪೇಕ್ಷಿಸುವವರು "ಜಯಕರ್ನಾಟಕ"ದಲ್ಲಿ (೧೯೩೪ ನೆಯ ಸೆಪ್ಟೆಂಬರ್, ಅಕ್ಟೋಬರ್, ಡಿಸೆಂಬರ್ ಮತ್ತು ೧೯೩೫ ನೆಯ ಜನವರಿ ಸಂಚಿಕೆಗಳಲ್ಲಿ) ಈ ಲೇಖಕನು ಬರೆದಿರುವ "ಇಂದಿನವರ ಜೀವನದ ಧ್ಯೇಯಗಳು" ಎಂಬ ಲೇಖನಮಾಲೆಯನ್ನು ನೋಡಬಹುದು.

ಪ್ರೊಟಾಗೊರಾಸನೇ ಈ ಮಾನವ ಪಂಥದ ಪ್ರಮುಖ ಗುರುವಾದನು. ಮಾನವ ಸಂಸ್ಥೆಗಳಿಗಿಂತಲೂ ಪ್ರಕೃತಿ ಚಿರಸ್ಥಾಯಿಯೆಂದೂ ಹೆಚ್ಚು ಪೂಜ್ಯಳೆಂದೂ ಭಾವಿಸುತ್ತೀರಲ್ಲವೆ? ಆದರೆ ಯಾವ ಆಧಾರದ ಮೇಲೆ ಪ್ರಕೃತಿ ತಾನೆ ನಿಂತಿರುವಳು? ನಮ್ಮ ಇಂದ್ರಿಯಾನುಭವದಿಂದಲೇ, ನಮ್ಮ ಸಂವೇದನೆಗಳಿಂದಲೇ ಅಲ್ಲವೆ ಪ್ರಕೃತಿಯಿರುವಳೆಂದು ನಮಗೆ ಬೋಧೆಯಾಗುವುದು? ಆದುದರಿಂದ ಸತ್ಯಾಸತ್ಯ ಧರ್ಮಾಧರ್ಮ ನಿರ್ಣಯಗಳಲ್ಲಿ ಮಾನವಾನುಭವವೇ ಮುಖ್ಯ ಸಾಕ್ಷಿಯಾಗಿರಬೇಕು. ಎಲ್ಲ ವಿಷಯಗಳಲ್ಲಿಯೂ **ಮಾನವನೇ** ತನ್ನ ಒರೆಗಲ್ಲು, ತನ್ನ ಪರಮ ಧ್ಯೇಯ; ದೈವಸಂಕಲ್ಪವಲ್ಲ—ದೇವತೆಗಳಿದ್ದಾರೆಯೋ ಇಲ್ಲವೋ ಅದನ್ನೇ ಹೇಳುವುದಕ್ಕಾಗುವುದಿಲ್ಲ—; ಕೇವಲ ಪಕ್ಷಾರ್ಥದ ಸ್ವಭಾವವೂ ಅಲ್ಲ. ಮಾನವನ ಕಷ್ಟಸುಖ ಯಾವುದೋ, ಮಾನವನ ಹಿತಕಲ್ಯಾಣ ಗಳು ಯಾವುದರಿಂದ ಸಿದ್ಧಿಸುವುವೋ, ಅದೇ ಇತರ ಎಲ್ಲಾ ವಿಚಾರ ಗಳಿಗಿಂತಲೂ ಅತಿಶಯವಾಗಿ ನಮ್ಮ ಅವಗಾಹನೆಗೆ ಅರ್ಹವಾದುದು. ಹಾಗೆಯೇ ಪರೀಕ್ಷಿಸಿದಲ್ಲಿ ಸ್ವಭಾವತಃ ಮನುಷ್ಯನು ಕೇವಲ ನಿರ್ಗತಿಕನು, ನಿತ್ರಾಣನು: ಇತರ ಮೃಗಾದಿಗಳ ಮೇಲೆ ಹೋರಾಡಲು ಪ್ರಕೃತಿ ಅವನಿಗೆ ಯಾವ ಬಲವನ್ನು ಕೊಟ್ಟಿದೆ? ಅಮೂಲ್ಯವಾದ ಮಾನವ ಕಲ್ಪಿತ ವಾದ ಸಂಸ್ಥೆಗಳಿಲ್ಲದೇ ಹೋಗಿದ್ದರೆ, ನಿರ್ಮೂಲವಾಗಿ ಅಳಿದುಹೋಗಿ ಬಿಡುತ್ತಿದ್ದ ಮಾನವನನ್ನು ಅವನ ಜ್ಞಾನ ತಾನೇ ಉಳಿಸಿಕೊಳ್ಳಲು ಆಗುತ್ತಿತ್ತೇನು? ಸ್ವಾಭಾವಿಕ ಸ್ಥಿತಿ ಸರಳತೆಯನ್ನು, ಮಗುತನದ ನಿಷ್ಕಲಂಕತೆ, ನಿರ್ದುಷ್ಟತೆಗಳನ್ನು ನೆನೆನೆನೆದು, ನಾಗರಿಕ ಜೀವನದ ಕೃತಕತ್ವ, ಯುಕ್ತಿ ಚಮತ್ಕೃತಿ (sophistication)—ಇವುಗಳೊಂದಿಗೆ ಹೋಲಿಸಿ, ಬಾಯಿನೀರುಕರೆಯುತ್ತೇವೆ ಈಗ ನಾವು. ಆದರೆ ಆ ನಾಗರಿಕತೆಯ ಆನುಕೂಲ್ಯಗಳು ನಮಗಿಲ್ಲದೇ ಹೋಗಿದ್ದಲ್ಲಿ ನಾವು ಈ ಭೂಮಿಯ ಮೇಲೆ ನಿಲ್ಲುತ್ತಿದ್ದೆವೇನು? ನೀತಿನಿಯಮಗಳೂ, ಸಾಮಾಜಿಕ ಸಂಸ್ಥೆಗಳೂ, ಶಾಸನ ವಿಧಿತ ಶಿಕ್ಷೆಗಳೂ ಆ ನಾಗರಿಕತೆಯ ಆಧಾರಸ್ತಂಭಗಳಲ್ಲವೇ?—ಥುಸಿಡೈಡೀಸ್ ಎಂಬ ಚರಿತ್ರಕಾರನೂ, ಸೋಫೊಕ್ಲೀಸ್ ಎಂಬ ನಾಟಕ ಕವಿಯೂ ಇದೇ ಧೋರಣೆಯಲ್ಲಿ

ಸ್ವಭಾವವನ್ನು ತಿರಸ್ಕರಿಸಿ ಸಂಪ್ರದಾಯವನ್ನು ಪುರಸ್ಕರಿಸುವರು. ಪ್ರೊಟಾಗೊರಾಸನ ಮಹಾವಾಕ್ಯವನ್ನು ನಾವು ಹಿಂದೆಯೇ ಪರೀಕ್ಷಿಸಿದ್ದೇವೆ. ಮಾನವನೇ ತನ್ನ ಮಾನದಂಡವೆಂಬ ಮಾತನ್ನು ಕಡೆಯಲ್ಲಿ ಬಂದ ಸೋಫಿಸ್ಟರು ಸರ್ವಧರ್ಮದ ಸೂತ್ರವಾಗೆಣಿಸಿದುದರಿಂದ ಎಂಥ ವೈಪರೀತ್ಯಗಳುಂಟಾದುವೆಂಬುದನ್ನು ಕಂಡಿದ್ದೇವೆ. ಆದರೆ ಈ ವಿಷಯದಲ್ಲಿ ಪ್ರೊಟಾಗೊರಾಸನಿಗೆ ಮಾತ್ರ ನಾವು ಅನ್ಯಾಯ ಮಾಡಬಾರದು. ಅವನು ಈ ಸೂತ್ರವನ್ನು ಜ್ಞಾನಾರ್ಜನೆಯ ವಿಷಯದಲ್ಲಿ ಪ್ರಯೋಗಪಡಿಸಿದನೇ ಹೊರತು ನೀತಿಧರ್ಮದ ವಿಷಯದಲ್ಲಲ್ಲ. ಸಾರ್ವತ್ರಿಕವಾದ ಸರ್ವಜನಗ್ರಾಹ್ಯವಾದ ಸ್ವತಸ್ಸಿದ್ಧವಾದ ಜ್ಞಾನವೆಂಬುದಿಲ್ಲ: ಸತ್ಯಾಸತ್ಯಗಳಿಗೆ ಪ್ರತಿಯೊಬ್ಬ ಮನುಷ್ಯನೂ ತನಗೆ ತಾನೇ ಪ್ರಮಾಣ. ಆದರೂ ನ್ಯಾಯಾನ್ಯಾಯ—ಧರ್ಮಾಧರ್ಮ—ಗಳ ವಿಚಾರದಲ್ಲಿ ಇಂತಹ ವಾದ ಅನ್ವಯಿಸುವುದಿಲ್ಲ; ಏಕೆಂದರೆ ಇಲ್ಲಿ ಸ್ವತಸ್ಸಿದ್ಧವಾದ ಸಾರ್ವತ್ರಿಕವಾದ, ಸರ್ವಜನಪರಿಗ್ರಾಹ್ಯವಾದ ಶೀಲಾಚಾರದ ಕಟ್ಟೊಂದಿದೆ; ಇದೇ ಪ್ರತಿಯೊಂದು ಸಮಾಜವೂ ತನ್ನ ಸುಸ್ಥಿತಿಗೆಂದು ಏರ್ಪಡಿಸಿಕೊಂಡಿರುವ ನೈತಿಕ—ಧಾರ್ಮಿಕ—ರಾಜಕೀಯ ಸಂಸ್ಥೆಗಳು. ಇವುಗಳನ್ನನುಸರಿಸಿಯೇ ಪ್ರತಿಒಬ್ಬ ವ್ಯಕ್ತಿಯೂ ತನ್ನ ಐಹಿಕ ಸುಖಜೀವನವನ್ನು ಗಳಿಸಿಕೊಳ್ಳಬೇಕು. ಈ ಸಮಾಜ ಸಂಪ್ರದಾಯ ಒಂದೊಂದು ಸಮಾಜದಲ್ಲಿ, ಒಂದೊಂದು ಕಾಲದಲ್ಲಿ, ಒಂದೊಂದು ರೀತಿಯಲ್ಲಿರಬಹುದು: ನೂತನ ಸನ್ನಿವೇಶಗಳಿಗನುಸಾರವಾಗಿ ನೂತನ ರೀತಿಯಲ್ಲಿ ಪರಿಷ್ಕಾರ ಹೊಂದಬಹುದು. ಆದರೆ ಆಯಾಯಾ ಸಮಾಜದ ವ್ಯಕ್ತಿಗಳಿಗೆ ತಮ್ಮ ತಮ್ಮ ಕಾಲದ ಸಂಪ್ರದಾಯವನ್ನು ಸರ್ವಸಮ್ಮತವಾಗಿ ನಡಸಿಕೊಂಡುಬರುವುದೇ ಕರ್ತವ್ಯ.

ಪ್ಲೇಟೋ ಪ್ರೊಟಾಗೊರಾಸನ ವಿಷಯದಲ್ಲಿ ಬಹು ಗೌರವ ಪೂಜ್ಯಭಾವಗಳನ್ನಿಟ್ಟುಕೊಂಡು ಮಾತನಾಡುತ್ತಾನೆ. ಜ್ಞಾನಮಾರ್ಗದಲ್ಲಿ ವೈಶಿಷ್ಟ್ಯ ಸಿದ್ಧಾಂತವನ್ನು (Relativity) ಹೇಳಿದರೆ, ಧರ್ಮ ಜೀವನದಲ್ಲಿಯೂ ಕೂಡ ಅದೇ ಸೂತ್ರವನ್ನು ನಾವು ಅನುಸರಿಸಬೇಕಾಗುತ್ತದೆ, ಇಲ್ಲದಿದ್ದರೆ ಜ್ಞಾನಕ್ಕೂ ಶೀಲಕ್ಕೂ ಸಂಬಂಧವಿಲ್ಲದಂತಾಗಿ ಜೀವನ ಅಸಂಬದ್ಧವಾಗಿ ಪರಿಣಮಿಸುತ್ತದೆ. ಇದೇ ಪ್ರೊಟಾಗೊರಾಸನ ಮೇಲೆ

ಪ್ಲೇಟೊ ತರುವ ದೂರು. ಸಚ್ಛೀಲಕ್ಕೆ ಸಮ್ಯಗ್‌ಜ್ಞಾನದ ಆಧಾರ ಅವಶ್ಯಕವೆಂದು ತೋರಿಕೊಡುವುದೇ ಸಾಕ್ರಟೀಸನ ಮತ್ತು ಪ್ಲೇಟೋವಿನ ಮುಖ್ಯ ಆಶಯವಾಯಿತು.

ಈ ಜಗಳದ ಮುಂದಿನ ಕತೆಯನ್ನು ವಿವರಿಸಲು ಇಲ್ಲಿ ಪ್ರಮೇಯವಿಲ್ಲ. ಸಂಪ್ರದಾಯವನ್ನಾದರಿಸದ ಪ್ರೊಟಾಗೊರಾಸಿನ ಸಿದ್ಧಾಂತ ಸಿರಿನೇಯಿಕ್ ಮತಸ್ಥಾಪಕನಾದ ಅರಿಸ್ಟಪಸ್ ಎಂಬವನ ಮೇಲೆ ತೀವ್ರ ಪರಿಣಾಮವನ್ನು ಉಂಟುಮಾಡಿತು: ಈ ಮತದವರು ಸ್ವಭಾವವೇ ಇಲ್ಲವೆಂದೆಣಿಸಿ ವೈಯಕ್ತಿಕ ಭಾವ ವಿಭಾವಗಳೇ, ತಾತ್ಕಾಲಿಕ ಇಂದ್ರಿಯಾನುಭೋಗವೇ, ನಮ್ಮ ಗುರಿಯೆಂದು ವಾದಿಸಿದರು. ಸ್ವಭಾವಕ್ಕೆ ಬೆಂಬಲವಿತ್ತ ಹಿಪ್ಪಿಯಸ್ಸಿನ ಬೋಧನೆ ಸುಖಸಂವೇದನೆಗಳನ್ನು ಕಿತ್ತೊಗೆದ ಸಿನಿಕ್ ಮತ್ತು ಸ್ಟೋಯಿಕ್ ಮತಗಳಿಗೆ ಹಾದಿ ಮಾಡಿಕೊಟ್ಟಿತು. ಸಾಕ್ರಟೀಸ್, ಪ್ಲೇಟೊ, ಅರಿಸ್ಟಾಟಲ್—ಇವರು ಸ್ವಭಾವಕ್ಕೂ ಸಂಪ್ರದಾಯಕ್ಕೂ ಮಧ್ಯಸ್ಥವಾದ ಮಾರ್ಗವನ್ನು ಒತ್ತಿಹೇಳಿದರು. ಆದರೂ ಯೂರೋಪಿನಲ್ಲಿ ಮಧ್ಯಯುಗ (Medieval Age) ಆದ ಮೇಲೆ ಈ ಜಗಳ ಪುನರುಜ್ಜೀವಿತವಾಗಿ ಜ್ಯೋತಿಷಶಾಸ್ತ್ರವೂ (Astrology) ಅದೃಷ್ಟವಾದವೂ (fatalism) ಸ್ವಭಾವವನ್ನೂ, ರಸಸಿದ್ಧಿಯೂ (philosopher's stone) ಜೀವಾಮೃತವೂ (elixir of life) ಸಂಪ್ರದಾಯವನ್ನೂ (ಪುರುಷಪ್ರಯತ್ನ) ಪುಷ್ಟೀಕರಿಸಿದುವು. ಹಿಪ್ಪಿಯಸ್ಸಿನ "ಸ್ವಾಭಾವಿಕ ಧರ್ಮಶಾಸ್ತ್ರ" ರೋಮನರ ಆಳ್ವಿಕೆಯಲ್ಲಿ ಸಮಸ್ತ ಜನಾಂಗಗಳ ಸಾಧಾರಣ ಧರ್ಮವಾಯಿತೆಂದು ಹಿಂದೆಯೇ ತಿಳಿಸಿದೆ. ಮಾನವರೆಲ್ಲರೂ ಸ್ವಭಾವತಃ ಸರಿಸಮಾನರು ಮತ್ತು ಸರಿಸಮಾನವಾದ ಹಕ್ಕುಬಾಧ್ಯತೆಗಳುಳ್ಳವರು, ಎಂಬುದೇ ಈ ಧರ್ಮದ ತಿರುಳು. ಈ ಸಿದ್ಧಾಂತ ಆಂಗ್ಲೇಯ ತಾತ್ವಿಕನಾದ ಜಾರ್ಜ್ ಲಾಕ್ ಎಂಬವನಿಂದ ಮಾನಿಸಲ್ಪಟ್ಟು 1688ರಲ್ಲಿ ಇಂಗ್ಲೆಂಡಿನಲ್ಲಿ ನಡೆದ "ರಕ್ತಸ್ರಾವವಿಲ್ಲದ ರಾಜ್ಯಕ್ರಾಂತಿ"ಗೂ, (bloodless revolution) ತನ್ಮುಖೇನ ಫ್ರಾನ್ಸಿನಲ್ಲಿ ನಡೆದ ರೂಸ್ಸೋವಿನಿಂದ ಪ್ರೇರಿತವಾದ ಪ್ರಸಿದ್ಧವಾದ "ಫ್ರಾನ್ಸಿನ ರಾಜ್ಯಕ್ರಾಂತಿ"ಗೂ, (the French Revolution) ಕೊನೆಯಲ್ಲಿ ಇವೆರಡರ ಸಂಸ್ಕಾರವನ್ನೂ

ಪಿತ್ರಾರ್ಜಿತವಾಗಿ ಪಡೆದ, ಅಮೇರಿಕದ ಸ್ವರಾಜ್ಯವನ್ನು ಸ್ಥಾಪಿಸಿದ, "ಅಮೇರಿಕದ ಸ್ವಾತಂತ್ರ್ಯಸಂಗ್ರಾಮ"ಕ್ಕೂ,(the American War of Independence) ಕಾರಣಭೂತವಾಯಿತು.

ಪ್ಲೇಟೋ ಮತ್ತು ಅರಿಸ್ಟಾಟಲ್ ಎಂಬವರ ಖಂಡನೆಯಿಂದಲೂ ಮತ್ತು ಕಡೆಯಲ್ಲಿ ಬಂದ ಕೆಲವು ಸೋಫಿಸ್ಟರ ಶೂನ್ಯವಾದ–ವೈಪರೀತ್ಯ–ಗಳಿಂದಲೂ ಜ್ಞಾನಪ್ರಪಂಚದಲ್ಲಿ ಸೋಫಿಸ್ಟರ ನಿಜವಾದ ಸ್ಥಾನ ಬಹುಕಾಲ ಗೋಚರವಿಲ್ಲದಂತಿತ್ತು. ಆದರೆ ಹೇಗೆಲ್ ಮತ್ತು ಗ್ರೋಟ್ ಎಂಬ ಪಂಡಿತೋತ್ತಮರು ದೋಷೈಕದೃಕ್ಕುಗಳಾಗದೆ ಸೋಫಿಸ್ಟರ ಗುಣಪ್ರಶಂಸೆ ಮಾಡಿದಂದಿನಿಂದ ಅವರ ಬೋಧನೆಯ ಶಾಶ್ವತವಾದ ಗೌರವವೂ ನಿಜಾಂಶವೂ ಎಲ್ಲರಿಗೂ ವ್ಯಕ್ತವಾಗಿದೆ. ಸೋಫಿಸ್ಟರ ಮತದಲ್ಲಿ ಗುಣದೋಷಗಳೆರಡೂ ಕಲೆತಿದ್ದುವು. ತತ್ವಶಾಸ್ತ್ರ, ಮತ, ನೀತಿ, ರಾಜ್ಯಕಾರ್ಯನಿರ್ವಾಹ — ಮಾನವಪ್ರಯತ್ನದ ಸಮಸ್ತ ಪ್ರಾಂತಗಳಲ್ಲಿಯೂ — ನಿಷ್ಕರ್ಷೆಯಾದ ಭಾವಗಳನ್ನು ಪಡೆಯಬೇಕಾದರೆ, ವಿಚಾರಪರತೆಯೂ ಗುಣದೋಷಗಳನ್ನು ವಿಮರ್ಶೆ ಮಾಡಬೇಕೆನ್ನುವ ಆಕಾಂಕ್ಷೆಯೂ ಅತ್ಯವಶ್ಯಕ. ಸಕಲ ವಿಚಾರಗಳಲ್ಲಿಯೂ ಮಾನವ ವಿವೇಚನಾಶಕ್ತಿಯನ್ನು—ಪರಾಮರ್ಶಸ್ವಭಾವವನ್ನು– ಕೋರಿದ್ದೇನೋ ಸ್ತುತ್ಯಾರ್ಹವಾದ ವಿಷಯವೇ; ಆದರೆ ಸೋಫಿಸ್ಟರು ಆ ವಿವೇಚನಾಶಕ್ತಿಯನ್ನು ಸಿದ್ಧಾಂತಖಂಡನೆಗೆ ಉಪಯೋಗಪಡಿಸಿದರಲ್ಲದೆ ತತ್ವಮಂಡನೆಗೆ ಅನುಕೂಲಿಸುವಂತೆ ಪ್ರಯೋಗಪಡಿಸಲಿಲ್ಲವೆಂಬುದು ಶೋಚನೀಯವಾದ ವಿಷಯವಾಗಿದೆ. ಪಂಡಿತೋತ್ತಮರಲ್ಲಿಯೂ, ಅಪೂರ್ವ ವಿದ್ಯಾಶಾಲೆಗಳಲ್ಲಿಯೂ ಅಡಗಿಕೊಂಡಿದ್ದ ತತ್ವಶಾಸ್ತ್ರವನ್ನು ಸರ್ವಸಾಮಾನ್ಯವಾಗಿ ಎಲ್ಲರೂ ಅಭ್ಯಾಸಮಾಡುವಂತೆ ಗೈದವರೇ ಚಾರ್ವಾಕಿಗಳು; ಅಲ್ಲದೆ ಬಾಹ್ಯಪ್ರಪಂಚವನ್ನೇ ಅಧಿಷ್ಠಾನವನ್ನಾಗಿಟ್ಟುಕೊಂಡಿದ್ದ ತತ್ವಶಾಸ್ತ್ರವನ್ನು ಮಾನವ ಪ್ರಪಂಚಾವಲೋಕನಕ್ಕೆ ತಿರುಗುವಂತೆ ಮಾಡಿದವರೇ ಚಾರ್ವಾಕಿಗಳು. ಆದರೆ ಮಾನವಜಾತಿಯಲ್ಲಿರುವ ಸಾಮಾನ್ಯ ಧರ್ಮವನ್ನು ಪರಿಗಣಿಸದೆ ಪರಸ್ಪರ ಕಾಣಬಹುದಾದ ವ್ಯತ್ಯಾಸವೈವಿಧ್ಯ

ಗಳನ್ನೇ ಎತ್ತಿಹೇಳುತ್ತಾ, ವ್ಯಕ್ತಿಗಳ ಸಲುವಾಗಿ ಜಾತಿಯನ್ನೇ ಮರೆತು ಬಿಟ್ಟರು. ಈ ಚಾರುವಾಕರು ಮಾನವ ಸಿದ್ಧಾಂತಗಳಲ್ಲಿರುವ ವಿರೋಧ ಗಳನ್ನು ಕಂಡರೇಹೊರತು, ಪ್ರಾಮುಖ್ಯವಾದ ಸರ್ವಸಮ್ಮತಿಯನ್ನು ಕಾಣಲಿಲ್ಲ. ಇಂದ್ರಿಯಗಳ ಮೋಸಮಾಯೆಗಳನ್ನೇ ಪ್ರಧಾನವಾಗಿಟ್ಟು ಕೊಂಡು ಇಂಥ ಇಂದ್ರಿಯಗಳ ಸಹಾಯದಿಂದ ಜ್ಞಾನಾರ್ಜನೆ ಮಾಡು ವುದು ಅಸಾಧ್ಯವೆಂದು ಹೇಳಿದರೇ ವಿನಾ, ಇಂದ್ರಿಯಗಳನ್ನು ಹೇಗೆ ಉಪ ಯೋಗಪಡಿಸಿದರೆ ನಿಜಾಂಶ ಲಭಿಸುವುದೆಂಬುದನ್ನು ತಿಳಿಯಲಸಮರ್ಥ ರಾದರು.

ಆದರೂ ಈ ವಿಧವಾದ ಖಂಡನೆಯಿಂದ ತತ್ತ್ವಶಾಸ್ತ್ರಕ್ಕೆ ಉಪ ಕಾರವೇ ಮಾಡಿದಂತಾಯಿತು. ಜ್ಞಾನವಿಚಾರದಲ್ಲಿ ಪೂರ್ವಿಕರು ಸಾಧಿಸಿದ್ದ ಸಿದ್ಧಾಂತಗಳನ್ನು ವಿಮರ್ಶೆಮಾಡಿ ನೂತನವಾದ ಮತ್ತು ಪ್ರಗಾಢತರವಾದ ತಳಹದಿಗಳನ್ನೇರ್ಪಡಿಸಲು ಅವಕಾಶವುಂಟುಮಾಡಿ ದಂತಾಯಿತು. ಪ್ರಾಚೀನ ತಾತ್ತ್ವಿಕರು ವಿಮರ್ಶೆಯಿಲ್ಲದೆಯೇ ಪ್ರಪಂಚ ಸಮಸ್ಯೆಗಳನ್ನು ಸಾಧಿಸಲು ಮನುಷ್ಯನ ಚಿತ್ತ ಶಕ್ತಿಯುಳ್ಳದ್ದೆಂದು ನಂಬಿದ್ದರು. ಯಾವಭಾಗದಲ್ಲಿಯೂ ನಿಶ್ಚಯ ಜ್ಞಾನ ದುರ್ಲಭ ವೆಂದು ಚಾರ್ವಾಕಿಗಳು ಹೇಳಿದುದರಿಂದ, ಮನುಷ್ಯನ ಚಿತ್ತಶಕ್ತಿಯನ್ನೇ ಶೋಧಿಸಬೇಕಾದ ಪ್ರಮೇಯಬಿದ್ದು, ಹಾಗೂ ಸಾಧುತರವಾದ ಜ್ಞಾನ ಸಿದ್ಧಾಂತಕ್ಕೆ ದಾರಿಮಾಡಿದಂತಾಯಿತು. ವಾದದಲ್ಲಿ ತೆರತೆರನಾದ ತರ್ಕಾಭಾಸಗಳನ್ನೂ ಶ್ಲೇಷೋಕ್ತಿಗಳನ್ನೂ ಪ್ರಯೋಗಿಸಿದುದರಿಂದ ಚಿಂತನಾ ವ್ಯಾಪಾರದ ನಿಜವಾದ ಧರ್ಮಗಳು (Laws of Thought) ಕಂಡುಹಿಡಿಯಲ್ಪಟ್ಟು ಇವುಗಳನ್ನೇ ತಳಹದಿಯನ್ನಾಗಿ ಉಳ್ಳ ತರ್ಕಶಾಸ್ತ್ರ ವೊಂದು ಹುಟ್ಟಲು ಅವಕಾಶವಾಯಿತು.

ನೈತಿಕಜ್ಞಾನ ಮತ್ತು ಶೀಲವಿಚಾರಗಳಲ್ಲಿಯೂ ಇದೇ ರೀತಿಯಾದ ಪರಿಣಾಮವನ್ನು ಕಾಣಬಹುದು. ಸ್ವತಃ ವಿವೇಚನಾಶಕ್ತಿಯಿಲ್ಲದೆ ಹುಟ್ಟು ಕುರುಡರಂತೆ ಪುರಾತನಪದ್ಧತಿಗಳನ್ನನುಸರಿಸದೆ ಪ್ರತಿಒಬ್ಬನೂ ತನ್ನ ಮನೋಧರ್ಮಕ್ಕನುಗುಣವಾಗಿ ಧರ್ಮಾಧರ್ಮವನ್ನು ಕಂಡುಹಿಡಿದು ಅದರಂತೆ ನಡೆಯಬೇಕೆಂದು ಹೇಳಿದುದೇನೋ ಪ್ರಶಂಸನೀಯವಾದ

ವಿಚಾರವೇ; ಆದರೆ ಈ ವಿಧವಾದ ನಡವಳಿಕೆ ಸ್ವೇಚ್ಛಾಪ್ರವರ್ತನೆಯಲ್ಲಿ ಪರಿಣಮಿಸಿದುದಾದರೆ ಆಗ ಹೊಲ್ಲೆನಿಸುವುದು. ಚಿತ್ತ ಸ್ವಾತಂತ್ರ್ಯವೆಂದರೆ ಧರ್ಮನಾಶವಲ್ಲ, ಜ್ಞಾನಶೂನ್ಯತ್ವವೂ ಅಲ್ಲ. ಇಲ್ಲಿಯೂ ಸಹ ಚಾರ್ವಾಕಿಗಳು ಮಾರ್ಗದರ್ಶಿಗಳಾದರೆಂದೇ ಹೇಳಬಹುದು. ಹೇಗೆಂದರೆ ಜನಸಾಮಾನ್ಯದ ಪದ್ಧತಿಗಳನ್ನೂ ನಡವಳಿಕೆಗಳನ್ನೂ ಧರ್ಮಾಧರ್ಮಗಳನ್ನೂ ಇವರು ಖಂಡಿಸಿದುದರಿಂದ ನೀತಿಶಾಸ್ತ್ರವೂ ರಾಜ್ಯ ಸಿದ್ಧಾಂತವೂ ಭದ್ರತರವಾದ ತಳಹದಿಗಳನ್ನು ಹೊಂದಲು ಕಾರಣವಾಯಿತು.

ಒಟ್ಟಿನಲ್ಲಿ ಈ ಸೋಫಿಸ್ಟರ ಮತದಿಂದ ಫಲಿತವಾದ ಪ್ರಯೋಜನವೇನೆಂದರೆ, ಸಂಪ್ರದಾಯಗಳೆಂಬ ಸಂಕೋಲೆಗಳಲ್ಲಿ ಸಿಲುಕಿ ಗಾಢ ನಿದ್ರಾವಸ್ಥೆಯಲ್ಲಿದ್ದ ಜನರ ಚಿತ್ತಪ್ರಪಂಚ ಎಚ್ಚರಗೊಂಡು, ತತ್ತ್ವಶಾಸ್ತ್ರವೂ ಜನರ ನೀತಿ ಮತ್ತು ಮತಧರ್ಮಗಳೂ ಇವುಗಳನ್ನೇ ಆಧಾರವಾಗಿ ಉಳ್ಳ ದೇಶದ ಇತರ ಸಂಸ್ಥೆಗಳೂ, ಕೇವಲ ಪುರಾತನತ್ವದಿಂದಲೇ ಯಾವದೊಂದು ಮಹಿಮಾ ವಿಶೇಷವನ್ನೂ ಪಡೆಯದೆ, ಗುಣದೋಷ ವಿಮರ್ಶೆಗೊಳಪಟ್ಟು ಮಾನವನ ಬುದ್ಧಿಯಂತ್ರದಿಂದ ಪರೀಕ್ಷಿಸಲ್ಪಡಲು ಅವಕಾಶವುಂಟಾಯಿತು. ಸಮಸ್ತವಿಧವಾದ ಜ್ಞಾನ ವ್ಯಾಪಾರದಲ್ಲಿಯೂ, ವ್ಯವಹಾರದಲ್ಲಿಯೂ ಮೂಲತತ್ವಗಳ ಪರಿಶೋಧನೆಯೇ ಮುಖ್ಯವೆನಿಸಿತು. ಜ್ಞಾನವೆಂದರೇನು, ಸತ್ಯ ಯಾವುದು? ಧರ್ಮವೆಂದರೇನು, ಶ್ರೇಯ ಯಾವುದು? ದೇವರೆಂಬ ವಸ್ತುವಿಶೇಷವನ್ನು ಯಾವರೀತಿಯಲ್ಲಿ ಭಾವಿಸಬೇಕು? ರಾಜ್ಯವೆಂದರೇನು; ರಾಜ್ಯಭಾರದ ಮತ್ತು ದೇಶದಲ್ಲಿರುವ ಇತರ ವಿಧವಾದ ಸಂಸ್ಥೆಗಳ ಮೂಲೋದ್ದೇಶವೇನು? ಈ ವಿಧವಾದ ಸಮಸ್ಯೆಗಳ ಪರ್ಯಾಲೋಚನೆ ಕಟ್ಟಕಡೆಯಲ್ಲಿ ಗ್ರೀಕ್ ತತ್ವಶಾಸ್ತ್ರದ ಮೂಲಪ್ರಶ್ನೆಯನ್ನೇ ಮುಂದೆ ತಂದಿಡಲು ದಾರಿ ಮಾಡಿತು: ಈ ವಿಶ್ವವೆಂಬುದೇನು, ಅದರಲ್ಲಿ ಮಾನವನ ಸ್ಥಾನ ಯಾವುದು?

## ಅಧ್ಯಾಯ ೮.

## ಸಾಕ್ರಟೀಸ್ (೧)

ಕ್ರಿ. ಪೂ. ೫ ನೆಯ ಶತಮಾನದ ಅಂತ್ಯಭಾಗದಲ್ಲಿ ಗ್ರೀಸ್‌ದೇಶ ಯಾವ ವಿಧವಾದ ಪರ್ಯವಸ್ಥೆಯನ್ನು ಹೊಂದಿತ್ತು ಎಂಬುದನ್ನು ನಾವು ಹಿಂದಿನ ಪ್ರಕರಣದಲ್ಲಿ ವರ್ಣಿಸಿದ್ದೇವಷ್ಟೆ. ಆ ಕಾಲದಲ್ಲಿ ಕಂಡುಬಂದ ಅವ್ಯವಸ್ಥೆಗಳನ್ನು, ಅನಾಯುಕತ್ವವನ್ನು, ಧಾರ್ಮಿಕ ಮತ್ತು ಜ್ಞಾನ ಪ್ರಪಂಚಗಳ ಶೂನ್ಯವಾದವನ್ನು, ಸರಿಪಡಿಸಿ ಜನರಿಗೆ ನವೀನವಾದ ಮತ್ತು ನ್ಯಾಯುವಾದ ಮಾರ್ಗವೊಂದನ್ನು ತೋರಿಕೊಡಲು ಒಬ್ಬ ಸಾಹಸ ಪುರುಷನು ಅವಶ್ಯಕವೆನಿಸಿದನು. ಇವನೇ ಸಾಕ್ರಟೀಸ್ ಎಂಬ ಮಹಾನುಭಾವನು. ಈತನ ಮನೋಭಾವಗಳೂ, ಧ್ಯೇಯುಗಳೂ, ಪಾಶ್ಚಾತ್ಯರ ನಾಗರಿಕತೆಗೆ ಬೀಜಾಂಕುರಗಳಾಗಿ ಇದುವರೆಗೂ ಅಂದರೆ ಸುಮಾರು ಮೂರುಸಾವಿರ ವರುಷಗಳವರೆಗೂ ತಮ್ಮ ಸಂಸ್ಕಾರವನ್ನು ಬಿಡದೆ ಬೀರುತ್ತಲೇ ಇವೆ.

ಇವನು ಕ್ರಿ. ಪೂ. ೪೬೯ನೆಯ ವರ್ಷದಲ್ಲಿ ಅಥೇನ್ಸ್ ನಗರದಲ್ಲಿ ಬಡ ತಾಯಿತಂದೆಗಳ ಮಗನಾಗಿ ಹುಟ್ಟಿದನು. ಇವನ ತಾಯಿ ಸೂಲ ಗಿತ್ತಿ, ತಂದೆ ಶಿಲ್ಪಿ. ಯಾವ ವಿಧದಲ್ಲಿ ಈತನು ವಿದ್ಯಾಭ್ಯಾಸ ಪಡೆದನೋ ನಮಗೆ ತಿಳಿಯದು, ಆದರೆ ಪಂಡಿತೋತ್ತಮರಿಂದ ಕೂಡಿದ ಆ ಪಟ್ಟಣದಲ್ಲಿ ಜ್ಞಾನದಾಹದಿಂದ ತಪಿಸುತಲಿದ್ದ ಈತನಿಗೆ ಒಳ್ಳೆಯ ಜ್ಞಾನ ಜಲವೇ ದೊರೆತಿರಬೇಕು. ಇವನು ಪ್ರಾರಂಭದಲ್ಲಿ ತಂದೆಯ ವೃತ್ತಿ ಯನ್ನು ಅವಲಂಬಿಸಿ, ಕೊಂಚ ಕಾಲದಲ್ಲಿಯೇ "ಇತರರನ್ನು ಪ್ರಶ್ನೆ ಮಾಡುತ್ತಾ ತನ್ನ ತಿಳಿವಳಿಕೆಯನ್ನು ತೂಕ ಮಾಡಿಕೊಳ್ಳಬೇಕು" ಎಂಬ ದೈವಾಶಯ ಹೃದಯದಲ್ಲಿ ಸ್ಫೂರ್ತಿಗೊಳ್ಳುತ್ತಲೇ ತನ್ನ ಕಸಬನ್ನು ತ್ಯಜಿಸಿ ಇಷ್ಟ ಸಂಸಿದ್ಧಿಗೆ ಹೊರಟನು. ರಾಜವೀಥಿಗಳಲ್ಲಿ, ಪೇಟೆ ಬಜಾರುಗಳಲ್ಲಿ, ವ್ಯಾಯಾಮಶಾಲೆಗಳಲ್ಲಿ — ಎಲ್ಲೆಲ್ಲಿ ನೋಡಿದರೂ ಗಂಡಸರು, ಹೆಂಗಸರು; ಧನಿಕರು, ದರಿದ್ರರು; ಜ್ಞಾನಿಗಳು, ಸಾಮಾ ನ್ಯರು—ಎಲ್ಲ ಜಾತಿಯ ಜನರೊಡನೆಯೂ ತರ್ಕವಿತರ್ಕಮಾಡುತ್ತಾ, ಪ್ರಶ್ನೆ ಹಾಕುತ್ತಾ, ಉತ್ತರ ಪ್ರತ್ಯುತ್ತರವೀಯುತ್ತಾ ಹೊರಟನು. ನೀತಿ,

ಧರ್ಮ, ಮತ, ವಿದ್ಯೆ ; ಕಲಾಕೌಶಲ್ಯ, ವಾಣಿಜ್ಯ, ವಿಧವಿಧವಾದ ಕಸಬುಗಳು ; ರಾಜ್ಯ ವಿಚಾರಗಳು ; ವಿಜ್ಞಾನ, ಕಾವ್ಯ, ಚರಿತ್ರೆ ; ಸ್ನೇಹ, ಮಮತೆ, ಪ್ರಾಮಾಣಿಕತೆ ; ಸಾಮಾಜಿಕ ಸಂಸ್ಥೆಗಳು, ಜನಜೀವನದ ಸಮಸ್ತ ವಿಧವಾದ ಐಹಿಕಾಮುಷ್ಮಿಕ ಆಶಯಗಳು — ಇವುಗಳೆಲ್ಲಾ ಈತನ ಚರ್ಚಾಂಶಗಳಾದುವು. ಶೀಲವಿಚಾರಗಳಂತೂ ಬಹುಮಟ್ಟಿಗೆ ಅವಧರಿಸಲ್ಪಟ್ಟವು. ಈತನು ಬಹು ತೀಕ್ಷ್ಣಬುದ್ಧಿಯುಳ್ಳವನೂ ಮೇಧಾವಿಯೂ ಆಗಿದ್ದು, ಚರ್ಚಾಂಶವನ್ನು ಸಿಗಿದು ವಿಚ್ಛೇದಮಾಡಿ ಅದರ ತಿರುಳನ್ನು ಹೊರಗೆಡಹುವವರೆಗೂ ವಾದವನ್ನು ಬಿಡುತ್ತಿರಲಿಲ್ಲ. ಸಾಧುಹೃದಯನೂ ನಮ್ರಶೀಲನೂ ಆಗಿದ್ದರೂ ಕುತರ್ಕಿಗಳಾದ ಸೋಫಿಸ್ಟರ ತರ್ಕಾಭಾಸಗಳನ್ನೂ ಅಲ್ಪಬುದ್ಧಿಯನ್ನೂ ಬಹಿರಂಗಪಡಿಸಿದ ಹೊರತು ಸುಮ್ಮನಾಗುತ್ತಿರಲಿಲ್ಲ.

ತಾನು ಬೋಧಿಸಿದ ಸೌಜನ್ಯ ಸೌಹಾರ್ದಾದಿ ಸುಗುಣಗಳನ್ನೆಲ್ಲಾ ಸಾಕ್ರಟೀಸನು ತನ್ನ ಸ್ವಂತ ಜೀವಮಾನದಲ್ಲಿಯೇ ಅನುಷ್ಠಿಸಿ ಸರ್ವರಿಗೂ ವೇದ್ಯವಾಗುವಂತೆ ಉದಹರಿಸಿದನು. ಈತನ ಘನತೆ, ಮನೋದಾರ್ಢ್ಯ, ಮನೋವೈಶಾಲ್ಯ, ಇಂದ್ರಿಯನಿಗ್ರಹ, ಕಷ್ಟಸಹಿಷ್ಣುತೆ, ಉದಾರಬುದ್ಧಿಗಳನ್ನು ಇದುವರೆಗೂ ಮೀರಿಸಿದವರೇ ಇಲ್ಲವೆಂದು ಹೇಳಬಹುದು. ಈತನು ಬದುಕಿದ ಎಪ್ಪತ್ತು ವರುಷದ ಜೀವಮಾನದಲ್ಲಿ ರಾಜ್ಯಕಾರ್ಯಗಳಲ್ಲಿಯೂ, ಯುದ್ಧರಂಗದಲ್ಲಿಯೂ, ಸ್ವಂತವ್ಯವಹಾರಗಳಲ್ಲಿಯೂ, ತನ್ನ ಮಾನಸಿಕ ಮತ್ತು ಶಾರೀರಿಕ ಧೈರ್ಯಸ್ಥೈರ್ಯಗಳನ್ನು ಸಂಪೂರ್ಣವಾಗಿ ವ್ಯಕ್ತಗೊಳಿಸಿದನು. ಆ ಕಾಲದಲ್ಲಿ ಈತನು ತೋರ್ಪಡಿಸಿದ ಆತ್ಮಗೌರವವೂ, ಬುದ್ಧಿಸ್ಥೈರ್ಯವೂ, ನಿಶ್ಚಲವರ್ತನೆಯೂ, ನಿರ್ಭಯವಾದ ನ್ಯಾಯಪಕ್ಷಪಾತವೂ ; ಯಾರ ವಿಷಯದಲ್ಲಿಯೂ ದ್ವೇಷ ತೋರಲಾಗದ ಉದಾರ—ನಿರ್ಮಲ—ಮನಸ್ಸೂ ; ಪ್ರಾಣಿ ಸಮಸ್ತಕ್ಕೂ ಮಂಗಳವಾಗಬೇಕೆಂಬ ತೀಕ್ಷ್ಣವಾದ ಆಕಾಂಕ್ಷೆಯೂ, ಸಮಸ್ತ ಲೋಕವನ್ನೂ ಬೆರಗುಗೊಳಿಸಿದುವು. ಮತ್ತು ತನ್ನ ಜೀವಮಾನದಲ್ಲಿ ಎಷ್ಟು ಸುಗುಣಿಯಾಗಿ ಬದುಕಿದನೋ ಅಂತ್ಯಕಾಲದಲ್ಲಿಯೂ ಅಷ್ಟು ಸುಂದರವಾದ ರೀತಿಯಲ್ಲಿಯೇ ಮರಣ ಹೊಂದಿದನು. ತನ್ನ ಸ್ವದೇಶೀಯರೇ ಈತನು

ನಾಸ್ತಿಕನೆಂದೂ ಯುವಕರನ್ನು ದುರ್ಮಾರ್ಗಕ್ಕೆಳೆದವನೆಂದೂ ದೋಷಾರೋಪಣೆ ಮಾಡಿ ತಪ್ಪಿತಸ್ಥನೆಂದು ನಿಶ್ಚೈಸಿ ವಿಷವನ್ನು ಕುಡಿಸಿದರು. ಕಾರಾಗೃಹದಲ್ಲಿರುವಾಗ ತಪ್ಪಿಸಿಕೊಂಡು ಹೋಗುವುದು ಸಾಧ್ಯವೆಂದೂ ಹಾಗೆ ಮಾಡುವುದು ಕ್ಷೇಮಕರವೆಂದೂ ಸ್ನೇಹಿತರು ಉಪದೇಶ ಮಾಡಿದಾಗ್ಯೂ, ಸಾಕ್ರಟೀಸನು ಅದಕ್ಕೊಪ್ಪದೆ, ತಾನು ಬದುಕಿರುವವರೆಗೂ ದೇಶದ ಕಾನೂನುಗಳಿಂದ ರಕ್ಷಣೆ ಹೊಂದುತ್ತಿದ್ದುದರಿಂದ ಈಗ ಸಾಯುವ ಕಾಲದಲ್ಲಿ ಆ ಕಾಯಿದೆಗಳಿಗೆ ಅಗೌರವ ತರಲಾರೆನೆಂದು ಹೇಳಿ ಹಸನ್ಮುಖಿಯಾಗಿ ಎಲ್ಲರನ್ನೂ ವಂದಿಸುತ್ತ, ಯಾರೊಬ್ಬರಲ್ಲಿಯೂ ದ್ವೇಷಬುದ್ಧಿಯನ್ನಿಡದೆ, ಉಭಯ ಸೈನ್ಯಗಳೂ ಯುದ್ಧಕ್ಕೆ ಸನ್ನದ್ಧವಾಗಿರುವಾಗ ಶ್ರೀ ಕೃಷ್ಣಪರಮಾತ್ಮನು ಅರ್ಜುನನಿಗೆ ಅಧ್ಯಾತ್ಮ ವಿದ್ಯೆಯನ್ನು ಬೋಧಿಸಿದಹಾಗೆ, ಮರಣ ಸನ್ನಿಹಿತವಾಗಿದ್ದಾಗಲೂ ಕೂಡ ತನ್ನ ಸ್ನೇಹಿತರಿಗೆ ಪಾರಲೌಕಿಕ ಜ್ಞಾನವನ್ನು ಉಪದೇಶ ಮಾಡುತ್ತ, ಪ್ರಾಣ ಬಿಟ್ಟನು. ಇದರಿಂದ ರಾಜ್ಯದ ಅಧಿಕಾರಿಗಳಿಗೆ ಸನ್ಮಾನ ತೋರಿಸಬೇಕೆಂದೂ, ದೇಶದ ಕಾನೂನುಗಳಿಗೆ ಗೌರವ ಕೊಡಬೇಕೆಂದೂ, ಒಟ್ಟನಲ್ಲಿ, ದೇಶಭಕ್ತಿಯನ್ನು ಆಚರಣೆಯಲ್ಲಿಡಬೇಕೆಂದೂ, ತನ್ನ ಜೀವಿತಕಾಲದಲ್ಲಿ ಉಪದೇಶಿಸುತ್ತಿದ್ದಂತೆಯೇ ಮರಣ ಕಾಲದಲ್ಲಿಯೂ ಘಂಟಾಘೋಷವಾಗಿ ಬೋಧಿಸಿದನು. ಈತನ ಗುಣ ಕಥನವನ್ನು ಈತನ ಸ್ನೇಹಿತನಾದ ಕ್ಸೆನೊಫೊನ್ ಎಂಬವನು ಈ ರೀತಿ ಮಾಡಿರುವನು.

## ಸಾಕ್ರಟೀಸಿನ ಪ್ರಶಂಸೆ

### (ಕ್ಸೆನೊಫನ್ನನು ಮಾಡಿರುವುದು)

ಸಾಕ್ರಟೀಸನು ಯುವಕರನ್ನು ದುರ್ಮಾರ್ಗಕ್ಕೆಳೆದನೆಂಬುದನ್ನು ಯಾರೇ ಆಗಲಿ ಕೇಳಿ ನಂಬಿದರೆಂದರೆ ನನಗೆ ಆಶ್ಚರ್ಯವೆನಿಸುತ್ತದೆ.... ........ತನ್ನ ಕಾಮದಾಹಗಳನ್ನು, ರಾಗಭಾವಗಳನ್ನು, ಯಾವನಾದರೂ ಅತ್ಯಂತ ಕಠಿಣವಾದ ರೀತಿಯಲ್ಲಿ ಜಯಿಸಿ ವಶಪಡಿಸಿಕೊಂಡಿದ್ದನೆಂದರೆ ಅವನು ಸಾಕ್ರಟೀಸನು; ಬಿಸಿಲು, ಚಳಿ, ಮಳೆ, ಗಾಳಿ ಮತ್ತು ಎಲ್ಲಾ

ತರದ ಕಷ್ಟ ಕೆಲಸ—ಇವುಗಳನ್ನು ಸುಖವಾಗಿ ಸಹಿಸಿಕೊಂಡಿರಲು ಯಾರಿಗಾದರೂ ವಿಶೇಷ ಶಕ್ತಿಯಿತ್ತೆಂದರೆ ಅದು ಸಾಕ್ರಟೀಸನಿಗೆ; ಮತ್ತು ಮತಾಚಾರದಲ್ಲಿ ಕಾಲದಿಂದಲೂ ಮೆದುಗಿ, ಎಷ್ಟು ಸ್ವಲ್ಪವನ್ನು ಹೊಂದಿದ್ದರೂ ಅದನ್ನೇ ಸಾಕಾದಷ್ಟುಮಾಡಿಕೊಳ್ಳಬಲ್ಲ ಜಾಣತನ ಯಾರಿಗಾದರೂ ಇತ್ತೆಂದರೆ, ಅದು ಸಾಕ್ರಟೀಸನಿಗೆ. ತಾನೇ ಇಂತಹ ಶೀಲವಂತನಾಗಿರುವಲ್ಲಿ, ಹೇಗೆತಾನೇ ಅವನು ಇತರರನ್ನು ದುರುಳರನ್ನಾಗಿಯಾಗಲಿ, ಪುಂಡರನ್ನಾಗಿಯಾಗಲಿ, ವಿಲಾಸಪ್ರಿಯರನ್ನಾಗಿಯಾಗಲಿ, ಸಂಯಮರಹಿತರನ್ನಾಗಿಯಾಗಲಿ, ಅಥವಾ ಕಷ್ಟವನ್ನು ಸಹಿಸಲಾರದಂತಹ ಹೆಣ್ಣಿಗರನ್ನಾಗಿಯಾಗಲಿ, ಮಾಡಬಲ್ಲವನಾಗಿದ್ದನು? ಯಥಾರ್ಥವನ್ನು ನುಡಿಯಬೇಕೆಂದರೆ ಆತನು ಅನೇಕರನ್ನು ಇಂತಹ ದುರ್ಗುಣಗಳಿಂದ ಬಿಡಿಸಿ, ಸದ್ಗುಣವನ್ನು ಪ್ರೀತಿಸುವಂತೆ ಮಾಡಿದನು, ತಮ್ಮಿಷ್ಟಕ್ಕೆ ತಾವು ಜಾಗರೂಕತೆಯಿಂದ ನಡೆದುಕೊಂಡರೆ, ಯೋಗ್ಯರಾದ, ಮಾನಿತರಾದ ಪುರುಷರಾಗುವರೆಂದು ಅವರಿಗೆ ಹುರಿದುಂಬಿಸುತ್ತಿದ್ದನು. ಸೌಶೀಲ್ಯ ಸೌಜನ್ಯಾದಿಗಳನ್ನು ಇತರರಿಗೆ ಕಲಿಸಿಕೊಡುತ್ತೇನೆಂದು ಅವನು ಎಂದಾದರೂ ಹೇಳಿಕೊಂಡನೆಂದಲ್ಲ—ಆದರೆ, ತನ್ನ ಜೀವನದಲ್ಲಿಯೇ ಅವನು ಇಂತಹ ಸತ್ಪುರುಷನಾಗಿದ್ದುದರಿಂದ, ಅವನ ಜೊತೆಯಲ್ಲಿದ್ದವರು ಯಾರಾದರೂ ಅವನನ್ನು ಅನುಕರಿಸಿದ್ದರೆ, ಅವನಂತೆಯೇ ತಾವೂ ಆಗಬಹುದಾಗಿತ್ತೆಂಬ ನಂಬಿಕೆಯನ್ನು ಅವರಲ್ಲಿ ಹುಟ್ಟಿಸಿದನು.

ತನ್ನ ದೇಹದ ವಿಚಾರದಲ್ಲಿ ಅವನು ಉದಾಸೀನನಾಗಿರಲಿಲ್ಲ, ಮತ್ತು ಹಾಗಿದ್ದವರನ್ನು ಕಂಡು ಮೆಚ್ಚಲೂ ಇಲ್ಲ. ಆಕಂಠಪೂರ್ತಿಯಾಗಿ ತಿಂದು ತೇಗಿ ಆಮೇಲೆ ಅದನ್ನು ಅರಗಿಸಿಕೊಳ್ಳಲು ಅತ್ಯಧಿಕವಾದ ವ್ಯಾಯಾಮವನ್ನು ಮಾಡುವುದೆಂದರೆ ಅವನಿಗೆ ಸರಿಬೀಳುತ್ತಿರಲಿಲ್ಲ. ಹಸಿವನ್ನು ಹೋಗಲಾಡಿಸಲು ಆನಂದದಿಂದ ಎಷ್ಟು ಊಟ ಮಾಡಬಹುದೋ ಅಷ್ಟು ಸೇವನೆಗೈದು ತದನಂತರ ಕ್ರಮವಾಗಿ ದೇಹಕ್ಕನುಗುಣವಾದ ಕೆಲಸಕಾರ್ಯಗಳಿಂದ ಅದನ್ನು ದಕ್ಕಿಸಿಕೊಳ್ಳಬೇಕೆಂದು ಹೇಳುತ್ತಿದ್ದನು. ಇಂತಹ ಪದ್ಧತಿ ಬಹುಸುಲಭವಾಗಿ ಆರೋಗ್ಯವನ್ನು ಕೊಡುವುದಲ್ಲದೆ ಮನೋವ್ಯಾಪಾರಗಳಿಗೂ ಅಡಚಣೆಯನ್ನು

ತರುವುದಿಲ್ಲವೆಂದು ಅವನ ನಂಬಿಕೆ. ತನ್ನ ಉಡುಪುಗಳಲ್ಲಾಗಲಿ ಪಾದುಕೆಗಳಲ್ಲಾಗಲಿ,ಅಥವಾ ಜೀವನದ ಯಾವವಿಧವಾದ ನಡವಳಿಕೆಗಳಲ್ಲಾಗಲಿ ಅವನು ಸೊಗಸು ಠೀವಿಗಳಿಗೆ ಹೋಗುತ್ತಿರಲಿಲ್ಲ. ಅಂದಮಾತ್ರಕ್ಕೆ ತನ್ನ ಸುತ್ತುಮುತ್ತಲಿದ್ದವರನ್ನು ದುಡ್ಡು ವೆಚ್ಚಮಾಡದ ಧನಪಿಶಾಚಿಗಳನ್ನಾಗಿ ಮಾಡುತ್ತಿದ್ದನೆಂದಲ್ಲ — ಇತರ ಏಷಣಗಳನ್ನು ಹೇಗೋ ಹಾಗೆಯೇ ಈ ವಿತ್ತೇಷಣವನ್ನೂ ಜಯಿಸಬೇಕೆಂದು ಅವರಿಗೆ ಹೇಳುತ್ತಿದ್ದನು. ತನ್ನ ಜೊತೆಯಲ್ಲಿರುವುದಕ್ಕೋಸ್ಕರ ಇತರರಿಂದ ಅವನು ಧನವನ್ನು ಪ್ರತಿಫಲವನ್ನಾಗಿ ಆಶಿಸುತ್ತಿರಲಿಲ್ಲ. ಇಂತಹ ಅಪರಿಗ್ರಹ ಮಾರ್ಗವನ್ನು ಅನುಸರಿಸಿದುದರಿಂದ ತನ್ನ ಸ್ವಾತಂತ್ರ್ಯವನ್ನುಳಿಸಿಕೊಂಡಹಾಗಾಯಿತೆಂದು ಹೇಳುತ್ತಿದ್ದನು : ತಮ್ಮ ಪಾಠಪ್ರವಚನಗಳಿಗೆ ಸಂಬಳಗಳನ್ನು ತೆಗೆದುಕೊಂಡವರು ಶಿಷ್ಯರಿಗೆ ಪಾಠವನ್ನು ಹೇಳಲೇಬೇಕೆಂಬ ನಿರ್ಬಂಧಕ್ಕೆ ಸಿಲುಕಿದವರಾದುದರಿಂದ ಇಂತಹವರು ತಮಗೆ ತಾವೇ ಗುಲಾಮರಾದರೆನ್ನುವುದಕ್ಕೆ ಏನಡ್ಡಿ........ ?

ಇಂತಹ ಗುಣಶಾಲಿಯಾದ ಪುರುಷನು ಯುವಕರನ್ನು ಹೇಗೆತಾನೆ ಕೆಡಿಸಬಲ್ಲನು? ಸದ್ಗುಣದ ಜಿಜ್ಞಾಸೆಯೇ ಅಥವಾ ಅಭ್ಯಾಸವೇ ಕೇಡಿಗೆಳೆಯುವ ಮಾರ್ಗವೆಂದೂಹಿಸೋಣವೇ ?

* * * *

ಧರ್ಮದ ವಿಚಾರದಲ್ಲಿಯೂ ಕೂಡ ಆತನು ತನ್ನ ಅಭಿಪ್ರಾಯಗಳನ್ನು ಮುಚ್ಚುಮರೆ ಮಾಡುತ್ತಿರಲಿಲ್ಲ, ತನ್ನ ಸ್ವಂತ ಆಚರಣೆಯಿಂದಲೇ ಅವುಗಳನ್ನು ದ್ಯೋತಕಗೊಳಿಸುತ್ತಿದ್ದನು. ಹೇಗೆಂದರೆ, ತನ್ನ ಸ್ವಕೀಯ ವ್ಯವಹಾರಗಳಲ್ಲಿ ಆತನು ಎಲ್ಲರೊಡನೆಯೂ ನ್ಯಾಯವಾಗಿಯೂ ಉಪಕಾರ ರೀತಿಯಲ್ಲಿಯೂ ವರ್ತಿಸುತ್ತಿದ್ದನಲ್ಲದೆ, ಪುರನಿವಾಸಿ ಎಂದೆನಿಸಿಕೊಂಡದ್ದಕ್ಕೆ, ನಗರದಲ್ಲಿಯೂ ಸಂಗ್ರಾಮ ಯಾತ್ರೆಗಳಲ್ಲಿಯೂ, ದೇಶದ ಶಾಸನಗಳಿಗನುಸಾರವಾದ ಆಳುವರಸರ ಅಪ್ಪಣೆಗಳನ್ನೆಲ್ಲಾ ಶಿರಸಾವಹಿಸಿ ನಡಸುತ್ತಿದ್ದನು. ಈ ವಿಷಯದಲ್ಲಂತೂ—ಅಂದರೆ ನಿಯಮ ಪರಿಪಾಲನೆಯಲ್ಲಿ—ಇತರರೆಲ್ಲರನ್ನೂ ಆತನು ಮೀರಿಸಿದ್ದನು. ಅಥೆನ್ಸಿನ ಸಾರ್ವಜನಿಕ

ಸಭೆಯ ಅಧ್ಯಕ್ಷನಾಗಿದ್ದಾಗ ಒಂದು ಸಂದರ್ಭದಲ್ಲಿ ಕಾನೂನಿಗೆ ವಿರೋಧ ವಾಗಿ ಜನರು ಮತವನ್ನು ಕೊಡಲು ಬಯಸಿದರೂ, ಕಾನೂನುಗಳ ರಕ್ಷಣೆ ಗೋಸ್ಕರ, ಜನರ ಆಕ್ರೋಶವೆಂಬ ಚಂಡಮಾರುತನು ತನ್ನ ಮೇಲೆ ಬೀಸಿ ದರೂ ಕೂಡ ಭೀತನಾಗದೆ, ಅವರನ್ನು ನಿರೋಧಿಸಿ ಹಾಗೆ ಓಟನ್ನು ಕೊಡಲು ಅನುಮತಿ ಕೊಡಲಿಲ್ಲ. ಇನ್ನು ಯಾರಾಗಿದ್ದರೂ ಜನರ ಆ ಕೋಪವನ್ನು ಎದುರಿಸಲಾಗುತ್ತಿರಲಿಲ್ಲ. ಅಥೆನ್ಸಿನಲ್ಲಿ ದಬ್ಬಾಳಿಕೆಯನ್ನು ನಡಸಿದ ಮುವ್ವತ್ತು ಜನ ಘಾತುಕರು ಕಾನೂನಿಗೆ ವಿರೋಧವಾಗಿ ತನ್ನನ್ನು ಏನು ಮಾಡೆಂದರೂ ಅವನು ಅದನ್ನು ನಿರಾಕರಿಸುತ್ತಿದ್ದನು. ಒಂದು ಸಂದರ್ಭದಲ್ಲಿ ಅವರು ಅವನನ್ನು ಯುವಕರ ಸಂಗಡ ಸಂಭಾಷಣೆ ನಡಸಬೇಡವೆಂದು ಕಟ್ಟಾಜ್ಞೆ ಮಾಡಿದರು; ಮತ್ತೊಂದು ಸಂದರ್ಭದಲ್ಲಿ ಒಬ್ಬಾನೊಬ್ಬ ಪುರುಷನನ್ನು ಮರಣಕ್ಕೊಯ್ಯುವಂತೆ ಅವರು ಇವನಿಗೂ ಇನ್ನೂ ಕೆಲವು ಪುರನಿವಾಸಿಗಳಿಗೂ ಅಪ್ಪಣೆ ಇತ್ತರು. ಎರಡು ಸಂದರ್ಭ ಗಳಲ್ಲಿಯೂ ಕೂಡ ಅವರಾಜ್ಞೆ ಕಾನೂನಿಗೆ ವಿರೋಧವಾಗಿದ್ದರೂ ಅದನ್ನು ಉಲ್ಲಂಘಿಸಿದವನು ಸಾಕ್ರಟೀಸನೊಬ್ಬನೇ. ನ್ಯಾಯಸ್ಥಾನ ದಲ್ಲಿ ಯಾರ ಮೇಲಾದರೂ ತಪ್ಪು ಆಪಾದನೆ ಮಾಡಲ್ಪಟ್ಟರೆ, ಅವರು ನ್ಯಾಯಾಧೀಶರ ಒಲುಮೆಯನ್ನು ಪಡೆಯುವಂತೆ ಮಾತನಾಡಿ, ಅವ ರನ್ನು ಮುಖಸ್ತುತಿ ಮಾಡಿ, ಅವರ ಕಾಲು ಹಿಡಿದು ಬೇಡಿಕೊಳ್ಳುವ ಪದ್ಧತಿ ಇತ್ತು; ಮತ್ತು ಕಾನೂನಿಗೆ ವಿರೋಧವಾದ ಈ ತೆರನಾದ ವರ್ತನೆಯಿಂದ ಅನೇಕರು ನ್ಯಾಯಾಧೀಶರಿಂದ ತಪ್ಪಿತಸ್ಥರಲ್ಲವೆಂದು ಬಿಡುಗಡೆ ಮಾಡಲ್ಪಟ್ಟಿದ್ದರು. ಸಾಕ್ರಟೀಸನಾದರೋ, ತನ್ನ ಮೇಲೆ ಮೆಲಿಟಸನು ತಪ್ಪು ಹೊರಿಸಿದಾಗ, ಕಾಯಿದೆಗೆ ವಿರೋಧವಾದ ಇಂತಹ ಯಾವ ವರ್ತನೆಯನ್ನಾಗಲಿ ಅನುಸರಿಸಲು ಒಪ್ಪಲಿಲ್ಲ; ಆ ರೀತಿ ಯಲ್ಲಿ ಸ್ವಲ್ಪ ಪ್ರಯತ್ನಪಟ್ಟಿದ್ದರೆ ಆತನು ನ್ಯಾಯಾಧೀಶರಿಂದ ಸುಲಭ ವಾಗಿ ಬಿಡುಗಡೆ ಹೊಂದಬಹುದಾಗಿದ್ದರೂ, ಶಾಸನಗಳನ್ನತಿಕ್ರಮಿಸಿ, ಸ್ವಗೌರವವನ್ನು ಹೋಗಲಾಡಿಸಿಕೊಂಡು, ತನ್ನ ಪ್ರಾಣವನ್ನು ಉಳಿಸಿ ಕೊಳ್ಳುವುದಕ್ಕಿಂತಲೂ, ಸಾಯುವುದೇ ಲೇಸೆಂದು ಆತನು ತೀರ್ಮಾನಿ ಸಿದನು.

ಆದ್ದರಿಂದ, ಇಂಥ ಗುಣಶಾಲಿಯಾದ ಸಾಕ್ರಟೀಸನು ಮರಣಕ್ಕಲ್ಲ, ನಮ್ಮ ಗೌರವಕ್ಕೆ ಪಾತ್ರನಾದವನೆಂದು ನನಗೆ ತೋರಿತು; ಆತನ ವಿಚಾರವನ್ನು ಯಾರು ಕಾನೂನಿಗನುಸಾರವಾಗಿ ಪರಿಶೀಲಿಸಿದ್ದರೂ ಇದೇ ವಾಸ್ತವವೆಂದು ತಿಳಿಯಬಹುದಾಗಿತ್ತು. ಕಾನೂನಿನ ಪ್ರಕಾರ, ಕಳ್ಳತನವನ್ನು ಮಾಡುವವರಿಗೆ, ಜನರ ಮೈಮೇಲಿನ ಬಟ್ಟೆಬರೆಗಳನ್ನು ಕಳಚಿಹಾಕುವವರಿಗೆ, ಅವರ ಹಣದ ಚೀಲವನ್ನು ಕತ್ತರಿಸುವವರಿಗೆ, ಕನ್ನಹಾಕಿ ಮನೆಯೊಳಗೆ ನುಗ್ಗುವವರಿಗೆ, ಮನುಷ್ಯರನ್ನು ಅಪಹರಿಸಿ ಕೊಂಡು ಹೋಗುವವರಿಗೆ, ಗುಡಿಯ ಸುಲಿಗೆ ಅಥವಾ ದೈವದ್ರೋಹ ಮಾಡುವವರಿಗೆ, ಮರಣದಂಡನೆಯನ್ನು ವಿಧಿಸಬೇಕೆಂದಿದೆ–ಸಾಕ್ರಟೀಸ ನಾದರೋ ಇಂತಹ ದುಷ್ಕೃತ್ಯಗಳನ್ನು ಕನಸಿನಲ್ಲಿ ಕೂಡ ಕಂಡ ಪ್ರಾಣಿ ಯಲ್ಲ. ಅಥವಾ ರಾಜ್ಯಕ್ಕೆ ದುರ್ದಶೆಯನ್ನು ತರುವ ಯಾವ ಯುದ್ಧ ಕ್ಕಾದರೂ ಕಾರಣನಾಗಿದ್ದನೆ, ರಾಜದ್ರೋಹಿಯಾಗಿದ್ದನೆ, ವಿಶ್ವಾಸ ಘಾತುಕನಾಗಿದ್ದನೆ, ಎಂದರೆ, ಅದೂ ಕೂಡ ಇಲ್ಲ. ಇಲ್ಲವೆ, ತನ್ನ ಸ್ವಕೀಯ ವ್ಯವಹಾರಗಳಲ್ಲಿ ಆತನೆಂದಾದರೂ ಯಾರಿಗಾದರೂ ಹಿತವಾಗುತ್ತಿದ್ದು ದನ್ನು ತಪ್ಪಿಸಿದನೇ, ಅವರನ್ನು ಕೇಡಿಗೆ ಸಿಕ್ಕಿಸಿದನೆ, ಕೊನೆಗೆ ನಾನು ಹೇಳಿರುವ ಅಪರಾಧಗಳ ಸಂದೇಹವಾದರೂ ಅವನ ಮೇಲೆ ಎಂದಾ ದರೂ ಬಿದ್ದಿತ್ತೇ, ಎಂದರೆ ಅದು ಮೊದಲೇ ಇಲ್ಲ.

ಇಂತಹವನನ್ನು ಯಾವ ರೀತಿಯಲ್ಲಿ ಅವನಮೇಲೆ ಹೊರಿಸಿದ ಆಪಾದನೆಗಳ ವಿಚಾರವಾಗಿ ತಪ್ಪಿತಸ್ಥನೆಂದು ಹೇಳಲಾಗುವುದು? ಅವನು ದೇವತೆಗಳಲ್ಲಿ ನಂಬಿಕೆ ಇಡಲಿಲ್ಲವೆಂದು ಹೇಳಿದರು— ದೇವತೆಗಳ ವಿಚಾರದಲ್ಲಿ ಅವನಷ್ಟು ಪೂಜ್ಯಭಾವವನ್ನು ಹೊಂದಿದ್ದವರು ಯಾರೂ ಇರಲಿಲ್ಲ; ಯುವಕರನ್ನು ದುರ್ಮಾರ್ಗಕ್ಕೆ ಳಿದನೆಂದು ದೂರಿದರು— ತನ್ನ ಸಂಗಡಿಗರಲ್ಲಿ ದುಷ್ಟವಾಸನೆಗಳನ್ನು ಹೊಂದಿದ್ದವರನ್ನು ಅವುಗಳಿ ಗನುಸಾರವಾಗಿ ಅವರು ನಡೆಯದಂತೆ ನೋಡಿಕೊಂಡು ಅಂತಹ ಕೆಟ್ಟ ಚಾಳಿಯಿಂದ ಅವರನ್ನು ಪಾರಾಗಿಸಿದವನು ಅವನೇ; ಇಷ್ಟೇ ಅಲ್ಲದೆ,

ಯಾವ ಉತ್ಕೃಷ್ಟ ಸೌಶೀಲ್ಯದಿಂದ ಜನರು ರಾಜ್ಯಭಾರವನ್ನೂ ತಮ್ಮ ಮನೆಯಾಡಳಿತವನ್ನೂ ಸಮೀಚೀನವಾದ ಮತ್ತು ಸಾರ್ಥಕವಾದ ರೀತಿಯಲ್ಲಿ ನಡಸಲು ಶಕ್ತರಾಗುವರೋ ಅಂತಹ ಘನವಾದ ಸದ್ಗುಣದ ಹವಣಿಕೆಯನ್ನು ಅವರಲ್ಲಿ ಹುಟ್ಟಿಸಿದವನು ಅವನೇ. ಇಂತಹ ನಡೆವಳಿಯನ್ನು ಹೊಂದಿದ್ದ ಆ ಮಹಾನುಭಾವನು ಹೇಗೆ, ಯಾವರೀತಿಯಲ್ಲಿ, ಪಟ್ಟಣಿಗರಿಂದ ವಿಶೇಷಗೌರವಕ್ಕೂ ಸನ್ಮಾನಕ್ಕೂ ಅರ್ಹನಾಗದೆ ಹೋದನು?

ಸೋಫಿಸ್ಟರು ಯಾವವಿಧವಾದ ಸಿದ್ಧಾಂತಜ್ಞಾನವೂ ದೊರಕುವುದು ಸಾಧ್ಯವಿಲ್ಲವೆಂದು ಸಾಧಿಸಿದ್ದರಷ್ಟೆ. ಹಾಗೆಂದು ಹೇಳಿದಮೇಲೆ ಧರ್ಮಾಚರಣೆಗೂ, ರಾಜ್ಯ ಮತ್ತು ಸಾಮಾಜಿಕ ಸಂಸ್ಥೆಗಳಿಗೂ ತಿಲೋದಕವನ್ನು ಬಿಟ್ಟಂತಾಯಿತು. ಈ ವಿಧವಾದ ಬೋಧನೆಯನ್ನು ಖಂಡಿಸಿ, ಸರಿಯಾದ ಪ್ರಯತ್ನದಿಂದ ಸಿದ್ಧಾಂತಜ್ಞಾನವನ್ನು ಪಡೆಯಬಹುದೆಂಬುದನ್ನು ತೋರಿಸಿಕೊಟ್ಟು, ಆ ಮೂಲಕ ಜನರು ಸನ್ಮಾರ್ಗಪ್ರವರ್ತಕರೂ, ಸತ್ಸಂಕಲ್ಪವುಳ್ಳವರೂ ಆಗುವಂತೆ ಮಾಡಬೇಕೆಂಬುದೇ ಸಾಕ್ರಟೀಸನ ಅಭೀಷ್ಟ. ತನ್ನಕಾಲದಲ್ಲಿ ಹರಡಿದ್ದ ಅವ್ಯವಸ್ಥೆ ಅನಾಯಕತ್ವಗಳಿಗೆಲ್ಲಾ ಸತ್ಯಜ್ಞಾನದ ವಿಚಾರದಲ್ಲಿ ಸೋಫಿಸ್ಟರು ಹೊಂದಿದ್ದ ತಪ್ಪುತಿಳಿವಳಿಕೆಯೇ ಮೂಲಕಾರಣವಾದುದರಿಂದ ಸಮ್ಯಗ್ ಜ್ಞಾನಸಿದ್ಧಾಂತವೇ ಮೇಲ್ಕಂಡ ಸಾಮಾಜಿಕ ರೋಗಕ್ಕೆ ಪರಮೌಷಧಿಯೆಂದು ಸಾಕ್ರಟೀಸನು ನಂಬಿದ್ದನು. ಮಾನವನ ಜ್ಞಾನಶಕ್ತಿ (reason, understanding) ಸತ್ಯ ಸಂಶೋಧನೆಗೆ ದಾರಿಮಾಡಬಲ್ಲುದೆಂದು ಸಾಕ್ರಟೀಸನು ನಂಬಿದ್ದನು. ಯಥಾರ್ಥಜ್ಞಾನವನ್ನು ಯಾವ ರೀತಿಯಲ್ಲಿ ಪಡೆಯಬಹುದು, ಎಂಬುದನ್ನು ಜನಸಾಮಾನ್ಯಕ್ಕೆ ಮನಗಾಣಿಸಿ, ಅದರಂತೆ ಸರ್ವರೂ ನಡೆದು, ಯಾವ ವಿಷಯವನ್ನೇ ಆಗಲಿ ಸರಿಯಾದ ರೀತಿಯಲ್ಲಿ ಪರ್ಯಾಲೋಚನೆಮಾಡಿ, ಸದ್ವರ್ತನವುಳ್ಳವರಂತೆ ಜನರನ್ನು ತಿದ್ದಬೇಕೆಂಬುದೇ ಈತನ ಹವಣಿಕೆಯಾಗಿತ್ತು.

ಸತ್ಯಾಂಶವನ್ನು ನಾವು ತಿಳಿಯಬೇಕಾದರೆ ನಾವು ಪರಮುಖದಿಂದ ಕೇಳಬಹುದಾದ ಮತ್ತು ನಮ್ಮ ಚಿತ್ತರಂಗದಲ್ಲಿ ತಲೆದೋರುವ ಆಕಸ್ಮಿಕ

ಅಭಿಪ್ರಾಯ ಆಲೋಚನೆಗಳೆಲ್ಲವನ್ನೂ ನಿಜವೆಂದು ನಂಬಕೂಡದು. ನಾವು ವಿಮರ್ಶೆಮಾಡದ ಎಷ್ಟೋ ಅಭಿಪ್ರಾಯಗಳನ್ನು ನಮ್ಮ ಚಿತ್ತಪ್ರಪಂಚದಲ್ಲಿ ತುಂಬಿಕೊಂಡಿರುತ್ತೇವೆ; ನಿಜಾಂಶವನ್ನು ಕಂಡು ಹಿಡಿಯದೆ ಎಷ್ಟೋಬಗೆಯಾದ ದುರ್ನಿರ್ಣಯಗಳನ್ನೂ ದುರಾಗ್ರಹ ಗಳನ್ನೂ ಹೊಂದಿರುತ್ತೇವೆ; ಕಾರ್ಯಕಾರಣಗಳ ವಿಚಾರಣೆ ಮಾಡದೆ ನಾನಾ ವಿಧದಲ್ಲಿ ನಮ್ಮ ಮತಪಕ್ಷವಾಗಿ ಖಂಡಿತವಾಗಿ ಮಾತನಾಡು ತ್ತೇವೆ. ಈ ರೀತಿಯಾದ ವರ್ತನೆಯಿಂದ ಸತ್ಯಾಂಶ ಎಂದಿಗೂ ಹೊರಪಡಲಾರದು. ಅದುಕಾರಣ ಪ್ರಥಮದಲ್ಲಿ ನಾವು ಮಸುಕಿಲ್ಲದ, ಮಂಜಿಲ್ಲದ, ಸ್ಪಷ್ಟವಾದ ಭಾವನೆಗಳನ್ನು ಹೊಂದಿದವರಾಗಿರಬೇಕು; ನಾವು ಪ್ರಯೋಗ ಮಾಡುವ ಶಬ್ದಗಳ ನಿಜವಾದ ಅರ್ಥವನ್ನು ಅರಿತವ ರಾಗಿ, ಗೊತ್ತುಗುರಿಯಿಲ್ಲದೆ, ಅರ್ಥವಾಗದಿರುವ ಶಬ್ದಗಳನ್ನೂ ಪ್ರಯೋಗ ಗಳನ್ನೂ ಉಪಯೋಗಿಸುವುದನ್ನು ಬಿಟ್ಟುಬಿಡಬೇಕು; ಮುಖ್ಯವಾಗಿ ನಾವು ಯಾವುದನ್ನು ಕುರಿತು ಯೋಚಿಸುತ್ತೇವೆ, ಯಾವ ವಿಷಯದ ಬಗ್ಗೆ ಮಾತನಾಡುತ್ತೇವೆ, ಎಂಬುದನ್ನು ನಮಗೆ ನಾವೇ ಸ್ಪಷ್ಟಪಡಿಸಿ ಕೊಳ್ಳಬೇಕು. ಅಲ್ಲದೆ ನಾವು ಪಡೆದಿರುವ ಪ್ರತಿಯೊಂದು ಅಭಿಪ್ರಾಯಕ್ಕೂ ಸರಿಯಾದ ಕಾರಣಗಳನ್ನು ತೋರಿಕೊಡಬಲ್ಲವರಾಗಿರಬೇಕು; ಊಹಾ ಪೋಹಗಳನ್ನು ತ್ಯಜಿಸಿ, ವಿಷಯಚಿಂತನೆಮಾಡಿ, ನಮ್ಮ ಸಿದ್ಧಾಂತಗಳನ್ನು ವಸ್ತುಸ್ಥಿತಿಗಳಿಂದ ಪರೀಕ್ಷಿಸಿ, ವಸ್ತುಸ್ಥಿತಿಗೂ ಸಿದ್ಧಾಂತಕ್ಕೂ ವ್ಯತ್ಯಾಸ ಬಂದಲ್ಲಿ ನಮ್ಮ ಅಭಿಪ್ರಾಯಗಳನ್ನು ತದನುಗುಣವಾಗಿ ಸರಿಪಡಿಸಿ ಕೊಳ್ಳುವ ಮನೋವೈಶಾಲ್ಯವುಳ್ಳವರಾಗಬೇಕು.

ಸತ್ಯಜ್ಞಾನವೆಂಬುದಿಲ್ಲವೆಂದೂ ಒಂದುವೇಳೆ ಇದ್ದರೂ ಅದನ್ನು ನಾವು ಅರಿಯಲಾರೆವೆಂದೂ ಸೋಫಿಸ್ಟರು ಹೇಳಿದ್ದರಷ್ಟೆ. ಯಾವ ವಿಷಯದಲ್ಲಿಯೂ ಸರ್ವಸಮ್ಮತವಾದ ಅಭಿಪ್ರಾಯ ಯಾವುದೂ ಇಲ್ಲ; ಒಬ್ಬನ ಮತ ಮತ್ತೊಬ್ಬನ ಮತಕ್ಕೆ ವಿರೋಧವಾಗಿರುವುದೇ ವಿನಾ ಎರಡೂ ಒಂದಾಗಿರುವುದು ಅಪೂರ್ವ. ಇದು ನಿಜ. ಆದರೆ ಇಷ್ಟು ಮಾತ್ರಕ್ಕೆ ಯಥಾರ್ಥಜ್ಞಾನವೇ ಇಲ್ಲವೆಂಬುದು ಅಸಂಗತ. ಲೋಕ ವೆಲ್ಲವೂ ಭಿನ್ನಾಭಿಪ್ರಾಯವುಳ್ಳುದಾದರೂ ಈ ವೈವಿಧ್ಯದಲ್ಲಿಯೇ ಒಂದು

ಬಗೆಯಾದ ಏಕಮತ ಇಲ್ಲದೇ ಇಲ್ಲ. ಮತಭಾವಗಳೇನೋ ನಾನಾ ರೂಪವನ್ನು ಹೊಂದಿರುವುವೆಂಬುದು ಸರಿಯೆ, ಆದರೆ ಈ ಭೇದದಲ್ಲೆಲ್ಲಾ ಸರ್ವಸಮ್ಮತವಾದ ಅಂಶಗಳು ಇಲ್ಲವೇ ಇಲ್ಲವೆ; ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಳ್ಳುವ, ನಿಜವೆನ್ನುವ, ಎಲ್ಲರ ಅನುಭವದಲ್ಲಿಯೂ ಪ್ರಸಿದ್ಧವಾದ ವಿಷಯ—ಭಾವ—ಗಳೊಂದೂ ಇಲ್ಲವೆ, ಎಂಬುದನ್ನು ನಾವು ಪರೀಕ್ಷಿಸಿ ನಿರ್ಧರಿಸಬೇಕು. ಇಂತಹ ಸರ್ವಸಾಮಾನ್ಯವಾದ, ಸರ್ವಸಮ್ಮತವಾದ ಪ್ರಮೇಯಗಳನ್ನು (judgements) ಕಂಡುಹಿಡಿದು ಅವುಗಳ ಮುಖಾಂತರ ಜ್ಞಾನವೃದ್ಧಿಯನ್ನೈದುವುದು ಸಾಧ್ಯವೆಂದು ತೋರಿಕೊಡುವುದೇ ಸಾಕ್ರಟೀಸನ ಕರ್ತವ್ಯವಾಯಿತು.

ಈತನ ವಾದವಿಧಾನ ಬಹು ಯುಕ್ತಿಯುತವೂ ಸ್ವಾರಸ್ಯಭರಿತವೂ ಆದುದು. ಚರ್ಚೆ ಮಾಡಬೇಕೆಂದಿರುವ ವಿಷಯಗಳ ರಹಸ್ಯಗಳೆಲ್ಲವನ್ನೂ ಅನೇಕವೇಳೆ ಮೊದಲೇ ತಾನರಿತಿದ್ದರೂ, ತಾನೊಂದೂ ತಿಳಿಯದವನಂತೆ ನಟಿಸಿ, ಎದುರಾಳಿಗಳನ್ನು ತನಗೆ ತಿಳುಹಿಕೊಡಬೇಕೆಂದು ಪ್ರಾರ್ಥಿಸಿ ಪ್ರಶ್ನೆಮಾಡಲುಪಕ್ರಮಿಸಿ ಅವರು ಕೊಡುವ ಉತ್ತರಗಳಲ್ಲಿರಬಹುದಾದ ಹುಳುಕುಗಳನ್ನು ಒಂದೊಂದಾಗಿ ಆರಿಸಿ, ಪುನಃ ಅವುಗಳ ಮೇಲೆ ಪ್ರಶ್ನೆ ಮಾಡುತ್ತಾ, ಮೊದಲು ಅವರಿತ್ತ ಉತ್ತರಕ್ಕೂ, ಎರಡನೆಯ ಉತ್ತರಕ್ಕೂ ಇರಬಹುದಾದ ಅಸಮಂಜಸತೆಯನ್ನು ತೋರಿಕೊಡುತ್ತಾ, ಈ ರೀತಿಯಲ್ಲಿ ತಮ್ಮ ಅಸಂಬದ್ಧಪ್ರಲಾಪಗಳನ್ನು ಕಂಡು ಎದುರಾಳಿಗಳು ತಾವೇ ತಲೆಬಾಗುವಂತೆ ಮಾಡಿ, ಈ ಮಧ್ಯೆ ತನ್ನ ಭಾವವನ್ನು ಸೂಕ್ಷ್ಮಸೂಕ್ಷ್ಮವಾಗಿ ಸೂಚಿಸುತ್ತಾ, ಕಡೆಯಲ್ಲಿ ತನ್ನ ಅಭಿಪ್ರಾಯ ಹೇಗೆ ಸಕಲ ವಿಧವಾದ ನ್ಯೂನಾತಿರೇಕಗಳನ್ನೂ ದಾಟಬಲ್ಲುದೆಂದು ಸಾಧಿಸಿ ವ್ಯಕ್ತಗೊಳಿಸುವನು. ಸಾಧಾರಣವಾಗಿ ಜನಸಾಮಾನ್ಯ ನಿಜವೆಂದು ನಂಬಿರುವ, ವಿಮರ್ಶೆಮಾಡಲ್ಪಡದಿರುವ, ಮುಸುಕುಳ್ಳ ಭಾವಗಳನ್ನು ಆರಂಭದಲ್ಲಿ ಆಯ್ದುಕೊಂಡು, ಅದರ ಯಥಾರ್ಥವನ್ನು ತಿಳಿಯಪಡಿಸುವ ಸಲುವಾಗಿ ಜನಜೀವನದಲ್ಲಿ ದೊರಕಬಹುದಾದ ಸಾಮಾನ್ಯ ಉದಾಹರಣೆಗಳನ್ನೇ ಕೊಟ್ಟು, ನ್ಯಾಯವೆಂದೆಣಿಸಲ್ಪಟ್ಟಿರುವ ಆ ಭಾವ ಅನೇಕ ಸಂದರ್ಭಗಳಲ್ಲಿ ಹೇಗೆ ವಿರೋಧಾರ್ಥವುಳ್ಳುದಾಗಿ

ಪರಿಣಮಿಸುತ್ತದೆ, ಎಂಬುದನ್ನು ಸ್ಪಷ್ಟಪಡಿಸಿ, ಈ ಕಾರಣದಿಂದ ಆ ಭಾವವನ್ನು ಯಾವ ರೀತಿಯಲ್ಲಿ ತಿದ್ದಿಕೊಳ್ಳಬೇಕೆಂಬುದನ್ನು ಸೂಚಿಸಿ, ಕಡೆಯಲ್ಲಿ ಯಥಾರ್ಥಾಂಶ ಹೊರಬೀಳುವವರೆಗೂ ಸಾಕ್ರಟೀಸನು ಚರ್ಚೆಯನ್ನು ಬಿಡುತ್ತಿರಲಿಲ್ಲ. ವಿಷಯ ಸಂಪೂರ್ಣವಾಗಿ ವಿಮರ್ಶೆ ಹೊಂದಿ, ಅದರ ಸಾಧುತ್ವಾಸಾಧುತ್ವಗಳೆಲ್ಲಾ ನೆರೆದಿರುವವರಿಗೆ ಪರಿಷ್ಕಾರವಾಗಿ ಗೋಚರವಾದ ಹೊರತು ಸುಮ್ಮನಾಗುತ್ತಿರಲಿಲ್ಲ. ಒಂದು ಉದಾಹರಣೆಯಿಂದ ಸಾಕ್ರಟೀಸನ ವಾದವಿಧಾನವನ್ನು ಸ್ಪಷ್ಟಪಡಿಸಬಹುದು. ಎಪಿಡಾರಸ್ಸಿನ ಅಯಾನ್ ಎಂಬ ಭಟ್ಟಂಗಿ ಸಾಕ್ರಟೀಸನ ಬಳಿಗೆ ಬಂದು ತಾನು ಭಟ್ಟವಿದ್ಯೆಯಲ್ಲಿ ಬಹು ಪ್ರವೀಣನೆಂದೂ ತನ್ನ ದೇಶದಲ್ಲಿ ನಡೆದ ಸ್ಪರ್ಧೆಗಳಲ್ಲೆಲ್ಲಾ ತಾನು ಮೊದಲನೆಯ ಬಹುಮಾನವನ್ನು ಪಡೆದಿರುವೆನೆಂದೂ ಹೋಮರಿನ ಇತಿಹಾಸಗಳಲ್ಲಿ ತನಗೆ ಬಹು ಪರಿಶ್ರಮವಿರುವುದೆಂದೂ ಜಂಭ ಕೊಚ್ಚಿಕೊಳ್ಳುವನು. ಹೋಮರಿನ ಕಾವ್ಯಗಳನ್ನು ಕಥನಮಾಡುವುದೊಂದೇ ಅಲ್ಲ, ಅವುಗಳ ಗುಣಾತಿಶಯಗಳನ್ನು ಜನರಿಗೆ ಬಿಚ್ಚಿ ಹೇಳುವುದರಲ್ಲಿಯೂ ಲಾಂಪ್ಸಾಕಸ್ಸಿನ ಮೆಟ್ರೊಡೋರಸ್, ಥೇಸಾನಿನ ಸ್ಟೆಸಿಂಬ್ರೋಟಸ್, ಗ್ಲಾರ್ಕ—ಮತ್ತೆ ಯಾರೂ ತನ್ನಷ್ಟು ಶ್ಲಾಘನೀಯವಾದ ರೀತಿಯಲ್ಲಿ ಮಾಡಲಾರರೆಂದು ಹೇಳುವನು.

ಸಾಕ್ರಟೀಸ್— ನಿನ್ನ ಮಾತನ್ನು ಕೇಳಿ ನನಗೆ ಬಹಳ ಸಂತೋಷವಾಗುತ್ತದೆ, ಅಯಾನ್. ಹೋಮರಿನ ಗುಣಾತಿಶಯಗಳನ್ನು ನನಗೂ ತಿಳಿಯಪಡಿಸಬೇಕೆಂದು ನಿನಗೆ ಆಸೆಯೆಂದು ಕಾಣುತ್ತದೆ?

ಅಯಾನ್—ನಿಜವಾಗಿಯೂ, ಸಾಕ್ರಟೀಸ್; ಎಷ್ಟು ಮನೋಹರವಾಗಿ ಹೋಮರನನ್ನು ಕುರಿತು ನಾನು ಮಾತಾಡಬಲ್ಲೆ ಎಂಬುದನ್ನು ನೀನು ಕೇಳಬೇಕಾದ್ದು. ಹೋಮರ್ ಕವಿ ಪ್ರಿಯರು ನನಗೆ ಒಂದು ಚಿನ್ನದ ಕಿರೀಟವನ್ನು ಕೊಟ್ಟರೂ ಏನೂ ಅತಿಶಯವಿಲ್ಲ.

ಸಾ—ಇನ್ನೊಂದು ಸಮಯ ಆಗಲಿ, ಅಯಾನ್. ಈಗ ನಿನ್ನನ್ನು ಒಂದು ಪ್ರಶ್ನೆ ಕೇಳಬೇಕೆಂದಿದ್ದೇನೆ: ಹೋಮರಿನಲ್ಲಿ ಮಾತ್ರ ನಿನಗೆ ಇಂಥ ಪರಿಶ್ರಮವಿದೆಯೋ, ಇಲ್ಲವೆ, ಹೆಸಿಯಡ್ ಮತ್ತು ಆರ್ಕಿಲೋಕಸ್—ಇವರನ್ನೂ ಬಲ್ಲೆಯೋ?

ಅ—ಹೋಮರಿನಲ್ಲಿ ಮಾತ್ರ; ಅವನೇ ಬೇಕುಬೇಕಾದಷ್ಟು ಆಯ್ತು............

ಸಾ—ಹೆಸಿಯಡ್ ಅಥವಾ ಇತರ ಕವಿಗಳನ್ನು ಬಿಟ್ಟು ಹೋಮರಿನಲ್ಲಿ ಮಾತ್ರ ಇಂತಹ ಚಾತುರ್ಯವನ್ನು ಹೇಗೆ ಸಂಪಾದಿಸಿದೆ? ಇತರ ಕವಿಗಳೆಲ್ಲರೂ ಹೇಳುವ ವಿಚಾರಗಳನ್ನು ಕುರಿತೇ ಅಲ್ಲವೆ ಹೋಮರನೂ ಹೇಳುವುದು?........

ಅ—ಹೌದು, ಸಾಕ್ರಟೀಸ್, ಆದರೆ ಹೋಮರನು ಹೇಳುವ ರೀತಿಯಲ್ಲಿ ಅವರು ಹೇಳುವುದಿಲ್ಲ.

ಸಾ—ಏನು, ಹಾಗಾದರೆ ಬಹು ನಿಕೃಷ್ಟವಾದ ರೀತಿಯಲ್ಲಿ ಹೇಳುವರೆ?

ಅ—ಹೌದು, ಬಹು ನಿಕೃಷ್ಟವಾದ ರೀತಿಯಲ್ಲಿ.

ಸಾ—ಹೋಮರನು ಶ್ರೇಷ್ಠವಾದ ರೀತಿಯಲ್ಲೊ?

ಅ—ಅಸಮಾನವಾದ ಶ್ರೇಷ್ಠ ರೀತಿಯಲ್ಲಿ.

ಸಾ—ಒಳ್ಳೆಯದು, ನನ್ನ ಪ್ರಿಯ ಅಯಾ್ನ್; ಗಣಿತವನ್ನು ಕುರಿತು ಅನೇಕರು ಚರ್ಚೆ ಮಾಡುತ್ತಿರುವಾಗ ಒಬ್ಬನು ಉಳಿದವರಿಗೆಲ್ಲರಿಗಿಂತಲೂ ನಿಪುಣನೆನಿಸುವ ರೀತಿಯಲ್ಲಿ ಮಾತನಾಡುತ್ತಾನೆನ್ನು; ಅವರಲ್ಲಿ ಯಾರು ಬುದ್ಧಿವಂತನೆಂದು ನಿರ್ಧರಿಸಬಲ್ಲ ಶಕ್ತನೊಬ್ಬನಿದ್ದೇ ಇರುವನಲ್ಲವೆ?

ಅ—ಹೌದು.

ಸಾ—ಬುದ್ಧಿವಂತನಿಂಥವನೆಂದು ಹೇಳಬಲ್ಲವನೇ ಇಂಥವರು ದಡ್ಡರೆಂದೂ ಹೇಳತಕ್ಕವನಲ್ಲವೇ?

ಅ—ಹೌದು.

ಸಾ—ಅವನು ಗಣಿತಜ್ಞನು?

ಅ—ಹೌದು.

ಸಾ—ಆರೋಗ್ಯಕರವಾದ ಆಹಾರದ ವಿಚಾರದಲ್ಲಿ ಹಲಬರು ಮಾತನಾಡುತ್ತಿರುವಾಗ ಒಬ್ಬನು ಮಿಕ್ಕವರೆಲ್ಲರಿಗಿಂತಲೂ ಹೆಚ್ಚು ತಿಳಿದವನಂತೆ ಮಾತನಾಡುತ್ತಾನೆ. ಆಗ ಯಾರು ಈತನನ್ನು ಬುದ್ಧಿಶಾಲಿ

ಎಂದು ಹೇಳಬಲ್ಲರೋ ಅವರೇ ಅಲ್ಲವೆ ಮಿಕ್ಕವರನ್ನು ಏನೂ ತಿಳಿಯದವರೆಂದು ಹೇಳತಕ್ಕವರು—ಇಲ್ಲ, ಹೀಗೆ ಹೇಳುವವರೇ ಬೇರೆಯೋ?

ಅ—ಅವರೇ ಎಂಬುದು ಸ್ಪಷ್ಟವೇ.

ಸಾ—ಹಾಗಾದರೆ ಅವರು ಯಾರು, ಅವರ ಹೆಸರೇನು?

ಅ—ವೈದ್ಯಗಾರರು.

ಸಾ—ಸಾಮಾನ್ಯವಾಗಿ ಒಂದೇ ವಿಷಯವನ್ನು ಕುರಿತು ಅನೇಕರು ಮಾತನಾಡುತ್ತಿರುವಾಗ, ಒಬ್ಬನು ಚೆನ್ನಾಗಿ ಮಾತನಾಡುತ್ತಾನೆಂದು ಹೇಳುವವನೇ ಮತ್ತೊಬ್ಬನು ಅಸಂಬದ್ಧಪ್ರಲಾಪ ಮಾಡುತ್ತಾನೆಂದು ಹೇಳತಕ್ಕವನಲ್ಲವೇ? ಏಕೆಂದರೆ, ಒಂದೇ ವಿಷಯವನ್ನು ಪರಿಶೀಲಿಸುವಾಗ, ತಪ್ಪು ಯಾವುದೆಂದು ತಿಳಿಯದವನು ಸರಿಯಾವುದೆಂದೂ ಹೇಳಲಾರನು.

ಅ—ನಿಜ.

ಸಾ—ಒಬ್ಬನೇ ಎರಡರಲ್ಲಿಯೂ ಕುಶಲನಾಗಿರುವವನು?

ಅ—ಹೌದು........

ಸಾ—ಅದೇ ರೀತಿಯಾಗಿ ಹೋಮರನು ಉದ್ದಾಮಕವಿಯೆಂದು ನಿನಗೆ ಗೊತ್ತಿದ್ದರೆ, ಹೆಸಿಯಡ್, ಆರ್ಕಿಲೋಕಸ್ ಮುಂತಾದ ಕನಿಷ್ಠರು ಕನಿಷ್ಠರೆಂಬುದೂ ನಿನಗೆ ಗೊತ್ತಿರಬೇಕು?

ಅ—ಅದು ನಿಜ.

ಸಾ—ನನ್ನ ಪ್ರಿಯಮಿತ್ರನೇ, ಹಾಗಾದಪಕ್ಷದಲ್ಲಿ ಅಯಾನನಿಗೆ ಹೋಮರಿನಲ್ಲಿರುವಂತೆಯೇ ಇತರ ಕವಿಗಳಲ್ಲಿಯೂ ಪರಿಶ್ರಮವಿರಬೇಕೆಂದು ನಾನು ಎಣಿಸಿದರೆ, ನನ್ನ ಊಹೆ ತಪ್ಪಾಗುವುದೇ?........

ಅ—ನಿನ್ನ ತರ್ಕ ನಿಜವಾದ ಪಕ್ಷದಲ್ಲಿ, ಅದೇಕೆ, ಸಾಕ್ರಟೀಸ್, ಯಾರಾದರೂ ಇತರ ಕವಿಗಳ ವಿಚಾರವಾಗಿ ಮಾತನಾಡುತ್ತಿರುವಾಗ ನನ್ನ ಲಕ್ಷ್ಯವೆಲ್ಲಾ ಹಾರಿಹೋಗಿ ನನಗೆ ತೂಕಡಿಕೆ ಬರುತ್ತದೆ ಮತ್ತು ಬುದ್ಧಿಯೇ ಓಡುವುದಿಲ್ಲ; ಆದರೆ ಹೋಮರಿನ ಹೆಸರು ಕೇಳಿದಮಾತ್ರಕ್ಕೇ ನಾನು ಎಚ್ಚತ್ತು ಕಿವಿಕೊಡುವುದಲ್ಲದೆ ಎಷ್ಟೋ ವಿಚಾರಗಳು ಮನಸ್ಸಿಗೆ ಹೊಳೆಯುತ್ತವಲ್ಲಾ?

ಸಾ—ಅದಕ್ಕೆ ಕಾರಣ ಕಂಡೇ ಇದೆ. ಹೋಮರಿನ ವಿಚಾರವಾಗಿ ನೀನು ಮಾತನಾಡುವಾಗ ನಿನಗೆ ಯಾವ ವಿಧವಾದ ಕಾವ್ಯಜ್ಞಾನವಾಗಲಿ ಕುಶಲತೆಯಾಗಲಿ ಇಲ್ಲವೆಂಬುದು ಯಾರಿಗೆತಾನೆ ಗೊತ್ತಾಗದೆ ಇರುವುದು? ಕಾವ್ಯ ನಿಯಮಗಳನ್ನನುಸರಿಸಿ ಆತನನ್ನು ಕುರಿತು ನೀನು ಮಾತನಾಡಬಲ್ಲೆಯಾದರೆ, ಇತರ ಕವಿಗಳನ್ನೂ ಕುರಿತು ಮಾತನಾಡಲು ಶಕ್ತನಾಗುತ್ತಿದ್ದೆ; ಏಕೆಂದರೆ, ಕಾವ್ಯವೆಂಬುದು ಪೂರ್ಣಕಲೆ-ಒಬ್ಬೊಬ್ಬರಲ್ಲಿ ಒಂದೊಂದಲ್ಲ.

ಅ—ಹೌದು........

(ಇದೇ ರೀತಿಯಾಗಿ ಸಾಕ್ರಟೀಸನು ಚಿತ್ರಗೆಲಸವನ್ನೂ ಶಿಲ್ಪಕಲೆಯನ್ನೂ ಸಂಗೀತವನ್ನೂ ತೆಗೆದುಕೊಂಡು ಇವುಗಳಲ್ಲಿ ಉತ್ತಮ ಕಲಾ ಸಂಪನ್ನರ ಪರಿಚಯವಿದ್ದು ಅವರ ಗುಣಾತಿಶಯಗಳನ್ನು ವಿಮರ್ಶೆ ಮಾಡತಕ್ಕವರಿಗೆ ಇತರ ಕಲೆಗಾರರ ಗುಣಾವಗುಣಗಳ ಜ್ಞಾನವೂ ಇರುವುದೆಂದು ಅಯಾನಿನ ಬಾಯಿಂದಲೇ ಒಪ್ಪಿಸುತ್ತಾನೆ.)

ಅ—ನೀನು ಹೇಳುವುದನ್ನು ಇಲ್ಲವೆನ್ನುವುದಕ್ಕಾಗುವುದಿಲ್ಲ, ಸಾಕ್ರಟೀಸ್. ಆದರೂ ಕೂಡ ನನ್ನ ಸ್ವಂತ ಮನಸ್ಸಿಗೇನೋ ಹೋಮರಿನ ವ್ಯಾಖ್ಯಾನ ಮಾಡುವಾಗ ನನಗಿರುವ ಶಕ್ತಿಯೂ ಸ್ಫೂರ್ತಿಯೂ ಇತರ ಕವಿಗಳ ವಿಷಯದಲ್ಲಿ ಬರುವುದಿಲ್ಲವೆಂದು ಚೆನ್ನಾಗಿ ಗೊತ್ತಾಗುತ್ತದೆ—ಲೋಕವೂ ಹಾಗೆಯೇ ಭಾವಿಸುತ್ತದೆ. ಇದಕ್ಕೇನು ಕಾರಣ, ಹೇಳು.

ಸಾ—ನೀನು ಹೇಳುವುದು ನನಗೆ ಗೊತ್ತಾಯಿತು, ಅಯಾನ್, ಮತ್ತು ಅದರ ಕಾರಣವನ್ನೂ ಹೇಳುತ್ತೇನೆ, ಕೇಳು. ಹೋಮರಿನ ವಿಚಾರವಾಗಿ ಉತ್ಕೃಷ್ಟರೀತಿಯಲ್ಲಿ ಮಾತನಾಡಲು ನಿನಗಿರುವ ಶಕ್ತಿ ಕಾವ್ಯಜ್ಞಾನದಿಂದ ಬಂದದ್ದಲ್ಲ, ಕೇವಲ ಆವೇಶದಿಂದ ಬಂದದ್ದು........ ಇದೇ ರೀತಿಯಲ್ಲಿ ವಾಗ್ದೇವಿ ಮೊದಲು ಕೆಲಬರನ್ನು ತಾನೇ ಪ್ರೇರೇಪಿಸುತ್ತಾಳೆ; ಹೀಗೆ ಆವೇಶ ಬಂದ ಪುರುಷರು ಇತರರಿಗೆ ತಮ್ಮ ಆವೇಶವನ್ನು ಹರಡುತ್ತಾರೆ. ಉತ್ತಮ ಕವಿಗಳೆಲ್ಲಾ ಅಷ್ಟೆ; ವೀರ ಕಾವ್ಯಕರ್ತೃಗಳಾಗಲಿ, ಗೀತಕರ್ತೃಗಳಾಗಲಿ, ತಮ್ಮ ಮನೋಹರವಾದ ಪದ್ಯಗಳನ್ನು ಕಲಾಕೌಶಲ್ಯದಿಂದ ಬರೆಯುವುದಿಲ್ಲ, ತಮಗೆ

ಪ್ರೇರೇಪಣೆ ಬಂದು ಆವೇಶ ಹಿಡಿಯುವುದರಿಂದ...........ಇವರು ತಮ್ಮ ಅಮೋಘವಾದ ಕಾವ್ಯಗಳನ್ನು ಬರೆಯುವಾಗ ಬುದ್ಧಿ ತಮ್ಮ ಸ್ವಾಧೀನದಲ್ಲಿರುವುದಿಲ್ಲ...........ಕವಿಯೆಂಬವನು ಲಘುಮನಸ್ಸಿನ, ರೆಕ್ಕೆಗಳುಳ್ಳ, ಪರಿಶುದ್ಧ ಪ್ರಾಣಿ; ತನ್ನ ಬುದ್ಧಿ ಸ್ವಾಧೀನತಪ್ಪಿ, ಮನಸ್ಸು ತನ್ನಲ್ಲಿಲ್ಲದೆ, ಆವೇಶ ಬರುವವರೆಗೂ ಈತನಲ್ಲಿ ಕವಿತಾಶಕ್ತಿ ಇರುವುದಿಲ್ಲ — ಈ ಸ್ಥಿತಿ ಬರದೇ ಇದ್ದರೆ ಇವನು ನಿತ್ರಾಣನಾಗಿ ತನ್ನ ದೈವವಾಣಿಯನ್ನು ಆಡಲು ಅಶಕ್ತನಾಗುವನು. ಮಾನವರ ಕರ್ಮಗಳನ್ನು ಕುರಿತು ಬಲುಘನವಾದ ಮಾತುಗಳಲ್ಲಿ ಕವಿಗಳು ಪ್ರಸ್ತಾಪ ಮಾಡುವರು, ಆದರೆ ಕಲಾನಿಯಮಗಳನ್ನನುಸರಿಸಿ ಅವರು ಹಾಗೆ ಮಾತನಾಡುವುದಿಲ್ಲ: ವಾಗ್ದೇವಿ ಅವರ ಬಾಯಲ್ಲಿ ನುಡಿಸಿದ್ದನ್ನು ಅವರು ಆಡುತ್ತಾರೆ, ಅಷ್ಟೆ. ಹೋಮರಿನ ವಿಚಾರದಲ್ಲಿ ನೀನು ಮಾತನಾಡುವುದು ಹಾಗೆಯೇ ...........ದೈವಶಕ್ತಿಯಿಂದ ಕವಿ ಗಾನಮಾಡುತ್ತಾನಲ್ಲದೆ ಕಲಾಶಕ್ತಿಯಿಂದಲ್ಲ. ಕಲಾನಿಯಮಗಳಿಗನುಸಾರವಾಗಿ ಅವನು ಪಾಠಕಲಿತಿದ್ದರೆ ಒಂದು ವಿಷಯವನ್ನು ಮಾತ್ರ ಕುರಿತು ಅವನು ಆಡುತ್ತಿರಲಿಲ್ಲ, ಸಕಲ ವ್ಯಾಪಾರಗಳನ್ನೂ ಕುರಿತು ಮಾತಾಡಬಲ್ಲವನಾಗಿರುತ್ತಿದ್ದನು. ದೇವರು ಕವಿಗಳ ಮನಸ್ಸನ್ನು ಕಸಿದುಕೊಂಡು ಅವರನ್ನು ತನ್ನ ದೂತರಂತೆ ನಿಯಂತ್ರ ಮಾಡುತ್ತಾನೆ; ಶಕುನ ಹೇಳುವವರನ್ನೂ, ಪವಿತ್ರ ಪ್ರವಾದಿಗಳನ್ನೂ ಹಾಗೆಯೇ ಉಪಯೋಗಪಡಿಸಿಕೊಳ್ಳುತ್ತಾನೆ. ಅಜ್ಞಾನಾವಸ್ಥೆಯಲ್ಲಿ ಇಂತಹ ಅಮೂಲ್ಯವಾದ ವಚನಗಳನ್ನಾಡಬಲ್ಲ ಇವರು ತಮ್ಮ ಸ್ವಂತ ಶಕ್ತಿಯಿಂದ ಹಾಗೆ ಮಾತನಾಡುತ್ತಿಲ್ಲ, ಸಾಕ್ಷಾತ್ ದೇವರೇ ಮಾತನಾಡುವವನಾಗಿ, ಅವರ ಮುಖಾಂತರ ನಮ್ಮೊಡನೆ ಸಂಭಾಷಿಸುತ್ತಾನೆಂದು ಅವರ ಮಾತನ್ನು ಲಾಲಿಸುವ ನಮ್ಮಂಥವರು ತಿಳಿದುಕೊಳ್ಳಲಿ ಎಂಬುದಾಗಿ ಆತನ ಉದ್ದೇಶವಿರಬೇಕು........ಕವಿಗಳು ತಮ್ಮನ್ನು ಉದ್ಬೋಧಿಸತಕ್ಕಂಥ ದೇವತೆಗಳ ಮಾತನ್ನು ಭಾಷಾಂತರ ಮಾಡುವವರಷ್ಟೆ........ನನ್ನ ಮಾತು ಸರಿಯಲ್ಲವೆ, ಅಯಾನ್?

ಅ—ಹೌದು, ಸಾಕ್ರಟೀಸ್, ನಿಜವಾಗಿಯೂ ನೀನು ಹೇಳುವುದು ಸರಿ........

ಸಾ........ನಿನಗೆ ಕಲಾಕೌಶಲ್ಯವಿದ್ದರೆ, ಹೋಮರಿನ ಕಲೆಯನ್ನು ಬಿಚ್ಚಿ ಹೇಳುತ್ತೇನೆಂದು ನೀನಾಡಿದ ಮಾತು ಹುಸಿಯಾಯಿತಾದುದರಿಂದ, ನೀನು ನನ್ನೊಡನೆ ಪ್ರಾಮಾಣಿಕ ರೀತಿಯಲ್ಲಿ ವರ್ತಿಸಿಲ್ಲ. ಇಲ್ಲವೆ, ನಾನೆಣಿಸಿರುವಂತೆ, ನಿನಗೆ ಕಲಾಜ್ಞಾನವೇನೂ ಇಲ್ಲದೆ, ಹೋಮರನನ್ನು ಕುರಿತು ನೀನಾಡುವ ಸೊಗಸಾದ ಮಾತುಗಳೆಲ್ಲಾ ಅವನ ಆವೇಶದಿಂದ ಉದ್ಬೋಧವಾಗಿದ್ದರೆ,ಆಗ ನಿನ್ನಲ್ಲಿ ಅಪ್ರಾಮಾಣಿಕತನದ ದೋಷವೇನೂ ಇಲ್ಲ, ನೀನು ಕೇವಲ ಆವೇಶ ಹಿಡಿದವನೆಂದು ಹೇಳಬೇಕಾಗುತ್ತದೆ. ಇವೆರಡರಲ್ಲಿ ನಿನಗೆ ಯಾವುದು ಪ್ರಿಯವಾದುದು—ಅಪ್ರಾಮಾಣಿಕನೆಂದು ಜನರು ನಿನ್ನನ್ನು ಭಾವಿಸುವುದೋ ಇಲ್ಲವೆ ಆವೇಶ ಹಿಡಿದವನೆಂದು ತಿಳಿಯುವುದೋ ?

ಅ—ಎರಡಕ್ಕೂ ಬಹಳ ಅಂತರವಿದೆ, ಸಾಕ್ರಟೀಸ್; ಆವೇಶ ಹಿಡಿಯುವುದೇ ಘನತರವಾದುದೆಂದು ನನಗೆ ತೋರುತ್ತದೆ........

ಇನ್ನೊಂದು ಉದಾಹರಣೆಯನ್ನು ಪರೀಕ್ಷಿಸೋಣ. ಯೂಥಿಡಿಮಸ್ ಎಂಬ ಅಥೇನ್ಸ್ ನಗರದ ಯುವಕನೊಬ್ಬನು ತಾನು ರಾಜನೀತಿಜ್ಞನೂ ಯಶೋವಂತನೂ ಆಗಬೇಕೆಂದಿರುವ ತನ್ನ ಆಶಯವನ್ನು ಸಾಕ್ರಟೀಸನಿಗೆ ತಿಳಿಯಪಡಿಸುವನು. ಆ ಪಕ್ಷದಲ್ಲಿ ಪ್ರಥಮದಲ್ಲಿ ನೀನು ಸಂಶಯಾಸ್ಪದವಿಲ್ಲದಂತೆ ನ್ಯಾಯಶೀಲನಾಗಬೇಕಾಯಿತಲ್ಲಾ, ಎಂದು ಸಾಕ್ರಟೀಸನು ಕೇಳಲು, ನಾನು ಆಗಿಯೇ ಇದೇನೆ ಎಂದು ಯುವಕನು ಉತ್ತರ ಕೊಡುವನು. ಕ್ಸೆನೊಫನ್ನನು ಹೇಳುವಂತೆ ಈ ಸಂಭಾಷಣೆಯನ್ನು ಮುಂದುವರಿಸೋಣ[೧]

ಸಾ—"ಇರಬಹುದು; ಆದರೆ ಇತರ ವಿಧವಾದ ಕಾರ್ಯಕೌಶಲ್ಯಗಳನ್ನು ಸೂಚಿಸಲು ಹಲವು ಫಲಿತಾಂಶಗಳಿರುವಂತೆ ನ್ಯಾಯವರ್ತನದಿಂದ ಉತ್ಪತ್ತಿಯಾಗುವ ಅದಕ್ಕೆ ತಕ್ಕ ಹಲವು ಫಲಿತಾಂಶಗಳೂ ಇರಬೇಕಷ್ಟೆ? "

---

೧. "ಸ್ಮೃತಿಚಿತ್ರಗಳು" (Memorabilia) ಪುಸ್ತಕ IV ಅಧ್ಯಾಯ ೨.

ಯೂ—"ಇಲ್ಲದೆ ಉಂಟೆ"

"ಹಾಗಾದರೆ ಅಂಥ ಕಾರ್ಯಗಳು, ಫಲಿತಾಂಶಗಳು, ಯಾವುವೆಂಬು ದನ್ನು ನೀನು ಹೇಳಬಲ್ಲೆ ?"

"ಸಂದೇಹವೇನು ; ಅಷ್ಟೇ ಅಲ್ಲ, ಅನ್ಯಾಯದಿಂದ ಉತ್ಪನ್ನವಾಗುವ ಫಲಿತಾಂಶಗಳನ್ನೂ ಹೇಳಬಲ್ಲೆನು"

"ಸರಿ. ಹಾಗಾದರೆ ಈಗ ಪ್ರತ್ಯೇಕವಾಗಿ ಎರಡು ಸಾಲುಗಳಲ್ಲಿ ಮೊದಲನೆಯದರ ಕೆಳಗೆ ನ್ಯಾಯದಿಂದುತ್ಪನ್ನವಾದ ಕ್ರಿಯೆಗಳನ್ನೂ, ಎರಡನೆಯದರ ಕೆಳಗೆ ಅನ್ಯಾಯದಿಂದ ಜನಿಸಿದ ಕಾರ್ಯಗಳನ್ನೂ ಬರೆಯೋಣವೇ ?"

"ಆಗಬಹುದು."

"ಒಳ್ಳೆಯದು ; ಹಾಗಾದರೆ ಸಟೆಯಾಡುವುದನ್ನು ಈಗ ಯಾವ ಸಾಲಿನಲ್ಲಿ ಬರೆಯೋಣ ?"

"ಅದೇನು, ಅನ್ಯಾಯದ ಸಾಲಿನಲ್ಲಿ, ಕಂಡೇ ಇದೆ."

"ಮೋಸಮಾಡುವುದು ?"

"ಅದೇ ಸಾಲಿನಲ್ಲಿಯೇ."

"ಕದಿಯುವುದೋ ?"

"ಅದರಲ್ಲಿಯೇ."

"ಜನರನ್ನು ಗುಲಾಮರನ್ನಾಗಿ ಮಾಡಿಕೊಳ್ಳುವುದೋ ?"

"ಅದೇ."

"ಹಾಗಾದರೆ ಇವುಗಳಲ್ಲಿ ಯಾವುದೊಂದೂ ನ್ಯಾಯದ ಸಾಲಿಗೆ ಹೋಗಲಾರದು ?"

"ಅದು ಹೇಗೆ, ಯಾರೂ ಎಂದೂ ಕಂಡು ಕೇಳದ ಮಾತು."

"ಆಗಲಿ ; ಒಬ್ಬ ಸೇನಾಧಿಪತಿ ತನ್ನ ರಾಜ್ಯಕ್ಕೆ ವಿಶೇಷವಾದ ಕೆಡುಕನ್ನುಂಟುಮಾಡಿದ ಶತ್ರುವಿನೊಡನೆ ಯುದ್ಧ ಮಾಡುತ್ತಾನೆಂದಿಟ್ಟು ಕೊಳ್ಳೋಣ. ಆತನು ಯುದ್ಧದಲ್ಲಿ ಗೆದ್ದು ಶತ್ರುಪಕ್ಷದವರನ್ನು ದಾಸ್ಯ ಸ್ಥಿತಿಗೆ ತರುತ್ತಾನೆ, ಅದು ತಪ್ಪೋ?"

"ಎಂದಿಗೂ ಅಲ್ಲ."

" ಅವನು ಶತ್ರುವಿನ ಸಾಮಾನು ಸರಂಜಾಮುಗಳನ್ನೆಲ್ಲಾ ಹೊತ್ತು ಕೊಂಡು ಹೋಗುತ್ತಾನೆ, ಅಥವಾ ಯುದ್ಧಕೌಶಲ್ಯದಿಂದ ಶತ್ರುವನ್ನು ಮೋಸಪಡಿಸುತ್ತಾನೆ: ಈ ಕ್ರಿಯೆಗಳೋ ? "

" ಅವೆಲ್ಲಾ ನ್ಯಾಯುವಾದುವೇ, ಅದರಲ್ಲೇನು ಸಂದೇಹ ? ಆದರೆ ನೀನು ನಮ್ಮನಮ್ಮ ಸ್ನೇಹಿತರನ್ನು ಮೋಸಪಡಿಸುವ ಅಥವಾ ಕಷ್ಟ ಕ್ಕೊಳಪಡಿಸುವ ವಿಚಾರವಾಗಿ ಮಾತನಾಡುತ್ತಿದ್ದೆಯೆಂದು ನಾನು ಭಾವಿಸಿದ್ದೆ."

" ಆ ಪಕ್ಷದಲ್ಲಿ ಒಂದೇ ವಿಧವಾದ ಕ್ರಿಯೆಗಳನ್ನೇ ಕೆಲವು ಸಂದರ್ಭ ಗಳಲ್ಲಿ ಎರಡು ಸಾಲಿನಲ್ಲಿಯೂ ಬರೆಯಬೇಕಾಗುತ್ತದೆಯೆನ್ನು. "

" ಹಾಗೆಯೇ ಕಾಣುತ್ತದೆ." ಸಾಕ್ರಟೀಸನು ಸುಮ್ಮನಾಗುವುದಿಲ್ಲ.

" ಒಳ್ಳೆಯದು, ಇರಲಿ , ಈಗ ನಮ್ಮನಮ್ಮ ಸ್ನೇಹಿತರ ಮಾತೇ ಆಡೋಣ. ಒಬ್ಬಾನೊಬ್ಬ ಸೇನಾಧಿಪತಿಯು ಸೈನ್ಯ ಎದೆಗುಂದಿ, ಕಂಗೆಟ್ಟು, ಯುದ್ಧಮಾಡಲಾರದೆ, ಚೆದರಿಹೋಗುವ ಸ್ಥಿತಿಯಲ್ಲಿದೆ ಎಂದು ಭಾವಿಸೋಣ. ಆ ಸಮಯದಲ್ಲಿ ದಳಪತಿ ಧೈರ್ಯಗುಂದಬೇಡಿ ರೆಂದೂ, ಹಿಂದೆ ಬೆಂಬಲಗಳು ಬರುತ್ತಿವೆ ಎಂದೂ ಅವರನ್ನು ಠಕ್ಕು ಮಾತುಗಳಿಂದ ಮೋಸಪಡಿಸಿ, ಹುರಿದುಂಬಿಸಿ, ಶತ್ರುವಿನ ಮೇಲೆ ಬಿದ್ದು ಯುದ್ಧದಲ್ಲಿ ಜಯಪ್ರದರಾಗುವಂತೆ ಮಾಡುತ್ತಾನೆ. ಇಲ್ಲಿ ದಳಪತಿ ತನ್ನ ಜನರನ್ನೇ ಮೋಸಪಡಿಸಿದಂತಾಯಿತಲ್ಲಾ–ಇದಕ್ಕೇನು ಹೇಳುವೆ?"

" ಹೇಳುವುದೇನು, ಅದನ್ನು ಕೂಡ ನ್ಯಾಯದ ಸಾಲಿನಲ್ಲಿಯೇ ಹಾಕಬೇಕೆಂದು ಕಾಣುತ್ತದೆ. "

" ಅಥವಾ ಒಬ್ಬ ಸಣ್ಣ ಹುಡುಗನು ಖಾಯಿಲೆ ಬಿದ್ದು ಔಷಧಿ ಸೇವನೆ ಮಾಡಬೇಕಾಗಿದೆ ; ನಾನು ಸೇವಿಸುವುದಿಲ್ಲವೆಂದು ಹುಡುಗನು ಹಠ ಹಿಡಿಯುತ್ತಾನೆ. ಆಗ ತಂದೆಯಾದವನು ಅದು ಔಷಧಿಯಲ್ಲವೆಂದೂ, ತಿನ್ನಲು ರುಚಿಯಾದ ತಿಂಡಿಯೆಂದೂ ಹೇಳಿ, ಹುಡುಗನು ಔಷಧವನ್ನು ಸೇವಿಸುವಂತೆ ಮಾಡಿ ಆ ಮೂಲಕ ಅವನ ಪ್ರಾಣವನ್ನುಳಿಸುತ್ತಾನೆ. ಈ ಮೋಸವನ್ನೇನನ್ನುತ್ತೀ ? "

" ಅದೂ ಕೂಡ ನ್ಯಾಯದ ಸಾಲಿಗೇ ಹೋಗಬೇಕು."

"ಅಥವಾ ನಿನ್ನ ಸ್ನೇಹಿತನೊಬ್ಬನು ಕಾರಣಾಂತರದಿಂದ ಜೀವನ ದಲ್ಲಿ ಜಿಗುಪ್ಸೆಹೊಂದಿ ಮನಗೆಟ್ಟವನಾಗಿ ಅಸಾಧ್ಯವಾದ ಹುಚ್ಚು ಹಿಡಿದವನಂತೆ ಪ್ರವರ್ತಿಸುತ್ತಿರುವಾಗ, ಆತನ ಪಕ್ಕದಲ್ಲಿ ಕತ್ತಿಯೊಂದಿರು ವುದನ್ನು ಕಂಡು ಅದರಿಂದ ಅವನಿಗೆಲ್ಲಿಯಾದರೂ ಪ್ರಾಣಾಪಾಯ ವಾದೀತೆಂಬ ಭಯದಿಂದ ಆ ಕತ್ತಿಯನ್ನು ನೀನು ಕದ್ದು ಬಚ್ಚಿಡುತ್ತೀಯೆ ಎಂದು ಊಹಿಸೋಣ; ಈ ಕಳ್ಳತನಕ್ಕೇನು ಹೇಳುತ್ತೀಯೆ?"

"ಅದೂ ಕೂಡ ಆ ಸಾಲಿಗೇ ಹೋಗಬೇಕು"

"ಆದರೆ ನಮ್ಮ ಸ್ವಜನರನ್ನೂ ಸ್ನೇಹಿತರನ್ನೂ ಮೋಸಪಡಿಸ ಕೂಡದೆಂದು ನೀನು ಹೇಳಿದಹಾಗೆ ನನಗೆ ಜ್ಞಾಪಕವಿದೆಯಲ್ಲಾ?"

"ನಾನು ಹಿಂದೆ ಹೇಳಿದುದೆಲ್ಲಾ ತಪ್ಪೆಂದು ಒಪ್ಪಿಕೊಳ್ಳಬೇಕು."

"ಒಳ್ಳೆಯದು, ಇರಲಿ; ಆದರೆ ಈಗ ಮತ್ತೊಂದು ವಿಷಯವಾಗಿ ನಿನ್ನನ್ನು ಕೇಳಬೇಕೆಂದಿದ್ದೇನೆ. ಪ್ರಯತ್ನಪೂರ್ವಕವಾಗಿ ಒಬ್ಬನು ಅನ್ಯಾಯ ಮಾಡಲೆಳಸುತ್ತಾನೆ; ಮತ್ತೊಬ್ಬನು ತಾನೆಣಿಸದೆಯೆ—ತನ್ನ ಮನವಿಕ್ಕದೆಯೆ—ಅನ್ಯಾಯಮಾಡಬೇಕಾಗಿ ಬರುತ್ತದೆ: ಇವರಿಬ್ಬರಲ್ಲಿ ಯಾರು ಅಧಿಕದ್ರೋಹಿ ಎಂದು ನೀನೆಣಿಸುತ್ತೀಯೆ?"

"ನನ್ನಾಣೆ, ಸಾಕ್ರಟೀಸ್, ನನ್ನ ಉತ್ತರಗಳಲ್ಲಿ ನನಗೇ ನಂಬಿಕೆ ಇಲ್ಲ; ನಾನು ಯಾವುದನ್ನು ಯಥಾರ್ಥವೆಂದು ಭಾವಿಸಿದ್ದೆನೋ ಅದಕ್ಕೆ ವಿರೋಧವಾಗಿಯೇ ಸಕಲವೂ ಪರಿಣಮಿಸುತ್ತಿದೆ."

ಈ ರೀತಿಯಾಗಿ ಕ್ರಮಕ್ರಮವಾಗಿ ಚರ್ಚಾಂಶದ ಗುಣಲಕ್ಷಣ ನಿರೂಪಣಕ್ಕೆ ಸಾಕ್ರಟೀಸನು ದಾರಿ ಮಾಡುತ್ತಾನೆ. ಯಾವ ವಿಷಯ ದಲ್ಲಿಯೂ ಸ್ಪಷ್ಟವಾದ ಭಾವನೆಗಳೇ ಇಲ್ಲದವರಿಗೆ **ಸಮ್ಯಗ್** ಜ್ಞಾನ ಹುಟ್ಟುವುದೆಂತು? ಆದುದರಿಂದ ಮೊದಲು ಸ್ವಚ್ಛವಾದ ಭಾವಗಳು ಶ್ರೋತೃಗಳ ಚಿತ್ತದಲ್ಲಿ ಉದಿಸುವಂತೆ ಮಾಡುವುದು ಅವಶ್ಯಕವೆನಿಸಿತು. ಆದಿಯಲ್ಲಿ ಕೆಲವು ಉದಾಹರಣೆಗಳ ಸಹಾಯದಿಂದ ಸಮಯಾನುಸಾರ ಹಾದೊಂದು ಲಕ್ಷಣವನ್ನಿಟ್ಟುಕೊಂಡು ಅದನ್ನು ದೃಢಪಡಿಸಲು ಬೇರೆ ಕೆಲವು ಉದಾಹರಣೆಗಳನ್ನು ತೆಗೆದುಕೊಂಡು ಈ ಉದಾಹರಣೆಗಳಲ್ಲಿ ಕಂಡುಬರುವ ರೀತಿಯಲ್ಲಿ ಪ್ರಥಮಾಭಿಪ್ರಾಯವನ್ನು ವಿಸ್ತರಿಸುವುದೋ,

ಸಂಕುಚಿತಪಡಿಸುವುದೋ — ಈ ರೀತಿಯಲ್ಲಿ ತೃಪ್ತಿಕರವಾದ ಭಾವ ಏರ್ಪಡುವವರೆಗೂ ತಿದ್ದುವನು. ಇದರಿಂದ ಚರ್ಚಾಂಶದ ವಿಷಯವಾಗಿ ನಿರ್ಮಲವಾದ, ಸ್ಪಷ್ಟವಾದ ಭಾವ ಉಂಟಾಗುವುದು, ಅದರ ಅತಿ ಮುಖ್ಯವಾದ ಗುಣಲಕ್ಷಣಗಳೆಲ್ಲಾ ಹೊರಪಡುವುವು. ಮತ್ತೆ ಕೆಲವು ವೇಳೆಗಳಲ್ಲಿ ಮೂಲತತ್ವಗಳ ಸಹಾಯದಿಂದ ಇತರರು ಕೊಡುವ ಅಭಿಪ್ರಾಯಗಳನ್ನು ಪರಿಶೀಲಿಸಿ ಯಥಾರ್ಥ ಲಕ್ಷಣಗಳಿಗನುಸಾರವಾಗಿ ಈ ಅಭಿಪ್ರಾಯಗಳನ್ನು ವಿಮರ್ಶಿಸಿ ಮಾರ್ಪಡಿಸುವನು. ಇಲ್ಲಿನ ತರ್ಕರೀತಿ ಅನುಮಾನ(inference)ಬದ್ಧವಾದುದೆಂದು ಹೇಳಬಹುದು. ಯಾವನಾದ ರೊಬ್ಬ ಮನುಷ್ಯನು ಮತ್ತೊಬ್ಬನಿಗಿಂತಲೂ ಶ್ರೇಷ್ಠ ಪುರುಷನೆಂದು ಹೇಳಿದರೆ ಸಾಕ್ರಟೀಸನು ಏಕಾಏಕಿ ಒಪ್ಪುತ್ತಿರಲಿಲ್ಲ. ಪ್ರಥಮದಲ್ಲಿ ಶ್ರೇಷ್ಠ ಪುರುಷನೆಂದರೆ ಯಾರು, ಆತನ ಲಕ್ಷಣಗಳೇನು, ಎಂಬುದನ್ನು ವಿಮರ್ಶೆಮಾಡಿ ಅನಂತರದಲ್ಲಿ ಯಾವ ವ್ಯಕ್ತಿ ಆ ಲಕ್ಷಣಗಳನ್ನು ಹೊಂದಿರುವನೋ ಅವನನ್ನು ಶ್ರೇಷ್ಠ ಪುರುಷನೆಂದು ಕರೆಯಬೇಕೆಂಬು ದಾಗಿ ಹೇಳುತ್ತಿದ್ದನು.

"ನೀನು ಮೆಚ್ಚುವ ಮನುಷ್ಯನು ನಾನು ಒಪ್ಪುವ ಪುರುಷನಿಗಿಂತಲೂ **ಶ್ರೇಷ್ಠನಾದ ನಾಗರಿಕನೆಂದು** ಹೇಳುತ್ತೀಯೋ?"

"ಅದೇತಾನೇ ನಾನು ಹೇಳುವುದು."

"ಆ ಪಕ್ಷದಲ್ಲಿ ನಾವು ಮೊದಲು ಒಳ್ಳೆಯ ನಾಗರಿಕನ ಕರ್ತವ್ಯವೇನೆಂಬುದನ್ನು ಯಾಕೆ ಪರಿಶೀಲಿಸಕೂಡದು?"

"ಹಾಗೆಯೇ ಮಾಡೋಣ."

"ಹಾಗಾದರೆ ದೇಶದ ಸಂಪತ್ತನ್ನು ಯಾವನು ಅಭಿವೃದ್ಧಿಪಡಿಸುತ್ತಾನೋ ಅವನು ಸರ್ಕಾರದ 'ಕಾರಬಾರಿ'ಯಾಗಲು ಹೆಚ್ಚು ಯೋಗ್ಯವುಳ್ಳವನೆಂದೆನಿಸುವನಲ್ಲವೆ?"

"ಸಂದೇಹವೇನು?"

"ಶತ್ರುಗಳ ಮೇಲೆ ಯಾವನು ಜಯವನ್ನು ಪಡೆಯುವನೋ ಅವನು ಯುದ್ಧಕಾರ್ಯನಿರ್ವಾಹದಲ್ಲಿ ಉತ್ತಮನೆಂದೆನಿಸಿಕೊಳ್ಳುವನಲ್ಲವೆ?"

“ ಖಂಡಿತವಾಗಿಯೂ ”

“ ರಾಯಭಾರದಲ್ಲಿ ಯಾರು ಶತ್ರುಗಳನ್ನು ಮಿತ್ರರನ್ನಾಗಿ ಮಾಡ ಬಲ್ಲನೋ ಅವನು ?”

“ ನಿಸ್ಸಂದೇಹವಾಗಿ ”

“ ಜನರನ್ನು ಮನಗಾಣಿಸಿ ಭಾಷಣಮಾಡುವುದರಲ್ಲಿ ಯಾವನು ಅಂತಃಕಲಹಗಳನ್ನು ಮುರಿದು ಐಕಮತ್ಯವನ್ನುಂಟುಮಾಡುವನೋ ಅವನು ? ”

“ ಅವನೂ ಶ್ರೇಷ್ಠನೆಂದು ನಾನು ಯೋಚಿಸುತ್ತೇನೆ ”[೧]

ಈ ರೀತಿಯಾಗಿ ಚರ್ಚೆ ಮೂಲತತ್ವಗಳ ವಿಮರ್ಶೆಗೆ ಹಿಂದಿರುಗಿದಾಗ ಸಾಕ್ರಟೀಸನ ಎದುರಾಳಿಗಳಿಗೆ ನಿಜಾಂಶ ಹೊರಪಡುತ್ತಿತ್ತು. ಈತನ ವಾದವಿಧಾನದಲ್ಲಿ ಚಮತ್ಕಾರವಾದ ವಿಷಯವೇನೆಂದರೆ—ಸರ್ವ ಸಾಧಾರಣವಾಗಿ ಎಲ್ಲರೂ ಸಮ್ಮತಿಸುವ ಸರ್ವಜನವೇದ್ಯವಾಗಿರುವ ಪ್ರಮೇಯಗಳನ್ನೇ ಆಧಾರವಾಗಿಟ್ಟುಕೊಂಡು ಅವುಗಳ ಮೇಲೆ ತನ್ನ ತರ್ಕದ ಭಾರವನ್ನು ನಿಲ್ಲಿಸುವನು. ಹೀಗೆ ಮಾಡುತ್ತಿದ್ದುದರಿಂದ ಎಲ್ಲರೂ ಈತನ ತರ್ಕಕ್ಕೆ ಅನುಮೋದಿಸಬೇಕಾಗಿ ಬರುತ್ತಿತ್ತು. ಏಕೆಂದರೆ ಈತನ ಸಿದ್ಧಾಂತ ಅವರು ಒಪ್ಪಿಕೊಂಡಿದ್ದ ಅಂಶಗಳಿಂದ ಹೊರಗೆಡಹಲ್ಪಟ್ಟ ಅನುಮಿತಿ(inference)ಯಾಗಿತ್ತೇ ಹೊರತು ಬೇರೆಯಾಗಿರಲಿಲ್ಲ. ಹೀಗೆ ಮಾಡುವುದರಿಂದಲೇ ಜನಸಾಮಾನ್ಯಕ್ಕೆ ಸತ್ಯಾರ್ಥವನ್ನು ಮನಗಾಣಿಸಲು ಸಾಧ್ಯವಾಗುವುದೆಂದೂ, ಹೋಮರನು ವರ್ಣಿಸಿರುವ ಯುಲಿಸಿಸ್ಸನು ಪ್ರಸಿದ್ಧ ವಾಗ್ಮಿಯಾಗಿರಲು ಇದೇ ಕಾರಣವೆಂದೂ ಸಾಕ್ರಟೀಸನು ಹೇಳುತ್ತಿದ್ದನು.[೨]

ಆದರೆ ಕೊನೆಯಲ್ಲಿ ಒಂದು ವಿಷಯವನ್ನು ಮಾತ್ರ ಮರೆಯಬಾರದು. ಈ ವಾದವಿಧಾನವೆಲ್ಲಾ, ಈ ಚಮತ್ಕಾರವೆಲ್ಲಾ, ಕತ್ತಲೆಯ ಕೋಣೆಗೆ ಬೆಳಕು ಬೀಳುವುದಕ್ಕೆ ಮೊದಲು ಮಾಡಬೇಕಾಗಿರುವ ಬಾಗಿಲು ಕಿಟಕಿಗಳನ್ನು ತೆಗೆಯುವ ಸಂಭ್ರಮವೇ ಹೊರತು, ಅದೇ ಬೆಳಕನ್ನು ಕೊಡತಕ್ಕದ್ದಲ್ಲ. ಹೊರಗೆ ಸೂರ್ಯನ ಪ್ರಕಾಶವಿಲ್ಲದಿದ್ದರೆ ಕಿಟಕಿ ಬಾಗಿಲು

೧. “ಸ್ಮೃತಿಚಿತ್ರಗಳು” : ಪು. IV, ಅ. ೬, ೨. ಅದೇ, ಪು. I ಅ, ೧.

ಗಳನ್ನು ತೆಗೆದಮಾತ್ರಕ್ಕೇನಾಗುವುದು ? ಅದರಂತೆಯೇ ತರ್ಕ, ವ್ಯಾಪ್ತಿ ಮಾರ್ಗ, ಲಕ್ಷಣನಿರೂಪಣೆ, ದೃಷ್ಟಾಂತ—ಇವುಗಳೆಲ್ಲವೂ ಮನಸ್ಸಿನ ಕಗ್ಗತ್ತಲೆಯನ್ನು ಓಡಿಸುವ ಉಪಾಯಗಳೇ ಹೊರತು ಅವುಗಳಿಂದಲೇ ಜ್ಞಾನ ದೊರೆಯುವಹಾಗಿಲ್ಲ. ಇವುಗಳ ಮೂಲಕ ಮನಸ್ಸು ನಿರ್ಮಲ ವಾದೊಡನೆಯೇ ಆತ್ಮದಲ್ಲಿರುವ ಜ್ಞಾನವೆಂಬ ಸಹಜಪ್ರಕಾಶ ತನಗೆ ತಾನೇ ಕಾಣಿಸಿಕೊಳ್ಳುವುದು. ಎಲ್ಲರಲ್ಲಿಯೂ ಈ ಆತ್ಮಪ್ರಕಾಶವನ್ನುಂಟು ಮಾಡಬೇಕೆಂಬುದೇ ಸಾಕ್ರಟೀಸನ ಬಲವಾದ ಹವಣಿಕೆಯಾಗಿತ್ತು. ಇದನ್ನು ಕುರಿತು ಮುಂದೆ ಹೆಚ್ಚು ವಿವರವಾಗಿ ತಿಳುಹುವೆವು. ಪ್ರಕೃತದಲ್ಲಿ ನೆನಪಿಡಬೇಕಾದ ವಿಷಯುವೇನೆಂದರೆ, ಲಕ್ಷಣನಿರೂಪಣೆಯೇ ಸಾಕ್ರಟೀಸನ ಮುಖ್ಯವಾದ ಗುರಿಯಾಗಿರಲಿಲ್ಲ.

## ಅಧ್ಯಾಯ : ೯.

## ಸಾಕ್ರಟೀಸ್ (೨)

ಆದುದರಿಂದ ಕಡೆಗೆ ಜ್ಞಾನಾರ್ಜನೆ ಸಾಧ್ಯವೆಂದು ನಿರ್ಣಯಿಸಿದಂತಾಯಿತು. ಇರಲಿ, ಈ ನಂಬಿಕೆಯನ್ನು ಪಡೆದಿದ್ದ ಸಾಕ್ರಟೀಸನು ತಾನು ಜನರಿಗೆ ಬೋಧಿಸಿದ, ಮತ್ತು ಸಮಗ್ರಪ್ರಪಂಚಕ್ಕೂ ಆಸ್ತಿಯೋಪಾದಿಯಲ್ಲಿ ಇಟ್ಟುಹೋದ, ಜ್ಞಾನಭಂಡಾರವಾದರೂ ಯಾವುದು? ಆತನ ಸಿದ್ಧಾಂತದ ಮುಖ್ಯ ತತ್ವಗಳಾವುವು? ಇದು ಬಹಳ ತೊಡಕಾದ ಪ್ರಶ್ನೆ.

ಸಾಕ್ರಟೀಸನು ನಾಗರಿಕ ಗ್ರೀಕ್ ಪ್ರಪಂಚದ ಪ್ರಥಮ ಗುರುವಾದರೂ ತನ್ನ ಬೋಧನೆಯ ವಿಚಾರವಾಗಿ ತಾನೇ ಸ್ವಂತವಾಗಿ ಏನನ್ನೂ ಬರೆದಿಡಲಿಲ್ಲ. ಆತನನ್ನು ಕುರಿತು ನಮಗೆ ತಿಳಿಸುವವರು ಇಬ್ಬರು : ಕ್ಸೆನೊಫೊನ್ ಮತ್ತು ಪ್ಲೇಟೊ. ಪ್ಲೇಟೊ ಚಿತ್ರವಿದ್ಯೆಯಲ್ಲಿ, ನಿರ್ಮಾಣ ಕಲೆಯಲ್ಲಿ, ಕ್ಸೆನೊಫನ್ನಿಗಿಂತಲೂ ಅತಿ ಕುಶಲನು. ಇದರಿಂದ ತನ್ನ ಸಂವಾದಗಳಲ್ಲೆಲ್ಲಾ ಸಾಕ್ರಟೀಸನನ್ನೇ ನಾಯಕನನ್ನಾಗಿ ಮಾಡಿದ್ದರೂ, ಎಷ್ಟೋಕಡೆ ಆತನ ಬೋಧನೆಗೆ ಬಣ್ಣ ಕಟ್ಟಿರುವನೆಂದೂ, ಅನೇಕ ವೇಳೆ ತನ್ನ ಸ್ವಂತ ಸಿದ್ಧಾಂತಗಳನ್ನು ನೆಪಮಾತ್ರಕ್ಕೆ ಗುರುವಿನ ಬಾಯಲ್ಲಿ

ಹೇಳಿಸಿರುವನೆಂದೂ ಸಂಶಯಪಟ್ಟು, ಇದುವರೆಗೂ ಚರಿತ್ರಕಾರರೂ ತತ್ವವಿಮರ್ಶಕರೂ ಪ್ಲೇಟೋವಿನ ಸಾಕ್ಷ್ಯವನ್ನು ಒತ್ತಟ್ಟಿಗಿಟ್ಟು ಕ್ಸೆನೊಫನ್ನಿನ ನೂತನ್ನೇ ನಿಜವೆಂದು ನಂಬಿದ್ದರು. ಇತ್ತೀಚೆಗೆ, ಅಂದರೆ ಈಗ ಇಪ್ಪತ್ತು ಮೂವತ್ತು ವರುಷಗಳಿಂದ, ಈ ವಾದ ಕಡಮೆಯಾಗಿ ಪ್ಲೇಟೋವಿನ ಚಿತ್ರ ಮೂಲಕ್ಕನುಸಾರವಾಗಿರಬಹುದೆಂಬ ಅನುಮಾನ ವಿಮರ್ಶಕರಲ್ಲಿ ತಲೆದೋರುತ್ತಿದೆ. ಈ ನೂತನ ದೃಷ್ಟಿಯನ್ನು ಪುಷ್ಟೀಕರಿಸುತ್ತಿರುವವರು ಇಂಗ್ಲೆಂಡಿನಲ್ಲಿ ಎ. ಇ. ಟೇಲರ್, ಜಾರ್ಜ್ ಬರ್ನೆಟ್ ಮತ್ತು ಇ. ಬಾರ್ಕರ್, ಅಮೇರಿಕದಲ್ಲಿ ಎ. ಕೆ. ರೋಜರ್ಸ್, ಮುಂತಾದ ಸುಪ್ರಸಿದ್ಧ ವಿದ್ವಾಂಸರು.

ನವೀನತೆಯೇ ಈ ದೃಷ್ಟಿಯ ಕಾಂತಿಯಲ್ಲ: ಅದಕ್ಕೆ ಸಮಂಜಸವಾದ ಕಾರಣಗಳೂ ಅನೇಕವಿವೆ. ಕ್ಸೆನೊಫನ್ನನು ಸಾಕ್ರಟೀಸನ ಜೊತೆಯಲ್ಲಿ ಓಡಾಡಿದುದು ಬಹಳ ಸ್ವಲ್ಪಕಾಲ ಮಾತ್ರ. ಈತನು ಬರೆದಿರತಕ್ಕ ಗ್ರಂಥಗಳಲ್ಲಿ ಅನೇಕವನ್ನು — ಅದರಲ್ಲಿಯೂ ಚರಿತ್ರಾತ್ಮಕ ಗ್ರಂಥಗಳನ್ನು—ನಂಬತಕ್ಕದ್ದಲ್ಲವೆಂದು ವಿಮರ್ಶಕಾರರು ತೀರ್ಮಾನಿಸಿರುವರು. ಹೀಗಿದ್ದೂ ಇವುಗಳಲ್ಲಿ ಒಂದಾದ "ಸ್ಮೃತಿ ಚಿತ್ರಗಳು" (*Memorabilia*) ಎಂಬುದನ್ನು ಮಾತ್ರ ಸಾಕ್ರಟೀಸನ ನಿಜವಾದ ಚಿತ್ರವನ್ನು ಕೊಡುವ ಗ್ರಂಥವೆಂದು ವಿಮರ್ಶಕರು ಹೇಗೆ ತೀರ್ಮಾನಿಸಿದರೋ ತಿಳಿಯುವುದು ಕಷ್ಟವಾಗಿದೆ. ಉದ್ದೇಶಪೂರ್ವಕವಾಗಿಯೇ ಕ್ಸೆನೊಫನ್ನನು ಸಾಕ್ರಟೀಸನ "ವಕೀಲನು." ಸಾಕ್ರಟೀಸನಲ್ಲಿ ಯಾವ ವಿಧವಾದ ತಪ್ಪಿಲ್ಲವೆಂದು ಸಮರ್ಥನ ಮಾಡಿಕೊಡುವುದೇ ಅವನ ಕೆಲಸ! ಇಂತಹವನ ಹೇಳಿಕೆಯನ್ನು ಸತ್ಯವೆಂದು ಹೇಗೆ ನಂಬುವುದು ? ಈತನು ಚಿತ್ರಿಸಿರುವ ಸಾಕ್ರಟೀಸನಿಗೆ ಧರ್ಮದಲ್ಲೇನೋ ವಿಶ್ವಾಸವಿದೆ, ಆದರೆ ಪ್ಲೇಟೋವಿನ ಸಾಕ್ರಟೀಸನಿಗಿರುವ ಪಾದರಸದಂತಹ ಚುರುಕುಬುದ್ಧಿಯಾಗಲಿ, ಹಾಸ್ಯರಸವಾಗಲಿ, ಮಾನವಜೀವನದ ಅಂತರ್ದೃಷ್ಟಿಯಾಗಲಿ ಇರುವುದಿಲ್ಲ. "ಸಾಕ್ರಟೀಸನ ವ್ಯಂಗ್ಯಭಾವ" ( Socratic irony ) ಎಂಬುದು ಈ ಪಾತ್ರದಲ್ಲಿ ಕಾಣುವುದೇ ಇಲ್ಲ. ತಾನು ಮಹಾ ಶೀಲವಂತನೆಂದೂ ಇತರರನ್ನು ಶೀಲವಂತರನ್ನಾಗಿ ಮಾಡುವುದೇ ತನ್ನ ಕೆಲಸವೆಂದೂ

ತೋರಿಸಿಕೊಳ್ಳುತ್ತಾನೆ; ಬಾಯಿ ಬಿಟ್ಟರೆ ಉಪದೇಶಕ್ಕೆ ಆರಂಭಿಸುತ್ತಾನೆ. ಇವನು ಅನುಸರಿಸುವ ಮಾರ್ಗ ಕೇವಲ ಅನುಭವಸಿದ್ಧವಾದ ರಾಜ ಬಾಟೆ; ಸಿದ್ಧಾಂತದಲ್ಲಿ ಅವನೂ ಸೋಫಿಸ್ಟರಂತೆ ಪ್ರಯೋಜನವಾದಿ (utilitarian); ಲೋಕರೂಢಿಯ—ವ್ಯವಹಾರಜ್ಞಾನದ—ತಲೆ ನರೆತ ಗುರು. ಸಾಕ್ರಟೀಸನ ಜೀವನವನ್ನು ಎರಡು ಭಾಗಗಳಾಗಿ ವಿಂಗಡಿಸ ಬಹುದು: ತನ್ನ ಕಾಲದ ಮತಸಂಬಂಧವಾದ ಮತ್ತು ವೈಜ್ಞಾನಿಕ ಚಳವಳಿಗಳಲ್ಲಿ ಅಭಿರುಚಿ ಹೊಂದಿದ್ದ ಪೂರ್ವಭಾಗವೊಂದು; ತನ್ನ ಪುರನಿವಾಸಿಗಳಲ್ಲಿ ಜ್ಞಾನದ ಬೆಳಕನ್ನು ಹರಡಬೇಕೆಂದು ತನ್ನ ಜೀವನ ವನ್ನೇ ಧಾರೆಯೆರೆದ ಉತ್ತರಭಾಗವೊಂದು. ಕ್ಸೆನೊಫನ್ನನು ಸಾಕ್ರಟೀಸನ ವಿಷಯವಾಗಿ ಹೇಳಿರುವುದೆಲ್ಲಾ ಈ ಉತ್ತರಭಾಗಕ್ಕೆ ಸಂಬಂಧಪಟ್ಟುದು-ಮುದುಕನಾಗಿದ್ದ ಸಾಕ್ರಟೀಸನನ್ನೇ ಆತನು ಕಂಡದ್ದು. ಸಾಕ್ರಟೀಸನು ವೈಜ್ಞಾನಿಕ ವಿಷಯಗಳ ಗೊಂದಲಕ್ಕೆ ಹೋಗಲಿಲ್ಲವೆಂದು ಕ್ಸೆನೊಫನ್ನನು ಹೇಳುವುದು ಅವನಿಗೆ ನಿಜಾಂಶ ತಿಳಿಯದ ದೋಷ. ಹಾಗೆ ಹೇಳಿದ ಉತ್ತರಕ್ಷಣದಲ್ಲಿಯೇ "ಆದರೂ ಈ ವಿಷಯಗಳಲ್ಲಿ [ಅಂದರೆ ಗಣಿತ ಮತ್ತು ಖಗೋಳ ಶಾಸ್ತ್ರಗಳಲ್ಲಿ] ಆತನಿಗೆ ವಿಶೇಷವಾದ ಪರಿಚಯವಿಲ್ಲದೆ ಇರಲಿಲ್ಲ" ಎಂದು ಎರಡು ಸಲ ತನ್ನ ಮಾತನ್ನು ವಿಶೇಷಿಸಿ ಹೇಳುತ್ತಾನೆ. ಸಾಕ್ರಟೀಸನು ಪೈಥಗೋರಿಯನರ ಮತ್ತು ಅವರ ಪೂರ್ವಿಕರ ಸಿದ್ಧಾಂತ ವನ್ನು ಚನ್ನಾಗಿ ಅರಿತಿದ್ದನು. ಅದನ್ನರಿಯದ ಯಾರೂ ಪೈಥಗೋರಿ ಯನರಾದ ಥೀಬ್ಸಿನ ಸೀಬೀಸನನ್ನೂ ಸಿಮ್ಮಿಯಸನನ್ನೂ ಆಕರ್ಷಿಸಲು ಶಕ್ತರಾಗುತ್ತಿರಲಿಲ್ಲ.[೧]

---

೧. "ಸಮರ್ಥನೆ" (ಅಪಾಲಜಿ) ಎಂಬ ಸಂವಾದದಲ್ಲಿ ಸಾಕ್ರಟೀಸನು ಭೌತಶಾಸ್ತ್ರಗಳ ವಿಚಾರ್ರವಾಗಿ ತನಗೇನೂ ಗೊತ್ತಿಲ್ಲವೆಂದು ಹೇಳಿಕೊಂಡಿರುವನು. ಚಿಕ್ಕಂದಿನಲ್ಲಿ ಭೌತ ಪ್ರಶ್ನೆಗಳಲ್ಲಿ ಹೆಚ್ಚು ಅಭಿರುಚಿಯುಳ್ಳವನಾಗಿದ್ದು ಅವುಗಳಿಗೆ ಸಮಂ ಜಸವಾದ ಉತ್ತರಗಳು ದೊರೆಯದ್ದರಿಂದ ಆ ಗೊಂದಲವನ್ನೇ ಬಿಟ್ಟುಬಿಟ್ಟೆ ನೆಂದು "ಫೀಡೊ"ವಿನಲ್ಲಿ ಹೇಳುತ್ತಾನೆ. ಈ ಕಾರಣದಿಂದ ಆತನ ಮಾತಿ ನಲ್ಲಿ ಅಸಂಬದ್ಧತೆಯೇನೂ ಇಲ್ಲ. ಮುಂದೆ ೧೩೮-೧೩೯ನೆಯ ಪುಟಗಳನ್ನು ನೋಡಿ.

ಇನ್ನು ಈ ಚಿತ್ರದಿಂದ ಪ್ಲೇಟೊವಿನ ಚಿತ್ರದ ಕಡೆಗೆ ತಿರುಗಿದರೆ ನಮಗೆ ಕಾಣುವುದೇನು? ಒಬ್ಬ ಜಿಜ್ಞಾಸು; ಪ್ರಪಂಚವನ್ನೇನೂ ಬಿಟ್ಟಿಲ್ಲ—ಅಥೆನ್ಸ್ ನಗರವನ್ನು ಕೂಡ ಬಿಟ್ಟು ವಿಶೇಷವಾಗಿ ಹೊರಗೆ ಹೋಗಿಲ್ಲ — ಆದರೂ ಎಲ್ಲರಂತೆ ಯಾವುದಾದರೂ ಕಸಬಿಗಾಗಲಿ ಉದ್ಯೋಗಕ್ಕಾಗಲಿ ಕೈ ಹಾಕದೆ, ಧರ್ಮವೆಂದರೇನು? ಸೌಂದರ್ಯವೆಂದರೇನು? ಶ್ರೇಯ ಯಾವುದು? ಎಂದು ತನ್ನೊಳಗೆ ತಾನೇ ತರ್ಕ ಮಾಡುವನು; ಇತರರೊಡನೆಯೂ ಚರ್ಚಿಸುತ್ತ ಅವರ ಚಿತ್ತಗರ್ಭದಲ್ಲಿ ಜ್ಞಾನ ಜನನವಾಗುವ ಸಂದರ್ಭದಲ್ಲಿ ಅವರಿಗೆ ಉಚಿತವಾಗಿ ಆಧ್ಯಾತ್ಮಿಕ ರೀತಿಯಲ್ಲಿ ಸೂಲಗಿತ್ತಿತನವನ್ನು ಮಾಡುತ್ತಿರುವನು. ತರ್ಕದಲ್ಲಿ ಕುಶಲಾಗ್ರಬುದ್ಧಿ, ಆದರೂ ಪ್ರೇಮ, ಕಾರುಣ್ಯ ಮೊದಲಾದ ಮಾನವ ಗುಣಪೂರಿತನು; ಪ್ರಯಾಸವಿಲ್ಲದೆ ಜಿತೇಂದ್ರಿಯನು, ಆದರೂ ವೈರಾಗ್ಯದ ಉಗ್ರವ್ಯಗ್ರತೆಗಳು ಲೇಶವಾದರೂ ಕಾಣುವುದಿಲ್ಲ; ಮಾನವ ಸ್ವಭಾವವನ್ನರಿಯಬಲ್ಲ ಅಂತರ್ದೃಷ್ಟಿಯುಳ್ಳವನು, ಜೊತೆಗೆ ರಸಿಕನು, ವ್ಯಂಗ್ಯ ವಿಡಂಬನಹಾಸ್ಯರಸಭರಿತನು. ಇವನಿಗೆ ಆಗಾಗ್ಗೆ ಒಂದು ವಿಧವಾದ ದೈವಿಕ ಅಶರೀರವಾಣಿ ಕೇಳಿಸುವುದು: ಯಾವುದಾದರೂ ಕೆಲಸಕ್ಕೆ ಕೈ ಹಾಕಿದಾಗ, ಅದು ಅನರ್ಥವಾಗುವ ಸಂದರ್ಭದಲ್ಲಿ ಬೇಡವೆಂದು ಹೇಳುವುದೇ ಹೊರತು ಯಾವುದನ್ನೂ ಮಾಡೆಂದು ಹೇಳುವುದಿಲ್ಲ. ಅಲ್ಲದೆ ಈತನಿಗೆ ಆಗಾಗ್ಗೆ ಅಸಾಧಾರಣವಾದ ಒಂದು ವಿಧದ ಆತ್ಮಪರವಶತೆಯು ಅಥವಾ ಸಮಾಧಿಯೋಗದ ಅನುಭವವೂ ಉಂಟು. ಪಾಟಿಡೇಯ ಎಂಬ ಸ್ಥಳಕ್ಕೆ ಯುದ್ಧಕ್ಕೆ ಹೋಗಿದ್ದಾಗ ಆಗ ಅವನಿಗಿನ್ನೂ ನಾಲ್ವತ್ತು ವರುಷವಾಗಿರಲಿಲ್ಲ. ಒಂದು ದಿನ ಮುಂಜಾನೆಯಿಂದ ಮಾರನೆಯ ದಿನ ಸೂರ್ಯೋದಯದವರೆಗೂ ಬಯಲಿನಲ್ಲಿ ಧ್ಯಾನನಿಮಗ್ನನಾಗಿ ನಿಂತು ಬಿಟ್ಟನಂತೆ! ಅವನ ಜೊತೆಗಾರರೆಲ್ಲರೂ ರಾತ್ರಿಯೆಲ್ಲ ಹಾಗೆಯೇ ನಿಂತಿರುವನೇನೋ ನೋಡಬೇಕೆಂದು ಕುತೂಹಲವುಳ್ಳವರಾಗಿ ತಮ್ಮ ಹಾಸಿಗೆಗಳನ್ನು ತಂದು ಬಯಲಿನಲ್ಲಿ ಹಾಸಿಕೊಂಡು ಮಲಗಿದ್ದರಂತೆ![೧] ಕನಸುಗಳಲ್ಲಿಯೂ, ದೇವವಾಣಿಗಳಲ್ಲಿಯೂ (oracles) ದೇವರು ತನ್ನ

೧. ಸಿಂಪೋಸಿಯಂ, ೨೨೦ c-d.

ಇಷ್ಟವನ್ನು ಮಾನವರಿಗೆ ಸೂಚಿಸುವನೆಂದು ಈತನು ನಂಬಿದ್ದನು.[೧] ಆ ಕಾಲದಲ್ಲಿ ಪ್ರಚಾರದಲ್ಲಿದ್ದ ರಹಸ್ಯ ವ್ರತಾಚರಣೆಗಳಲ್ಲಿಯೂ (mysteries) ಭಾಗ ವಹಿಸುತ್ತಿದ್ದನು.[೨]

ಆದುದರಿಂದ ಈತನು ಯೋಗಿ[೩] (mystic) ಎಂದು ಧಾರಾಳವಾಗಿ ಹೇಳಬಹುದು. ತನ್ನ ಕಾಲದ ಮತಸಂಬಂಧವಾದ ಚಳವಳಿಗಳಲ್ಲಿ ಈತನಿಗೆ ವಿಶೇಷ ಅಭಿಲಾಷೆ ಇತ್ತು. ಆತ್ಮ ನಿತ್ಯವೆಂದೂ ಪುನರ್ಜನ್ಮ ಉಂಟೆಂದೂ ಈತನು ನಂಬಿದ್ದನು. ಹಿಂದಿನ ಕಾಲದ ಯೋಗಿಗಳೂ ಯೋಗಿಣಿಯರೂ ಇದೇ ಅರ್ಥಗಳನ್ನು ಬೋಧಿಸಿರಲಿಲ್ಲವೆ?[೪]. ಕೊನೆಯ ವರೆಗೂ ಈತನಿಗೆ ಪೂರ್ವಕಾಲದ ಮತಸಂಬಂಧವಾದ ವಾಕ್ಯಗಳಲ್ಲಿ—ಉದಾಹರಣೆಗೆ, ಆತ್ಮ ದೇಹವೆಂಬ ಸೆರೆಮನೆಯಲ್ಲಿ ಸಿಕ್ಕಿಕೊಂಡಿದೆ, ದೇಹವನ್ನು ಬಿಡುವವರೆಗೂ ಅದಕ್ಕೆ ಪೂರ್ಣ ಮುಕ್ತಿ ಇಲ್ಲ, ಮುಂತಾದ ವಾಕ್ಯಗಳಲ್ಲಿ—ವಿಶೇಷವಾದ ವಿಶ್ವಾಸವಿತ್ತು[೫]. ಆದರೂ ಈತನೇನೂ ಭ್ರಾಂತಿಮೋಹಿತನಲ್ಲ. ಆರ್ಫಿಕ್ ಮತ್ತು ಪೈಥಗೋರಿಯನ್ ಮತಪದ್ಧತಿಗಳಲ್ಲಿ ಈತನಿಗೆ ಚಪಲವಿದ್ದರೂ ಅವುಗಳಿಂದ ಈತನ ಸಹಜವಾದ ಸುಟಿ ಬುದ್ಧಿಯಾಗಲಿ, ಜಾಣತನ—ವಿವೇಕ—ವಾಗಲಿ ಕೆಡಲಿಲ್ಲ. ಒಂದು ವಿಷಯದ ಸತ್ಯಾರ್ಥವನ್ನು ತಾನು ಮನಗಂಡಿದ್ದರೂ ಅದನ್ನು ಇತರರಿಗೆ ಬೋಧಿಸುವುದರಲ್ಲಿ ಅಪರೂಪವಾದ ಜಾಗರೂಕತೆಯನ್ನು ತೋರುವನು, ತಾನು ಹೇಳಿದ ಮಾತುಗಳನ್ನು ಅಕ್ಷರಶಃ ನಂಬಕೂಡದೆಂದು ಅವರಿಗೆ ಎಚ್ಚರಿಕೆ ಕೊಡುವನು. ಪುರಾಣಕಥೆಗಳು ಸತ್ಯಾರ್ಥದ ಕಂಪನ್ನು ಕೊಡಬಲ್ಲವೇ ಹೊರತು ಅವುಗಳಲ್ಲಿಯೇ ಸತ್ಯದ ಸವಿಯಿಲ್ಲವೆಂದು ಹೇಳುವನು.

ಇದನ್ನೆಲ್ಲಾ ನೋಡಿದರೆ ಈತನ ವ್ಯಕ್ತಿತ್ವದಲ್ಲಿ ಚೆನ್ನಾಗಿ ಕಂಡು ಬರುತ್ತಿದ್ದ ಎರಡು ಬೇರೆ ಬೇರೆ ದಾರಗಳು ಹಾಸು ಹೊಕ್ಕಿನಂತೆ ಹೆಣೆದು

---

೧. (ಅಪಾಲಜಿ) "ಸಮರ್ಥನೆ", ೨೩ ; ಫೀಡೊ. ೨. ಅರಿಸ್ಟಾಫನೀಸ್ ಎಂಬ ಕವಿಯ "ಮೇಘಗಳು" ಎಂಬ ನಾಟಕವನ್ನು ನೋಡಿ. ೩. ಇಲ್ಲಿ 'ಯೋಗಿ' ಎಂಬ ಶಬ್ದಕ್ಕೆ ಧರ್ಮಾವಲಂಬನೆಯಿಂದ ಜ್ಞಾನವನ್ನು ಪಡೆದು ದಿವ್ಯಸಾಕ್ಷಾತ್ಕಾರವನ್ನು ಹೊಂದಿರುವವನು ಎಂದು ಅರ್ಥ ಮಾಡಿಕೊಳ್ಳಬೇಕು. ೪. ಮೆನೊ, ೮೧, ಎ. ೫. ಕ್ರಾಟಿಲಸ್, ೪೦೦ ಸಿ.

ಕೊಂಡಿದ್ದುದೆಂದು ಹೇಳಬಹುದು. ಈತನೇನೋ ಯೋಗಿಯೇ, ಇದಕ್ಕೆ ಬೇಕಾದಷ್ಟು ಆಧಾರಗಳಿವೆ. ಈತನಿಗೆ ಅನ್ಯಾದೃಶವಾದ ಸತ್ಯಸೌಂದರ್ಯ ಸೌಜನ್ಯಾದಿಗಳನ್ನು ಹೊಂದಬೇಕೆಂಬ ಉತ್ಕಟ ಆಕಾಂಕ್ಷೆ. ಸೌಂದರ್ಯವುಳ್ಳ ಶರೀರವೊಂದನ್ನು ನೋಡಿದರೆ ಅದರಿಂದ ನಮ್ಮ ಮನಸ್ಸು ಸೌಂದರ್ಯವುಳ್ಳ ಆತ್ಮದ ಧ್ಯಾನಕ್ಕೂ ಸುಂದರವಾದ ಜೀವನದ ಅನುಷ್ಠಾನಕ್ಕೂ ಏರುವುದು. ಕಡೆಯಲ್ಲಿ, ಸೌಂದರ್ಯ, ಧಾರ್ಮಿಕತನ, ಪವಿತ್ರತೆ—ಮುಂತಾದ ಪರಮ ಭಾವರೂಪಗಳ ಸಾನ್ನಿಧ್ಯಕ್ಕೇ ನಮ್ಮ ಮನಸ್ಸು ಹೋಗಿ ನಿಂತು ಅವುಗಳ ನಿರತಿಶಯ ಸೊಬಗನ್ನು ನೋಡಿ ಶಾಂತಿ ಸಮಾಧಾನಗಳನ್ನು ಹೊಂದುವುದು.[೧] ಇಂದ್ರಿಯಬದ್ಧವಾದ ಈ ಪ್ರಪಂಚ ಈ ಭಾವ ಪ್ರಪಂಚದ—ಇದಕ್ಕೆ "ಸಾಮಾನ್ಯ" ಲೋಕ[೨]ವೆನ್ನುವರು (the world of Ideas)—'ನಕಲು' ಅಥವಾ ಪ್ರತಿಕೃತಿ ಮಾತ್ರ. ನಾವು ಜನ್ಮ ಎತ್ತುವುದಕ್ಕೆ ಪೂರ್ವದಲ್ಲಿ ಭೌತದೇಹರಹಿತರಾಗಿದ್ದಾಗ ಈ ದಿವ್ಯಲೋಕದ ನಿತ್ಯಸತ್ತುಗಳನ್ನು ಈಕ್ಷಿಸಿದ್ದೆವು. ಈ ಜನ್ಮದ ಜ್ಞಾನವೆನ್ನುವುದು ಈ ಪೂರ್ವದ ಅಪರೋಕ್ಷಾನುಭವದ ಸ್ಮೃತಿ ಮಾತ್ರ. ಇಂತಹ ಪರಮ ಸಾಕ್ಷಾತ್ಕಾರವನ್ನು ಪುನಃ ನಾವು ಪಡೆಯುವಂತೆ ಮಾಡುವುದೇ ತತ್ವಶಾಸ್ತ್ರದ ಮುಖ್ಯಗುರಿ. ಇಂತಹ ಸಾಕ್ಷಾತ್ಕಾರವನ್ನು ಸಾಕ್ರಟೀಸನು ತಾನೇ ಹೊಂದಿದ್ದನೆಂಬುದರಲ್ಲಿ ಸಂದೇಹವೇನೂ ಇಲ್ಲ[೩]. ಇದು ಸಾಕ್ರಟೀಸನ ಆತ್ಮೀಯಗುಣನಿರೂಪಣ : ಸತ್ಯವನ್ನೂ ಧರ್ಮಜ್ಞಾನವನ್ನೂ ಪಡೆಯಲು ಸಾಧ್ಯವೆಂಬ ನಂಬಿಕೆ, ಮತ್ತು ಪಡೆಯಲೇಬೇಕೆಂಬ ಆಸೆ, ಆದರೆ ಆ ಜ್ಞಾನ ತನಗಿನ್ನೂ ಪೂರ್ತಿಯಾಗಿ ದೊರೆತಿಲ್ಲವೆಂಬ ಹಂಬಲು. ಇದರ ಜೊತೆಯಲ್ಲಿಯೇ ಆತನಿಗೆ ಅನುಪಮವಾದ ಬುದ್ಧಿಕೌಶಲಗಳಿದ್ದುವು. ಆತನ ಎದುರಾಳಿಗಳು ಆತನನ್ನು 'ತಂತ್ರಗಾರ'ನೆಂದು ಕರೆಯುತ್ತಿದ್ದರು. ತನಗೆಷ್ಟು ಕಾಣಿಸುತ್ತಿತ್ತೋ ಅಷ್ಟನ್ನು ದೃಢವಾಗಿ ಹೇಳಬಲ್ಲನೇ ಹೊರತು ಅದಕ್ಕೆ ಮುಂದೆ ಒಂದು ಹೆಜ್ಜೆ ಇಡಲೂ ಸಮ್ಮತಿಸುತ್ತಿರಲಿಲ್ಲ. ಉತ್ಪ್ರೇಕ್ಷೆ, ಅಲಂಕಾರ, ಕಪಟ ಭಾವ—ಇವುಗಳನ್ನು ಕಂಡರೆ ಸ್ವಾಭಾವಿಕವಾಗಿ ಹಿಂಜರಿಯುತ್ತಿದ್ದನು.

---

೧. ಫೇಡ್ರಸ್, ೨೪೭, ಸಿ (ಮುಂದೆನೋಡಿ) ೨. ೧೯೦ ನೇ ಪುಟನೋಡಿ.
೩. ಬರ್ನೆಟ್, ಗ್ರೀಕ್ ತತ್ವಶಾಸ್ತ್ರ : ೧೪೦.

ಇಂತಹ ಹಿನ್ನೆಲವನ್ನು ಜ್ಞಾಪಕದಲ್ಲಿಟ್ಟುಕೊಂಡರೆ ಬಹಿರಂಗದಲ್ಲಿ ಆತನು ಇತರರೊಡನೆ ನಡಸುತ್ತಿದ್ದ ವಾದವಿವಾದದ ಆಂತರಿಕತ್ವವನ್ನು (inwardness) —ಅದರರ್ಥವನ್ನು—ಅರಿತು ಬೆಲೆಗಟ್ಟಬಹುದು. ಸತ್ಯ ಜ್ಞಾನವನ್ನು ದೊರಕಿಸಿಕೊಳ್ಳುವುದು ಬಹಳ ಕಷ್ಟ. ಡೆಲ್ಫಿಯ ದೇವ ವಾಣಿ ಮಾನವರಲ್ಲೆಲ್ಲಾ ಸಾಕ್ರಟೀಸನೇ ಅತ್ಯಂತ ವಿವೇಕಿಯೆಂದು ಹೇಳಿತ್ತು. ಇಲ್ಲಿ ತನ್ನ ಸ್ಥಿತಿಯನ್ನು ನೋಡಿಕೊಂಡರೆ ಸತ್ಯದ ನಿಲುಕು ತನಗಿನ್ನೂ ಪೂರ್ಣವಾಗಿ ಸಿಕ್ಕಿಲ್ಲ. ಆದರೆ ಸಿಕ್ಕಿಲ್ಲವೆಂದೇನೋ ತನಗೆ ಗೊತ್ತು—ಇತರರಿಗೆ ತಮ್ಮ ವಿಷಯದಲ್ಲಿ ಆ ಜ್ಞಾನ ಕೂಡ ಇಲ್ಲ, ಈ ಅರ್ಥದಲ್ಲಿ ಮಾತ್ರ ಎಲ್ಲರಿಗಿಂತಲೂ ತಾನು ವಿವೇಕಿಯೆಂದೆನ್ನಬಹುದು. ವಸ್ತುಸ್ಥಿತಿ ಹೀಗಿರುವಲ್ಲಿ, ಇತರರು—ಮುಖ್ಯವಾಗಿ ಸೋಫಿಸ್ಟರು—ತಾವು ವಿವೇಕಿಗಳೆಂದೂ ತಮ್ಮ ವಿವೇಕವನ್ನು ಇತರರಿಗೂ ಬೋಧಿಸುತ್ತೇವೆಂದೂ ಜಂಭ ಮಾಡಿದರೆ, ಸ್ವಾಭಾವಿಕವಾಗಿ ಸಾಕ್ರಟೀಸನಿಗೆ ಅವರ ಬಂಡವಾಳವಿಲ್ಲದ ಬಡಾಯಿಯ ಪೊಳ್ಳುತನವನ್ನು ತೋರಿಕೊಡಬೇಕೆಂಬ ಆಸೆ. ಆದುದರಿಂದ ವಾದಮಾಡುವಾಗಲೆಲ್ಲಾ ಅವನ ಮೊಗದಲ್ಲಿ ಮಿಂಚಿನಂತಹ, ಭೇದಿಸಿಕೊಂಡುಹೋಗುವ, ಅರಿತೂ ಅರಿಯದೆನ್ನುವ, ಯಾವುದನ್ನೂ ಪ್ರಮಾಣವಿಲ್ಲದೆ ನಂಬದ, ಇತರರಲ್ಲಿ ಕಂಡುಬರುವ ತಿಳಿಗೇಡಿತನ—ವೈಪರೀತ್ಯ—ವನ್ನೇ ಎದುರು ನೋಡುತ್ತಿದ್ದು ಅಂತಹ ದುರಭಿಮಾನದ ಬುದ್ಬುದ ತರಂಗಗಳು ಎದ್ದಹಾಗೆಲ್ಲಾ ಅವುಗಳನ್ನು ತರ್ಕ ಪ್ರಯೋಗದಿಂದ ತೂರಿಬಿಡಬೇಕೆನ್ನುವ, ಒಂದು ವಿಧವಾದ ಅಮಾನುಷ—ಅಲೌಕಿಕ—ತೇಜಃ ಕಿರಣವೊಂದು ಆಡುತ್ತಲೇ ಇರುವುದು. ಆದರೆ ಎದುರಾಳಿಯ ಪಂಥದ ಮೂಢತ್ವವನ್ನು ತೋರಿಕೊಡುವುದೇ ಅವನ ಮುಖ್ಯ ಗುರಿಯಲ್ಲ: ತನ್ಮೂಲಕ ಅವರಿಗೆ ಜ್ಞಾನೋದಯವಾಗಿ ಅವರು ಸತ್ಯಕಾಮಿಗಳಾಗಲೆಂದೇ ಅವನ ಆಂತರಿಕ ಬಯಕೆ. ಒಂದು ಮಾತಿನಲ್ಲಿ—ಪ್ಲೇಟೋವಿನ ಸಾಕ್ರಟೀಸನು ತನ್ನ ಆತ್ಮ ಜೀವನದಲ್ಲಿ ಪರಮಯೋಗಿ, ಬಾಹ್ಯ ಜೀವನದಲ್ಲಿ ಅಸದೃಶನಾದ ಸಮಾಜಸುಧಾರಕ.

ಸಾಕ್ರಟೀಸನ ಈ ಗುಣಕಥನಚಿತ್ರ ಸುಳ್ಳೆಂದು ನಾವು ಹೇಗೆ ಊಹಿಸುವುದು? ಪ್ಲೇಟೋ ಸಾಕ್ರಟೀಸನ ಶಿಷ್ಯನಾಗಿ ಅವನ ಜೊತೆ

ಯಲ್ಲಿ ಬಹುಕಾಲ ಓಡಾಡಿ ಅವನ ಮನಸ್ಸನ್ನೂ ಅವನ ಸ್ನೇಹಿತರ ಮನೋಭಾವಗಳನ್ನೂ ಚೆನ್ನಾಗಿ ಅರಿತಿದ್ದನು. ಅಲ್ಲದೆ ಕ್ಸೆನೊಫನ್ನನಿಗಿಂತಲೂ ಅಪರಿಮಿತ ಹೆಚ್ಚು ಶಕ್ತಿಯುಳ್ಳ ತಾತ್ವಿಕ ಶ್ರೇಷ್ಠನು. ಉದ್ದೇಶ ಪೂರ್ವಕವಾಗಿಯೇ ತನ್ನ ಗುರುವಿನ ವಿಷಯದಲ್ಲಿ ಅಬದ್ಧವನ್ನು ಹೆಣೆಯುತ್ತಿದಾನೇನು? ಹಾಗೆ ಊಹಿಸುವುದಾದರೆ ಅರಿಸ್ಟಾಫನೀಸ್ ಎಂಬ ನಾಟಕ ಕವಿ ಕೊಡುವ ಸಾಕ್ರಟೀಸನ ಚಿತ್ರ ಪ್ಲೇಟೊ ಕೊಡುವ ಸಾಕ್ರಟೀಸನ ಯೌವನಚಿತ್ರವನ್ನು ಮುಖ್ಯವಿಷಯಗಳಲ್ಲೆಲ್ಲಾ ಸರಿಹೋಲುತ್ತದಲ್ಲಾ — ಇದಕ್ಕೇನು ವಿವರಣೆಯನ್ನು ಕೊಡೋಣ? ಸಾಕ್ರಟೀಸನ ಜೀವನವನ್ನು ಪೂರ್ವ ಉತ್ತರಗಳೆಂದು ಎರಡು ಭಾಗಗಳಾಗಿ ವಿಂಗಡಿಸಬಹುದೆಂದು ಹಿಂದೆಯೇ ಹೇಳಿದ್ದೇವಷ್ಟೆ. ಅರಿಸ್ಟಾಫನೀಸನು ಸಾಕ್ರಟೀಸನ ಜೀವನದ ಪೂರ್ವಭಾಗವನ್ನು ಕುರಿತು ನಮಗೆ ತಿಳಿಸುವನು. ಇವನ ಚಿತ್ರವನ್ನು ಈತನ "ಮೇಘಗಳು" ("Clouds") ಎಂಬ ಪ್ರಹಸನದಲ್ಲಿ ಕಾಣಬಹುದು. ಈ ನಾಟಕದಲ್ಲಿ ಸಾಕ್ರಟೀಸನನ್ನು ಹಾಸ್ಯ ಮಾಡುವುದೇ ಕವಿಯ ಮುಖ್ಯ ಉದ್ದೇಶ. ಆದರೂ ಒಬ್ಬ ಮನುಷ್ಯನ ವಿಷಯದಲ್ಲಿ ಹತ್ತು ಮಂದಿ ಸರ್ವಸಾಮಾನ್ಯವಾಗಿ ಕಂಡು ಕೇಳಿ ತಿಳಿದುಬಂದಿರುವಂತಹ **ವಾಸ್ತವಿಕವಾದ ವಿಚಾರಗಳ ಆಧಾರವಿಲ್ಲದೆ** ಅವನನ್ನು ಹಾಸ್ಯಕ್ಕೆ ಗುರಿಮಾಡುವುದು ಹೇಗೆ? ಈ ನಾಟಕ ಹೊರಬಿದ್ದಾಗ ಸಾಕ್ರಟೀಸನ ವಯಸ್ಸು ನಲವತ್ತೇಳೇ. ಈ ಪೂರ್ವಭಾಗದ ತನ್ನ ಜೀವನದಲ್ಲಿ ಸಾಕ್ರಟೀಸನು ವಿಶೇಷವಾಗಿ ಮತ ಸಂಬಂಧವಾದ ಮತ್ತು ಪ್ರಕೃತಿಶಾಸ್ತ್ರ ಸಂಬಂಧವಾದ ಸಮಸ್ಯೆಗಳನ್ನು ಬಿಡಿಸುತ್ತಿದ್ದನೆಂದೂ, ಈ ವಿಚಾರಗಳಲ್ಲಿ ಆ ಕಾಲದಲ್ಲಿ ರೂಢಿಯಾಗಿದ್ದ ಜಡತತ್ತ್ವವಾದ(mechanical explanation) ಈತನ ಮನಸ್ಸಿಗೆ ಸೊಗಸು ಗಾಣಿಸಲಿಲ್ಲವೆಂದೂ, ಪ್ರಕೃತಿವ್ಯಾಪಾರಗಳೆಲ್ಲವನ್ನೂ ಚೈತನ್ಯದ (mind) ಸಹಾಯದಿಂದ ವಿವರಿಸಬೇಕೆಂದು ತಾನು ಹಲುಬುತ್ತಿದ್ದನೆಂದೂ ಫೀಡೋ ಎಂಬ ಸಂವಾದದಲ್ಲಿ ತಾನೇ ಹೇಳಿಕೊಂಡಿರುವುದನ್ನು ಮರೆಯಬಾರದು[೧]. ಪ್ರಾಣದ ಮೂಲವೇನು? ನಾವು ಯೋಚಿಸುವುದು

೧. **ಫೀಡೋ, ೯೬, a (ಮುಂದೆ ನೋಡಿ.)**

ವಾಯುವಿನ ಸಹಾಯದಿಂದಲೇ, ರಕ್ತದ ಸಹಾಯದಿಂದಲೇ? ಸಂವೇದನೆಗೂ (sensation) ನಂಬಿಕೆಗೂ ಜ್ಞಾನಕ್ಕೂ ಸಂಬಂಧವೇನು?—ಇವೇ ಮೊದಲಾದ ಪ್ರಶ್ನೆಗಳನ್ನು ಆ ಕಾಲದಲ್ಲಿ ಈತನು ಚರ್ಚಿಸುತ್ತಿದ್ದನು. ಸಮಸ್ತ ಪದಾರ್ಥಗಳೂ ವಾಯುವಿನ ವಿರಳನ ಮತ್ತು ಘನೀಭವನ ಎಂಬ ರೂಪಾಂತರದ ಫಲಗಳೇ ಎಂದು ಅನಾಕ್ಸಿಮಿನೀಸನು ಹಿಂದೆ ಸಾರಿದ್ದ ತತ್ವವನ್ನು ಸಾಕ್ರಟೀಸನ ಕಾಲದಲ್ಲಿ ಡಯೋಜನೀಸ್ ಎಂಬ ತಾತ್ವಿಕನು ಪುಷ್ಟೀಕರಿಸುತ್ತಿದ್ದನು: ವಾಯುವಿನ ಘನೀಭವನದ ಪ್ರಥಮ ಫಲಗಳೇ ಮೇಘಗಳು. ಸಾಕ್ರಟೀಸನು ಈ ವಿಚಾರದಲ್ಲಿ ಡಯೋಜನೀಸಿನ ಸಿದ್ಧಾಂತದಲ್ಲಿ ವಿಶ್ವಾಸ ತೋರಿಸಿ ತತ್ಸಂಬಂಧವಾದ ಪ್ರಶ್ನೆಗಳನ್ನು ಚರ್ಚಿಸುತ್ತಿದ್ದುದರಿಂದ, ಈತನು ಒಂದು ಬುಟ್ಟಿಯಲ್ಲಿ ಕುಳಿತು ಶುದ್ಧ ವಾಯುವಿನ ಸೇವನೆಗೋಸ್ಕರ ಗಗನಮಂಡಲದಲ್ಲಿ ತೂಗಾಡುತ್ತಿದ್ದನೆಂದು ಅರಿಸ್ಟಾಫನೀಸನು ತನ್ನ ಪ್ರಹಸನದಲ್ಲಿ ಸಾಕ್ರಟೀಸನನ್ನು ಹಾಸ್ಯ ಮಾಡಿರುವನು. ಸಾಕ್ರಟೀಸನು ಅಧ್ಯಾತ್ಮ ವಿದ್ಯೆಯಲ್ಲಿ "ಸೂಲಗಿತ್ತಿತನ"ವನ್ನು ಮಾಡುತ್ತಿದ್ದುದೂ ಈ ಕವಿಗೆ ಗೊತ್ತುಂಟು (ಒಂದು ಯೋಚನೆ ಗರ್ಭಸ್ರಾವವಾಗಿಹೋಯಿತೆಂದು ಹೇಳಿದ್ದಾನೆ!). ಸಾಕ್ರಟೀಸನು ರಹಸ್ಯ ವ್ರತಾಚರಣೆಗಳಲ್ಲಿ ಭಾಗಿಯಾಗುತ್ತಿದ್ದುದನ್ನೂ ಹಾಸ್ಯಮಾಡಿದ್ದಾನೆ. ಸಾಕ್ರಟೀಸನು ಸೋಫಿಸ್ಟನೆಂದು ಈ ಕವಿ ಹೇಳಿರುವನು. ಸಾಕ್ರಟೀಸನ ತರ್ಕವಿಧಾನ ಮೇಲ್ಭಾಗದಲ್ಲಿ ಸೋಫಿಸ್ಟರ ತರ್ಕವನ್ನೇನೋ ಹೋಲುತ್ತಿತ್ತು. ಸೋಫಿಸ್ಟರಂತೆಯೇ ಈತನೂ ಜನರ ಮೂಢ ಪದ್ಧತಿಗಳನ್ನೂ ನಂಬಿಕೆಗಳನ್ನೂ ತನ್ನ ತರ್ಕ ಬಾಣಕ್ಕೆ ಗುರಿಮಾಡುತ್ತಿದ್ದನು. ಗುಲ್ಲೆಬ್ಬಿಸುವುದೇ ಪ್ರಧಾನ ಉದ್ದೇಶವನ್ನಾಗಿ ಇಟ್ಟುಕೊಂಡಿದ್ದ ಅರಿಸ್ಟಾಫನೀಸನು ಈ ಬಾಹ್ಯ ಹೋಲಿಕೆಗಳಿಂದ ಸಾಕ್ರಟೀಸನನ್ನು ಸೋಫಿಸ್ಟನೆಂದು ಕರೆದದ್ದು ಏನಾಶ್ಚರ್ಯ?

ಈ ರೀತಿಯಲ್ಲಿ ಪ್ಲೇಟೋವಿನ ವರ್ಣನೆಯನ್ನು ಅರಿಸ್ಟಾಫನೀಸನೂ ತನ್ನ ಹಾಸ್ಯ ರೀತಿಯಲ್ಲಿಯೇ ಸಮರ್ಥಿಸಿರುವನು. ಪ್ಲೇಟೋವಿಗೆ ತನ್ನ ಗುರುವಿನಲ್ಲಿ ಅಪಾರ ಪ್ರೇಮವೂ ಭಕ್ತಿವಿಶ್ವಾಸಗಳೂ ಇದ್ದುವು. ಇಂತಹ ಶಿಷ್ಯನು ಗುರು ವಸ್ತುತಃ ಒಂದು ಮಾದರಿ ಮನುಷ್ಯನಾಗಿರಲು, ಇದಕ್ಕೆ

ಪೂರ್ಣ ವ್ಯತ್ಯಸ್ತವಾದ ಮತ್ತೊಂದು ಮಾದರಿ ಮನುಷ್ಯನನ್ನು ಚಿತ್ರಿಸಿ, ಈತನನ್ನು ತನ್ನ ಗುರುವಾದ ಸಾಕ್ರಟೀಸೇ ಎಂದು ಪ್ರಪಂಚದ ಮುಂದಿಟ್ಟ ನೆಂದರೆ, ಇದು ಸಂಭಾವ್ಯವಾದ ವಿಷಯವೇ? ತನ್ನ ಗುರುವಿನ ಬೋಧನೆ ಯನ್ನು ಅಲ್ಲಿ ಇಲ್ಲಿ ಕೊಂಚ ಬಲಪಡಿಸುವ ಪ್ರಯತ್ನ ಮಾಡಿದ್ದಾನೆಂದರೆ, ಒಪ್ಪಬಹುದು; ಆದರೆ ಆ ಬೋಧನೆಗೆ ತೀರಾ ಅಸಮಂಜಸವಾದ ವಿಷಯಗಳನ್ನು ಅದರ ಮೇಲೆ ಆರೋಪಮಾಡಿರುವನೆಂದರೆ, ಅದರಲ್ಲಿಯೂ ಗುರು ಧರ್ಮಸಂಸ್ಥಾಪನೆಗಾಗಿ ಪ್ರಾಣತ್ಯಾಗ ಮಾಡುವ ಪವಿತ್ರ ಗಳಿಗೆಗಳಲ್ಲಿ[1] ಆತನ ಇಷ್ಟಕ್ಕೆ ವಿರೋಧವಾದ ತನ್ನ ಸ್ವಂತ ಅಭಿಪ್ರಾಯ ಗಳನ್ನು ಆತನ ಬಾಯಲ್ಲಿ ಹಾಕಿರುವನೆಂದರೆ, ಇದು ಎಷ್ಟುಮಾತ್ರ ವಾದರೂ ನಂಬತಕ್ಕ ಮಾತೇ? ಇದೇ ಅಲ್ಲವೆ ಗುರುವಿಗೆ ಗೌರವಕೊಡುವ ಶಿಷ್ಯನ ಶಿಷ್ಟಾಚಾರ ಪದ್ಧತಿ! ಸಾಕ್ರಟೀಸನು ಯೋಗಿಯಾಗಿಲ್ಲದಿದ್ದರೆ ಶಿಷ್ಯನು ಬರೆದಿರುವ ಚಿತ್ರವಿದೇ! ಆತನು ಯೋಗಿಯಾಗಿದ್ದುದು ನಿಜ ವಾಗಿದ್ದರೆ ಕ್ಸೆನೊಫನ್ನಿನ ಸಾಕ್ಷ್ಯ ತೀರಾ ಅಸಂಭವ. ಇಷ್ಟೇ ಅಲ್ಲ, ಈ ಚಿತ್ರ ಸುಳ್ಳಾದರೆ ಪ್ಲೇಟೋವಿನ ಕಲಾಕೌಶಲಕ್ಕೂ ನಾವು ಪ್ರಾಶಸ್ತ್ಯ ವನ್ನು ಕೊಟ್ಟಹಾಗಾಗುವುದಿಲ್ಲ. "ಸಿಂಪೋಸಿಯಂ" ಎಂಬ ಸಂವಾದ ಪ್ಲೇಟೋವಿನ ಚಿತ್ರನಿರ್ಮಾಪಕ ಕಲೆಯ ಅತ್ಯುನ್ನತ ಶಿಖರವನ್ನು ಮುಟ್ಟಿರುವುದೆಂದು ವಿಮರ್ಶಕಾರರೆಲ್ಲರೂ ಒಪ್ಪುತ್ತಾರೆ. ಇದರಲ್ಲಿಯೇ ಸಾಕ್ರಟೀಸನ ಸರ್ವತೋಮುಖವಾದ ವ್ಯಕ್ತಿತ್ವ ನಮಗೆ ದೊರಕುವುದು. ಇಂತಹ ಸಂವಾದದಲ್ಲಿ ನಾಯಕನ ಪಾತ್ರವನ್ನು ಆತನ ಸ್ವಭಾವಕ್ಕೆ ತೀರಾ ವ್ಯತ್ಯಾಸವಾಗಿ ಮಾತನಾಡುವಂತೆ ಚಿತ್ರಿಸುವುದು—ಚಿತ್ರಿಸುವ ಹಸ್ತಕೌಶಲ—ಉತ್ತಮ ಕಲೆಯ ಹೆಗ್ಗುರುತೋ? ಹಾಗೆ ತನ್ನ ಸ್ವಂತ ಊಹಾಪೋಹಗಳನ್ನು ಆಡಿಸಿ ತೋರಿಸಲು ಸಾಕ್ರಟೀಸನನ್ನು ಬರಿಯ ಗೊಂಬೆಯಂತೆ ಪ್ಲೇಟೊ ಭಾವಿಸಿದ್ದನೆಂದರೆ, ತನ್ನ ಅಪರ ವಯಸ್ಸಿನಲ್ಲಿ ಬರೆದ ಕೆಲವು ಸಂವಾದಗಳಲ್ಲಿ ಸಾಕ್ರಟೀಸನನ್ನು ಏಕೆ ಖಂಡಿಸುತ್ತಿದ್ದನು? ಮತ್ತೆ ಕೆಲವು ಸಂವಾದಗಳಲ್ಲಿ[2] ಸಾಕ್ರಟೀಸನನ್ನೇಕೆ ರಂಗಕ್ಕೆ ತರದೆ ಪೂರ್ಣವಾಗಿ ಬಿಟ್ಟುಬಿಡುತ್ತಿದ್ದನು? ಇಷ್ಟರಮೇಲೆ ಸಾಕ್ರಟೀಸನು

೧. ಫೀಡೊ. ೨. "ರಾಜನೀತಿಕುಶಲ" (Statesman) ಮತ್ತು "ಶಾಸನಗಳು" (Laws).

ಕ್ಸೆನೊಫನ್ನನು ತೋರಿಸುವ ಮಂದಬುದ್ಧಿಯ, ಹಾಸ್ಯರಸರಹಿತನಾದ, ಸ್ವಪ್ರತಿಷ್ಠಾಪರನಾದ, ಸಂತೆಯಲ್ಲಿ ಸತ್ಯವೇದವನ್ನು ಹೇಳುವ ಸುವಾರ್ತಾ ಪಾದ್ರಿಯಾಗಿದ್ದಿದ್ದರೆ, ಆತನು ಪ್ಲೇಟೊ, ಅರಿಸ್ಟಪಸ್, ಅಲ್ಕಿಬಿಯಾಡೀಸ್, ಯೂಕ್ಲಿಡ್, ಆಂಟಿಸ್ತನೀಸ್, ಮೊದಲಾದ ಭಿನ್ನ ರುಚಿಗಳುಳ್ಳ ಅನೇಕ ಯುವಕರ ಮೇಲೆಯೂ, ತನ್ನ ಕಾಲದ ಸಮಗ್ರ ಗ್ರೀಕ್ ಪ್ರಪಂಚದ ಮೇಲೆಯೂ, ತನ್ನ ಜೀವಿತದ ಕೊನೆಯವರೆಗೂ ಅಷ್ಟು ಅಮೋಘವಾದ ಸಂಸ್ಕಾರವನ್ನು ಬೀರಲು ಶಕ್ತನಾಗುತ್ತಿದ್ದನೆ? ಫೀಡೋ ತನ್ನ ಕತೆಯ ಕೊನೆಯಲ್ಲಿ ಕೊಡುವ ಪ್ರಶಸ್ತಿಗೆ ಅರ್ಹನಾಗುತ್ತಿದ್ದನೆ? ನಾವು ಸಾಮಾನ್ಯವಾಗಿ ಕೊಂಡಾಡುವ ಸಾಕ್ರಟೀಸನ ಚಿತ್ರ ಪ್ಲೇಟೋವಿನಿಂದ ಬಂದದ್ದು; ಇದನ್ನು ನಾವು ಜ್ಞಾಪಕದಲ್ಲಿಟ್ಟುಕೊಳ್ಳದೆ, ನಮಗೆ ಪ್ರಿಯವಾದುದನ್ನು ಪ್ಲೇಟೋವಿನಿಂದ ತೆಗೆದುಕೊಂಡು, ನಮಗೆ ಅಪ್ರಿಯವಾಗಿರುವುದನ್ನು ಪ್ಲೇಟೋವಿನ ಕಲ್ಪನೆಯೆಂದು ಭಾವಿಸಿ ಸಾಧ್ಯವಾದರೆ ಇದಕ್ಕೆ ಕ್ಸೆನೊಫನ್ನನನ್ನೋ ಮತ್ತೊಬ್ಬನನ್ನೋ ಸಾಕ್ಷಿ ತರುತ್ತೇವೆ! ಇದು ಯಾವ ನ್ಯಾಯ!

ಈ ಕಾರಣಗಳಿಂದ ಪ್ಲೇಟೋವಿನ ಸಾಕ್ರಟೀಸನನ್ನೇ ನಾವು ನಿಜವಾದ ಸಾಕ್ರಟೀಸನೆಂದು ನಂಬಬೇಕು. ಈ ಸಾಕ್ರಟೀಸನು ಹಿಂದೆಯೇ ಹೇಳಿದಹಾಗೆ ಪೈಥಗೋರಿಯರ್ ಸಿದ್ಧಾಂತವನ್ನು ಚನ್ನಾಗಿ ಮನನ ಮಾಡಿದ್ದನಲ್ಲದೆ ಅದರ ಕುಂದುಕೊರತೆಗಳನ್ನು ತಿಳಿದವನಾಗಿ ಅದನ್ನು ನೂತನ ರೀತಿಯಲ್ಲಿ ಪರಿಷ್ಕರಿಸಿದ್ದನು. ಸೌಂದರ್ಯ, ಶ್ರೇಯ, ಧರ್ಮ, ಮೊದಲಾದ ಸತ್ಯ ಸತ್ತುಗಳು ಶಾಶ್ವತರೂಪವನ್ನು ಹೊಂದಿ ಇರುವುವೆಂದೂ, ಅವುಗಳನ್ನು ಧ್ಯಾನಚಕ್ಷುಸ್ಸಿನಿಂದ ಸಾಕ್ಷಾತ್ತಾಗಿ ನೋಡಬಹುದೆಂದೂ ಈತನು ಪ್ಲೇಟೋವಿನ ಮೊದಮೊದಲ ಸಂವಾದಗಳಲ್ಲಿ ಬೋಧಿಸುತ್ತಾನೆ. ಅಂದಮೇಲೆ "ಸಾಮಾನ್ಯ"ವಾದವನ್ನು (the ideal theory) ಅಂಕುರ ರೂಪದಲ್ಲಿ ಪೈಥಗೋರಿಯನರೇ ಹೂಡಿದ್ದರು; ಆದರೆ ಕೇವಲ ಗಣಿತಶಾಸ್ತ್ರದ ಮೂಲತತ್ವಗಳ ಪರವಾಗಿ ಅವರು ಆ ವಾದವನ್ನು ಪ್ರಚುರಪಡಿಸಿದ್ದರು. ಈಗಲಾದರೋ ಸಾಕ್ರಟೀಸನು ನೈತಿಕ ಮತ್ತು ಧಾರ್ಮಿಕ ಪ್ರಪಂಚಗಳಿಗೂ ಈ ವಾದವನ್ನೇ ಅನ್ವಯಿಸತೊಡಗಿದನು. ಫೀಡೊ ಮತ್ತು ಸಿಂಪೋಸಿಯಂ, ಈ ಸಂವಾದಗಳನ್ನು

ಓದಿದವರು ಯಾರೂ ಈ ವಾದ ಸಾಕ್ರಟೀಸನಿಗೆ ಗೊತ್ತಿರಲಿಲ್ಲವೆಂದೂ ಅದು ಪ್ಲೇಟೋವಿನ ಸ್ವತಂತ್ರ ಸಿದ್ಧಾಂತವೆಂದೂ ಹೇಳುವ ಹಾಗಿಲ್ಲ[೧]. ಈ ಸಿದ್ಧಾಂತದ ಪ್ರಕಾರವಾಗಿ ಇಂದ್ರಿಯಗೋಚರ ವಸ್ತುಗಳಿಗೂ ಮಾನಸ ಗೋಚರ ವಸ್ತುಗಳಿಗೂ ತೀಕ್ಷ್ಣವಾದ ಭೇದವಿದೆ. ಮಾನಸಗೋಚರಗಳೇ ನಿಜವಾದ ಇರುವಿಕೆಯನ್ನು ಹೊಂದಿರತಕ್ಕವು. "ಸಮತೆ" ಎಂಬ ಭಾವವನ್ನು ನಾವು ಬಲ್ಲೆವು; ಆದರೆ ಸರಿಸಮವಾಗಿರುವ ಯಾವೆರಡು ವಸ್ತುಗಳನ್ನಾದರೂ ನೋಡಿರುವೆವೆ? ಆದುದರಿಂದ ನಾವು ಸಮವೆಂದು ಹೇಳುವ ವಸ್ತುಗಳು ನಿರಂತರವೂ ಪೂರ್ಣ ಸಮತೆಯನ್ನು ಹೊಂದಲು "ಹೆಣಗಾಡುತ್ತವೆ" ಎಂದು ಸಾಕ್ರಟೀಸನು ಹೇಳುತ್ತಾನೆ. ಅಂದರೆ, ಸಮತೆ, ನ್ಯಾಯ, ಧರ್ಮ, ಮೊದಲಾದ ಭಾವರೂಪಗಳು—ಸಾಮಾನ್ಯ ಗಳು[೨] — ಪ್ರತಿಯೊಂದೂ ಪೂರ್ಣತೆಯನ್ನು ಪಡೆದು, ಒಂದೊಂದೇ ಇರುವುವಲ್ಲದೆ, ತತ್ಸಂಬಂಧವಾದ ಅನೇಕಾನೇಕ ಅಪರಿಪೂರ್ಣಗಳಾದ, ಇಂದ್ರಿಯಗೋಚರಗಳಾದ, ಪ್ರತ್ಯೇಕ ವಸ್ತುಗಳಿಗೆಲ್ಲಾ "ಆದರ್ಶ" ಗಳಾಗಿ ಅಥವಾ "ಮಾದರಿ"ಗಳಾಗಿ ಇರುವುವು. ಈ ಪರಿಪೂರ್ಣ ಮಾದರಿ ಗಳನ್ನು ಪ್ರತ್ಯೇಕ ವಸ್ತುಗಳು ಅನುಕರಿಸುತ್ತವೆ. ಈ ಅನುಕರಣೆಯಿಂದ ಆ ಧ್ಯೇಯಗಳ ಸಹಜ ಗುಣ ತತ್ಸಂಬಂಧವಾದ ಪ್ರತ್ಯೇಕಗಳಲ್ಲಿ[೩]

೧. ಯೂಥಿಫ್ರೊ: ೫ ಡಿ., ೬ ಸಿ., ೬ ಇ; ಮೆನೊ: ೭೨ ಸಿ; ಕ್ರಾಟಿಲಸ್: ೩೮೯ ಬಿ; ಈ ವಚನಗಳನ್ನು ನೋಡಿವಲ್ಲಿ ಸಾಕ್ರಟೀಸನದೇ ಎಂದು ಖಂಡಿತವಾಗಿ ಹೇಳ ಬಹುದಾದ ಪೂರ್ವ ಸಂವಾದಗಳಲ್ಲಿಯೂ ಕೂಡ ಸಾಮಾನ್ಯವಾದ ಆಗಲೇ ರೂಪುಗೊಂಡಿರುವುದೆಂದು ಗೋಚರಕ್ಕೆ ಬಾರದಿರಲಾರದು. ೨. "ಸಾಮಾನ್ಯ"— The "idea", the "universal", "the form"; "ಪ್ರತ್ಯೇಕ"—ಭಿನ್ನ ಭಿನ್ನ ವಾದ, ಪ್ರತ್ಯೇಕವಾದ, ವೈಯಕ್ತಿಕ ವಸ್ತು ಅಥವಾ ಪದಾರ್ಥ; ಉದಾ ಹರಣೆಗೆ, ಈ ಮರ, ಆ ಮನುಷ್ಯ, ಈ ಮೇಜು, ಇತ್ಯಾದಿ. ಪ್ಲೇಟೋವಿನ 'idea' ಎಂಬ ಶಬ್ದದ ಭಾವವೂ, ನ್ಯಾಯವೈಶೇಷಿಕರ 'ಸಾಮಾನ್ಯ' ಎಂಬ ಶಬ್ದದ ಭಾವವೂ ಸಾಧಾರಣಾರ್ಥದಲ್ಲಿ ಒಂದೇ ಆಗಿರುವುದರಿಂದ ಸುಲಭ ಪ್ರಯೋಗದ ಸಲುವಾಗಿ ಈ ಗ್ರಂಥದಲ್ಲೆಲ್ಲಾ ಇದೇ ಶಬ್ದವನ್ನೇ ಉಪಯೋ ಗಿಸಲಾಗಿದೆ. ವೈಶೇಷಿಕರ "ವಿಶೇಷ" ದಿಂದ ವಿಶೇಷಿಸಲ್ಪಟ್ಟ ವಿಭಿನ್ನ ವಸ್ತು ಗಳಿಗೆ "ಪ್ರತ್ಯೇಕ"ವೆಂದು ನಾಮಕರಣ ಮಾಡಿದೆ. ೩. ೧೯೧ನೆಯ ಪುಟ ನೋಡಿ.

ಸ್ವಲ್ಪಮಟ್ಟಿಗೆ ಕಾಣಬರುತ್ತದೆ. "ಸೌಂದರ್ಯ"ವೆಂಬ ಸಾಮಾನ್ಯದ ಅನುಕರಣೆಯಿಂದ ಪ್ರತ್ಯೇಕ ಸುಂದರ ರೂಪಗಳು—ಸುಂದರಪುರುಷರು, ಸುಂದರ ಹೂಗಳು, ಇತ್ಯಾದಿ—ಸುಂದರಗಳಾಗಿ ಇವೆ. ಹಾಗಾದರೆ ಈ ನಿತ್ಯಸುಂದರ, ನಿತ್ಯಶ್ರೇಯ, ನಿತ್ಯಧಾರ್ಮಿಕ ರೂಪಗಳನ್ನು (Forms) ನಾವು ತಿಳಿಯುವ ಬಗೆ ಹೇಗೆ? ಹಿಂದೆ ಹೇಳಿದ ಸ್ಮೃತಿ(Reminiscence) ಮಾರ್ಗದಿಂದ. ಮೆನೊ(೮೬, ಬಿ, ೬) ಎಂಬ ಸಂವಾದದಲ್ಲಿ ಈ ಸ್ಮೃತಿ ತತ್ವವನ್ನು ಅಕ್ಷರಶಃ ಅನುಮೋದಿಸಬಾರದೆಂದು ಸಾಕ್ರಟೀಸನು ಎಚ್ಚರಿಕೆ ಕೊಟ್ಟಿರುವನು. ತಾತ್ವಿಕದೃಷ್ಟಿಯಿಂದ ಈ ಸಿದ್ಧಾಂತವನ್ನು ಹೀಗೆ ವಿವರಿಸಬಹುದು. ರವಿವರ್ಮನ "ದಮಯಂತಿ" ಚಿತ್ರವನ್ನು ನೋಡಿ ದೊಡನೆಯೆ ಜೀವನದಲ್ಲಿ ನಾವು ನೋಡಿರಬಹುದಾದ ಮತ್ತೊಂದು ವಾಸ್ತವಿಕ ಸುಂದರಮೂರುತಿ ನಮ್ಮ ಜ್ಞಾಪಕಕ್ಕೆ ಬರಬಹುದು. ಒಂದರ ಅನುಭವದಿಂದ ಮತ್ತೊಂದರ ಸ್ಮೃತಿ ಚಿತ್ತದಲ್ಲಿ ಉದಯಿಸು ವುದು ಹೀಗೆಯೇ. ಪ್ರತ್ಯೇಕ ವಸ್ತುಗಳಿಂದ ಸಾಮಾನ್ಯದ ಜ್ಞಾನ ಹುಟ್ಟುವುದೇನೋ ನಿಜ; ಆದರೆ ಈ ಪ್ರತ್ಯೇಕಗಳು ಸಾಮಾನ್ಯದ ಜ್ಞಾಪಕ ವನ್ನು ಕೊಡುವ ವ್ಯಾಜಗಳೇ—ಸಂದರ್ಭಗಳೇ—ವಿನಾ, ಸಾಮಾನ್ಯ ಜ್ಞಾನದ ಕಾರಣಗಳೇ ಅಲ್ಲ. ನಾವು ಸುಂದರವೆಂದು ಹೇಳುವ ವಸ್ತುಗಳು ಸೌಂದರ್ಯದ ಹಾಗಿವೆ, ನಾವು ಕುರೂಪಗಳೆಂದೆನ್ನುವವು ಸೌಂದರ್ಯದ ಹಾಗಿಲ್ಲ. ಆದರೆ ಸೌಂದರ್ಯವನ್ನು ಹೋಲುವ ಮತ್ತು ಹೋಲದಿರುವ ಎರಡು ತರದ ವಸ್ತುಗಳೂ ಕೂಡ "ಸೌಂದರ್ಯವೇ ತಾನಾಗಿರುವ" ಒಂದು ಉತ್ಕೃಷ್ಟ ರೂಪವನ್ನು ಜ್ಞಾಪಕಕ್ಕೆ ತರುತ್ತವೆ. ಆದುದರಿಂದ ಈ ರೂಪದ ಜ್ಞಾನ ಇಂದ್ರಿಯಾನುಭವದಿಂದಲೇ ಜನಿಸದೆ ಸ್ವತಂತ್ರವಾಗಿ ನಮ್ಮ ಆತ್ಮನಲ್ಲಿತ್ತು ಎಂದು ನಾವು ಹೇಳಬಹುದು. ಸಾಮಾನ್ಯ ವಾದದ ಅರ್ಥವಿದೇ. ಇದನ್ನು ಬಿಟ್ಟು ಒಂದೇ ವಿಧವಾದ ಅನೇಕ ವಸ್ತುಗಳ ವೈವಿಧ್ಯವನ್ನೆಲ್ಲಾ ಕಳೆದು ಅವುಗಳ ಸರ್ವಸಾಧಾರಣ ಸ್ವರೂಪವನ್ನು—ಜಾತೀಯ ಭಾವವನ್ನು (class-concept) — ಮನಸ್ಸಿನಲ್ಲಿ ಚಿತ್ರಿಸಿ ಕೊಂಡರೆ ಅದೇ ಸಾಕ್ರಟೀಸನ ಸಾಮಾನ್ಯವೆಂದು ಕೆಲವರು ಹೇಳುತ್ತಾರೆ. ಇದು ಶುದ್ಧ ತಪ್ಪು.

ಅರಿಸ್ಟಾಟಲನು ಸಾಕ್ರಟೀಸನಿಗೆ ಕೊಟ್ಟಿರುವ ಪ್ರಶಸ್ತಿಪತ್ರಿಕೆಯಲ್ಲಿ ಈತನು ಲಕ್ಷಣಸಿದ್ಧಾಂತವನ್ನು(Definition)ಏರ್ಪಡಿಸಿದನೆಂದೂ ವ್ಯಾಪ್ತಿ ಮಾರ್ಗವನ್ನು (Inductive Reasoning) ಕಂಡುಹಿಡಿದನೆಂದೂ ಹೇಳಿದ್ದಾನೆ. ಅರಿಸ್ಟಾಟಲಿನಿಗಿದ್ದ ವ್ಯಾಪ್ತಿಮಾರ್ಗದ ಅಭಿಪ್ರಾಯವೇನೆಂದು ಸೂಕ್ಷ್ಮವಾಗಿ ನಾವು ಪರಿಗಣಿಸಿದರೆ ಮೇಲೆ ಹೇಳಿದ ಸ್ಮೃತಿಮಾರ್ಗವೇ ಎಂದು ಕಂಡುಬರುವುದು.[೧] ಸೌಂದರ್ಯ, ಶ್ರೇಯ, ಧರ್ಮ ಮೊದಲಾದ ಭಾವಗಳ ಲಕ್ಷಣಗಳನ್ನು ಹುಡುಕುತ್ತಿದ್ದನೆಂದಮಾತ್ರಕ್ಕೇ ಸಾಕ್ರಟೀಸನ ಮನಸ್ಸಿನಲ್ಲಿ ಇವು ಭಾವಮಾತ್ರಗಳಾಗಿದ್ದುವೇ ವಿನಾ ಹೆಚ್ಚೇನೂ ಇಲ್ಲ, ಎಂದು ತಿಳಿಯಕೂಡದು. ತನ್ನ ಎದುರಾಳಿಗಳ ಜ್ಞಾನಪರೆಯನ್ನು ತೆಗೆಯುವುದಕ್ಕೋಸ್ಕರ ಸಾಕ್ರಟೀಸನು ಲಕ್ಷಣ ನಿರೂಪಣ, ತರ್ಕ, ಇವುಗಳನ್ನು ಅನುಸರಿಸುತ್ತಿದ್ದುದು ನಿಜವೆಂದು ಅವನ ಸಂವಾದಗಳ ಮೇಲ್ಮೈಯನ್ನು ಮಾತ್ರ ಓದುವವರಿಗೆ ಕಂಡುಬರುವುದು ಸಹಜವೇ, ನಾವೂ ಹಿಂದೆ ಹಾಗೆಯೇ ಹೇಳಿದ್ದೇವೆ. ಆದರೆ ಅವುಗಳ ಅಂತರಾತ್ಮವನ್ನು ಅರಿಯಲು ಆದರವುಳ್ಳವರಿಗೆ ಸಾಕ್ರಟೀಸನ ಲಕ್ಷಣಬದ್ಧ ಭಾವಗಳು ಭಾವಸತ್ತನ್ನು ಮಾತ್ರವೇ ಅಲ್ಲ, ವಾಸ್ತವಿಕ ಸತ್ತನ್ನು ಹೊಂದಿದ ಜ್ಞಾನರೂಪಗಳಾಗಿದ್ದುವೆಂದು ಕಾಣದೆ ಇರುವುದಿಲ್ಲ. ಸಾಕ್ರಟೀಸನ ತರ್ಕವಿಧಾನ ತನ್ನ ಧಾರ್ಮಿಕಧ್ಯೇಯವನ್ನು ಸಾಧಿಸಲು ಸಹಾಯಕಾರಿಯಾದ ಒಂದು ಅಂಗವೇ ಹೊರತಾಗಿ ತರ್ಕವಿಧಾನವೇ—ಲಕ್ಷಣಗಳನ್ನು ಕಂಡುಹಿಡಿಯುವುದೇ—ಆತನ ಪ್ರಧಾನಗುರಿಯಲ್ಲ. ರಾಜ್ಯದ ತೊಣಚಿಯ (the 'gadfly' of the state) ರೂಪದಲ್ಲಿ ಸಮಾಜ ಸುಧಾರಣೆಮಾಡಬೇಕೆನ್ನುವ ಆತನ ದೈವಪ್ರೇರಿತ ಸಂಕಲ್ಪವನ್ನು ಜ್ಞಾಪಕದಲ್ಲಿಟ್ಟುಕೊಂಡರೆ ಆತನ ತರ್ಕದ ಪ್ರಮೇಯವೂ ಅದರರ್ಥವೂ ಗೊತ್ತಾಗುವುವು. ಅಚ್ಚುಕಟ್ಟಾದ ಲಕ್ಷಣಗಳನ್ನು ಗೊತ್ತುಮಾಡುವುದೇ ಅವನ ಗುರಿಯಾಗಿದ್ದ ಪಕ್ಷದಲ್ಲಿ ಸಂದರ್ಭ ಬಿದ್ದಹಾಗೆಲ್ಲಾ ಅಂಥ ಲಕ್ಷಣಗಳನ್ನು ನಿರ್ಧರಿಸುವುದು ಆತನಿಗೆ ಕಷ್ಟವಾಗುತ್ತಿತ್ತೇನು? ಆದರೂ ಅವನ ಸಂವಾದಗಳಲ್ಲಿ ಎಲ್ಲಿ ನೋಡಲಿ, ತನಗಿನ್ನೂ ಭಾವಗಳ ಸರಿಯಾದ

೧ ಬರ್ನೆಟ್, ಗ್ರೀಕ್ ತತ್ವಶಾಸ್ತ್ರ, ೧೫೮—೧೫೯.

ಜ್ಞಾನ ದೊರಕಲಿಲ್ಲವೆಂದೇ ಒತ್ತಿ ಒತ್ತಿ ಹೇಳುತ್ತಾನೆ. ಅಜ್ಞಾನವನ್ನು ಹೋಗಲಾಡಿಸುವುದಕ್ಕೋಸ್ಕರ ತರ್ಕವೇ ವಿನಾ ಸಮ್ಯಗ್ ಜ್ಞಾನವನ್ನು ಸಂಪಾದಿಸುವುದಕ್ಕಲ್ಲ. ಹಾಗಾದರೆ ಪರಮಭಾವಗಳ ಜ್ಞಾನ ಹೇಗುಂಟಾಗುವುದೆಂದರೆ, ಪ್ರತಿಯೊಬ್ಬನ ಹೃದಯದ ಅಂತರಂಗದಲ್ಲಿಯೂ ಅವು ಇದ್ದೇ ಇರುವುವು: ಮಸುಕು ಮಸುಕಾಗಿರಬಹುದು, ಪರೆ ಮುಚ್ಚಿಕೊಂಡಿರಬಹುದು ; ಈ ಪರೆ ಹೋಗಲಾಡಿಸಿ, ಮಸುಕಾಗಿರುವುದನ್ನು ತಿಕ್ಕಿ ಪ್ರಜ್ವಲಗೊಳಿಸಿದರೆ, ಆಗ ಜ್ಞಾನದ ಬೆಳಕು ಹೃದಯದಲ್ಲಿ ಪ್ರಕಾಶಿಸುವುದು. ಇದೇ ಸಾಕ್ರಟೀಸನು ಮಾಡುತ್ತಿದ್ದ ಕೆಲಸ–ಇದೇ ಅವನ ಆಧ್ಯಾತ್ಮಿಕ ಸೂಲಗಿತ್ತಿತನ.

ಈ ರೀತಿಯಾಗಿ ಸಾರ್ವತ್ರಿಕಗಳಾಗಿ ಅನ್ವಯಿಸತಕ್ಕ ರೂಪಗಳು ಯಾವುವೋ—ಅದರಲ್ಲಿಯೂ ನಮ್ಮ ಆತ್ಮನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡುವ ಭಾವಬಲವನ್ನು (emotional appeal) ಹೊಂದಿರತಕ್ಕ ರೂಪಗಳು ಯಾವುವುಂಟೋ, ಅಂತಹ ಸಾಮಾನ್ಯಗಳು—ಸಮತೆ, ನ್ಯಾಯ, ಧರ್ಮ, ಸೌಂದರ್ಯ, ಮುಂತಾದ ಸಾಮಾನ್ಯಗಳು—ವಾಸ್ತವಿಕವಾದ ಅಸ್ತಿತ್ವವನ್ನು (ಇರುವಿಕೆಯನ್ನು) ಹೊಂದಿರುವುವು. ಇವುಗಳ ವಿಷಯಕವಾದುದೇ ನಿಜವಾದ ಜ್ಞಾನ. ಪ್ರತ್ಯೇಕ ವಿಷಯಕವಾದುದು ಬರಿಯ ಕಲ್ಪನೆ. ದೇಹವನ್ನು ತ್ಯಜಿಸಿದ ಮೇಲೆಯೇ ಆತ್ಮಕ್ಕೆ ಪೂರ್ಣ ಸ್ವಾತಂತ್ರ್ಯ ; ಆದರೂ ದೇಹದಲ್ಲಿರುವಾಗಲೂ ಕೂಡ "ಪ್ರತಿದಿನವೂ ಸಾಯುವುದನ್ನು ಅಭ್ಯಾಸಮಾಡುವುದರ ಮೂಲಕ" ಅಂದರೆ ಇಂದ್ರಿಯನಿಗ್ರಹದ ಸಹಾಯದಿಂದ ದೇಹದ ಹಿಡಿತವನ್ನು ತಪ್ಪಿಸಿಕೊಂಡು ಧ್ಯಾನನಿಮಗ್ನರಾಗುವುದರ ಮೂಲಕ, ಈ ನಿತ್ಯ ಸತ್ತುಗಳ ದರ್ಶನವನ್ನು ಹೊಂದಬಹುದು.

ಸಾಮಾನ್ಯಗಳನ್ನು ಪ್ರತ್ಯೇಕಗಳು ಅನುಕರಿಸುತ್ತವೆ ಎಂದು ಹೇಳಿದರೆ ಸಾಮಾನ್ಯಲೋಕವೇ ಬೇರೆ, ಇಂದ್ರಿಯಲೋಕವೇ ಬೇರೆ, ಎಂದಹಾಗಾಯಿತು. ಈ ಸಿದ್ಧಾಂತ ಅಷ್ಟು ಸಮರ್ಪಕವಾಗಿಲ್ಲವೆಂದು ಸಾಕ್ರಟೀಸನಿಗೆ ಕೊನೆಯಲ್ಲಿ ಕಂಡುಬಂದು ಸಾಮಾನ್ಯಗಳಿಗೂ ಪ್ರತ್ಯೇಕಗಳಿಗೂ ಹೊಸ ರೀತಿಯಲ್ಲಿ ಸಂಬಂಧ ಹೇಳಿದನು : ಸಾಮಾನ್ಯದಲ್ಲಿಯೇ

ಪ್ರತ್ಯೇಕ ಪಾಲುಹೊಂದಿದೆ ಅಥವಾ ಭಾಗಿಯಾಗಿದೆ. (participation in, partaking of, the Idea). ಅಂದರೆ ಸಾಮಾನ್ಯ ಪ್ರತ್ಯೇಕದಲ್ಲಿಯೇ ಇರುವುದು, ಬೇರೆಯಾಗಿಲ್ಲ; ಆದರೆ ಅದರಲ್ಲಿ ಪೂರ್ಣವಾಗಿಲ್ಲ. ಇದರಿಂದ ಪ್ರತ್ಯೇಕ ಅಪರಿಪೂರ್ಣವಾಗಿರುವುದು. ಹೀಗೆ ಒಂದು ಪ್ರತ್ಯೇಕ ಅನೇಕ ಸಾಮಾನ್ಯಗಳ ಸಂಧಿ ಸನ್ನಿವೇಶವೆಂದು ಹೇಳಬಹುದು. ಸಾಮಾನ್ಯ ವಾದದ ಈ ಸುಧಾರಣೆಯನ್ನು "ಫೀಡೊ"ವಿನ ಕೊನೆಯಭಾಗದಲ್ಲಿಯೂ, "ರಿಪಬ್ಲಿಕ್" ("ಆದರ್ಶರಾಜ್ಯ") ಎಂಬ ಸಂವಾದದಲ್ಲಿಯೂ ನೋಡ ಬಹುದು.

ಸಾಕ್ರಟೀಸನೇ ಸಾಮಾನ್ಯವಾದವನ್ನು ಪ್ರಥಮದಲ್ಲಿ ಸ್ಥಾಪಿಸಿದ ತಾತ್ವಿಕಶ್ರೇಷ್ಠನು, ಎಂದು ತೀರ್ಮಾನಮಾಡಿದರೆ, ಪ್ಲೇಟೋವಿನ ಸಂವಾ ದಗಳಲ್ಲಿ ಸಾಕ್ರಟೀಸನು ಎಲ್ಲಿಯವರೆಗೆ ಮಾತನಾಡುತ್ತಾನೆ, ಪ್ಲೇಟೋ ಎಲ್ಲಿಂದ ಪ್ರಾರಂಭಮಾಡುತ್ತಾನೆ, ಸಾಕ್ರಟೀಸನ ವಾಣಿ ಯಾವುದು, ಪ್ಲೇಟೋವಿನ ವಾಣಿ ಯಾವುದು, ಎಂಬುದನ್ನು ನಿರ್ಧರಿಸುವ ಬಗೆ ಹೇಗೆ?

ಇದಕ್ಕೆ ಉತ್ತರವನ್ನು ಕೊಡಬೇಕಾದರೆ ಪ್ಲೇಟೋವಿನ ಸಂವಾದ ಗಳನ್ನು ನಾವು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸಬೇಕು. ಸಾಮಾನ್ಯ ವಾದ ಎರಡು ರೂಪಗಳನ್ನು ಹೊಂದಿರುವುದು: ಪೂರ್ವಸಿದ್ಧಾಂತ (the earlier doctrine) ಮತ್ತು ಉತ್ತರ ಸಿದ್ಧಾಂತ (the later doctrine). ಪೂರ್ವಸಂವಾದಗಳಲ್ಲಿ, ನೈತಿಕ—ಧಾರ್ಮಿಕ—ಸರಣಿಯೇ ಹೆಚ್ಚು; ನೀತಿಶಾಸ್ತ್ರ ಜೀವನವನ್ನು ಸುಸ್ಥಗೊಳಿಸುವ ಒಂದು ಅಭ್ಯಾಸ, ಅಥವಾ ಜೀವನಮಾರ್ಗ. ಅಮರತ್ವವನ್ನು ಪಡೆಯುವುದೇ ಮರ್ತ್ಯಮಾನವನ ಹಂಬಲು[೧]; ಅದನ್ನು ಪಡೆಯಬೇಕಾದರೆ ಪರಮ ಧ್ಯೇಯಗಳಾದ ಸತ್ಯ ಸೌಂದರ್ಯ ಸೌಜನ್ಯಾದಿಗಳನ್ನು ಧ್ಯಾನ ಚಕ್ಷುಸ್ಸಿ ನಿಂದ ಸಾಕ್ಷಾತ್ಕರಿಸಿಕೊಂಡು ಪವಿತ್ರ ಜೀವನನಾಗಿರುವುದೊಂದೇ ಉಪಾಯ, ಎಷ್ಟಾದರೂ ದೇಹ ಬಿದ್ದುಹೋಗುವವರೆಗೂ ಅಮರತ್ವದ

೧. ಮೆನೊ, ೮೧.

ಪೂರ್ಣಾನುಭವ ಉಂಟಾಗುವುದಿಲ್ಲ[೧]. ಉತ್ತರಸಂವಾದಗಳು ಅಧಿಕವಾಗಿ ಆಧ್ಯಾತ್ಮಿಕ(metaphysical)ಧ್ವನಿಯನ್ನು ಹೊಂದಿರುವುವು ; ಇವುಗಳಲ್ಲಿ ತತ್ವಶಾಸ್ತ್ರದ ಗುರಿ, ಯೋಗಿಯ ಸಾಕ್ಷಾತ್ಕಾರವಲ್ಲ, ತಾತ್ವಿಕನ ಬುದ್ಧಿ ಬದ್ಧವಾದ ಜ್ಞಾನ ಅಥವಾ ತಿಳಿವಳಿಕೆ. ಪೂರ್ವಸಂವಾದಗಳಲ್ಲಿ ನಮ್ಮ ಆತ್ಮವನ್ನು ಪರೆಯಂತೆ ಮುಚ್ಚಿ ಅದನ್ನು ಅಧೋಗತಿಗೆ ಎಳೆಯುವುದು ನಮ್ಮ ಇಂದ್ರಿಯಪರವಶತೆ, ವಿಷಯಲಾಂಪಟ್ಯ, ರಾಗ ಲಾಲಸೆಗಳು. ಉತ್ತರಸಂವಾದಗಳಲ್ಲಿ ನಮ್ಮ ತತ್ವಜ್ಞಾನಕ್ಕೆ ಅಡ್ಡಿ ಬರತಕ್ಕಂತಹುದು ಇಂದ್ರಿಯಜನ್ಯವಾದ ಪ್ರತ್ಯಕ್ಷಜ್ಞಾನ. ಇಂದ್ರಿಯ ದರ್ಶನ (sense-perception)ವ್ಯಾವಹಾರಿಕ ಸತ್ತನ್ನು ಮಾತ್ರ ಉಳ್ಳ ಪ್ರಪಂಚದ ವಸ್ತುಳಿಗೆ ಸಂಬಂಧಪಟ್ಟುದು. ಇಂದ್ರಿಯ ಜ್ಞಾನದ ವಿರೋಧ ವಿಪರ್ಯಾಸಗಳನ್ನು ದಾಟಿ ಶಾಸ್ತ್ರೀಯವಾದ, ಪಾರಮಾರ್ಥಿಕಕ್ಕೆ ಸಂಬಂಧಿಸಿದ, ತತ್ವಜ್ಞಾನವುಂಟಾಗಬೇಕಾದರೆ, ಸರ್ವಸಾಮಾನ್ಯವಾದ ನ್ಯಾಯಮಾರ್ಗವನ್ನು (logic) ಅನುಸರಿಸಬೇಕೇ ಹೊರತು, ಯೋಗಿಯ ಧ್ಯಾನಮಾರ್ಗವನ್ನಲ್ಲ[೨]. ಮೊದಲನೆಯ ಪಂಗಡದ ಸಂವಾದಗಳಲ್ಲಿ ಆತ್ಮದ ಮುಸುಕಾವುದೆಂದರೆ, ಪಾಪವಾಸನೆಗಳು : ರಹಸ್ಯ ಮಂತ್ರಾಚರಣೆಯಿಂದಲೇ ಇವು ತೊಲಗಬೇಕು, ಆತ್ಮ ಶುದ್ಧಿಯಾಗಬೇಕು ; ಎರಡನೆಯ ಪಂಗಡದ ಸಂವಾದಗಳಲ್ಲಿ ಆತ್ಮದ ಪರೆ ಅಜ್ಞಾನ : ತರ್ಕವಿದ್ಯೆಯಿಂದಲೇ(dialectic) ಇದು ನಾಶವಾಗತಕ್ಕದ್ದು. ಒಂದನೆಯವುಗಳಲ್ಲಿ ಮರಣಾನಂತರವೇ ಪೂರ್ಣ ಮುಕ್ತಿ (freedom) ; ಎರಡನೆಯವುಗಳಲ್ಲಿ ಜ್ಞಾನಾನ್ವೇಷಣೆಯ ಶಾಸ್ತ್ರೀಯ ಸಾತ್ವಿಕ ಜೀವನವೇ ಮುಕ್ತ ಜೀವನ[೩]. “ಸೊಕ್ರಾಟಿಕ್” ಸಂವಾದಗಳಲ್ಲಿ ಕಾವ್ಯಕಲೆ ದೇವರು ನಮ್ಮೊಡನೆ ನಡಸುವ ಸಂಭಾಷಣೆ ಎಂದು ಸಾಕ್ರಟೀಸನ ಭಾವನೆ[೪]; “ಪ್ಲೆಟಾನಿಕ್” ಸಂವಾದಗಳಲ್ಲಿ ಕಾವ್ಯ ಸತ್ಯಸತ್ವದ ನೆರಳಿನ ನೆರಳು ಎಂದು ಪ್ಲೇಟೋವಿನ ನಂಬಿಕೆ[೫].

---

೧. ಸಿಂಪೋಸಿಯಂ ೨೦೬, (ಮುಂದೆ ನೋಡಿ.) ೨. ಸೋಫಿಸ್ಟ್, ೨೩೧. ೩. ಥಿಯಾಟಟಸ್, ೧೭೩–೫, “ಆದರ್ಶ ರಾಜ್ಯ”, VII. ೪. ಅಯಾನ್, ೫೩೪. ೫. “ಆದರ್ಶ ರಾಜ್ಯ”, ೫೯೫—೬೦೮.

ಹ್ರಸ್ವದಲ್ಲಿ ಹೇಳಬೇಕಾದರೆ, ಸಂವಾದಗಳಲ್ಲಿ ಎಲ್ಲೆಲ್ಲಿ ನಾವು ಕೇವಲ ಧರ್ಮಜೀವನದ ಮಹತ್ವವನ್ನು ಕಾಣುತ್ತೇವೆಯೋ, ಸೌಜನ್ಯ ಸೌಂದರ್ಯಾದಿಗಳು ಇರುವಿಕೆಯನ್ನು ಹೊಂದಿರತಕ್ಕ ಪರಮ ತತ್ವಗಳೆಂದು ಹೇಳಲ್ಪಟ್ಟಿವೆಯೋ, ಅಲ್ಲೆಲ್ಲಾ ಸಾಕ್ರಟೀಸನ ವಾಣಿಯನ್ನು ಕೇಳಬಹುದು (ಯೂಥಿಪ್ರೊ, "ಸಮರ್ಥನೆ" (Apology) ಕ್ರೈಟೊ, ಚಾರ್ಮಿಡೀಸ್, ಲಾಚೀಸ್, ಲೈಸಿಸ್, ಯೂಥಿಡಿಮಸ್, ಪ್ರೊಟಾಗೊರಾಸ್, ಗಾರ್ಜಿಯಾಸ್, ಮೆನೊ, ಸಿಂಪೋಸಿಯಂ, ಫೀಡೊ, ಮೊದಲನೇ ಆಲ್ಕಿಬಿಯಾಡೀಸ್ ಮುಂತಾದುವು); ಎಲ್ಲಿ ಜ್ಞಾನಮಾರ್ಗದ ಲಕ್ಷಣ, ಅದರ ಸ್ವರೂಪನಿರ್ಣಯ, ಮತ್ತು ಇಂದ್ರಿಯ ದರ್ಶನಕ್ಕೂ ಪಾರಮಾರ್ಥಿಕ ಜ್ಞಾನಕ್ಕೂ ಇರುವ ಸಂಬಂಧ—ಇವುಗಳ ವಿವರಣೆ ಅಧಿಕವಾಗಿರುವುದೋ, ಅಲ್ಲಿ ಪ್ಲೇಟೊ ತನ್ನ ಅಧ್ಯಾತ್ಮ ವಾದವನ್ನು ವಿಶದಪಡಿಸುತ್ತಿರುವನು (ಥಿಯಾಟಟಸ್, ಪಾರ್ಮಿನೈಡೀಸ್, ಸೋಫಿಸ್ಟ್, ಫೈಲೀಬಸ್, ಟಿಮೇಯಸ್, "ಆದರ್ಶರಾಜ್ಯ", "ಶಾಸನಗಳು" ಕ್ರಿಟಿಯಾಸ್, ಮೊದಲಾದುವು).

## ಅಧ್ಯಾಯ ೧೦

## ಸಾಕ್ರಟೀಸ್ (೩)

ಸೋಫಿಸ್ಟರು ಜ್ಞಾನವೂ ಇಲ್ಲ, ನೀತಿಧರ್ಮವೂ ಇಲ್ಲ, ಇದ್ದರೂ ಅವುಗಳನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ, ಎಂದು ಸಾರಿದ್ದರಷ್ಟೆ. ಸಾಕ್ರಟೀಸನು ಸರ್ವಸಮ್ಮತವಾದ, ಸ್ವತಂತ್ರವಾದ ಜ್ಞಾನವಿದೆ, ಅದನ್ನು ದೊರಕಿಸಿಕೊಳ್ಳಬಹುದು, ಎಂದು ಘಂಟಾಘೋಷವಾಗಿ ಉತ್ತರ ಕೊಟ್ಟನು. ಅದೇಪ್ರಕಾರವಾಗಿ ಸರ್ವಸಮ್ಮತವಾದ ನೀತಿಧರ್ಮಗಳೂ ಇವೆ ಎಂದು ತೋರಿಕೊಡಲು, ಧರ್ಮವೆಂದರೇನು? ನಮ್ಮ ಜೀವನವನ್ನು ಯಾವರೀತಿಯಲ್ಲಿ ಸುಸೂತ್ರವುಳ್ಳದ್ದನ್ನಾಗಿ ಮಾಡಿಕೊಳ್ಳಬೇಕು? ಪ್ರಜ್ಞಾಪೂರ್ವಕವಾಗಿ ಬದುಕುವ ಬಗೆ ಹೇಗೆ? ಇವೇ ಮೊದಲಾದ ಪ್ರಶ್ನೆಗಳನ್ನು ಕೇಳಿದನು. ಎಲ್ಲ ವಿಷಯಗಳಲ್ಲಿಯೂ ಮಾನವನೇ ತನ್ನ ಸೂತ್ರ,

ಮಾನವನೇ ತನ್ನ ಅಳತೆ ಕೋಲು, ಎಂಬ ಸೋಫಿಸ್ಟರ ವಾಕ್ಯ ನಿಜವಿರಲಾರದು. ಏಕೆಂದರೆ, ನನ್ನ ಮಟ್ಟಿಗೆ ಹಿತಕರವಾದುದು ಯಾವುದೋ ಅದೇ ನನಗೆ ಶುಭದಾಯಕವಾದುದೆಂದು ಹೇಳಲಾಗುವುದಿಲ್ಲ. ಸಕಲರಿಗೂ ಹಿತಕರವಾದ, ಸರ್ವಸಮ್ಮತವಾದ, ಕಟ್ಟಳೆಯೊಂದಿರಬೇಕು, ಎಲ್ಲರ ನಡತೆಗೂ ಮೂಲಾಧಾರವಾದ, ವಿಚಾರಬದ್ಧವಾದ, ಕಟ್ಟೊಂದಿರಬೇಕು. ಅಂತಹ ಸಕಲಜನ ಹಿತಕರವಾದ, ಸರ್ವಪ್ರಿಯವಾದ, ಯಾವುದರ ಸಲುವಾಗಿ ಮಿಕ್ಕವುಗಳೆಲ್ಲವೂ ಒಳಿತಾಗುವುವೋ ಅಂತಹ ಪರಮೋತ್ಕೃಷ್ಟ ಸೂತ್ರವಾಗಿರುವ, ಮಾನವನ ಪರಮಶ್ರೇಯ ಯಾವುದು? ಪರಮ ಧರ್ಮ ಯಾವುದು?

ಸಾಕ್ರಟೀಸನು ಈ ಪ್ರಶ್ನೆಗೆ ಕೊಟ್ಟ ಉತ್ತರವನ್ನು ಕೇಳಿದರೆ ಮೊದಲು ಸ್ವಲ್ಪ ವಿಸ್ಮಯ ಉಂಟಾಗುವುದು. ಜ್ಞಾನವೇ ಮಾನವನ ಪರಮಶ್ರೇಯ, ಪರಮಧರ್ಮ. ಜ್ಞಾನವೇ ಸಚ್ಛೀಲ, ಸಕಲ ಸದ್ಗುಣ ಸಂಪತ್ತು. ಇದೇ ಸಾಕ್ರಟೀಸನ ನೈತಿಕ ಸಿದ್ಧಾಂತದ ತಳಹದಿ. ಇದಕ್ಕೆ ಸಂಬಂಧಪಟ್ಟ ಹಾಗೆಯೇ, ಇದರಿಂದಲೇ ಅವಶ್ಯಕವಾಗಿ ಹೊರಬೀಳುವ, ಮತ್ತೆರಡು ಅನುಮಾನಗಳನ್ನೂ ಆತನೇ ಆಗಾಗ್ಗೆ ಒತ್ತಿ ಹೇಳುತ್ತಿದ್ದನು. ಅವು ಯಾವುವೆಂದರೆ: (೧) ಅಜ್ಞಾನವೇ, ಜ್ಞಾನಶೂನ್ಯವಾಗಿರುವುದೇ, ದುರಾಚಾರ ಅಥವಾ ದುಷ್ಟತನ; (೨) ಜ್ಞಾನಪೂರ್ವಕವಾಗಿ ಯಾವನೂ ಕೆಡುಕು ಮಾಡುವುದಿಲ್ಲ—ನಾವು ಪಾಪಕೃತ್ಯ ಅಥವಾ ದುರುಳತನ ಎಂದು ಹೇಳುವುದೆಲ್ಲಾ ಅಜ್ಞಾನದಿಂದ ನಡೆಯುವುದೇ.

ಈ ಸಿದ್ಧಾಂತಗಳೆಲ್ಲವೂ ವಿಚಿತ್ರವಾಗಿಯೇ ಕಾಣುವುವು. ಸಾಕ್ರಟೀಸನ ಅರ್ಥವೇನಿರಬಹುದು?

ಈ ವಾಕ್ಯಗಳಿಗೆ ಸಾಮಾನ್ಯವಾದ ಅರ್ಥವೊಂದನ್ನು ಕೊಡಬಹುದು. ಈ ಅರ್ಥವನ್ನು ಕ್ಸೆನೊಫನ್ನಿನಲ್ಲೇ ಅಲ್ಲ, ಪ್ಲೇಟೋವಿನಲ್ಲಿಯೂ ಕಾಣಬಹುದು. ಜ್ಞಾನವೇ, ವಿವೇಕವೇ, ನಿಜವಾದ ಸುಖಕ್ಕೆ ಹಾದಿ. ನಾವು ಜೀವನದ ಸುಖಸಾಮಗ್ರಿಗಳೆಂದು ಕರೆಯುವುದೆಲ್ಲವೂ ವಿವೇಕಿಯ ಕೈಯಲಿದ್ದರೇನೇ ಫಲಕಾರಿಯಾಗುವುವು, ಅವಿವೇಕಿಯ ವಶದಲ್ಲಿದ್ದರೆ ಸುಖವನ್ನು ತರುವುದಕ್ಕೆ ಬದಲಾಗಿ ಅನರ್ಥ ಪರಂಪರೆಗಳನ್ನು ತಂದೊಡ್ಡು

ವುವು. ಜ್ಞಾನಪೂರ್ವಕವಾಗಿ, ವಿವೇಚನಾಪೂರ್ವಕವಾಗಿ, ನಮ್ಮ ಮೇಲ್ಮೆ ಯಾವುದು, ನಮಗೆ ಕೆಡುಕಾದುದು ಯಾವುದು, ಎಂದು ನಾವು ತಿಳಿದು ಕೊಳ್ಳದಿದ್ದರೆ, ಇತರರು ಹೇಳಿದ್ದನ್ನು ಕೇಳಿ ಅದರಂತೆ ನಡೆಯುವುದಾದರೆ, ಅನೇಕವೇಳೆ ಅನರ್ಥಗಳುಂಟಾಗುವುದರಲ್ಲಿ ಸಂದೇಹವಿಲ್ಲ. ನ್ಯಾಯಾ ನ್ಯಾಯದ ವಿವೇಚನೆ ಮಾಡುವ ಶಕ್ತಿ ಇಲ್ಲದಿದ್ದರೆ, ಅನ್ಯಾಯವನ್ನು ತೊರೆದು ನ್ಯಾಯಮಾರ್ಗವನ್ನೇ ಅವಲಂಬಿಸುವ ಬಗೆ ಹೇಗೆ? ಒಬ್ಬ ನಾವಿಕನು ದೋಣಿಯನ್ನು ನಡಸಬೇಕೆಂದಿದ್ದಾನೆಂದಿಟ್ಟುಕೊಳ್ಳೋಣ, ಅಥವಾ ಒಬ್ಬ ದೊರೆ ರಾಜ್ಯವಾಳಬೇಕಾಗಿದೆ, ಇಲ್ಲವೆ ಒಬ್ಬ ವೈದ್ಯನು ಒಬ್ಬ ರೋಗಿಯನ್ನು ವಾಸಿಮಾಡಲೆಳಸುತ್ತಾನೆ. ಇಲ್ಲಿ ದೋಣಿಯನ್ನು ಕಟ್ಟಿರುವ ರೀತಿ ಹೇಗೆ, ಅದರಲ್ಲಿ ಯಾವ ಭಾಗದಿಂದ ಯಾವ ಕೆಲಸ ನಡೆಯುವುದು; ಅಥವಾ ರಾಜ್ಯವೆಂದರೇನು, ಅದರಲ್ಲಿರುವ ಅಂಗಗಳು ಯಾವುವು; ಇಲ್ಲವೆ ರೋಗದ ಕಾರಣವೇನು, ಅದರ ಚಿಹ್ನೆಗಳೇನು— ಇವೇ ಮೊದಲಾದ ಪ್ರಥಮ ತತ್ವಗಳನ್ನೇ ಅವರು ತಿಳಿಯದ ಪಕ್ಷದಲ್ಲಿ ತಮ್ಮ ತಮ್ಮ ಕೆಲಸಗಳನ್ನು ಸುಸೂತ್ರವಾಗಿಯೂ ಸಮರ್ಪಕವಾಗಿಯೂ ಹೇಗೆ ನಡಸಬಲ್ಲರು? ಇದರಂತೆಯೇ ಸದ್ಗುಣಿಯಾಗಿ ಬಾಳಬೇಕಾದರೆ, ಧೈರ್ಯ, ಧರ್ಮ, ಮಿತವ್ಯವಹಾರ, ಶಮ, ದಮ ಮತ್ತು ಇವುಗಳ ಪರ್ಯಾಯ ಗುಣಗಳ ಸ್ವರೂಪಜ್ಞಾನ ಅತ್ಯಂತ ಅವಶ್ಯಕವೆಂದು ಯಾರು ತಾನೇ ಒಪ್ಪುವುದಿಲ್ಲ? ಇನ್ನು ಅಜ್ಞಾನದಿಂದಲೇ ಕೆಡುಕು ಎನ್ನುವುದೂ ಅನುಭವಸಿದ್ಧವೇ. ರೋಗದ ಮಹಿಮೆಯನ್ನೂ ಔಷಧಿಗಳ ಗುಣ ವನ್ನೂ ಚೆನ್ನಾಗಿ ಅರಿಯದ ಮನುಷ್ಯನು ವೈದ್ಯ ಮಾಡಲು ಹೊರಟರೆ, “ವೆಂಕಟರಮಣಪ್ಪನ ಮಾತ್ರೆ, ವೈಕುಂಠಕ್ಕೆ ಯಾತ್ರೆ” ಎಂದೆನ್ನುವ ಫಲವೇ. ಹೀಗೆಯೇ ನಾವು ಅಗಡುತನವನ್ನು ಮಾಡುವಾಗ ಅದರ ಆದ್ಯಂತ ಪರಿಣಾಮಫಲವನ್ನೂ ಮುಂದೆಯೇ ಅರಿಯಬಲ್ಲೆವಾದರೆ, ಅನೇಕವೇಳೆ ಅಂತಹ ಕೆಲಸದಿಂದ ನಾವು ಹಿಮ್ಮೆಟ್ಟಬಹುದು.

ಈ ರೀತಿಯಲ್ಲಿ ಸಾಕ್ರಟೀಸನ ವಾಕ್ಯಗಳಿಗೆ ನಾವು ಮೇಲಿನ ಸಾಧಾರಣಾರ್ಥವನ್ನು ಕೊಟ್ಟರೂ ಕೂಡ ಅವುಗಳಲ್ಲಿ ಹುರುಳಿಲ್ಲದೆ ಇಲ್ಲ. ಸುಗುಣಜೀವನಕ್ಕೆ ಜ್ಞಾನ ಅವಶ್ಯಕವೆಂದಮೇಲೆ, ಜ್ಞಾನವೇ ಸುಗುಣ

—ಸುಗುಣವೇ ಜ್ಞಾನ—ಎಂದು ಹೇಳುವುದು ಸ್ವಲ್ಪ ಆಲಂಕಾರಿಕ ಭಾಷೆ ಎನ್ನೋಣವೇ? ಆದರೆ ಸಾಕ್ರಟೀಸನ ಅರ್ಥವಿಷ್ಟೆ ಎಂದರೆ, ಅವನ ಮಾತುಗಳು ಬಾಲವೇದ್ಯವಾಗಿಯೇ ಇರುವುವಲ್ಲದೆ, ಅವುಗಳಲ್ಲಿ ಕೊಂಚ ತರ್ಕಾಭಾಸವೂ ಇರುವುದಲ್ಲದೆ, ಅವು ಅನುಭವಕ್ಕೂ ಸ್ವಲ್ಪ ವಿರೋಧವೆಂದೇ ಹೇಳಬೇಕು. ಏಕೆಂದರೆ ಅನೇಕವೇಳೆ ಜನರು ಧರ್ಮ ವೆಂಬುದು ಯಾವುದು ಎಂಬುದನ್ನು ಚೆನ್ನಾಗಿ ಅರಿತಿದ್ದರೂ, ಅದರಿಂದ ತಮಗೆ ಶ್ರೇಯಸ್ಸುಂಟು ಎಂದು ತಿಳಿದಿದ್ದರೂ, ಅಧರ್ಮವನ್ನೇ ಅವಲಂಬಿ ಸುವುದನ್ನು ನಾವು ಕಂಡಿಲ್ಲವೇ? ಸಾಮಾನ್ಯವಾಗಿ ಎಲ್ಲರಿಗೂ ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು, ಎಂಬ ಜ್ಞಾನವಿದ್ದೇ ಇರುವುದು. ಜ್ಞಾನವೇ ಸದ್ಗುಣವಾದರೆ ಎಲ್ಲರೂ ಯಾವಾಗಲೂ ಸತ್ಕಾರ್ಯಗಳನ್ನೇ ಏಕೆ ಮಾಡುವುದಿಲ್ಲ? ಸದ್ಗುಣವನ್ನು ಬುದ್ಧಿಶಕ್ತಿಯಿಂದ ತಿಳಿಯುವು ದಕ್ಕೂ ಕೈಯಿಂದ ಆಚರಿಸುವುದಕ್ಕೂ ಬಹಳ ಅಂತರವಿದೆ. ಆಚರಣೆಗೆ ಬೇಕಾದುದು ಜ್ಞಾನವಲ್ಲ—ಇಚ್ಛೆ, ಸದ್ವರ್ತನದಲ್ಲಿ ಒಲುಮೆ, ಪ್ರೀತಿ, ಆಸೆ. ಬುದ್ಧಿಯ ತಿಳಿವಳಿಕೆಯನ್ನು ಹೃದಯ ಅನುಮೋದಿಸಿದಲ್ಲದೆ ಸದ್ವರ್ತನೆ ಸಾಧ್ಯವಿಲ್ಲ. ಇಂತಹ ಸಣ್ಣ ವಿಷಯವನ್ನು ಸಾಕ್ರಟೀಸನಂತಹ ಗುರು ಮರೆತಿರಬಹುದೆ?

ಈ ಕಾರಣದಿಂದ ಜ್ಞಾನವೆಂಬ ಶಬ್ದಕ್ಕೂ ಶೀಲವೆಂಬ ಶಬ್ದಕ್ಕೂ ಸಾಕ್ರಟೀಸನು ಗೌರವವಾದ, ಗುರುತರವಾದ, ಅರ್ಥವನ್ನು ಕೊಟ್ಟಿರ ಬೇಕು. ಈ ಅರ್ಥವನ್ನು ತಿಳಿಯಬೇಕಾದರೆ ಫೀಡೊ ಎಂಬ ಸಂವಾದದಲ್ಲಿ ಅವನ ಮಾತುಗಳನ್ನು ಬಹು ಜಾಗರೂಕತೆಯಿಂದ ಓದಿ ಮನನಮಾಡ ಬೇಕು. ಸಿಂಪೋಸಿಯಂ ಎಂಬ ಸಂವಾದದಲ್ಲಿ ಆಲ್ಕಿಬಿಯಾಡೀಸನು ಹೇಳುವಂತೆ ಅವನ ಭಾಷಣವನ್ನು ಮನಗೊಡದೆ ಸುಮ್ಮನೆ ಮೇಲ್ಮೇಲೆ ಕಿವಿಯಿಂದ ಕೇಳುವವರಿಗೆ ಅವನ ಮಾತುಗಳು ಸರ್ವಸಾಧಾರಣವಾದು ವೆಂದೂ, ಕೇವಲ ಲೋಕಸಾಮತಿಯ ಮಾತುಗಳೆಂದೂ, ನಗೆ ಬರುವಷ್ಟು ಸರಳವಾದುವೆಂದೂ, ತೋರುವುವು. ಆದರೂ ಕಣ್ದೆರೆದು ನೋಡುವವರಿಗೆ ಅವನ ಮಾತೆಂಬ ಹೊದಿಕೆಯ ತಳಭಾಗದಲ್ಲಿ ಒಂದು ಅಪರೂಪವಾದ, ಅದ್ಭುತವಾದ, ಸೌಂದರ್ಯ ಗೋಚರಿಸುವುದು: ಅದು ಕೇಳುವವರ

ಆದ್ಯಂತ ತನುಮನವನ್ನೇ ಕಲಕಿಬಿಡುವುದಲ್ಲದೆ ಅವರ ಸ್ವಭಾವದಲ್ಲಿರ ಬಹುದಾದ, ಅತ್ಯಂತ ಶ್ರೇಷ್ಠವಾದ, ಘನವಾದ ಗುಣಗಳೆಲ್ಲವನ್ನೂ ಹುರಿದುಂಬಿಸಿ ಎಬ್ಬಿಸುವುದು.

ಇದನ್ನು ಜ್ಞಾಪಕದಲ್ಲಿಟ್ಟುಕೊಂಡರೆ, ಫೀಡೋವಿನಲ್ಲಿ ಹೇಳುವಂತೆ ಜ್ಞಾನವೆಂದರೆ ಕೇವಲ ಇಂದ್ರಿಯಜ್ಞಾನವಾಗಲಿ, ತನ್ಮೂಲಕ ಜನಿಸುವ ಬುದ್ಧಿಯ ತಿಳಿವಳಿಕೆಯಾಗಲಿ, ಅಲ್ಲ, ಅನೇಕಾನೇಕ ವಿಷಯಗಳನ್ನು ಶೇಖರಿಸಿ ನೆನಪಿನಲ್ಲಿಟ್ಟುಕೊಳ್ಳುವುದೂ ಅಲ್ಲ. ಅದೊಂದು ವಿಧವಾದ ನಿರೋಧಿಸಲಸಾಧ್ಯವಾದ ಶಕ್ತಿ: ಇದು ಮೊದಲು ಬುದ್ಧಿಯನ್ನೇನೋ ಆಕ್ರಮಿಸುತ್ತದೆ, ತದನಂತರ ಆದ್ಯಂತ ಆತ್ಮದಲ್ಲೂ ವ್ಯಾಪಿಸಿ ಚಿತ್ತವನ್ನೂ ಭಾವವನ್ನೂ ಸಂಕಲ್ಪವನ್ನೂ ವಶಪಡಿಸಿಕೊಂಡು ತನ್ನ ಹಾದಿಯಲ್ಲಿಯೇ ಅವು ನಡೆಯುವಂತೆ ಅವುಗಳನ್ನು ಸಮ್ಮೇಳನಗೊಳಿಸಿ, ತನ್ಮೂಲಕ ಆತ್ಮಸಮೀಕಾರವನ್ನು ಸ್ಥಾಪಿಸುತ್ತದೆ. ಈ ಆತ್ಮಸಮೀಕಾರವೇ ಧೈರ್ಯ, ಮಿತವ್ಯವಹಾರ, ದಮ, ಧರ್ಮ ಮೊದಲಾದ ಸದ್ಗುಣಗಳ ಆವಾಸಸ್ಥಾನ. ಫೀಡೋವಿನಲ್ಲಿ ಹೇಳುವಂತೆ ಆತ್ಮವೇ ಸಾಮರಸ್ಯ ತತ್ವವಲ್ಲ, ಆತ್ಮ ಸ್ವತಂತ್ರಜೀವಿ, ಆದರೆ ಅದು ನಮ್ಮ ಸ್ವಭಾವದಲ್ಲಿ ಸಾಮರಸ್ಯವನ್ನೇರ್ಪಡಿಸುತ್ತದೆ. ಈ ಶಕ್ತಿಯನ್ನು ಪಡೆದ ಮನುಷ್ಯನ ಜೀವನ—ಆತನ ಸ್ವಭಾವ—ನೂತನ ರೀತಿಯಲ್ಲಿ ಮಾರ್ಪಾಡಾಗುತ್ತದೆ. ಹೌದು, ಆದರೆ ಈ ವಿಧವಾದ ಶಕ್ತಿ ಎಲ್ಲಿಂದ ಬರುತ್ತದೆ ? ಇದನ್ನರಿಯಬೇಕಾದರೆ ನಾವು ಹಿಂದೆ ವಿವರಿಸಿದ ಸಾಮಾನ್ಯವಾದವನ್ನು ಸ್ಮೃತಿಪಥಕ್ಕೆ ತಂದುಕೊಳ್ಳಬೇಕು. "ನಾವು ಯಾವಾಗಲೂ ಪದೇ ಪದೇ ಹೇಳುತ್ತಿರುವಂತೆ" "ನಿರ್ವಿಶಿಷ್ಟ (absolute) ಸೌಂದರ್ಯವೊಂದಿದೆ, ನಿರ್ವಿಶಿಷ್ಟ ಸೌಜನ್ಯವೊಂದಿದೆ, ಮತ್ತು ಸಕಲ ವಸ್ತುಗಳಿಗೂ ಅವುಗಳಿಗೆ ತಕ್ಕುದಾದ ನಿರ್ವಿಶಿಷ್ಟಸಾರತತ್ವವೊಂದು ಇದ್ದೇ ಇರುವುದು." ಇವುಗಳ ರಾಜ್ಯವನ್ನೇ ಸಾಮಾನ್ಯಲೋಕವೆನ್ನುವುದು. ಈ ಸಾಮಾನ್ಯಗಳು ಪರಸ್ಪರ ಮಿಶ್ರವಾಗುವುದರಿಂದ ಉಂಟಾಗುವ ಅವ್ಯವಸ್ಥೆಗಳನ್ನೇನೂ ಒಳಗೊಳ್ಳದೆ ಪರಸ್ಪರ ಯೋಗ್ಯವಾದ ಕ್ರಮ — ಸಮಾಚೀನತೆ — ಸಂಬಂಧಗಳನ್ನು ಹೊಂದಿ, ಸಮಾಜದೋಪಾದಿಯಲ್ಲಿ ಸುವ್ಯವಸ್ಥಿತಗಳಾ

ಗಿರುವುವು. ಎಲ್ಲ ಸಾಮಾನ್ಯಗಳಿಗಿಂತಲೂ ಅತ್ಯಂತ ಶ್ರೇಷ್ಠವಾದ, ಮಿಕ್ಕ ಸಾಮಾನ್ಯಗಳೆಲ್ಲಕ್ಕೂ ಆಧಾರಭೂತವಾದ, ಅವುಗಳನ್ನೆಲ್ಲಾ ಸಮ್ಮೇಲನಗೊಳಿಸುವ, ಮೂಲಸಾಮಾನ್ಯವೊಂದಿದೆ—ಇದೇ "ಪರಮಶ್ರೇಯ"ವೆಂಬ ಸಾಮಾನ್ಯ. ಈ ಸಾಮಾನ್ಯಗಳನ್ನು ಧ್ಯಾನಚಕ್ಷುಸ್ಸಿನಿಂದ ಸಾಕ್ಷಾತ್ಕರಿಸಿಕೊಳ್ಳುವುದೇ ತಾತ್ವಿಕ ಜೀವನದ ಮುಖ್ಯ ಗುರಿಯೆಂದು ಸಾಕ್ರಟೀಸನು ಹಿಂದೆಯೇ ಹೇಳಿದ್ದಾನೆ. ಸತ್ಯ ಸೌಂದರ್ಯ ಸೌಜನ್ಯಗಳೆಂಬ ಪರಮಶ್ರೇಯಗಳ ಸಾಕ್ಷಾತ್ಕಾರವೇ, ಅವುಗಳ ಧ್ಯಾನಲಬ್ಧ ದರ್ಶನವೇ, ಇಂತಹ ದರ್ಶನ ಸಾಕ್ಷಾತ್ಕಾರಗಳಿಂದ ನಮ್ಮ ಆತ್ಮದ ಮೇಲೆ ಉಂಟಾಗುವ ಸಂಸ್ಕಾರವೇ, ಮೇಲೆ ವಿವರಿಸಿದ ಜ್ಞಾನಶಕ್ತಿ ಎಂಬುದು. ಸಾಮಾನ್ಯಗಳ ಅಪರೋಕ್ಷವಾದ ಅನುಭೂತಿಯೇ ಸಮ್ಯಗ್‌ಜ್ಞಾನವೆನಿಸುವುದು. ಇಂತಹ ಅನುಭೂತಿಯನ್ನು ಹೊಂದಬೇಕಾದರೆ ಮನಸ್ಸು ಶಬ್ದ ಸ್ಪರ್ಶ ರೂಪಾದಿ ಪಂಚೇಂದ್ರಿಯಗಳ ವ್ಯಾಪಾರಗಳಿಂದಲೂ, ಸುಖದುಃಖಾನುಭವದಿಂದಲೂ ಪೂರ್ಣವಾಗಿ ಬಿಡುಗಡೆ ಹೊಂದಿ, ಶುಭ್ರವಾದ ತನ್ನ ಸ್ವಯಂಪ್ರಕಾಶದಿಂದ ಪ್ರತಿಯೊಂದು ಸಾಮಾನ್ಯವನ್ನೂ ಒಳಹೊಕ್ಕು ಅದರ ಸತ್ಯಾರ್ಥವನ್ನು ಕಂಡುಹಿಡಿಯಬೇಕೆಂದು ಫೀಡೋ ಸಂವಾದದಲ್ಲಿ ಸಾಕ್ರಟೀಸನು ಹೇಳುತ್ತಾನೆ.[೧] ಇದೇ ಧ್ಯಾನಯೋಗ. ಇದನ್ನು ಅಭ್ಯಾಸ ಮಾಡುವವರು ಆತ್ಮಸಂಯಮ ಪಡೆದು ಪವಿತ್ರ ಜೀವನರಾಗಿರಬೇಕು.[೨] ಇದರಿಂದ ಲಭಿಸುವುದು ಕೇವಲ ತಿಳಿವಳಿಕೆಯಲ್ಲ, ವಿವೇಕವಲ್ಲ— ವಸ್ತುಗಳ ಅಂತರಾತ್ಮ ಸತ್ವಗಳ— ಅದರಲ್ಲಿಯೂ ಪರಮ ಶ್ರೇಯದ—ದರ್ಶನ, ಮತ್ತು ಇಂತಹ ದರ್ಶನದಿಂದುಂಟಾಗುವ ಭಾವ ಬುದ್ಧಿ ಕ್ರಿಯಾಶಕ್ತಿಗಳ ಸಾಮರಸ್ಯ, ಮತ್ತು ಸದ್ವರ್ತನೆಗೆಳೆಯುವ ಸಂಸ್ಕಾರ. ಪರಮ ಸೌಂದರ್ಯವನ್ನೇ, ಪರಮ ಸೌಜನ್ಯವನ್ನೇ, ಅಂತರಾತ್ಮನ ಮೂಲಕ ಅನುಭವಿಸಿದವನಿಗೆ, ತನ್ಮೂಲಕ ತನ್ನ ಜೀವನವೇ ಸುಂದರ ರೀತಿಯಲ್ಲಿ, ಸುಜನರೀತಿಯಲ್ಲಿ, ಸುಷ್ಠುಗೊಳಿಸಲ್ಪಟ್ಟವನಿಗೆ, ಇನ್ನು ದುಷ್ಪ್ರವರ್ತನೆ ಎಲ್ಲಿಯದು? ದುರುಳವಾಸನೆ ಕಾಮನೆಗಳೆಲ್ಲಿಯವು? ಇಂತಹ ಜ್ಞಾನವೇ ಸದ್ಗುಣವೆಂದರೇನಾಶ್ಚರ್ಯ?

೧. ಫೀಡೊ: ೬೫–೬೭. ೨. ಫೀಡೊ: ೬೭–೬೯.

ಇಷ್ಟೇ ಅಲ್ಲ. ಪರಮಶ್ರೇಯದ ದರ್ಶನವೇ ಜ್ಞಾನವೆಂದು ಒಪ್ಪೋಣ. ಆದರೆ ಮಾನವಶಬ್ದಗಳಲ್ಲಿ ಪರಮಶ್ರೇಯದ ಭಾಷಾಂತರ ವೇನು? ಮಾನವಾನುಭವದಲ್ಲಿ ಅದು ತಾಳುವ ರೂಪ ಯಾವುದು? ಆತ್ಮದ ಆರೋಗ್ಯವೇ ("the health of the soul") ನಮ್ಮ ಪರಮ ಶ್ರೇಯ. ದೇಹದ ಹಸಿವು ಬಾಯಾರಿಕೆಗಳಿಗಿಂತಲೂ ತೀಕ್ಷ್ಣವಾದ ಆತ್ಮದ ದಾಹವೊಂದಿದೆ: ಧರ್ಮಜೀವನದ ಹಂಬಲೇ ಈ ದಾಹ. ಈ ಆತ್ಮದಾಹವನ್ನು ಶಮನಗೊಳಿಸಬೇಕಾದರೆ ಆತ್ಮಜ್ಞಾನ ಅತ್ಯಂತ ಆವಶ್ಯಕ. ಋಜುಮಾರ್ಗದಲ್ಲಿ ನಾವು ಜೀವನಯಾತ್ರೆಯನ್ನು ನಡಸ ಬೇಕಾದರೆ, ನಾವು ಯಾರು, ಆತ್ಮದ ಲಕ್ಷಣವೇನು? ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಇದೇ ಸಾಕ್ರಟೀಸನ ಸದಾಚಾರಬೋಧ ನೆಯ ಪಲ್ಲವಿಯಾಗಿತ್ತು. "ಹೇಳು, ಯೂಥಿಡಿಮುಸ್, ನೀನು ಡೆಲ್ಫಿಗೆ ಎಂದಾದರೂ ಹೋಗಿರುವೆಯಾ?" "ಎರಡು ಸಲ ಹೋಗಿರುವೆನು" "ಅಲ್ಲಿ ದೇವಸ್ಥಾನದ ಗೋಡೆಯಮೇಲಿರುವ 'ನಿನ್ನನ್ನು ನೀನು ತಿಳಿದುಕೊ' ಎಂಬ ಶಾಸನವನ್ನು ನೋಡಿದೆಯಾ?" "ನೋಡಿದೆನು." "ಒಳ್ಳೆಯದು, ಹಾಗಾದರೆ ಅದಕ್ಕೆ ನೀನು ಗಮನವೇ ಕೊಡಲಿಲ್ಲವೇನು? ಇಲ್ಲವೆ ಗಮನಕೊಟ್ಟು, ನೀನು ಯಾರು, ನಿನ್ನ ಸ್ವಭಾವವೇನು, ಎಂಬುದನ್ನು ಪರೀಕ್ಷಿಸಿ ಅರಿತುಕೊಳ್ಳಲು ಪ್ರಯತ್ನಪಟ್ಟೆಯೋ?" ಹೀಗೆ ಕಂಡಕಂಡ ವರನ್ನೆಲ್ಲಾ ಅವನು ಕೇಳುತ್ತಿದ್ದನು. ಆತ್ಮಜ್ಞಾನವೆಂದರೆ, ಆತ್ಮದ ವಿಧ ವಿಧ ವಾಸನೆಗಳು ಯಾವುವು, ವಿಧವಿಧ ಶಕ್ತಿವಿಶೇಷಗಳು ಯಾವುವು, ಎಂಬುದನ್ನು ತಿಳಿದು, ವಾಸನೆಗಳನ್ನು ವಶಪಡಿಸಿಕೊಂಡು ಆತ್ಮಸಂಯಮ ಹೊಂದಿ, ಶಕ್ತಿಗಳನ್ನೆಲ್ಲಾ ವೃದ್ಧಿಪಡಿಸಿ ಸಿದ್ಧಿಗೆ ತಂದು, ಒಟ್ಟಿನಲ್ಲಿ ಆತ್ಮ ವಿಕಾಸಹೊಂದಿದ, ಸಮತೋಲನಪಡೆದ, ಸುಂದರತರವಾದ ಜೀವನ ವನ್ನು ಗಳಿಸುವುದೆಂದರ್ಥ. ಇಂತಹ ಸ್ವಪರಿಜ್ಞಾನದಿಂದ ಪುರುಷನು ತನ್ನ ನಿಲುಕಿಗೆ ಸಿಕ್ಕುವುದು ಯಾವುದು, ಸಿಕ್ಕದಿರುವುದು ಯಾವುದು, ಎಂಬುದನ್ನರಿತು ಸಾಧ್ಯವಾದುದನ್ನು ಮಾಡುವುದರಿಂದ- ಸಫಲನಾಗಿ, ಸಾಧ್ಯವಿಲ್ಲದುದನ್ನು ಬಿಡುವುದರಿಂದ ವಿಫಲನಾಗದೆ, ಸುಖಿಯಾಗಿ ಬಾಳುವನೆಂದು ಸಾಕ್ರಟೀಸನು ಹೇಳುತ್ತಿದ್ದನು

ಜ್ಞಾನಶಬ್ದಕ್ಕೆ ಸಾಮಾನ್ಯಗಳ ದರ್ಶನಜ್ಞಾನ ಮತ್ತು ಆತ್ಮಜ್ಞಾನವೆಂದು ಈಗ ವಿದಿತವಾಯಿತು. ಇಂಥ ಜ್ಞಾನವನ್ನೇ ಸಾಕ್ರಟೀಸನು ಸದ್ಗುಣದೊಂದಿಗೆ ಒಂದುಮಾಡುವುದು. ಈ ಏಕತೆ ಧರ್ಮಜೀವನಕ್ಕೆ ಸೂತ್ರವಾಗಬೇಕಾದರೆ ಒಂದು ವಿಷಯವನ್ನುಮಾತ್ರ ನಾವು ಮರೆಯಬಾರದು. ಸಮ್ಯಗ್‌ಜ್ಞಾನ, ಸದ್ಗುಣ, ಎರಡಕ್ಕೂ ಮೂಲ ಒಂದೇ—ನಿತ್ಯಸೌಂದರ್ಯ, ನಿತ್ಯಶ್ರೇಯಗಳ ಸಾಕ್ಷಾತ್ಕಾರ. ಈ ಅನುಭವದಿಂದ ಆ ಸೌಂದರ್ಯ ಸೌಶೀಲ್ಯಗಳನ್ನು ನಾವು ನಮ್ಮೊಳಗೇ ಆಕರ್ಷಿಸಿಕೊಂಡು, ಅವು ನಮ್ಮ ಆತ್ಮನಲ್ಲಿಯೇ ಸದಾ ನೆಲಸಿರುವಂತೆ, ಅವುಗಳನ್ನು ತುಂಬಿಕೊಳ್ಳುತ್ತೇವೆ (ಪ್ರತ್ಯೇಕ ಸಾಮಾನ್ಯದಲ್ಲಿ ಪಾಲು ಹೊಂದಿರುವ ಸಿದ್ಧಾಂತ). ಇದರಿಂದ ನಮ್ಮ ಮನಸ್ಸು, ನಮ್ಮ ಪ್ರೀತಿ, ನಮ್ಮ ಒಲುಮೆ ಸನ್ಮಾನಗಳೆಲ್ಲ ಸೌಂದರ್ಯ ಸೌಶೀಲ್ಯಗಳ ಮೇಲೆಯೇ ಸ್ಥಿತವಾಗುತ್ತವೆ; ಇದರ ಜೊತೆಗೆ ಆತ್ಮಜ್ಞಾನದಿಂದ ನಮ್ಮ ಬಲಾಬಲಗಳನ್ನು ನಾವು ತಿಳಿಯುತ್ತೇವೆ. ಇಂತಹ ಪರಿಣಾಮದಿಂದ ಪುರುಷನು ಸದ್ಗುಣಭರಿತನಾಗದೆ ಮತ್ತೇನಾಗಬಲ್ಲನು? ಇಂತಹವನ ಮನೋವಾಕ್ಕಾಯಕರ್ಮಗಳಲ್ಲಿ ಅಂದಗೆಟ್ಟದ್ದಾಗಲಿ, ಅಪವಿತ್ರವಾದುದಾಗಲಿ, ಅಯೋಗ್ಯ—ಅಧರ್ಮ—ವಾದುದಾಗಲಿ, ಕಡೆಗೆ ಅಸಂಬದ್ಧವಾದುದಾಗಲಿ, ಹೇಗೆ ಉತ್ಪತ್ತಿಯಾದೀತು? ಈ ಅರ್ಥದಲ್ಲಿ ಜ್ಞಾನಪೂರ್ವಕವಾಗಿ ಯಾರೂ ದುರ್ಮಾರ್ಗಕ್ಕೆ ಬೀಳುವುದಿಲ್ಲವೆಂದು ಸಾಕ್ರಟೀಸನು ಹೇಳಿದನು. ಯಾವನಾದರೂ ದುರ್ಮಾರ್ಗವನ್ನು ಕಾಮಿಸಿದನೆಂದರೆ, ಅಂತಹವನಲ್ಲಿ ಮೇಲೆ ವಿವರಿಸಿದ ಜ್ಞಾನಶಕ್ತಿ — ಸಂಸ್ಕಾರಬಲ — ಇನ್ನೂ ಮೂಡಲಿಲ್ಲವೆಂದು ತಿಳಿಯಬೇಕು.

ಇದೇ ಅರ್ಥದಲ್ಲಿ ಸಕಲ ಸದ್ಗುಣಗಳೂ ಸಾರದಲ್ಲಿ ಒಂದೇ ಎಂಬ ವಾಕ್ಯವನ್ನು ತಿಳಿಯಬೇಕು. ಸದ್ಗುಣಕ್ಕೆ ಮೂಲವಾದುದು ಸಾಮಾನ್ಯದರ್ಶನದಿಂದಲೂ ಆತ್ಮಜ್ಞಾನದಿಂದಲೂ ಉಂಟಾದ ಆತ್ಮಸಾಮರಸ್ಯ, ಭಾವ ಬುದ್ಧಿ ಕ್ರಿಯಾಬಲಗಳ ಸಮೀಕಾರ, ಜೀವನದ ಸಮಗಟ್ಟು. ಹೀಗೆ ಜೀವನದ ಆಂತರಿಕ ಸತ್ವಸ್ಥಿತಿ ಒಂದಾಗಿರುವಲ್ಲಿ, ಬಾಹ್ಯದಲ್ಲಿ ನಾವು ಮಾಡುವ ಕರ್ಮಗಳಿಗೆಲ್ಲಾ, ನಾವು ಹೊಂದುವ ಚಿತ್ತಸಂಕಲ್ಪ

ಗಳಿಗೆಲ್ಲಾ, ಶಕ್ತಿಯನ್ನೀಯುವ ಮೂಲಕಾರಣ ಈ ಆಂತರಿಕ ಸ್ಥಿತಿಯೊಂದೇ. ಇದು ಜೀವನದ ವಿಧವಿಧ ಸನ್ನಿವೇಶಗಳಲ್ಲಿ ವಿಧವಿಧ ರೂಪಗಳನ್ನು ಹೊಂದಿ, ಒಂದು ಸನ್ನಿವೇಶದಲ್ಲಿ ಧೈರ್ಯ, ಮತ್ತೊಂದರಲ್ಲಿ ಇಂದ್ರಿಯನಿಗ್ರಹ ಅಥವಾ ಮಿತವ್ಯವಹಾರ, ಮಗುದೊಂದರಲ್ಲಿ ವಿವೇಕ, ಎಂದೆನಿಸಿಕೊಳ್ಳುವುದು. ಈ ಸದ್ಗುಣಪ್ರವಾಹಗಳ ಮೂಲನದಿಯಾದರೋ ಆತ್ಮಸೌಂದರ್ಯವೆಂಬ ಧರ್ಮಸ್ವಭಾವವೊಂದೇ.

ಸತ್ಯ ಸೌಜನ್ಯ ಸೌಂದರ್ಯಾದಿ ಪರಮಸಾಮಾನ್ಯಗಳ ಸಂದರ್ಶನವೇ ಸಮ್ಯಗ್‌ಜ್ಞಾನ, ಅದೇ ಆತ್ಮದ ಅನಿರ್ವಚನೀಯ ಆನಂದ, ಕಲ್ಮಷವಿಲ್ಲದ ಕಲ್ಯಾಣ. ಇಂತಹ ಭಾಗ್ಯ ದೊರಕುವುದಕ್ಕೆ ಮೊದಲು ಅದನ್ನು ಹೊಂದಬೇಕೆಂಬ ಉತ್ಕಟವಾದ ಆಕಾಂಕ್ಷೆಯೊಂದು ತನುಮನವೆಲ್ಲವನ್ನೂ ಪ್ರವೇಶಿಸಿ ಆತ್ಮವನ್ನು ಉನ್ನತವಾದ ಭಾವಗಳರಳುವುದಕ್ಕೆ ಯೋಗ್ಯವಾದ ಉಚ್ಚ ಆಧ್ಯಾತ್ಮಿಕ ಸ್ಥಿತಿಗೆ ಒಯ್ಯಬೇಕು. ಇಂತಹ ಉಜ್ವಲ ಆಕಾಂಕ್ಷೆಯನ್ನು ಸಾಕ್ರಟೀಸನು "ಪ್ರೇಮ"ವೆಂದು ಕರೆಯುತ್ತಾನೆ. ಈ ಪ್ರೇಮ ಕೇವಲ ಭೌತ ಅಥವಾ ಶಾರೀರಕವಲ್ಲ—ಪರಮಧ್ಯೇಯವನ್ನು ಸಾಧಿಸಬೇಕೆನ್ನುವ ಮನದ ಉದ್ವೇಗ, ಸೌಂದರ್ಯರೂಪದಲ್ಲಿ. ಕಾಣಬರುವ ಶ್ರೇಯವನ್ನು ಹೊಂದಬೇಕೆನ್ನುವ ಆತ್ಮದ ಆಸಕ್ತಿ, ಸತ್ವಪೂರಿತವಾದ ಸಾಮಾನ್ಯಗಳ ಸವಿಯ ಮೇಲಿನ ಅಪಾರ ಅನುರಾಗ. ಪ್ರಥಮದಲ್ಲಿ ಸುಂದರವಾದ ಶರೀರಗಳ ಅವಲೋಕನದಿಂದ ಈ ಪ್ರೀತಿ ಅಂಕುರಿಸಬಹುದು, ಅನಂತರ ಸುಂದರವಾದ ಶೀಲವುಳ್ಳ ಪುರುಷರನ್ನದು ಅವಲಂಬಿಸುವುದು, ತದನಂತರ ಸುಂದರವಾದ ಮನೋಭಾವಗಳಿಗೂ ಸಿದ್ಧಾಂತಗಳಿಗೂ ಅದು ಆಕರ್ಷಿಸಲ್ಪಡುವುದು, ತನ್ಮೂಲಕ ಸುಂದರವಾದ ಸಂಸ್ಥೆಗಳಿಗೂ ಸಮಾಜಶಾಸನಗಳಿಗೂ ಒಯ್ಯಲ್ಪಡುವುದು ; ಕೊನೆಯಲ್ಲಿ —ಈ ಹಂತಗಳನ್ನೆಲ್ಲಾ ಒಂದೊಂದಾಗಿ ಏರುವಾಗ ತನ್ನಲ್ಲಿರಬಹುದಾದ ಕಲ್ಮಷಕಿಲ್ಬಿಷಗಳನ್ನೆಲ್ಲಾ ತೊರೆದು ಪುಟ ಹಾಕಿದ ಚಿನ್ನದಂತೆ ಪರಿಶುದ್ಧವಾಗಿ—ತಾನೇ ತಾನಾಗಿರುವ ನಿರುಪಮ ನಿತ್ಯಸೌಂದರ್ಯರಾಶಿಯಲ್ಲಿಯೇ ಸ್ಥಿತವಾಗಿ ಲಯವಾಗುವುದು. ವಿಷಯಕಾಮನೆಯೂ ಸಹ ಇಂತಹ ಪವಿತ್ರ ಪ್ರೇಮದ ಒಂದುಬಗೆಯ ಅರ್ಥಗರ್ಭಿತ ಪ್ರದರ್ಶನವೇ: ತನ್ನ

ಸಂತತಿ ಅಭಿವೃದ್ಧಿ ಹೊಂದುವುದರ ಮೂಲಕ ಅಮರತ್ವವನ್ನು ಪಡೆಯಬೇಕೆಂಬ ಆತ್ಮದ ಹಂಬಲು. ಈ ಪ್ರೇಮದ ಜಿಜ್ಞಾಸೆಯನ್ನು ಸಾಕ್ರಟೀಸನು ಭರದಿಂದಲೇ ನಡಸಿರುವನು.

## ಸಾಕ್ರಟೀಸನ ಪ್ರೇಮ ಮೀಮಾಂಸೆ

ಸಾಕ್ರಟೀಸನು ಫೀಡ್ರಸನಿಗೆ ಹೇಳುತ್ತಾನೆ: [೧]

"ಮ್ಯಾಂಟೀನಿಯ ದೇಶದ ಡಯೊಟೀಮ ಎಂಬ ಮಹಾ ತಾಯಿಯ ಮುಖದಿಂದ ನಾನು ಕೇಳಿದ ಕಾಮನ ಕತೆಯನ್ನು ನಿನಗೆ ಹೇಳುತ್ತೇನೆ, ಕೇಳು. ಈಕೆ ಇದರಲ್ಲಿಯೂ ಇದರಂತೆ ಇನ್ನೂ ಅನೇಕ ವಿಧವಾದ ವಿಷಯಗಳಲ್ಲಿಯೂ ಪೂರ್ಣಜ್ಞಾನ ಹೊಂದಿದ ಪರಮ ಯೋಗಿನಿ; ಹಿಂದಿನ ಕಾಲದಲ್ಲಿ ಅಥೆನ್ಸ್ ನಗರದವರು ಪ್ಲೇಗೆಂಬ ಮಹಮ್ಮಾರಿ ಬರದಿರಲಿ ಎಂದು ಯಜ್ಞಮಾಡಿದಾಗ ಆ ರೋಗ ಹತ್ತು ವರುಷ ಬಾರದಂತೆ ತಡೆದ ಮಹಾಮಹಿಮಳು. ಪ್ರೇಮಯೋಗವನ್ನು ನನಗೆ ಕಲಿಸಿದವಳು ಅವಳೇ, ಅವಳು ನನಗೆ ಹೇಳಿದುದನ್ನು ನಾನು ನಿನ್ನ ಮುಂದೆ ಹೇಳುತ್ತೇನೆ........"ಹಾಗಾದರೆ ಕಾಮ(ಪ್ರೇಮ)ವೆಂದರೇನು" ಎಂದು ನಾನು ಕೇಳಿದೆ. "ಆತನು ಮರ್ತ್ಯನೇ ?" "ಅಲ್ಲ." "ಹಾಗಾದರೆ ಮತ್ತೇನು ?" "ಹಿಂದಿನ ನಿದರ್ಶನದಲ್ಲಿ ಹೇಳಿದಂತೆಯೇ, ಆತನು ಮರ್ತ್ಯನೂ ಅಲ್ಲ, ಅಮರನೂ ಅಲ್ಲ, ಎರಡಕ್ಕೂ ಮಧ್ಯಸ್ಥನಾದವನು." "ಅವನ ನಿಜವಾದ ಸ್ವರೂಪವೇನು, ಡಯೊಟೀಮ ?" "ಆತನೊಬ್ಬ ಶ್ರೇಷ್ಠ ಗಂಧರ್ವನು (ಯಕ್ಷನು), ಮತ್ತು ಎಲ್ಲಾ ಗಂಧರ್ವರಂತೆ ದೇವತೆಗಳಿಗೂ ಮಾನವರಿಗೂ ಮಧ್ಯಸ್ಥನಾದವನು." "ಆತನ ಮಹಿಮೆಯೇನು ?" "ಆತನು ದೇವತೆಗಳಿಗೂ ಮನುಷ್ಯರಿಗೂ ಮಧ್ಯಸ್ಥಗಾರ, ಮನುಷ್ಯರ ಪ್ರಾರ್ಥನೆಗಳನ್ನೂ ಯಜ್ಞಹವಿಸ್ಸನ್ನೂ ತೆಗೆದುಕೊಂಡು ಹೋಗಿ ದೇವತೆಗಳಿಗೆ ಸಲ್ಲಿಸುತ್ತಾನೆ, ದೇವತೆಗಳ ಇಷ್ಟವನ್ನೂ ಆಜ್ಞೆಯನ್ನೂ ತಂದು ಮನುಷ್ಯರಿಗೆ ತಿಳಿಸುತ್ತಾನೆ; ದೇವತೆಗಳಿಗೂ ಮನುಷ್ಯರಿಗೂ ಮಧ್ಯೆ ಇರುವ ಅಂತರವನ್ನು ಮುಚ್ಚಬಲ್ಲ ದ್ವಿಗುಣಾತ್ಮಕ

೧. "ಸಿಂಪೋಸಿಯಂ", ೨೦೧ ಡಿ.

ಸತ್ವವುಳ್ಳವನು. ಆದುದರಿಂದ ಸಮಸ್ತವೂ ಆತನಲ್ಲಿ ಒಂದುಗೂಡಿ ಸಲ್ಪಟ್ಟಿರುವುದು, ಆತನ ಮುಖಾಂತರವಾಗಿಯೇ ಪ್ರವಾದಿಗಳ ಮತ್ತು ಪುರೋಹಿತರ ವಿದ್ಯೆ, ಅವರ ಯಜ್ಞಗಳು, ರಹಸ್ಯ ವ್ರತಾಚರಣೆಗಳು, ಯಂತ್ರ ತಂತ್ರಗಳು, ಕಾಲಜ್ಞಾನ, ಮಣಿಮಂತ್ರಾದಿಗಳು ಸಫಲ ಗೊಳ್ಳುವುವು. ಏಕೆಂದರೆ ದೇವರು ನೇರವಾಗಿ ಮಾನವನೊಡನೆ ಬೆರೆಯು ವುದಿಲ್ಲ; ಕಾಮನ (ಪ್ರೇಮದ) ಮುಖಾಂತರವಾಗಿಯೇ ಜಾಗ್ರತ್ತಿನಲ್ಲಾ ಗಲಿ, ನಿದ್ರೆಯಲ್ಲಾಗಲಿ, ಮನುಷ್ಯನ ಮತ್ತು ದೇವರ ಪರಸ್ಪರ ಸಂಭಾಷಣೆ ಮತ್ತು ವ್ಯಾಪಾರಗಳು ನಡೆಯುವುವು. ಇದರ ಸೂಕ್ಷ್ಮವನ್ನರಿಯುವುದೇ ಆಧ್ಯಾತ್ಮಿಕ ಜ್ಞಾನ, ನಿಜವಾದ ವಿವೇಕ; ಕಲೆ, ಕುಶಲವಿದ್ಯೆ, ಇವು ಗಳಿಗೆ ಸಂಬಂಧಿಸಿದ ಉಳಿದ ಜ್ಞಾನವೆಲ್ಲವೂ ತುಚ್ಛವಾದುದು, ಅನಾಗ ರಿಕವಾದುದು. ಈರೀತಿ ದೇವತೆಗಳಿಗೂ ಮನುಷ್ಯರಿಗೂ ಮಧ್ಯಸ್ಥ ವಾದ ಶಕ್ತಿಗಳು ಅಥವಾ ಚೈತನ್ಯಗಳು ಅನೇಕವಿವೆ, ವಿಧವಿಧವಾಗಿವೆ; ಪ್ರೇಮ ಅಥವಾ ಕಾಮುವೆಂಬುದು ಅವುಗಳಲ್ಲೊಂದು........

"ಸಾಮಾನ್ಯವಾಗಿ ಸಮಸ್ತ ವಿಧವಾದ ಶ್ರೇಯದ ಮತ್ತು ಆನಂದದ ಹಂಬಲನ್ನು ಪ್ರೇಮದ ಅದ್ಭುತವಾದ, ಸೂಕ್ಷ್ಮವಾದ ಶಕ್ತಿಯೆಂದೇ ಹೇಳಬಹುದು; ಆದರೆ ಈ ಶ್ರೇಯಾಪೇಕ್ಷೆಯನ್ನುಳಿದು ಮಾನವರು ಕಾಮನನ್ನು (ಪ್ರೇಮವನ್ನು) ಸೇರಲು ಇತರ—ಅಂದರೆ ಅರ್ಥ (ಹಣ ಸಂಪಾದನೆ), ವ್ಯಾಯಾಮ (ಶಕ್ತಿಸಂಪಾದನೆ), ತತ್ವಶಾಸ್ತ್ರ (ಜ್ಞಾನ ಸಂಪಾದನೆ)—ಮುಂತಾದ ಮತ್ತೆ ಯಾವ ಮಾರ್ಗವನ್ನವಲಂಬಿಸಿದರೂ ಅಂತಹವರನ್ನು ಪ್ರೇಮಿಗಳೆಂದು ಕರೆಯಲಾಗುವುದಿಲ್ಲ. ಈ ಹೆಸರು, ಯಾರ ಪ್ರೀತಿ ಈ ಒಂದೇವಿಧವಾದ (ಅಂದರೆ ಶ್ರೇಯಾಪೇಕ್ಷೆಯ) ರೂಪ ವನ್ನು ತಾಳಿರುವುದೋ, ಅವರಿಗೆ ಮಾತ್ರ ಪೂರ್ಣವಾಗಿ ಅನ್ವಯಿಸುವುದು —ಅವರೇ ನಿಜವಾಗಿ ಪ್ರೀತಿಸುವವರು, ಅವರೇ ನಿಜವಾದ ಕಾಮಿಗಳು." "ನಿನ್ನ ಮಾತು ನಿಜವಾದುದೆಂದು ನಾನು ಧೈರ್ಯವಾಗಿ ಹೇಳ ಬಲ್ಲೆ", "ಹೌದು. ಪ್ರೇಮಿಗಳು ತಮ್ಮ ವಿರಹಾನುಭವದಲ್ಲಿ ತಮ್ಮ ಅರ್ಧಾಂಗರನ್ನು ಅರಸುವರೆಂದು ಜನರು ಲೋಕರೂಢಿಯಾಗಿ ಹೇಳು ತ್ತಾರೆ; ಆದರೆ ನಾನು ಹೇಳುವುದೇನೆಂದರೆ, ಅವರು ಹುಡುಕುವುದು

ಅರ್ಧಾಂಗವನ್ನೂ ಅಲ್ಲ, ಪೂರ್ಣಾಂಗವನ್ನೂ ಅಲ್ಲ; ಅರ್ಧವಾಗಲಿ, ಪೂರ್ಣವಾಗಲಿ ಅದು ಶ್ರೇಯರೂಪವಾಗಿದ್ದ ಹೊರತು, ಶುಭಪ್ರದವಾಗಿದ್ದ ಹೊರತು, ಅವರಿಗದು ಬೇಡ. ಒಂದುವೇಳೆ ತಮ್ಮ ಸ್ವಂತ ಹಸ್ತಗಳೇ ಆಗಲಿ, ಪಾದಗಳೇ ಆಗಲಿ, ಅವು ಕೆಡುಕನ್ನುಂಟುಮಾಡುವುದಾದರೆ ಅವುಗಳನ್ನು ಕಡಿದು ಕಿತ್ತೊಗೆದುಬಿಡಲು ಅವರು ಹಿಂಜರಿಯುವುದಿಲ್ಲ. ಯಾವುದೇ ಆಗಲಿ ತಮ್ಮ ಸ್ವಂತದ್ದಾದಮಾತ್ರದಿಂದಲೇ ಅದನ್ನು ಜನರು ಪ್ರೀತಿಸುತ್ತಾರೆಂದು ತಿಳಿಯಕೂಡದು; ತಮಗೆ ಸೇರಿದ್ದೇ ಶುಭ, ಇತರರಿಗೆ ಸೇರಿದ್ದು ಅಶುಭ, ಎಂದು ತಿಳಿಯುವವರು ಯಾರಾದರೂ ಇದ್ದರೆ ಅವರ ಮಾತು ಬೇರೆ. ಏಕೆಂದರೆ, ಶುಭವನ್ನು ಹೊರತು ಮತ್ತೆ ಯಾವುದನ್ನೂ ಜನರು ಪ್ರೀತಿಸುವುದಿಲ್ಲ. ಹಾಗೆ ಅವರು ಪ್ರೀತಿಸುವ ಮತ್ತೆ ಯಾವ ವಸ್ತುವಾದರೂ ಇದೆಯೇ?" "ಖಂಡಿತವಾಗಿಯೂ ಯಾವುದೂ ಇಲ್ಲವೆಂದೇ ಹೇಳಬೇಕು."[೧] "ಹಾಗಾದರೆ, ಜನರು ಶುಭವನ್ನೇ ಪ್ರೀತಿಸುತ್ತಾರೆ–ಇದೇ ಸಾರಾಂಶ." "ಹೌದು". "ಅಂದರೆ, ಶುಭವನ್ನು ಹೊಂದಿ ಅನುಭವಿಸುವುದನ್ನು ಪ್ರೀತಿಸುತ್ತಾರೆಂದು ಅದಕ್ಕೆ ಸೇರಿಸಬೇಕಲ್ಲವೇ?" "ಹೌದು, ಅದನ್ನು ಸೇರಿಸಬೇಕು." "ಸುಮ್ಮನೆ ಹೊಂದಿರುವುದಲ್ಲ, ಶಾಶ್ವತವಾಗಿ ಹೊಂದಿ ಅನುಭವಿಸುವುದನ್ನಲ್ಲವೆ?" "ಅದನ್ನೂ ಸೇರಿಸಲೇಬೇಕು." "ಆ ಪಕ್ಷದಲ್ಲಿ ಶ್ರೇಯವನ್ನು ಶಾಶ್ವತವಾಗಿ ಹೊಂದಿ ಅನುಭವಿಸುವುದರ ಆಸೆಯೇ ಪ್ರೇಮವೆಂದು ಹೇಳಬಹುದಲ್ಲವೇ?" "ಅದು ನಿಜ."

"ಪ್ರೇಮದ ಸ್ವರೂಪವಿದಾದಪಕ್ಷದಲ್ಲಿ, ಅದನ್ನು ಹೊಂದಲು ಅನುಸರಿಸಬೇಕಾದ ಮಾರ್ಗ ಯಾವುದು, ಹೇಳಬಲ್ಲೆಯಾ? ಪ್ರೇಮವೆಂದು ಹೇಳಿಕೊಂಡು ಈ ಚಿತ್ತಸಂರಂಭವನ್ನೂ, ಈ ಉತ್ಸಾಹವನ್ನೂ, ಈ ವಿರಹತಾಪವನ್ನೂ ಜನರು ತೋರಿಸುತ್ತಾರಲ್ಲ—ಇಂತಹವರು ನಿಜವಾಗಿ ಮಾಡುವುದೇನು? ಅವರ ಮನಸ್ಸಿನಲ್ಲಿರುವ ಉದ್ದೇಶವಾದರೂ

೧. ಬೃಹದಾರಣ್ಯಕೋಪನಿಷತ್ತಿನಲ್ಲಿ "ಮೈತ್ರೇಯಿ ಬ್ರಾಹ್ಮಣ" ಎಂಬ ಅಧಿಕರಣದಲ್ಲಿ ಯಾಜ್ಞ್ಯವಲ್ಕರು ಮೈತ್ರೇಯಿ ದೇವಿಗೆ ವಿವರಿಸುವ ಪ್ರೇಮತತ್ವವನ್ನು ಡಯೊಟೀಮಳ ಸಿದ್ಧಾಂತದೊಂದಿಗೆ ಹೋಲಿಸಿ.

ಯಾವುದು? ಹೇಳು ನೋಡೋಣ." "ಚೆನ್ನಾಯಿತು, ಡಯೊಟೀಮ, ನನಗೆ ಈ ವಿಷಯಗಳು ಗೊತ್ತಿದ್ದಿದ್ದರೆ ನಿನ್ನ ತಿಳಿವಳಿಕೆಯನ್ನು ಕಂಡು ನಾನೇಕೆ ಆಶ್ಚರ್ಯಪಡಬೇಕಾಗಿತ್ತು, ಅವುಗಳನ್ನು ತಿಳಿದುಕೊಳ್ಳಲು ನಿನ್ನ ಬಳಿಗೆ ಬರಬೇಕಾದ ಪ್ರಮೇಯವಾದರೂ ಏನಿತ್ತು?" "ಚಿಂತೆ ಇಲ್ಲ, ನಿನಗೆ ಉಪದೇಶ ಮಾಡುತ್ತೇನೆ, ತಿಳಿದುಕೊ: ಅವರ ಉದ್ದೇಶ ವೇನೆಂದರೆ, ದೈಹಿಕವಾದ ಅಥವಾ ಆತ್ಮಿಕವಾದ ಸೌಂದರ್ಯಸಾಗರದಲ್ಲಿ ಜನನವನ್ನುಂಟುಮಾಡುವುದೇ............ಪ್ರೇಮದ ಗುರಿ ಸೌಂದರ್ಯ ಮಾತ್ರವಲ್ಲ." "ಮತ್ತೇನು?" "ಸೌಂದರ್ಯದಲ್ಲಿ ಜನನವನ್ನುಂಟು ಮಾಡಬೇಕೆಂಬುದು, ಜನನವಾಗಬೇಕೆಂಬುದು"...."ಜನನವನ್ನುಂಟು ಮಾಡಬೇಕೆಂಬುದೇತಕ್ಕೆ?" "ಏಕೆಂದರೆ, ಮರ್ತ್ಯ ಪ್ರಾಣಿಗೆ ಜನನ ವನ್ನುಂಟುಮಾಡುವುದೆಂದರೆ ಒಂದು ವಿಧವಾದ ನಿತ್ಯತ್ವವನ್ನೂ ಅಮರ ತ್ವವನ್ನೂ ಹೊಂದಿದಂತೆ ಭಾವನೆ; ಮತ್ತು, ಹಿಂದೆಯೇ ಹೇಳಿದಂತೆ, ಶ್ರೇಯವನ್ನು ಶಾಶ್ವತವಾಗಿ ಹೊಂದಬೇಕೆಂಬ ಆಸೆಯೇ ಪ್ರೇಮವೆಂದೆನಿ ಸಿದರೆ, ಸರ್ವರೂ ಶ್ರೇಯದ ಜೊತೆಗೆ ಅಮರತ್ವವನ್ನೂ ಬಯಸುವರೆಂದು ಹೇಳಬೇಕು. ಈ ಕಾರಣದಿಂದ ಪ್ರೇಮದ ಗುರಿ ಅಮರತ್ವ....ಸಾಧ್ಯವಾದ ಮಟ್ಟಿಗೆ ಮರ್ತ್ಯರು ಜರಾಮರಣರಹಿತರಾಗಿರಬೇಕೆಂದು ಆಸೆಪಡುವರು, ಆದರೆ ಜನನವನ್ನುಂಟುಮಾಡುವುದರಿಂದಲೇ ಇದು ಸಾಧ್ಯ; ಹೇಗೆಂದರೆ ಇದರ ಫಲವಾಗಿ ಮುಪ್ಪಿಗೆ ತುತ್ತಾದ ಜೀವದ ಸ್ಥಾನದಲ್ಲಿ ಒಂದು ಹೊಸ ಜೀವ ಉತ್ಪನ್ನವಾಗುತ್ತದೆ............ಹೀಗಿದ್ದಮೇಲೆ ಲೋಕವೆಲ್ಲವೂ ತಮ್ಮ ಸಂತತಿಯ ಮೇಲಿಡುವ ಪ್ರೇಮಕ್ಕೆ ಏಕೆ ಆಶ್ಚರ್ಯಪಡಬೇಕು? ಎಲ್ಲಿ ನೋಡಲಿ, ಅಮರತ್ವಕ್ಕೋಸ್ಕರವಾಗಿಯೇ ಈ ಪ್ರೇಮವೆಲ್ಲಾ, ಈ ಆಸೆಯೆಲ್ಲಾ............

"ಇವೆಲ್ಲಾ ಪ್ರೇಮದ ಕೀಳ್ತರದ ರಹಸ್ಯಗಳು, ಇವುಗಳಲ್ಲಿ ನೀನೂ ಸಹ ನಿಪುಣನಾಗಬಹುದು. ಇವುಗಳ ಕಿರೀಟಪ್ರಾಯವಾದ ಘನತರ ವಾದ ಇನ್ನೂ ಗುಪ್ತವಾದ ಅಂಶಗಳನ್ನು ಯೋಗ್ಯಚಿತ್ತದಿಂದ ಪರಾ ಮರ್ಶಿಸಿದರೆ ನೀನು ತಿಳಿಯಬಹುದು, ಆದರೆ ನಿನಗಷ್ಟು ಶಕ್ತಿ ಇದೆಯೋ ಇಲ್ಲವೋ ನಾನು ಹೇಳಲಾರೆ. ಇರಲಿ, ಅವುಗಳನ್ನು ನಿನಗೆ ತಿಳಿಸಲು

ನನ್ನ ಕೈಯಲಾದಮಟ್ಟಿಗೆ ಪ್ರಯತ್ನಪಡುವೆನು, ನಿನಗೆ ಧೈರ್ಯವಿದ್ದರೆ ನನ್ನನ್ನು ಹಿಂಬಾಲಿಸು. ಈ ವಿಷಯದಲ್ಲಿ ತಪ್ಪು ಹೆಜ್ಜೆ ಇಡದೆ ನಡೆಯಬೇಕೆಂದಿರುವವನು ತನ್ನ ಯೌವನದಲ್ಲಿ ಸುಂದರವಾದ ರೂಪಗಳನ್ನು ದರ್ಶನಮಾಡುತ್ತಿರಬೇಕು; ಪ್ರಥಮದಲ್ಲಿ, ತನ್ನ ಗುರುವಿನಿಂದ ಸರಿಯಾದ ಬೋಧನೆ ಪಡೆದಿದ್ದರೆ, ಈತನು ಸೌಂದರ್ಯಪರಿಪೂರ್ಣವಾದ ಒಂದೇ ಒಂದು ರೂಪವನ್ನು ಪ್ರೀತಿಸುವನು, ಅದರ ಧ್ಯಾನದಿಂದ ಕಾಲಕ್ರಮದಲ್ಲಿ ಸುಂದರವಾದ ಮನೋಭಾವಗಳನ್ನು ಸೃಜಿಸುವನು. ರೂಪಗಳು ಬೇರೆ ಬೇರೆಯಾದರೂ ಪ್ರತಿ ಒಂದು ರೂಪದಲ್ಲಿಯೂ ಇರತಕ್ಕ ಲಾವಣ್ಯ ಒಂದೇ ಎಂದು ಈತನಿಗೆ ಜಾಗ್ರತೆಯಾಗಿಯೇ ಮನದಟ್ಟದಿರದು: ಸಾಮಾನ್ಯವಾಗಿ ರೂಪಲಾವಣ್ಯವೇ ಇವನ ಗುರಿಯಾದರೆ, ಒಂದು ರೂಪದ ಅಂದ ಮತ್ತೊಂದು ರೂಪದ ಚಂದಕ್ಕೆ ಸಮಾನವಾದುದೆಂದು ತಿಳಿದುಕೊಳ್ಳದಿರುವಷ್ಟು ದಡ್ಡನೇ ಇವನು! ಈ ಅಂಶವನ್ನು ಯಾವಾಗ ಗ್ರಹಿಸುತ್ತಾನೆಯೋ ಆಗ ಈತನು ತಾನು ಒಂದೇ ಒಂದು ರೂಪದ ಮೇಲಿಟ್ಟಿದ್ದ ಪ್ರಚಂಡ ವ್ಯಾಮೋಹವನ್ನು ಕಡಮೆಮಾಡುವನು—ಇದು ಬಹಳ ಅಲ್ಪವಾದ ವಿಚಾರವೆಂದು ಅದನ್ನು ತುಚ್ಛೀಕಾರ ಮಾಡಿ ಸೊಬಗುಳ್ಳ ರೂಪಗಳನ್ನೆಲ್ಲಾ ಒಂದೇ ಸಮನಾಗಿ ಪ್ರೀತಿಸಲು ತೊಡಗುವನು. ಇದಕ್ಕೆ ಮರುಮೆಟ್ಟಲು ಯಾವುದೆಂದರೆ, ಚಿತ್ತಸೌಂದರ್ಯದ ಸಂಪತ್ತು ಕಾಯಸೊಬಗಿನ ಸಿರಿಗಿಂತಲೂ ಘನತರವಾದುದೆಂದು ತಿಳಿಯುವುದೇ. ಈ ಭಾವ ಉದಯವಾದಮೇಲೆ, ಚೆಲುವುಳ್ಳ ಚೈತನ್ಯಕ್ಕೆ ಸ್ವಲ್ಪ ಅಂದವಾದ ಆಕಾರವಿದ್ದರೆ ಸಾಕು, ಅಂತಹ ಯುವಕನನ್ನು ಈತನು ಪ್ರೀತಿಸಿ ಪಾಲಿಸಲು ಒಡಂಬಡುವನು, ಅವನ ಹೃದಯವನ್ನು ಶೋಧಿಸಿ ಅದರೊಳಗೆ ಅಡಗಿರಬಹುದಾದ ಸಭ್ಯಶೀಲಜನಕವಾದ ಭಾವಸದ್ರೂಪಗಳು ಜೀವನದಲ್ಲಿ ವಿಕಸಿಸುವಂತೆ ಅವನಮೇಲೆ ಪರಿಣಾಮ ಬೀರುವನು. ಈ ರೀತಿ ರೂಪಲಾವಣ್ಯಮೋಹದಿಂದ ಹತ್ತಿ ಭಾವಶೀಲಗಳ ಸೊಬಗಿಗೆ ಮನಸೋತಮೇಲೆ, ಕಡೆಯಲ್ಲಿ ಸಮಾಜಸಂಸ್ಥೆಗಳಿಗೂ ಶಾಸನಪದ್ಧತಿಗಳಿಗೂ ಒಂದುಬಗೆಯ ಅಂದವಿರುವುದೆಂದೂ, ಇವುಗಳೆಲ್ಲದರ ಅಂದವೂ ಒಂದೇ ವಿಧವಾದುದೆಂದೂ, ಕೇವಲ ದೇಹಸೌಂದರ್ಯವೆಂಬುದು ಅತ್ಯಲ್ಪ

ವಿಚಾರವೆಂದೂ, ಅರಿಯುವನು. ಶಾಸನಗಳೂ ಸಂಸ್ಥೆಗಳೂ ಆದಮೇಲೆ ಶಾಸ್ತ್ರಪರಿಚಯಕ್ಕೆ ಹೊರಟು ಅದರ ಸೊಬಗನ್ನೂ ಸವಿಯುವನು. ಈತನು ಒಬ್ಬನೇ ಯುವಕನ, ಒಬ್ಬನೇ ಪುರುಷನ, ಒಂದೇ ಸಂಸ್ಥೆಯ, ಚೆಲ್ವಿಕೆಗೆ ಮನವೊಲಿದ ಸೆರೆಯಾಳಂತೆ ತಾನೇ ಸಂಕುಚಿತಹೃದಯದ ಕೀಳ್ತರದ ಅಡಿಯಾಳಾಗದೆ, ವಿಶ್ವದಲ್ಲೆಲ್ಲ ತುಂಬಿ ತುಳುಕುವ ಅಪಾರ ಸೌಂದರ್ಯ ಸಾಗರವನ್ನು ಸಮೀಪಿಸಿ, ತದೇಕ ಧ್ಯಾನನಿಮಗ್ನನಾಗಿ, ಸಕಲ ಸುಜ್ಞಾನಕ್ಕೂ ಅಮಿತ ಅನುರಾಗವನ್ನು ತೋರ್ಪಡಿಸುವವನಾಗಿ ಸೊಬಗುಳ್ಳ ಘನವುಳ್ಳ ಬಗೆಬಗೆಯ ಭಾವತರಂಗಗಳನ್ನು ಸೃಜಿಸುವನು. ಆ ಸಾಗರದ ಕರೆಯಲ್ಲಿಯೇ ವಿಹರಿಸುವುದರಿಂದ ಆತ್ಮಬಲಪುಷ್ಟಿಪಡೆದು, ಶೀಲ ದೃಢಕಾಯನಾಗಿ, ಕಡೆಯಲ್ಲಿ ಸಕಲ ಸೌಂದರ್ಯದ ಮೂಲವಾದ ಏಕಮಾತ್ರವಾದ ರಸಾತ್ಮಕವಿದ್ಯೆಯ ಪ್ರತ್ಯಕ್ಷದರ್ಶನವನ್ನು ಪಡೆಯುವನು. ಇದು ಹೇಗೆಂಬುದನ್ನು ಈಗ ವಿವರಿಸುವೆನು ; ದಯೆಮಾಡಿ ಸಾವಧಾನ ಚಿತ್ತನಾಗಿ ಲಾಲಿಸು:

"ಇಷ್ಟರವರೆಗೆ ಪ್ರೇಮಕಲೆಗಳಲ್ಲಿ ಶಿಕ್ಷಣ ಪಡೆದು ಮೇಲೆ ಹೇಳಿದ ಅನುಕ್ರಮದಲ್ಲಿ ಸೌಂದರ್ಯರಸಾಸ್ವಾದನೆ ಮಾಡಿದವನು ಕೊನೆಯ ಸೋಪಾನಕ್ಕೆ ಬಂದಾಗ, ಹಠಾತ್ತಾಗಿ ಒಂದಾನೊಂದು ಪರಮಾಶ್ಚರ್ಯಕರವಾದ ಸೌಂದರ್ಯಸ್ವರೂಪ ಅವನ ಕಣ್ಣಿಗೆ ಬೀಳುವುದು (ಇದೇ, ಸಾಕ್ರಟೀಸ್, ನಮ್ಮ ಪೂರ್ವದ ಶ್ರಮಸಾಹಸಗಳೆಲ್ಲದರ ಪ್ರಯೋಜನ ಕಾರಣ). ಈ ಸ್ವರೂಪವನ್ನು ವರ್ಣಿಸಬೇಕಾದರೆ, ಮೊದಲನೆಯದಾಗಿ ಅದು ಶಾಶ್ವತವಾಗಿರತಕ್ಕದ್ದು, ಬೆಳೆಯುವುದೂ ಅಲ್ಲ, ನಾಶಹೊಂದತಕ್ಕದ್ದೂ ಅಲ್ಲ, ವೃದ್ಧಿಕ್ಷಯಗಳನ್ನೇ ಅರಿಯದಂತಹುದು ; ಎರಡನೆಯದಾಗಿ ಅದು ಒಂದು ದೃಷ್ಟಿಯಿಂದ ಅಂದವುಳ್ಳದ್ದೂ ಮತ್ತೊಂದು ದೃಷ್ಟಿಯಿಂದ ಅಂದಗೆಟ್ಟದ್ದೂ ಅಲ್ಲ, ಅಥವಾ ಒಂದು ಕಾಲದಲ್ಲಿ, ಒಂದು ಸಂಬಂಧದಲ್ಲಿ, ಇಲ್ಲವೆ ಒಂದು ಸ್ಥಳದಲ್ಲಿ ಸ್ಫುರದ್ರೂಪವಾದುದೂ, ಮತ್ತೊಂದುಕಾಲದಲ್ಲಿ, ಮತ್ತೊಂದು ಸಂಬಂಧದಲ್ಲಿ, ಇಲ್ಲವೆ ಮತ್ತೊಂದು ಸ್ಥಳದಲ್ಲಿ ಕುರೂಪಿಯಾದುದೂ ಅಲ್ಲ. ಹೀಗಾಗಲು ಹೇಗೆ ಸಾಧ್ಯವೆಂದು ಕೇಳುತ್ತೀಯೋ ? ಒಂದಾನೊಂದು ವಸ್ತು ಕೆಲವರಿಗೆ ಸೊಗಸುಗಾಣಿಸ

ಬಹುದು, ಮತ್ತೆ ಕೆಲವರಿಗೆ ಹೊಲಸು ತೋರಬಹುದು ; ಇಲ್ಲವೆ ಮೊಗದಲ್ಲಿ, ಕರದಲ್ಲಿ, ಅಥವಾ ದೇಹದ ಮತ್ತೆ ಯಾವ ಅಂಗದಲ್ಲಿಯಾಗಲಿ ಸೌಷ್ಠವ ವಿರಬಹುದು ; ಇಲ್ಲವೆ ವಾಗ್ರೂಪದಲ್ಲಿ, ಜ್ಞಾನರೂಪದಲ್ಲಿ, ವೈಖರಿಯಿರ ಬಹುದು ; ಇಲ್ಲವೆ ಮತ್ತೆ ಯಾವ ಪ್ರಾಣಿರೂಪದಲ್ಲಾಗಲಿ ಲಾವಣ್ಯವಿರ ಬಹುದು ; ಇಲ್ಲವೆ ಸ್ವರ್ಗದಲ್ಲಾಗಲಿ, ಭೂಮಿಯಲ್ಲಾಗಲಿ ಮತ್ತೆ ಯಾವ ಪ್ರದೇಶದಲ್ಲಾಗಲಿ ವೈಭವವಿರಬಹುದು. ಇವೆಲ್ಲಾ ಪರಿಮಿತಿಯುಳ್ಳ, ವೈಶಿಷ್ಟ್ಯವಾದ (relative), ಮಿಶ್ರವಾದ, ಖಂಡರೂಪದ, ಸೌಂದರ್ಯ ಪ್ರದರ್ಶನಗಳು. ನಾನು ಹೇಳಿದ ಸೌಂದರ್ಯವಾದರೋ ಏಕಾಂತಿಕ ವಾದುದು, ನಿರುಪಾಧಿಕವಾದುದು, ನಿರ್ವಿಶಿಷ್ಟವಾದುದು, ಪೃಥಕ್ಕಾ ದುದು, ಶುದ್ಧವಾದುದು, ನಿತ್ಯವಾದುದು ; ವೃದ್ಧಿಕ್ಷಯಗಳನ್ನಾಗಲಿ ಮತ್ತೆ ಯಾವ ಪರಿಣಾಮವನ್ನಾಗಲಿ ಅರಿಯದೆ, ನಿರಂತರವೂ ವೃದ್ಧಿಹೊಂದು ತ್ತಿರುವ ಮತ್ತು ನಶಿಸುತ್ತಿರುವ ಇತರ ಎಲ್ಲ ವಸ್ತುಗಳ ಸೌಂದರ್ಯಕ್ಕೂ ದಾತನಂತಿರತಕ್ಕುದು. ಯಾವನು ಈ ವ್ಯಾವಹಾರಿಕ ಸುಂದರ ವಸ್ತುಗಳ ವೀಕ್ಷಣೆಯಿಂದುಂಟಾಗುವ ಯಥಾರ್ಥವಾದ ವಾಂಛಲ್ಯದಿಂದ ಪ್ರೇರಿತ ನಾಗಿ, ಮೇಲಕ್ಕೆ ಹತ್ತಿ ಆ ನಿರುಪಮ ಅಮಿತಾಭವೆನಿಸುವ ಸೌಂದರ್ಯ ರಾಶಿಯನ್ನು ಸೇರುವನೋ ಅಂತಹವನ ಗಡಿಕಲ್ಲು ದೂರವಾಗಿಲ್ಲ. ಮತ್ತು ಪ್ರೇಮ ವಿಚಾರಗಳಲ್ಲಿ ಸ್ವಂತ ಬುದ್ಧಿಯಿಂದಲಾಗಲಿ ಅಥವಾ ಮತ್ತೊಬ್ಬರ ಉಪದೇಶದಿಂದಾಗಲಿ ಅನುಸರಿಸಬೇಕಾದ ಕ್ರಮ ಮಾರ್ಗ ಯಾವುದೆಂದರೆ, ಸುಂದರವಾದ ಪಾರ್ಥಿವರೂಪಗಳಿಂದ ಮೇಲಕ್ಕೆ ಹತ್ತಿ ಆ ಪರಮ ಸೌಂದರ್ಯವನ್ನು ಸೇರಬೇಕು. ಈ ಊರ್ಧ್ವಗಮನದಲ್ಲಿ ಪಾರ್ಥಿವರೂಪಗಳನ್ನು ಪಡಿಗಳನ್ನಾಗಿಯೇ ಭಾವಿಸಬೇಕು : ಒಂದರ ವ್ಯಾಮೋಹದಿಂದ ಎರಡರ ಮೋಹಕ್ಕೆ, ಎರಡರಿಂದ ಸಕಲ ಲಾವಣ್ಯ ರೂಪಗಳ ಪ್ರೇಮಕ್ಕೆ, ಲಾವಣ್ಯರೂಪಗಳಿಂದ ಚೆಲುವುಳ್ಳ ಶೀಲಾಚಾರ ಗಳಿಗೆ, ಚೆಲ್ವಿಕೆಯ ಆಚಾರಗಳಿಂದ ರಮ್ಯವಾದ ಮನೋಭಾವಗಳಿಗೆ, ರಮಣೀಯ ಭಾವಗಳಿಂದ ಕಡೆಯಲ್ಲಿ ಅನುಪಮವಾದ ನಿರುಪಾಧಿಕ ವಾದ, ತಾನೇ ತಾನಾಗಿರುವ ಸೌಂದರ್ಯಸಾಮಾನ್ಯಕ್ಕೆ ಬಂದು, ಸೌಂದರ್ಯದ ಸತ್ವವೇನೆಂಬುದನ್ನು ಸ್ವತಃ ತಿಳಿಯಲು ಸಾಧ್ಯವಾಗುವುದು.

ನನ್ನ ಪ್ರಿಯ ಸಾಕ್ರಟೀಸ್," ಈ ರೀತಿಯಾಗಿ ಮ್ಯಾಂಟಿನೀಯದ ಪರಕೀಯಳು ಮುಂದುವರಿಸಿದಳು, "ಇದೇ ಉಳಿದ ಎಲ್ಲಾ ಜೀವನ ಗಳಿಗಿಂತಲೂ ಶ್ರೇಷ್ಠವಾದ ಸೌಂದರ್ಯದ ಧ್ಯಾನದಲ್ಲಿ ಬದುಕಬೇಕಾಗಿರುವ ಮಾನವ ಜೀವನ; ಈ ಪರಮಸೌಂದರ್ಯವನ್ನು ನೀನು ಒಮ್ಮೆ ನೋಡಿದೆ ಯಾದರೆ, ಈಗ ನಿನ್ನನ್ನು ಮುಗ್ಧಗೊಳಿಸುವ ಕನಕವಸ್ತ್ರ, ಮುದ್ದು ಮೊಗದ ಬಾಲಕರು ಯುವಕರು—ಇವರು ಯಾರೂ ಅದಕ್ಕೆ ಸರಿತೂಗ ಲಾರವೆಂದು ಮನಗಾಣುವೆ. ಈಗ ನೀನು ಮತ್ತು ನಿನ್ನಂತಹ ಎಷ್ಟೋ ಮಂದಿ ಅವರನ್ನು ಅನವರತವೂ ನೋಡುತ್ತಾ ಅವರೊಂದಿಗೆ ಸಂಭಾಷಣೆ ಮಾಡುತ್ತಾ ಇದ್ದರೆ ಸಾಕೆಂದು ಹಾತೊರೆಯುವಿರಿ,—ಕಡೆಗೆ ಸಾಧ್ಯವಿದ್ದ ಪಕ್ಷದಲ್ಲಿ ಅನ್ನಾಹಾರಗಳೂ ಬೇಡ ನಿಮಗೆ, ಅವರನ್ನು ದೃಷ್ಟಿಸುತ್ತಾ ಅವರ ಜೊತೆಯಲ್ಲಿದ್ದರೆ ಸಾಕು. ಇಂತಹ ನಶ್ವರವಾದ, ಮಿಶ್ರವಾದ ಸೌಂದರ್ಯಕ್ಕೇ ಈ ರೀತಿಯಾಗಿ ಮನಸೋತಪಕ್ಷದಲ್ಲಿ, ಆ ಸತ್ಯವಾದ ಸೌಂದರ್ಯವನ್ನು — ನಿರ್ಮಲವಾದ, ನಿಚ್ಚಳವಾದ, ಮಿಶ್ರವಲ್ಲದ, ಶುದ್ಧ ವಾದ, ಮರ್ತ್ಯತೆಯ ಮೈಲಿಗೆಯಿಂದಲೂ ಮಾನವಜೀವನದ ರಂಗು ಮಾಯೆಗಳಿಂದಲೂ ಮುಚ್ಚಿಹೋಗದ—ಆ ದೈವಿಕ ಸೌಂದರ್ಯವನ್ನು, ಯಾರಾದರೂ ನೋಡಲು ಕಣ್ಣುಗಳಿದ್ದು, ಅದನ್ನೇ ಎವೆಯಿಕ್ಕದೆ ನೋಡುತ್ತಾ, ಅದರೊಡನೆ ಐಕ್ಯಹೊಂದಿದರೆಂದಿಟ್ಟುಕೊಳ್ಳೋಣ. ಅವರಿಗೇನು ಹೇಳುವೆ? ಇಂತಹವನು ಅದರ ಸಂಪರ್ಕದಿಂದಮಾತ್ರ, ಜ್ಞಾನಚಕ್ಷುಸ್ಸಿನಿಂದ ಅದರ ದಿವ್ಯ ಸರಳಸೌಂದರ್ಯವನ್ನು ಈಕ್ಷಿ ಸುತ್ತಾ, ಅನುಭವಿಸುತ್ತಾ, ಸೌಂದರ್ಯದ ಬಿಂಬಗಳನ್ನಲ್ಲ, ಸೌಂದ ರ್ಯದ ಸತ್ಯರೂಪಗಳನ್ನು, ಪಡೆಯಲು ಶಕ್ತನಾಗುವನೆಂಬುದನ್ನು ಜ್ಞಾಪಕದಲ್ಲಿಡು (ಏಕೆಂದರೆ ಅವನು ಆಲಿಂಗಿಸಿರುವುದು ಬಿಂಬವನ್ನಲ್ಲ, ಸತ್ಯರೂಪವನ್ನು); ಆದರ ಸಹವಾಸದಿಂದಲೇ ಈತನು ನಿಜವಾದ ಸದ್ಗುಣವನ್ನು ಪಡೆದು ಪೋಷಿಸಿ ಈಶ್ವರನ ಮಿತ್ರನಾಗಿ ಕಡೆಗೆ— ಮರ್ತ್ಯಮಾನವನು ಆಗಬಹುದಾದರೆ—ಅಮರನೂ ಆಗಲು ಅರ್ಹ ನಾಗುವನೆಂದು ತಿಳಿ. ಇಂತಹ ಜೀವನವೇನು ನೀಚವೆಂದೆನಿಸು ವುದೇ?"

ಫೀಡ್ರಸ್—ನಿನಗೊಬ್ಬನಿಗೇ ಅಲ್ಲ, ನಿಮಗೆಲ್ಲರಿಗೂ ಹೇಳುತ್ತೇನೆ-ಡಯೊಟೀಮಳಾಡಿದ ಮಾತುಗಳು ಹೀಗಿದ್ದುವು, ಮತ್ತು ಅವು ಸತ್ಯವಾದುವೆಂದು ನನಗೆ ಬಹುಕಾಲದಿಂದಲೂ ನಂಬಿಕೆ. ಈ ನಂಬಿಕೆ ನನಗಿರುವುದರಿಂದ, ಮೇಲೆ ವಿವರಿಸಿದ ಪರಮಪುರುಷಾರ್ಥವನ್ನು ಸಾಧಿಸುವ ಘನಕಾರ್ಯದಲ್ಲಿ ಮಾನವ ಸ್ವಭಾವಕ್ಕೆ ಕಾಮನಿಗಿಂತಲೂ (ಪ್ರೇಮಕ್ಕಿಂತಲೂ) ಉತ್ತಮವಾದ ಸಹಾಯಕರಿಲ್ಲವೆಂದು ಇತರರೂ ಮನಗಾಣಲೆಂದು ನಾನು ಅನವರತವೂ ಪ್ರಯತ್ನಿಸುತ್ತಿರುತ್ತೇನೆ. ಆದುದರಿಂದ ನಾನು ಹೇಳುವುದೇನೆಂದರೆ, ಪ್ರೇಮದೇವನನ್ನು ನಾನು ಗೌರವಿಸುವಂತೆ ಪ್ರತಿ ಒಬ್ಬನೂ ಸನ್ಮಾನಿಸಬೇಕು, ಆತನ ಹಾದಿಯಲ್ಲಿ ನಡೆಯಬೇಕು, ಇತರರೂ ಹಾಗೆಯೇ ಮಾಡುವಂತೆ ಅವರನ್ನು ಉದ್ಬೋಧಿಸಬೇಕು, ಮತ್ತು ಇವೊತ್ತಿಗೂ ನಾಳೆಗೂ ಸರ್ವಕಾಲದಲ್ಲೂ ತನ್ನ ಶಕ್ತ್ಯಾನುಸಾರ ಪ್ರೇಮದ ಸ್ವಭಾವವನ್ನೂ ಮಹಿಮೆಯನ್ನೂ ಕೊಂಡಾಡಬೇಕು."

## ಅಧ್ಯಾಯ ೧೧

### ಸಾಕ್ರಟೀಸ್ (೪)

ಇದುವರೆಗೆ ನಾವು ವಿಮರ್ಶೆಮಾಡಿರುವ ಅಂಶಗಳಿಂದ ಸೋಫಿಸ್ಟರಿಗೂ ಸಾಕ್ರಟೀಸನಿಗೂ ಯಾವ ವಿಧವಾದ ಸಂಬಂಧವಿತ್ತು ಎಂಬ ಪ್ರಶ್ನೆಗೆ ಉತ್ತರ ಸಿಕ್ಕದಿರಲಾರದು. ಈಗ ಸಾಕ್ರಟೀಸನ ಕಾಲಾನಂತರ ಉತ್ತರಕ್ಷಣದಲ್ಲಿಯೇ ಗ್ರೀಸಿನಲ್ಲಿ ಹರಡಿದ "ಸಿನಿಕರು" ಮತ್ತು "ಸಿರಿನೇಯಿಕರು"ಎಂಬ ಎರಡು ಪಂಗಡದವರ ಬೋಧನೆಗಳಿಗೂ ಸಾಕ್ರಟೀಸನ ಬೋಧನೆಗೂ ಏನು ಸಂಬಂಧವೆಂಬುದನ್ನು ಒಂದೆರಡು ಮಾತುಗಳಲ್ಲಿ ಹೇಳಿ ಸಾಕ್ರಟೀಸನ ಕತೆಯನ್ನು ಮುಗಿಸುವೆವು. ಸಿನಿಕ್ ಮತವನ್ನು ಸ್ಥಾಪಿಸಿದವನು ಆಂಟಿಸ್ತೆನೀಸ್ ಎಂಬಾತನು; ಸಿರಿನೇಯಿಕರ ಗುರು ಅರಿಸ್ಟಪಸ್ ಎಂಬವನು. ಸಿರಿನೇಯಿಕರು ಕೇವಲ ಸುಖಕಾಮಿಗಳಾಗಿ ಇಂದ್ರಿಯಭೋಗವೇ, ಸುಖಸಂಪತ್ತಿನಿಂದೊಡಗೂಡಿದ ಐಹಿಕ ಜೀವನವೇ, ನಮ್ಮ ಪರಮಧ್ಯೇಯವಾಗಿರಬೇಕೆಂದು ಸಾರಿ, ಮುಂದೆ ಬರುವ ಎಪಿಕ್ಯೂರಿಯನರ ಸಿದ್ಧಾಂತಕ್ಕೆ ದಾರಿ ಮಾಡಿದರು. ಇವರನ್ನು

ಭಾರತೀಯ ತತ್ವಶಾಸ್ತ್ರದಲ್ಲಿ ಪ್ರಸಿದ್ಧರಾಗಿರುವ ಚಾರ್ವಾಕರೊಂದಿಗೆ ಹೋಲಿಸಬಹುದು. ಸಿನಿಕರಾದರೋ ಸಿರಿನೇಯಿಕರ ಮತಕ್ಕೆ ಕೇವಲ ವಿರುದ್ಧವಾದ ಪಂಥವನ್ನು ಹೂಡಿ, ಸುಖವೆಂಬುದು ಮಾನವನ ಹಗೆಯೆಂದು ಭಾವಿಸಿದರು. ಆತ್ಮಶಾಂತಿಯಲ್ಲಿಯೇ, ಕಲ್ಯಾಣಗುಣ ದಲ್ಲಿಯೇ, ನಾವು ನಮ್ಮ ಕ್ಷೇಮವನ್ನು ಕಾಣಬೇಕೇ ಹೊರತು, ಇಂದ್ರಿಯ ಸುಖದಲ್ಲಲ್ಲ. ವಿವೇಕವೂ ಭಾಗ್ಯವೂ ಎರಡೂ ಒಂದೇ; ಸುಖವನ್ನೇ ಅರಸುವ ಜೀವನ ತಿಳಿಗೇಡಿತನದ ಜೀವನ — ವಿವೇಕಿಯಾದವನು ಸುಖಪಡುವುದಕ್ಕಿಂತ ಜಾಗ್ರತೆ ಹುಚ್ಚನಾಗಿಹೋಗಲು ಬಯಸುವನು. ಆದುದರಿಂದ ಸುಖದುಃಖ, ಉಷ್ಣಶೀತ, ದಾರಿದ್ರ್ಯಸಂಪತ್ತು—ಇವೇ ಮೊದಲಾದ ಜೀವನದ ದ್ವಂದ್ವಗಳನ್ನೆಲ್ಲಾ ಅತಿಕ್ರಮಿಸಿ, ಯಾವುದಕ್ಕೂ ವಿಶೇಷ ಗಮನಕೊಡದೆ, ಪುರುಷನು ಬಾಹ್ಯಪ್ರಪಂಚದ ಶೃಂಖಲೆಗಳಿಂದ ಬಿಡುಗಡೆ ಹೊಂದಿ, ಸದಾ ಆತ್ಮಕಾಮನಾಗಿ, ಆತ್ಮಸಂತುಷ್ಟನಾಗಿ, ಚಿತ್ತಸ್ಥೈರ್ಯವನ್ನು ಕಳೆದುಕೊಳ್ಳದೆ, ಸದಾ ತೃಪ್ತನಾಗಿ ಸ್ವತಂತ್ರನಾಗಿ ಇರಲು ಪ್ರಯತ್ನಪಡಬೇಕು. ಈ ವಾದವನ್ನು ಡಯೋಜನೀಸ್[೧]

೧. ಈ ಡಯೋಜನೀಸ್ ಎಂಬ ಸಿನಿಕ ಗುರುವಿನ ವಿಷಯಕವಾದ ಕತೆಯೊಂದು ಸಿನಿಕರ ಆತ್ಮಬಲವನ್ನೂ ಹಾಗೆಯೇ ಅವರ ಅತಿರೇಕ ವರ್ತನೆಯನ್ನೂ ಉದಹರಿಸುತ್ತದೆ. ಸುಪ್ರಸಿದ್ಧನಾದ ಅಲೆಕ್ಸಾಂಡರ್ ಮಹಾಶಯನೆಂಬ ಮ್ಯಾಸಿಡನ್ನಿನ ದೊರೆ ಪ್ರಪಂಚವನ್ನೆಲ್ಲಾ ಗೆದ್ದು ಗ್ರೀಸಿಗೆ ಹಿಂತಿರುಗಿದಮೇಲೆ ಈ ಡಯೋಜನೀಸ್ ಎಂಬ ಸಿನಿಕ ಗುರುವಿನ ಮಾಹಾತ್ಮ್ಯವನ್ನು ಕೇಳಿ ಆತನ ದರ್ಶನ ಪಡೆಯ ಬೇಕೆಂದು ಅವನಿದ್ದಲ್ಲಿಗೆ ಹೋದನು. ಡಯೋಜನೀಸನು ಒಂದು ಮರದ ತೊಟ್ಟಿಯಲ್ಲಿ ಬಿಸಿಲು ಕಾಸಿಕೊಂಡು ಕುಳಿತಿದ್ದನು. ಅಲೆಕ್ಸಾಂಡರನು ಹೋಗಿ ಅವನೆದುರಿಗೆ ಎಷ್ಟು ಹೊತ್ತು ನಿಂತಿದ್ದರೂ ವೈರಾಗಿ ಭೂಮಂಡಲವನ್ನೆಲ್ಲಾ ಗೆದ್ದಿದ್ದ ಚಕ್ರವರ್ತಿ ಸಾರ್ವಭೌಮನನ್ನು ಮಾತನಾಡಿಸಲೇ ಇಲ್ಲ. ಕಡೆಯಲ್ಲಿ ಚಕ್ರವರ್ತಿಯೇ ಡಯೋಜನೀಸನನ್ನು ಕುಶಲಪ್ರಶ್ನೆ ಮಾಡಿ ತಾನು ಯಾರೆಂಬುದನ್ನು ತಿಳಿಸಿ, "ಡಯೋಜನೀಸ್, ನಿನಗೆ ಬೇಕಾದ್ದನ್ನು ಕೇಳು, ಕೊಡಲು ಸಿದ್ಧನಿದ್ದೇನೆ" ಎಂದನು. "ನನ್ನ ಬಿಸಿಲನ್ನು ಬಿಟ್ಟು ಆಚೆಗೆ ನಡೆ" ಎಂದು ವೈರಾಗ್ಯ ಚಕ್ರವರ್ತಿ ಒಂದೇ ಉತ್ತರವನ್ನಿತ್ತನು. ಅಲೆಕ್ಸಾಂಡರನು ಪಕ್ಕಕ್ಕೆ ಸರಿದು ಕ್ಷಣಕಾಲ ಸಿನಿಕ ಗುರುವನ್ನು ಪುನಃ ದಿಟ್ಟಿಸಿ ನೋಡಿ ಹಿಂತಿರುಗಿದನು. ಹೋಗುವಾಗ "ನಾನು ಅಲೆಕ್ಸಾಂಡರ್ ಆಗಿರದಿದ್ದರೆ, ಡಯೋಜನೀಸ್ ಆಗಿರಲು ಇಷ್ಟಪಡುತ್ತಿದ್ದೆ" ಎಂದು ಅಂದುಕೊಂಡು ಹೋದನಂತೆ.

ಮುಂತಾದ ಸಿನಿಕರು ಅತಿರೇಕವಮಾಡಿ, ಆಭಾಸರೀತಿಯಲ್ಲಿ ವರ್ತಿಸಿ, ನೀರಸವಾದ ಜೀವನವನ್ನುಳ್ಳವರಾಗಿ, ನೋಡುವವರಿಗೆ ಬೇಸರ ಉಂಟಾಗುವಂತೆ ಮಾಡಿದರೆಂದು ಬೇರೆ ಹೇಳಬೇಕಾಗಿಲ್ಲ. ಮುಂದೆ ನಾವು ಕಾಣುವ ಸ್ಟೋಯಿಕರ ಮತಕ್ಕೆ ಈ ಸಿನಿಕರೇ ಮೂಲಪುರುಷರಾದರು.

ಈ ಸಿನಿಕರ ಮತ್ತು ಸಿರಿನೇಯಕರ ಪಂಥಗಳನ್ನು ಇಲ್ಲಿ ನಾವು ವಿವರಿಸಬೇಕಾಗಿಲ್ಲ. ಪ್ರಕೃತದಲ್ಲಿ ನಮ್ಮ ಪ್ರಶ್ನೆ ಏನೆಂದರೆ: ಅರಿಸ್ಟಪಸ್ ಮತ್ತು ಆಂಟಿಸ್ತೆನೀಸ್, ಇಬ್ಬರೂ ಸಾಕ್ರಟೀಸನ ಶಿಷ್ಯರಾಗಿದ್ದು ತಮ್ಮ ತಮ್ಮ ಮತಗಳು ಸಾಕ್ರಟೀಸನ ಬೋಧನೆಯಿಂದ ಹುಟ್ಟಿದುವೆಂದೇ ಪ್ರಪಂಚಕ್ಕೆ ತಿಳಿಸಿರುವರು; ಇವರ ಜೊತೆಗೆ ಪ್ಲೇಟೊ ಸಾಕ್ರಟೀಸನ ಅನುಯಾಯಿಯಾಗಿದ್ದನಲ್ಲದೆ ತನ್ನ ದರ್ಶನವೂ ಸಾಕ್ರಟೀಸನ ಬೋಧನೆಯಿಂದಲೇ ಪ್ರೇರಿತವಾದುದೆಂದು ಹೇಳಿಕೊಂಡಿರುವನು. ಪ್ಲೇಟೋವಿನ ದರ್ಶನದ ಮಾತು ಹಾಗಿರಲಿ; ಈಗ ಸದ್ಯದಲ್ಲಿ, ಪರಸ್ಪರ ಇಷ್ಟು ವಿರುದ್ಧವಾಗಿರುವ ಸಿರಿನೇಯಕರ ಮತ್ತು ಸಿನಿಕರ ಮತಗಳೆರಡಕ್ಕೂ ಸಾಕ್ರಟೀಸನೊಬ್ಬನೇ ಹೇಗೆ ಕಾರಣನಾದನು? ಈತನ ಬೋಧನೆ ಇಂತಹ ವಿರುದ್ಧ ಪರಿಣಾಮಗಳನ್ನುಂಟುಮಾಡಬಲ್ಲ ಅಸಂಬದ್ಧ ಪ್ರಲಾಪವಾಗಿತ್ತೇ? ಸುಖದ ವಿಷಯದಲ್ಲಿ ಈತನು ನಿಜವಾಗಿಯೂ ಏನು ಹೇಳಿದನು?— ಇವೇ ನಾವು ಕೇಳಬೇಕಾದ ಪ್ರಶ್ನೆಗಳು.

ಕ್ಸೆನೊಫನ್ನೇನೋ ನಾವು ಹಿಂದೆ ತಿಳಿಸಿದಹಾಗೆ ಸಾಕ್ರಟೀಸನ ವಿಚಾರದಲ್ಲಿ ಒಂದೇ ಮಾತು ಹೇಳಿರುವನು. ಸಾಕ್ರಟೀಸನು ಸಿದ್ಧಾಂತದಲ್ಲಿ ಪ್ರಯೋಜನವಾದಿ; ಪ್ರಯೋಜನ ದೃಷ್ಟಿಯಿಂದಲೇ ಒಂದು ಕೆಲಸ ಉತ್ಕೃಷ್ಟವೇ ಎಂದು ನಿರ್ಧರಿಸಬೇಕಲ್ಲದೆ ಅದರಿಂದಲೇ ಒಂದು ವಸ್ತುವಿನ ಸೌಂದರ್ಯವನ್ನೂ ತೀರ್ಮಾನಮಾಡಬೇಕು. ಆದರೆ ಸಾಕ್ರಟೀಸನಂತಹ ಯೋಗಿಯ ಘನವಾದ ಸಾಮಾನ್ಯಸಿದ್ಧಾಂತಕ್ಕೆ ಇದು ವಿರೋಧವಾಗಿರುವುದಲ್ಲದೆ ಅವನ ಆದರ್ಶಪ್ರಾಯವಾದ ಸುಂದರ ಜೀವನವನ್ನೂ ಸುಳ್ಳೆನಿಸುವುದು. ಹಾಗಾದರೆ ಕ್ಸೆನೊಫನ್ನಿನ ಮಾತನ್ನು ಸಂಪೂರ್ಣ ಕಲ್ಪನೆಯೆಂದು ನಿರಾಕರಿಸೋಣವೇ ಎಂದರೆ ಆಗಲೂ

ಕಷ್ಟ ತಪ್ಪುವುದಿಲ್ಲ. ಒಂದೇ ಬುಡದಿಂದೊಡೆದ ಕವಲುಗಳೆಂದು ಹೇಳಿಕೊಳ್ಳುವ ಸಿನಿಕರ ಮತ್ತು ಸಿರಿನೇಯಿಕರ ಸಿದ್ಧಾಂತಗಳಿಗೇನು ಹೇಳೋಣ ?

ಇಂತಹ ಸಂದಿಗ್ಧ ಸಂದರ್ಭದಲ್ಲಿ ನಾವು ಮಾತುಗಳನ್ನು ತೂಕ ಮಾಡಿ ಆಡಬೇಕು. ಒಂದು ವಿಷಯವನ್ನು ಮಾತ್ರ ಖಂಡಿತವಾಗಿ ಹೇಳಬಹುದು: ಸುಖ ನಮ್ಮ ಶ್ರೇಯವೇ? ಎಂದು ಸಾಕ್ರಟೀಸನೇ ಪ್ರಶ್ನೆ ಎತ್ತಿರಲಾರನು. ಅದನ್ನೆತ್ತಿದ್ದಪಕ್ಷದಲ್ಲಿ ವಿರುದ್ಧಾರ್ಥಗಳನ್ನು ಪ್ರತಿಪಾದಿಸುವ ಎರಡು ಬೇರೆಬೇರೆ ಮತಗಳು ಅವನ ಬೋಧನೆಯಿಂದ ಉದ್ಭವಿಸಿರಲಾರವು; ಯೋಗಿಗೆ ಇಂತಹ ಪ್ರಶ್ನೆಯಲ್ಲಿ ಅಷ್ಟು ಅಭಿರುಚಿಯೂ ಇರುವುದಿಲ್ಲ. ಸಾಕ್ರಟೀಸನ ಸ್ವಂತ ಜೀವನವನ್ನೇ ಪರೀಕ್ಷೆ ಮಾಡಿದರೆ ನಮ್ಮ ಪ್ರಶ್ನೆಗೆ ಉತ್ತರ ಸಿಕ್ಕಬಹುದು. ಸುಖಪಡುವ ವಿಚಾರದಲ್ಲಿ ಸಾಕ್ರಟೀಸನು ವೈರಾಗಿಯ ವೈರವನ್ನು ತೋರಿಸುತ್ತಾನೆಂತಲ್ಲ. ಆತ್ಮಸಂಯಮವನ್ನೂ ಮಿತವ್ಯವಹಾರವನ್ನೂ ಆತನು ಬೋಧಿಸುತ್ತಾನೆಂಬುದೇನೋ ನಿಜ, ಸುಖದ ಬಲೆಯಲ್ಲಿ ಬಿದ್ದು ನಾವು ಕರ್ತವ್ಯಪರಾಙ್ಮುಖರಾಗಕೂಡದೆಂದೂ ಒತ್ತಿ ಹೇಳುತ್ತಾನೆ. ಆದರೆ ಸುಖ ಕೆಟ್ಟುದೆಂದಾಗಲಿ ಅನರ್ಥಕಾರಿಯೆಂದಾಗಲಿ ಅವನ ಅಭಿಪ್ರಾಯವಲ್ಲ: ಅದು ಕೇವಲ ನಿಕೃಷ್ಟವಾದುದು, ಬಹು ಅಲ್ಪವಿಚಾರ, ಅಷ್ಟೆ. ಇದನ್ನು ನಾವು ಮರೆಯುವುದರಿಂದ ಪರಿಣಾಮವೇನೆಂದರೆ, ಉತ್ಕೃಷ್ಟವಾದ ಜೀವನದ ಧ್ಯೇಯಗಳನ್ನು ಸಾಧಿಸಿಕೊಳ್ಳುವ ಅವಕಾಶವಿರುವಾಗ, ತೀರಾ ಕೆಲಸಕ್ಕೆ ಬಾರದ ವಿಚಾರಗಳಲ್ಲಿ ನಾವು ಸಿಲುಕಿ, ಅಲ್ಪ ಫಲಕ್ಕೋಸ್ಕರ ಅದ್ಭುತ ಪ್ರಯತ್ನಗಳನ್ನು ಮಾಡಿ, ಅಪರಿಮಿತವಾದ ನೋವು ತಿಂದು, ತೊಳಲಿ ಬಳಲಿ ಬೆಂದು ಬೆಂಡಾಗಬೇಕಾಗುತ್ತದೆ. ಆದುದರಿಂದ ಸುಖಕ್ಕೆ ನಾವು ಇಲ್ಲದ ಪ್ರಾಶಸ್ತ್ಯ ಕೊಡಕೂಡದು, ಅಷ್ಟೆ; ಅದರ ಗುಲಾಮರು ನಾವಾಗಕೂಡದು. ಈ ಜೋಕೆ ನಮ್ಮಲ್ಲಿದ್ದಬಳಿಕ, ಸುಖಕ್ಕೆ ನಾವು ಹೆದರಬೇಕಾದುದೇನೂ ಇಲ್ಲ: ನಮ್ಮ ಭಾಗಕ್ಕೆ ಬಂದ ಸುಖವನ್ನು ಸಂತೋಷಚಿತ್ತರಾಗಿ ನಾವನುಭವಿಸುವುದರಲ್ಲಿ ತಪ್ಪೇನೂ ಇಲ್ಲ. ಇದೇ ಸಾಕ್ರಟೀಸನ ಸ್ವಂತಜೀವನದ ಸೂತ್ರವಾಗಿತ್ತು. ಅವನು ಸುಖಗಳನ್ನೆಲ್ಲಾ

ತೊರೆದು ಉಗ್ರತಾಪಸಯೋಗವನ್ನು ಅನುಸರಿಸಲಿಲ್ಲ. ಗೋಷ್ಠಿ—ಸಂತೋಷಕೂಟ—ಗಳಲ್ಲಿದ್ದಾಗ ಕುಡಿಯಬೇಕಾದ ಪ್ರಸಂಗಬಂದರೆ, ತನ್ನ ಸ್ನೇಹಿತರೆಲ್ಲರನ್ನೂ ಕುಡಿಯುವುದರಲ್ಲಿ ಮೀರಿಸುತ್ತಿದ್ದನು. ಆದರೆ ಇದರಿಂದ ಅವನ ಚಿತ್ತಪ್ರಶಾಂತತೆಯಾಗಲಿ ಭೋಗಾಭಿಲಾಷಾ ವಿರಕ್ತತೆಯಾಗಲಿ ಕೆಡುತ್ತಿರಲಿಲ್ಲ. ಕುಡಿಯುವುದರಿಂದುಂಟಾಗಬಹುದಾದ ಸುಖದ ಸಲುವಾಗಿ ಅವನು ಕುಡಿಯುತ್ತಿರಲಿಲ್ಲ. ದಿನಚರಿಯ ಕೆಲಸ ಕಾರ್ಯಗಳಲ್ಲಿ ಅದೊಂದು ಎಂದು. ಅದಿಲ್ಲದಿದ್ದರೂ ಅವನಿಗೇನೂ ನಷ್ಟವಾಗುತ್ತಿರಲಿಲ್ಲ.

ಸಾಕ್ರಟೀಸನ ಜೀವನದ ಮತ್ತು ಬೋಧನೆಯ ಈ ಔದಾಸೀನ್ಯ ದೃಷ್ಟಿಯನ್ನೇ ಪ್ರಬಲಪಡಿಸಿ ಆಂಟಿಸ್ತೆನೀಸನು ತನ್ನ ಸಿನಿಕ್ ಮತವನ್ನು ಪ್ರಚಾರಕ್ಕೆ ತಂದಿರಬಹುದು. ಆದರೆ ಅರಿಸ್ಟಪಸ್ಸಿನ ಸಿರಿನೇಯಿಕ್ ತತ್ವಕ್ಕೆ ಸಾಕ್ರಟೀಸನಲ್ಲಿ ಆಧಾರವನ್ನು ಹುಡುಕುವುದು ಅಷ್ಟು ಸುಲಭವಲ್ಲ. ಸುಖ ಪ್ರಾಮುಖ್ಯವಾದ ವಿಷಯವೇ ಅಲ್ಲ ಎಂದು ತಿಳಿದಿದ್ದ ಸಾಕ್ರಟೀಸನು ಬಹುಶಃ ಅದರ ವಿಷಯವಾಗಿ ಪ್ರಸ್ತಾಪಮಾಡುವ ಸಂದರ್ಭಗಳಲ್ಲಿ ತನ್ನ ಮಾತುಗಳನ್ನು ತೂಕಮಾಡಿ ಆಡಿರಲಾರನು. ಇದರಿಂದ ಸುಖದ ಒಲವೇ ಹೆಚ್ಚಾಗಿ ಹೊಂದಿದ್ದ ಅರಿಸ್ಟಪಸ್ಸನು ಆತನ ಮಾತುಗಳಲ್ಲಿ ತನ್ನ ಇಷ್ಟಕ್ಕೆ ಪುಷ್ಟಿ ದೊರೆಯಿತೆಂದು ಭಾವಿಸಿರಬಹುದು. ಸಾಕ್ರಟೀಸನು ತನ್ನ ಮನಸ್ಸಿನಲ್ಲೇನೋ ಸಮಗ್ರಜೀವನದ ಸುಖವಾದ "ಆನಂದ"ಕ್ಕೂ (happiness) ಕ್ಷಣಿಕವಾದ ಇಂದ್ರಿಯಸುಖಕ್ಕೂ (pleasure) ತೀಕ್ಷ್ಣವಾದ ಭೇದವನ್ನು ಕಲ್ಪಿಸಿಕೊಂಡಿದ್ದನು. (ಆನಂದವನ್ನೇ ಸುಖ ಅಥವಾ ಶ್ರೇಯವೆನ್ನುವುದಾದರೆ ಇಂದ್ರಿಯಸುಖವನ್ನು ಭೋಗ ಅಥವಾ ಪ್ರೇಯವೆನ್ನಬಹುದು). ಮಾನವಜೀವನದ ಗುರಿ ಆನಂದವೆಂದು ಅರ್ಥಬರುವಂತೆ ಅನೇಕ ಕಡೆ ಹೇಳಿದ್ದಾನೆ: ಪರಮಶ್ರೇಯದ ದರ್ಶನವೇ ಉಚ್ಚತಮದ, ಅತ್ಯುತ್ತಮವಾದ ಆನಂದ. ಇಂತಹ ಆನಂದದಾಯಕವಾದ ಶ್ರೇಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಆತನು ಜ್ಞಾನವೇ ಸದ್ಗುಣವೆಂದು ಸಾರಿದ್ದು. ಯಾವನೊಬ್ಬನೂ ಕಂಡೂ ತಿಳಿದೂ ದುರ್ಮಾರ್ಗಕ್ಕೆ ಬೀಳುವುದಿಲ್ಲ—ಯಾರೂ ಅನೈಚ್ಛಿಕವಾಗಿ

ಸನ್ಮಾರ್ಗದಲ್ಲಿ ಪ್ರವರ್ತಿಸುವುದಿಲ್ಲ. ಏಕೆಂದರೆ ಸನ್ಮಾರ್ಗಾವಲಂಬನೆ ಯೆಂದರೆ ತನ್ನ ನಿಜವಾದ ಶ್ರೇಯದ ದರ್ಶನ—ಇಂತಹ ಶ್ರೇಯದ ದರ್ಶನವೇ ಮಾನವನ ನಿಜವಾದ ಆನಂದ. ಅಂದಮೇಲೆ ಸನ್ಮಾರ್ಗ ಪ್ರವರ್ತನೆ ಮಾನವನಿಗೆ ಹಿತವನ್ನುಂಟು ಮಾಡುವುದೇ ಹೊರತು ಮತ್ತೆ ಬೇರೆಯಾಗಲಾರದು. ನಿಜವಾದ ಸೌಖ್ಯ—ಆನಂದವನ್ನು ಹೊಂದಬೇಕಾದರೆ ಪುರುಷನು ಸುಗುಣಿಯಾಗಿರಬೇಕು: ಧೈರ್ಯ ವಂತನೂ, ನ್ಯಾಯಶೀಲನೂ, ಧಾರ್ಮಿಕನೂ, ಮಿತವ್ಯವಹಾರಿಯೂ ಆದ ಹೊರತು ಯಾವನೂ ಆನಂದಪಡಲಾಗುವುದಿಲ್ಲ—ಹೀಗೆಂದು ಸಾಕ್ರಟೀಸನು ಬೋಧಿಸುತ್ತಿದ್ದನು. ಆದರೆ ಮಾತನಾಡುವಾಗ ಲೆಲ್ಲಾ ಆನಂದಕ್ಕೂ ಅಥವಾ ಸುಖಕ್ಕೂ (ಶ್ರೇಯಕ್ಕೂ) ಭೋಗಕ್ಕೂ (ಪ್ರೇಯಕ್ಕೂ) ಇರುವ ಭೇದವನ್ನು ಸ್ಪಷ್ಟಪಡಿಸಿ ಮಾತನಾಡುವುದು ದುಸ್ತರವಾದುದರಿಂದ ಅರಿಸ್ಟಿಪಸ್ಸನು ಸಾಕ್ರಟೀಸನ ಸುಖವನ್ನು ಭೋಗ ವೆಂಬುದಾಗಿ ತಪ್ಪು ತಿಳಿದುಕೊಂಡಿರಬಹುದು. ಇದಲ್ಲದೆ ಸಾಕ್ರಟೀಸನ ವಾದ ವಿಧಾನವನ್ನು ನಾವು ಈ ಸಂದರ್ಭದಲ್ಲಿ ಮರೆಯಕೂಡದು. ಹತ್ತು ಮಂದಿ ಹೌದೆನ್ನುವ ಲೋಕರೂಢಿಯ ಮಾತನ್ನು ತೆಗೆದುಕೊಂಡೇ ಆತನು ವಾದವನ್ನು ಮುಂದುವರಿಸುತ್ತಿದ್ದನು; ಏಕೆಂದರೆ ಆರಂಭದಲ್ಲಿಯೇ ಶ್ರೋತೃಗಳು ಆತನ ಮಾತಿಗೆ ಒಪ್ಪದೇಹೋದರೆ ಸಂಭಾಷಣೆ ಮುಂದುವರಿಯುವ ಹಾಗೇ ಇಲ್ಲ. ಇಂತಹ ಸಂದರ್ಭಗಳಲ್ಲಿ ಸಾಕ್ರಟೀಸನ ಒಳಮರ್ಮವನ್ನು ಅರಿಯದ ಬೆಪ್ಪರು ಈ ಲೋಕರೂಢಿಯ ಮಾತುಗಳೇ ಆತನ ಸ್ವಂತ ಅಭಿಪ್ರಾಯಗಳೆಂದು ' ತಿಳಿದುಕೊಳ್ಳುವುದರಲ್ಲಿ ಆಶ್ಚರ್ಯ ವೇನೂ ಇಲ್ಲ. ಇಷ್ಟರಮೇಲೆ ಕ್ಸೆನೊಫನ್ನನು ಹೇಳುವ ಪ್ರಯೋಜನ ವಾದವೂ ಸಾಕ್ರಟೀಸನಲ್ಲಿ ಇಲ್ಲದೇ ಇಲ್ಲ. (೧) ಕ್ರೈಟೋ: ೫೦ ಎ–೫೧ ಇ; (೨) ಫೀಡೊ, ೬೧ ಸಿ; (೩) ಪ್ರೊಟಾಗೊರಾಸ್, ೮೩೩ ಡಿ, ೩೫೩ ಸಿ; (೪) ಯೂಥಿಡಿಮಸ್, ೨೮೮ ಸಿ–೨೯೨ ಇ, ನೋಡಿ.

ಸಾಕ್ರಟೀಸನ ಜೀವನವನ್ನೂ, ಆತನ ತತ್ವಸಿದ್ಧಾಂತವನ್ನೂ ನೀತಿ ಬೋಧೆಯನ್ನೂ ಪರಿಶೀಲಿಸಿದ್ದಾಯಿತು. ಈ ಅಧ್ಯಾಯದ ಆದಿ ಯಲ್ಲಿಯೇ ಅಥೆನ್ಸಿನ ಪುರನಿವಾಸಿಗಳಲ್ಲಿ ಕೆಲವರು ಆತನು ಯುವಕರನ್ನು

ದುರ್ಮಾರ್ಗಕ್ಕೆಳೆದವನೆಂದೂ ನಾಸ್ತಿಕವಾದಿಯೆಂದೂ ಆತನ ಮೇಲೆ ದೋಷಾರೋಪಣೆ ಮಾಡಿ ನ್ಯಾಯಸ್ಥಾನದಲ್ಲಿ ಅವನಿಗೆ ಮರಣದಂಡನೆಯನ್ನು ವಿಧಿಸುವಂತೆ ಮಾಡಿದರೆಂದು ಹೇಳಿದೆ. ಅಲ್ಲಿಯೇ ಕ್ಸೆನೊಫನ್ನನು ಸಾಕ್ರಟೀಸನು ನಿರ್ದೋಷಿಯೆಂದು ಸಮರ್ಥಿಸಿರುವ ಪ್ರತಿವಾದವನ್ನೂ ಕೊಟ್ಟಿದೆ. ಹಿಂದೆ ತಿಳಿಸಿದಹಾಗೆ ಕ್ಸೆನೊಫನ್ನನು ಸಾಕ್ರಟೀಸನ "ವಕೀಲ" ನಂತೆ ಆ ಪ್ರತಿವಾದವನ್ನು ಬರೆದಿರುವುದರಿಂದ ಅದರಲ್ಲಿ ಹೇಳಿರುವುದೆಲ್ಲಾ ಅಕ್ಷರಶಃ ನಿಜವೆಂದು ನಾವು ನಂಬಬೇಕಾಗಿಲ್ಲ. ಸಾಕ್ರಟೀಸನು ವಾಸ್ತವವಾಗಿಯೂ ಅದರಲ್ಲಿ ಚಿತ್ರಿಸಿರುವ ಸಾಕ್ರಟೀಸನೇ ಆಗಿದ್ದರೆ ಯಾವ ಸಮಾಜವೇ ಆಗಲಿ, ಎಂತಹ ದುರುದ್ದೇಶವುಳ್ಳವರೇ ಆಗಲಿ, ಆತನನ್ನು ಶಿಕ್ಷಿಸಲು ಆಗುತ್ತಿರಲಿಲ್ಲ. 'ಫಿರ್ಯಾದಿ' ಬಹಿರಂಗದಲ್ಲಿ ತಂದ ದೋಷಾರೋಪಣೆ ನಿರಾಧಾರವಾದುದೆಂದು ನಾವು ಅದನ್ನು ನಿರಾಕರಿಸಿದರೂ ಅಥೆನ್ಸಿನ ಬಹು ಜನರಿಗೆ ಸಾಕ್ರಟೀಸನ ಮಾತುಗಳಿಂದಲೂ ಅವನ ವರ್ತನೆಯಿಂದಲೂ ಬೇಸರಹತ್ತಿ ಇಂತಹವನು ಉಳಿದುಕೊಂಡರೆ ಅಥೆನ್ಸಿನ ಪ್ರಜಾಪ್ರಭುತ್ವ ಉಳಿಯುವದಿಲ್ಲವೆಂದು ಅವರು ಭಯಪಟ್ಟಿರಬೇಕು. ತತ್ಕಾಲದ ಅಥೆನ್ಸಿನ ಸಾಮಾಜಿಕ ಮತ್ತು ರಾಜಕೀಯ ಆಡಳಿತಗಳು ಶಾಶ್ವತವಾಗಿ ನಿಲ್ಲಲು ಅರ್ಹವಾಗಿದ್ದುವೇ ಎನ್ನುವುದು ಬೇರೆ ಮಾತು. ಅಂತೂ ಮುಖಂಡರು ಸಾಕ್ರಟೀಸನು ತಮ್ಮ ದರ್ಬಾರಿನ ನಿಜವಾದ ಶತ್ರುವೆಂದು ಭೀತಿಗೊಂಡೇ ಅವನಿಗೆ ಮರಣ ದಂಡನೆಯಾಗುವಂತೆ ಏರ್ಪಾಟು ಮಾಡಿರಬೇಕು. ಅದಿರಲಿ. ವಿಚಾರಣೆಯೆಲ್ಲ ಮುಗಿದು ಸಾಕ್ರಟೀಸನಿಗೆ ಮರಣದಂಡನೆ ವಿಧಿಸಿದ ಮೇಲೆ ಸಾಕ್ರಟೀಸನು ತನ್ನ ನಿರಪರಾಧತ್ವಸಮರ್ಥನೆಯ ಸಮಾಪ್ತಿ ಭಾಷಣವನ್ನು ಮಾಡುತ್ತ ಆಡಿದ ಕೊನೆಯ ಮಾತುಗಳಿವು.[೧] ಅವು ಸಾಕ್ರಟೀಸನೆಂತಹನೆಂಬುದನ್ನು ಪ್ರಪಂಚಕ್ಕೇ ಸಾರುತ್ತವೆ :—

"ಓ ಅಥೆನ್ಸ್ ಪುರನಿವಾಸಿಗಳೇ, ನಾನು ಗತಿಸಿದ ಬಳಿಕ ನನ್ನ ಕಾಟದಿಂದ ತಪ್ಪಿಸಿಕೊಂಡು ಸುಖವಾಗಿರಬಹುದೆಂದು ನೀವು ತಿಳಿದುಕೊಂಡಿರುವಿರೇನೋ—ಅಂತಹ ಅವಕಾಶ ಹೆಚ್ಚು ಕಾಲ ನಿಮಗೆ

೧. "ಸಮರ್ಥನೆ" (ಅಪಾಲಜಿ) ಎಂಬ ಸಂವಾದದಿಂದ ಎತ್ತಿದ್ದು.

ಸಿಕ್ಕಲಾರದು ; ಏಕೆಂದರೆ, ಪಟ್ಟಣದಲ್ಲಿ ನಿಮ್ಮನ್ನು ದೂರುವವರು ಇದ್ದೇ ಇರುವರು, ಅವರು ಸಾಕ್ರಟೀಸನಂತಹ ಜ್ಞಾನಿಯನ್ನು—ನಾನು ಜ್ಞಾನಿಯಲ್ಲದಿದ್ದರೂ ನಿಮ್ಮನ್ನು ದೂರುವುದಕ್ಕೋಸ್ಕರವಾದರೂ ಅವರು ನನ್ನನ್ನು ಜ್ಞಾನಿಯೆಂದು ಕರೆದೇ ಕರೆಯುವರು—ಸಾಕ್ರಟೀಸನಂತಹ ಜ್ಞಾನಿಯನ್ನು ನೀವು ಕೊಲ್ಲಿಸಿದಿರೆಂದು ನಿಮ್ಮ ಮೇಲೆ ಅಪವಾದ ತರುವರು. ನೀವು ಇನ್ನು ಕೊಂಚ ಕಾಲ ಸುಮ್ಮನಿದ್ದು ಕಾದಿದ್ದರೆ, ಸ್ವಾಭಾವಿಕ ರೀತಿಯಲ್ಲಿಯೇ ನಿಮ್ಮ ಆಸೆ ತೀರುತ್ತಿತ್ತು. ನಾನು ಮುದುಕನಾಗಿದ್ದೇನೆ, ನೀವೆಲ್ಲರೂ ನೋಡಬಹುದು, ಸಾವು ಸಮೀಪಿಸಿಯೇ ಇದೆ. ನಿಮ್ಮೆಲ್ಲರನ್ನೂ ಉದ್ದೇಶಿಸಿ ನಾನು ಈಗ ಮಾತನಾಡುತ್ತಿಲ್ಲ—ನನಗೆ ಮರಣ ದಂಡನೆಯನ್ನು ವಿಧಿಸಿದವರನ್ನು ಮಾತ್ರ ಕುರಿತು ನಾನೀಗ ಮಾತನಾಡುತ್ತಿರುವುದು. ಅವರಿಗೆ ನಾನು ಹೇಳಬೇಕಾದ ವಿಷಯ ಇನ್ನೊಂದಿದೆ ; ನಾನು ಬೇಕಾದುದನ್ನೆಲ್ಲಾ ಮಾಡಿ, ಬೇಕಾದುವನ್ನೆಲ್ಲಾ ಆಡಿ, ನನ್ನ ಜೀವವನ್ನು ಉಳಿಸಿಕೊಳ್ಳಬೇಕೆಂಬ ಪ್ರಯತ್ನ ಮಾಡಿದ್ದರೆ, ಅದು ನನಗೆ ಕಷ್ಟವಾಗುತ್ತಿರಲಿಲ್ಲ—ಹಾಗೆ ನನ್ನ ಬಿಡುಗಡೆ ಪಡೆಯಲು ಆಡಬೇಕಾದ ಮಾತುಗಳು ನನಗೆ ಸಮಯಕ್ಕೆ ಸರಿಯಾಗಿ ಬರಲಿಲ್ಲವೆಂಬ ಕಾರಣದಿಂದ ನನ್ನ ಮೇಲೆ ತಪ್ಪು "ರುಜುವಾತು" ಆಯಿತೆಂದು ನೀವು ಯಾರೂ ಭಾವಿಸಕೂಡದು. ಹಾಗಲ್ಲ; ನನ್ನ ಮೇಲೆ ತಪ್ಪು ಹೊತ್ತುಕೊಳ್ಳಲು ಕಾರಣವಾದುದು ಮಾತಿನ ಅಭಾವವಲ್ಲ—ನಿಶ್ಚಯವಾಗಿಯೂ ಅಲ್ಲ. ನಿಮ್ಮ ಮುಂದೆ ಹೊರಳಾಡಿ, ಅತ್ತು, ಗೋಳಿಟ್ಟು, ನಿಮಗೆ ನಾನು ಯಾವರೀತಿಯಲ್ಲಿ ಮೊರೆ ಇಟ್ಟಿದ್ದರೆ ನಿಮಗೆ ಸಮಾಧಾನವಾಗುತ್ತಿತ್ತೋ ಆ ರೀತಿ ಮಾಡಲು ಬೇಕಾದ ಎದೆ ಕೊಬ್ಬು, ನಾಚಿಕೆಗೇಡಿತನ, ಅಥವಾ ಹಾಗೆ ಮಾಡಬೇಕೆನ್ನುವ ಆಸೆ—ಇವು ನನ್ನಲ್ಲಿ ಇಲ್ಲದೇ ಹೋದುದೇ ಈ ಪರಿಣಾಮಕ್ಕೆ ಕಾರಣ. ಇತರರು ಈ ರೀತಿ ಆಡಿ ಮಾಡಿದ್ದನ್ನು ನೋಡಿ ನಿಮಗದು ರೂಢಿಯಾಗಿದೆ, ಆದರೆ, ನಾನು ನಿಮಗೆ ಮೊದಲೇ ಹೇಳಿದಂತೆ, ಸ್ವಗೌರವಕ್ಕೆ ಕಡಮೆಯಾದ ಅಂತಹ ಕೆಲಸಗಳನ್ನು ನಾನು ಮಾಡಲಾರೆ. ವಿಪತ್ತಿಗೆ ಸಿಕ್ಕಿದಾಗ್ಯೂ ಸಹ ಅಲ್ಪತರವಾದುದನ್ನಾಗಲಿ ಕೀಳಾದುದನ್ನಾಗಲಿ ಮಾಡಬಾರದೆಂದು ನನ್ನ ಮನಸ್ಸಿಗೆ ಆಗ

ತೋಚಿತು: ಹಾಗೆ ಮಾಡದೆ ನನಗೆ ಸರಿತೋರಿದಂತೆ ನಿಮಗೆ ಉತ್ತರ ಕೊಟ್ಟ ನನ್ನ ಮಾತಿನ ಧೋರಣೆಗೆ ನಾನು ಈಗಲೂ ವ್ಯಸನಪಡುವುದಿಲ್ಲ. ನನ್ನ ಇಷ್ಟದಂತೆ ನನ್ನ ಶೈಲಿಯಲ್ಲಿ ಮಾತನಾಡಿ ಸಾಯುವುದಕ್ಕಾದರೂ ಒಡಂಬಡುವೆನೇ ಹೊರತು, ನಿಮ್ಮ ಇಷ್ಟದಂತೆ ಮಾತನಾಡಿ ಬದುಕಿರಲಾರೆ. ಏಕೆಂದರೆ, ಯುದ್ಧದಲ್ಲಾಗಲಿ, ವ್ಯವಹಾರದಲ್ಲಾಗಲಿ ಯಾವುದೋ ಒಂದು ರೀತಿಯಲ್ಲಿ ಪ್ರಾಣ ಉಳಿಸಿಕೊಂಡು ಹೋದರೆ ಸಾಕೆಂದು ಯಾರೂ ಭಾವಿಸಕೂಡದು. ಯುದ್ಧದಲ್ಲಿ ಅನೇಕವೇಳೆ ಒಬ್ಬ ಮನುಷ್ಯನು ತನ್ನ ಆಯುಧಗಳನ್ನು ಬಿಸಾಟು ಮೇಲೆ ಬಂದು ಬೀಳುತ್ತಿರುವವರಿಗೆ ಶರಣಾಗತನಾದರೆ, ಮರಣವನ್ನು ತಪ್ಪಿಸಿಕೊಳ್ಳಬಹುದು, ಇದರಲ್ಲಿ ಸಂದೇಹವೇ ಇಲ್ಲ; ಇದೇ ಪ್ರಕಾರವಾಗಿ ಇತರ ಆಪತ್ತುಗಳಲ್ಲಿಯೂ ಸಂಕಟಕ್ಕೆ ಸಿಕ್ಕಿದವನು ಏನು ಬೇಕಾದರೂ ಸರಿಯೆ, ಆಡಲು ಮಾಡಲು ಸಿದ್ಧನಾಗಿದ್ದರೆ ಮರಣವನ್ನು ತಪ್ಪಿಸಿಕೊಳ್ಳುವ ದಾರಿಗಳೆಷ್ಟೋ ಇವೆ. ನನ್ನ ಮಿತ್ರರಿರಾ! ಸಾವನ್ನು ಗೆಲ್ಲುವುದು ಒಂದು ದೊಡ್ಡ ಕಷ್ಟವಲ್ಲ, ಅಧರ್ಮವನ್ನು ಜಯಿಸುವುದೇ ಅತಿಕಷ್ಟ; ಅಧರ್ಮ ಸಾವಿಗಿಂತ ವೇಗವಾಗಿ ಓಡಬಲ್ಲುದು; ನಾನು ಮುದುಕ, ನಿಧಾನವಾಗಿ ಜಗ್ಗುತ್ತೇನೆ, ಇದರಿಂದ ನಿಧಾನವಾಗಿ ಓಡುವ ಮರಣದ ಬಾಯಿಗೆ ತುತ್ತಾದೆ; ನನ್ನ ಮೇಲೆ ದೂರು ತಂದಿರುವವರಾದರೋ ಬಲು ಚುರುಕಾದವರು, ತೀಕ್ಷ್ಣಬುದ್ಧಿಯುಳ್ಳವರು, ಆದುದರಿಂದ ಅತಿ ವೇಗವಾಗಿ ಓಡುವ ಅಧರ್ಮದ ಬಾಯಿಗೆ ಅವರು ತುತ್ತಾಗಿದ್ದಾರೆ. ಈಗ ನಾನು ಹೊರಡಬೇಕು—ನೀವು ವಿಧಿಸಿರುವ ಮರಣದಂಡನೆಯನ್ನು ಅನುಭವಿಸುವುದಕ್ಕಾಗಿ; ಅವರೂ ತಮ್ಮ ದಾರಿ ಹಿಡಿದು ತಾವು ಹೋಗುತ್ತಾರೆ—ತಮ್ಮ ಅನ್ಯಾಯಕ್ಕೂ ದುಷ್ಟತನಕ್ಕೂ ಧರ್ಮ ಅವರಿಗೆ ವಿಧಿಸುವ ಶಿಕ್ಷೆಯನ್ನು ಅನುಭವಿಸುವುದಕ್ಕಾಗಿ. ನನ್ನ ಪಾಲಿಗೆ ಬಂದುದನ್ನು ನಾನು ಇಟ್ಟುಕೊಳ್ಳಬೇಕು—ಅವರ ಪಾಲಿಗೆ ಬಂದುದನ್ನು ಅವರು ಕಟ್ಟಿಕೊಳ್ಳಲಿ. ಇದೆಲ್ಲಾ ವಿಧಿನಿಯಾಮಕವೆಂದು ಎಣಿಸಬೇಕೆಂದು ತೋರುತ್ತದೆ—ಮತ್ತು ಹಾಗೆ ನಡೆಯುವುದೇ ಒಳ್ಳೆಯದಾಗಿರಬಹುದು.

"ಸಾವು ಸಮೀಪಿಸಿದವರಿಗೆ ಕಾಲಜ್ಞಾನದ ಶಕ್ತಿ ಬರುವುದೆಂದು ಹೇಳುತ್ತಾರೆ; ಆ ಪ್ರಕಾರವಾಗಿ ಈಗ ನನ್ನ ಕೊಲೆಗಾರರಾದ ನಿಮ್ಮ ಭವಿಷ್ಯವನ್ನು ಹೇಳಬೇಕೆಂದು ನನಗೆ ಆಶೆಯಾಗುತ್ತಿರುವುದು. ನಾನು ಈ ಲೋಕವನ್ನು ಬಿಟ್ಟೊಡನೆಯೇ, ನನ್ನಮೇಲೆ ನೀವು ವಿಧಿಸಿರುವ ಶಿಕ್ಷೆಗಿಂತಲೂ ಕ್ರೂರವಾದ ಶಿಕ್ಷೆ ನಿಮಗೆ ಕಾದಿರುವುದು. ಇದು ವರೆಗೂ ನಿಮ್ಮ ಜೀವನದ ಲೆಕ್ಕಾಚಾರವನ್ನು ಕೇಳಿ ಅದರಲ್ಲಿರಬಹು ದಾದ ತಪ್ಪುಗಳನ್ನೂ ಹುಳುಕುಗಳನ್ನೂ ಬಯಲಿಗಿಡುವವನು ನಾನಾ ಗಿದ್ದೆ—ನಾನೊಬ್ಬನೇ ಆಗಿದ್ದೆ—ನನ್ನ ಕಾಟವನ್ನು ತಪ್ಪಿಸಿಕೊಳ್ಳುವು ದಕ್ಕೋಸ್ಕರ ನೀವು ನನ್ನನ್ನು ಕೊಲ್ಲಿಸುತ್ತೀರಿ. ಆದರೆ ಆ ಕಾಟ ನಿಮಗೆ ತಪ್ಪುವುದೆಂದು ಮಾತ್ರ ನೀವು ಎಣಿಸಕೂಡದು. ಏಕೆಂದರೆ, ಅಂತಹ ಕಾಟಕೊಡುವವರು ಈಗಿರುವವರಿಗಿಂತಲೂ ಮುಂದೆ ನೂರು ಮಂದಿ ಹೆಚ್ಚುವರು: ಅವರನ್ನೆಲ್ಲಾ ನಾನು ಇದುವರೆಗೂ ಹಿಡಿತದಲ್ಲಿಟ್ಟು ಕೊಂಡು ತಡೆದಿದ್ದೇನೆ. ಅವರು ನನಗಿಂತಲೂ ಚಿಕ್ಕವರಾದುದರಿಂದ ಅವರ ದೇಹದಲ್ಲಿ ರಕ್ತ ಇನ್ನೂ ಬಿಸಿಬಿಸಿಯಾಗಿರುವುದು—ಅವರು ನಿಮ್ಮ ವಿಷಯದಲ್ಲಿ ದಯೆ ದಾಕ್ಷಿಣ್ಯ ತೋರಿಸುವ ಸಂಭವ ಕಡಮೆ, ಇದರಿಂದ ಅವರನ್ನು ಕಂಡರೆ ನಿಮಗೆ ಹೆಚ್ಚು ರೇಗುವುದು. ಸಿಕ್ಕಿದವರನ್ನೆಲ್ಲಾ ಕೊಲೆ ಮಾಡುವುದರಿಂದ ನಿಮ್ಮ ಹೇಯಜೀವನವನ್ನು ಖಂಡಿಸುವ ನನ್ನಂತಹ ಖಂಡಿತವಾದಿಗಳ ಕೈಯಿಂದ ತಪ್ಪಿಸಿಕೊಳ್ಳಬಹುದು, ಎಂದು ನೀವು ನಂಬಿದ್ದರೆ, ನೀವು ತಪ್ಪು ತಿಳಿದಿರುವಿರಿ; ಹಾಗೆ ತಪ್ಪಿಸಿಕೊಳ್ಳಬೇಕೆಂಬ ಪ್ರಯತ್ನ, ಸಾಧ್ಯವೂ ಅಲ್ಲ, ಗೌರವವಾದುದೂ ಅಲ್ಲ. ಅತ್ಯಂತ ಸುಲಭ ವಾದ ಹಾಗೂ ಉದಾತ್ತವಾದ, ಮಾರ್ಗ ಯಾವುದೆಂದರೆ, ಈ ರೀತಿ ಇತ ರರ ಬಾಯಿ ಕಟ್ಟುವುದಲ್ಲ, ನಿಮ್ಮ ಸ್ಥಿತಿಯನ್ನು ನೀವೇ ಉತ್ತಮಪಡಿಸಿ ಕೊಳ್ಳುವುದು. ಇದೇ ನಾನು ಹೊರಡುವುದಕ್ಕೆ ಮುಂಚೆ ನನಗೆ ಶಿಕ್ಷೆ ವಿಧಿಸಿದ ನ್ಯಾಯಾಧೀಶರಿಗೆ ನಾನು ಹೇಳುವ ಭವಿಷ್ಯದ ಮಾತು.

[ಅನಂತರ ತನ್ನನ್ನು ಬಿಡುಗಡೆಮಾಡಬೇಕೆಂದು ಅಭಿಮತವನ್ನು ಸೂಚಿಸಿದ ತನ್ನ ಸ್ನೇಹಿತರನ್ನು ಕುರಿತು ತನ್ನ ಮರಣಕ್ಕೆ ಯಾರೂ ವ್ಯಸನಪಡಕೂಡದೆಂದೂ, ತನ್ನ ಭಾಗಕ್ಕೆ ಬಂದ ಅದೃಷ್ಟ ತನಗೆ ಶುಭ

ದಾಯಕವೇ ಹೊರತು ಕೆಡುಕಲ್ಲವೆಂದೂ, ಹೇಳಿ ಮುಂದುವರಿಸು ತ್ತಾನೆ.]

"ನಾವು ಇದೇ ವಿಚಾರವನ್ನು ಇನ್ನೊಂದು ರೀತಿಯಲ್ಲಿ ಆಲೋಚಿಸೋಣ, ಆಗಲೂ ಕೂಡ ಮರಣ ನಮಗೆ ಒಳ್ಳೆಯದೆಂದು ನಂಬಲು ಕಾರಣ ಕಂಡುಬರುವುದು. ಮರಣದ ಸ್ವಭಾವವೇನೆಂದು ಕೇಳಿದರೆ, ಅದು ಎರಡರಲ್ಲಿ ಒಂದಾಗಿರಬೇಕು—ಸಾವೆಂಬುದು ಶುದ್ಧ ಶೂನ್ಯಸ್ಥಿತಿಯಾಗಿಯೂ ಕೇವಲ ಜಡಸ್ಥಿತಿಯಾಗಿಯೂ (unconsciousness) ಇರಬೇಕು; ಇಲ್ಲವೆ, ಲೋಕ ಹೇಳುವಂತೆ, ಸತ್ತಮೇಲೆ ಆತ್ಮ ಈ ಪ್ರಪಂಚವನ್ನೂ ಇಲ್ಲಿನ ಸ್ಥಿತಿಯನ್ನೂ ಬಿಟ್ಟು ಬೇರೊಂದು ಪ್ರಪಂಚವನ್ನು ಹೋಗಿ ಸೇರಿ ಬೇರೊಂದು ರೂಪದಲ್ಲಿರುವುದು. ಜ್ಞಾನ ಚೈತನ್ಯಗಳೊಂದೂ ಇಲ್ಲದೆ, ಕನಸುಕೂಡ ಬೀಳದೆ ಗಾಢನಿದ್ರೆ ಮಾಡುವವನ—ಸುಷುಪ್ತಾವಸ್ಥೆಯಲ್ಲಿರುವವನ—ಸ್ಥಿತಿಯೇ ಸಾವೆಂದಿಟ್ಟುಕೊಳ್ಳೋಣ, ಆಗ ಸಾವೆಂಬುದು ವರ್ಣಿಸಲಸದಳವಾದ ಸುಯೋಗವೇ ಆಯಿತು. ಹೇಗೆಂದರೆ, ಸ್ವಪ್ನಕೂಡ ಬರದೆ ಗಾಢನಿದ್ರೆ ಮಾಡಿದ ರಾತ್ರಿಯೊಂದನ್ನು ಇತರ ರಾತ್ರಿ ದಿನಗಳೊಂದಿಗೆ ಹೋಲಿಸಿ, ಅದಕ್ಕಿಂತಲೂ ಉತ್ತಮವಾದ ಮತ್ತು ಸುಖಕರವಾದ ದಿನಗಳನ್ನು ಜೀವಮಾನದಲ್ಲಿ ಎಷ್ಟು ಕಳೆದಿರಿ ಎಂದು ಯಾರನ್ನಾದರೂ ಕೇಳಿದರೆ—ನಿಮ್ಮ ನನ್ನ ಮಾತು ಹಾಗಿರಲಿ, ಪರ್ಷಿಯಾ ದೇಶದ ಚಕ್ರವರ್ತಿಯೂ ಕೂಡ ಅಂತಹ ದಿನಗಳಿಲ್ಲವೆಂದೇ ಹೇಳುವನು, ಸುಷುಪ್ತಾವಸ್ಥೆ ಎಂಬುದು ಅಷ್ಟು ಸುಖಕರವಾದುದು. ಸಾವೆಂಬುದು ಈ ರೀತಿಯ ಅನುಭವವಾಗಿದ್ದರೆ, ಮರಣವೇ ಅತ್ಯಂತ ಲಾಭವೆಂದು ಏಕೆ ಹೇಳಕೂಡದು? ಆಗ ನಿತ್ಯವೆಂಬುದು ಒಂದೇ ರಾತ್ರಿಯಾಗಿ ಪರಿಣಮಿಸುವುದು. ಅದಿಲ್ಲದೆ ಸಾವೆಂಬುದು ಸತ್ತವರೆಲ್ಲ ವಾಸ ಮಾಡುವ ಮತ್ತೊಂದು ಲೋಕಕ್ಕೆ ಮಾಡುವ ಯಾತ್ರೆ ಎಂದೂಹಿಸೋಣ, ಆಗಲೂ, ಸ್ನೇಹಿತರೇ, ನ್ಯಾಯಾಧೀಶರೇ, ಇದಕ್ಕಿಂತಲೂ ಹೆಚ್ಚು ಶುಭಕರವಾದುದೇನಿದೆ? ಸತ್ತಕೂಡಲೇ ಯಾತ್ರಿಕನು, ಧರ್ಮಾವತಾರರೆಂದು ನಾಮಕರಣ ಮಾತ್ರ ಮಾಡಿಸಿಕೊಂಡಿರುವ ಈ ಲೋಕದ ನ್ಯಾಯಾಧೀಶರಿಂದ ಬಿಡುಗಡೆಹೊಂದಿ, ಆ ಲೋಕ

ದಲ್ಲಿರುವ, ವಾಸ್ತವವಾಗಿಯೂ ನ್ಯಾಯಪಕ್ಷಪಾತಿಗಳೆಂದೆನಿಸಿಕೊಂಡು ತೀರ್ಪುಕೊಡುವ, ದೇವಾಂಶಸಂಭೂತರಾಗಿ, ತಮ್ಮ ಜೀವಿತವನ್ನು ಧರ್ಮೈಕ ಪರಾಯಣರಾಗಿ ಕಳೆದ, ಮೈನಾಸ್, ರ್‍ಹಾಡಮಾಂತಸ್, ಇಯಾಕಸ್, ಟ್ರಿಪ್ಟೊಲೀಮಸ್, ಮುಂತಾದ ದಿವ್ಯ ಪುರುಷರ ಸಾನ್ನಿಧ್ಯ ವನ್ನು ಸೇರುವುದಾದರೆ, ಅದಕ್ಕಿಂತ ಉತ್ತಮ ಅದೃಷ್ಟ ಯಾವುದಿದೆ? ಆರ್‌ಫ್ಯೂಸ್, ಮ್ಯೂಸೇಯುಸ್, ಹೆಸಿಯಡ್, ಹೋಮರ್—ಈ ಪುಣ್ಯ ಪುರುಷರ ಜೊತೆಯಲ್ಲಿ ಸಂಭಾಷಣೆ ಮಾಡಲು ಏನುಕೊಟ್ಟರೆತಾನೇ ಅತಿಶಯವಾದೀತು? ಇಷ್ಟೇ ಅಲ್ಲ, ಈ ನಂಬಿಕೆ ನಿಜವಾಗಿದ್ದರೆ, ಮರಳಿ ಮರಳಿ ಸಾವು ನನಗೆ ಬರಲೆಂದು ನಾನು ಕೋರುತ್ತೇನೆ. ಅಲ್ಲಿಗೆ ಹೋಗುವುದರಲ್ಲಿ ನನ್ನ ಅಭೀಷ್ಟವೂ ಒಂದಿರುವುದು: ಪಾಲಮೀಡಿಸ್, ಟೆಲಮಾನಿನ ಪುತ್ರನಾದ ಅಜಾಕ್ಸ್, ಮತ್ತು ಇವರಂತೆಯೇ ಈ ಲೋಕದ ಜನರಿಂದ ಅನ್ಯಾಯದ ತೀರ್ಪು ಪಡೆದು ಮರಣಹೊಂದಿದ ಇತರ ಪುರಾಣ ಪುರುಷರು ಯಾರು ಯಾರುಂಟೋ, ಅಂತಹವರನ್ನೆಲ್ಲಾ ಸಂಧಿಸಿ, ಅವ ರೊಡನೆ ಸಂಭಾಷಿಸಿ, ಅವರ ಕಷ್ಟಗಳೊಡನೆ ನನ್ನ ಕಷ್ಟವನ್ನು ಹೋಲಿಕೆ ಮಾಡಿಕೊಳ್ಳಬಹುದು! ಇದರಲ್ಲಿ ಏನು ಕಡಮೆಯಾದ ಆನಂದವಿರುವುದೇ? ಇವೆಲ್ಲಕ್ಕಿಂತಲೂ ಅತಿಶಯವಾದ ವಿಷಯವೇನೆಂದರೆ, ನಾನು ಅಲ್ಲಿಗೆ ಹೋದರೆ ಇಲ್ಲಿನಂತೆ ಅಲ್ಲಿಯೂ ಕೂಡ ಸತ್ಯಜ್ಞಾನ ಯಾವುದು, ಮಿಥ್ಯ ಜ್ಞಾನ ಯಾವುದು, ಎಂಬ ನನ್ನ ಜಿಜ್ಞಾಸೆಯನ್ನು ಮುಂದುವರಿಸಬಹುದು; ಇಲ್ಲಿನಂತೆಯೇ ಅಲ್ಲಿಯೂ ಕೂಡ ನಿಜವಾದ ಜ್ಞಾನಿಗಳು ಯಾರು, ಜ್ಞಾನ ವಿಲ್ಲದಿದ್ದರೂ ಜ್ಞಾನಿಗಳೆಂದು ನಟಿಸುವವರು ಯಾರು, ಎಂಬುದನ್ನು ಕಂಡು ಹಿಡಿಯಬಹುದು! ಟ್ರೋಜನ್ ಮಹಾ ದಂಡಯಾತ್ರೆಯ ದಳಪತಿ ಯಾಗಿದ್ದ ವೀರಪುರುಷ ಅಗೆಮೆಮ್ನಾನ್, ಅಥವಾ ಒಡೆಸ್ಸಿಯೂಸ್, ಅಥವಾ ಸಿಸಿಫಸ್, ಇಲ್ಲವೆ ಇತರ ನೂರಾರು ಮಂದಿ—ಪುರುಷರು, ಸ್ತ್ರೀಯರೂ ಸಹ!—ಇವರೊಡನೆ ಕಲೆತು ಮಾತನಾಡಿ ಇವರನ್ನು ಪರೀಕ್ಷಿಸುವು ದೆಂದರೆ, ಅವರಿಗೆ ಪ್ರಶ್ನೆ ಹಾಕುವುದೆಂದರೆ, ಓ ನ್ಯಾಯಾಧೀಶರೇ, ಹೇಳಿ, ಈ ಅಪಾರ ಆನಂದವನ್ನು ವರ್ಣಿಸಲು ಸಾಧ್ಯವೇ? ಈ ಭಾಗ್ಯವನ್ನು ಪಡೆ ಯುವುದಕ್ಕೆ ಏನು ಕೊಟ್ಟರೂ ಅಲ್ಪವಲ್ಲವೇ? ಒಂದು ಭರವಸೆ ಏನೆಂದರೆ,

ಇಲ್ಲಿನಹಾಗೆ ಅಲ್ಲಿ ಜನರಿಗೆ ಪ್ರಶ್ನೆ ಹಾಕಿದಮಾತ್ರಕ್ಕೇ ಪ್ರಶ್ನಿಸಿದವನನ್ನು ಮರಣದಂಡನೆಗೆ ಗುರಿಮಾಡುವುದಿಲ್ಲ — ಖಂಡಿತವಾಗಿಯೂ ಇಲ್ಲ; ನಮಗಿಂತಲೂ ಅವರು ಹೆಚ್ಚು ಸೌಖ್ಯವಂತರು; ಅಲ್ಲದೆ, ಶಾಸ್ತ್ರಗಳು ಹೇಳುವುದು ನಿಜವಾದರೆ, ಅವರು ಅಮರರು, ಸಾವನ್ನೇ ಅರಿಯದವರು.

ಈ ಕಾರಣಗಳಿಂದ, ಓ ನ್ಯಾಯಾಧೀಶರೇ, ಸಾವಿನ ವಿಷಯವಾಗಿ ವ್ಯಸನಪಡಬೇಡಿ; ಸತ್ಪುರುಷನಿಗೆ ಇಹದಲ್ಲಿಯಾಗಲಿ, ಪರದಲ್ಲಿಯಾಗಲಿ ಯಾವ ವಿಧವಾದ ಕೇಡೂ ಉಂಟಾಗಲಾರದೆಂದು ಖಂಡಿತವಾಗಿಯೂ ತಿಳಿಯಿರಿ. ಅವನ ಮತ್ತು ಅವನಿಗೆ ಸಂಬಂಧಪಟ್ಟವರ ವಿಷಯದಲ್ಲಿ ದೇವತೆಗಳು ಉದಾಸೀನರಾಗಿರುವುದಿಲ್ಲ; ಈಗ ಸನ್ನಿಹಿತವಾಗುತ್ತಿರುವ ನನ್ನ ಅಂತ್ಯವೂ ಕೂಡ ಆಕಸ್ಮಿಕವೆಂದು ತಿಳಿಯಕೂಡದು. ನನ್ನ ಕಾಲ — ನಾನಾವಿಧ ತೊಂದರೆಗಳಿಂದ ಬಿಡುಗಡೆ ಹೊಂದಿ ಸುಖವಾಗಿ ಕಣ್ಣುಮುಚ್ಚಿಕೊಳ್ಳುವ ಕಾಲ—ಬಂದಿದೆಯೆಂದು ನನಗೆ ಸ್ಪಷ್ಟವಾಗಿ ಗೋಚರವಾಗುತ್ತಿದೆ. ಈ ಕಾರಣದಿಂದಲೇ, ನನ್ನನ್ನು ಶಿಕ್ಷೆಗೆ ಗುರಿಮಾಡಿದವರಮೇಲೆಯಾಗಲಿ, ನನ್ನಮೇಲೆ ತಪ್ಪುಹೊರಿಸಿದವರ ಮೇಲೆಯಾಗಲಿ, ನಾನು ಸ್ವಲ್ಪವೂ ಕೋಪಿಸಿಕೊಳ್ಳದಿರುವುದು ;— ಅವರು ನನಗೆ ಕೆಡುಕೇನೂ ಮಾಡಿಲ್ಲ. ಆದರೆ ನನಗೆ ಒಳ್ಳೆಯದು ಮಾಡಬೇಕೆಂಬ ಉದ್ದೇಶಮಾತ್ರ ಅವರಿಗಿಲ್ಲ, ಇದರಿಂದ ಅವರನ್ನು ಕುರಿತು ನಾನು ವ್ಯಸನಪಡಬೇಕಾಗಿದೆ.

ನಿಮ್ಮ ಬಳಿ ನನ್ನ ಬೇಡಿಕೆ ಇನ್ನೊಂದಿದೆ. ಪ್ರಿಯ ಮಿತ್ರರಿರಾ, ನನ್ನ ಮಕ್ಕಳು ದೊಡ್ಡವರಾದಮೇಲೆ, ಅವರನ್ನು ಚೆನ್ನಾಗಿ ಶಿಕ್ಷಿಸಿ, ಅವರು ಸದ್ಗುಣವನ್ನು ದೂರಮಾಡಿ ಧನಕ್ಕಾಗಲಿ ಅಥವಾ ಇತರ ಯಾವ ವಸ್ತುವಿಗಾಗಲಿ ಹೆಚ್ಚು ಹವಣಿಕೆ ಪಟ್ಟರೆ, ಆಗ—ನಾನು ಇದುವರೆಗೂ ನಿಮಗೆ ತೊಂದರೆ ಕೊಟ್ಟಂತೆ—ಅವರನ್ನು ತೊಂದರೆಪಡಿಸಿ. ಇಲ್ಲವೆ, ಏನೂ ಬಂಡವಾಳವಿಲ್ಲದಿರುವಾಗ ಏನೋ ಬಹಳ ದೊಡ್ಡಮನುಷ್ಯರೆಂದು ನಟನೆ ಮಾಡಿದರೆ, ಆಗ, ಯಾವುದಕ್ಕೆ ಲಕ್ಷ್ಯ ಕೊಡಬೇಕಾಗಿತ್ತೊ ಅದನ್ನು ಗಮನಿಸದೆ ಹೋದುದಕ್ಕೂ, ಯಾವುದಕ್ಕೂ ತರವಿಲ್ಲದಿರುವಾಗ ಬಹಳ ಪ್ರಶಸ್ತಿ ಪಡೆದವರೆಂದು ನಟಿಸಿದ್ದಕ್ಕೂ, ನಾನು ನಿಮ್ಮನ್ನು

ದಂಡಿಸಿದ ರೀತಿಯಲ್ಲಿಯೇ, ಅವರನ್ನೂ ದಾಕ್ಷಿಣ್ಯ ನೋಡದೆ ದಂಡಿಸಿ. ಈ ರೀತಿ ನೀವು ಮಾಡಿದ್ದೇ ಆದರೆ, ಆಗ, ನನ್ನ ಪ್ರಿಯ ಸಹೋದರರೇ, ನಾನೂ ನನ್ನ ಮಕ್ಕಳೂ ನಿಮ್ಮಲ್ಲಿ ಸರಿಯಾದ ನ್ಯಾಯವನ್ನು ಪಡೆದಂತೆಯೇ ಆಗುವುದು.

ಆದರೆ ಈಗ ಬಹಳ ಹೊತ್ತಾಗುತ್ತಬಂದಿತು—ನಮ್ಮ ನಮ್ಮ ದಾರಿ ಹಿಡಿದು ನಾವು ಹೊರಡಬೇಕು–ನಾನು ಸಾಯಲಿಕ್ಕೆ, ನೀವು ಬದುಕಲಿಕ್ಕೆ. ಯಾವುದು ಉತ್ತಮವೋ ದೇವರಿಗೆ ಗೊತ್ತು–ಅವನೊಬ್ಬನಿಗೇ ಗೊತ್ತು".

ಸಾಕ್ರಟೀಸನ ಅಂತ್ಯಕಾಲವನ್ನು ಕುರಿತು ಪ್ಲೇಟೋ ಚಿತ್ರಿಸಿರುವ ದೃಶ್ಯ ಸಾಹಿತ್ಯಲೋಕದಲ್ಲೆಲ್ಲಾ ಅತ್ಯಂತ ರಮಣೀಯವೂ, ಎಂತಹ ಕಲ್ಲೆದೆಯವರಾದರೂ ಪ್ರೇಕ್ಷಕರ ಮನಕರಗಿಸುವಂತಹುದೂ, ಆಗಿದೆ. ವಿಷಪಾನ ಮಾಡಿದಮೇಲೆ ಸಾಯುವುದಕ್ಕೆ ಒಂದೆರಡು ನಿಮಿಷಗಳ ಪೂರ್ವದಲ್ಲಿ—ಸ್ನೇಹಿತರೆಲ್ಲರೂ ಅಕ್ಕಪಕ್ಕದಲ್ಲಿ ಅಳುತ್ತ ಕುಳಿತಿರುವಾಗ—ಸಾಕ್ರಟೀಸನು ಥಟ್ಟನೆ ಕಣ್ಣು ತೆಗೆದನು. ಮುಂದೆ ನಡೆದುದನ್ನು ಪ್ಲೇಟೋ ಈ ರೀತಿ ವರ್ಣಿಸಿದ್ದಾನೆ: "ಕ್ರೈಟೊ, ಅಸ್ಕ್ಲೇಪಿಯಸ್ಸಿಗೆ ನಾನು ಒಂದು ಹುಂಜವನ್ನು ಕೊಡಬೇಕಾಗಿದೆ, ಈ ಸಾಲವನ್ನು ಮರೆಯದೆ ತೀರಿಸುವೆಯಾ?" ಇದೇ ಅವನಾಡಿದ ಕೊನೆಯ ಮಾತು. "ಖಂಡಿತವಾಗಿಯೂ ತೀರಿಸುತ್ತೇನೆ; ಇನ್ನೇನಾದರೂ ಹೇಳುವುದಿದೆಯೇ?" ಈ ಪ್ರಶ್ನೆಗೆ ಉತ್ತರವೇನೂ ಬರಲಿಲ್ಲ; ಆದರೆ ಒಂದೆರಡು ನಿಮಿಷಗಳಲ್ಲಿಯೇ ಸರಕ್ಕೆನ್ನುವ ಚಲನೆಯೊಂದು ಕೇಳಿಸಿತು. ಕಾವಲಿದ್ದವರು ಆತನ ಮುಖದ ಮೇಲಿದ್ದ ಬಟ್ಟೆಯನ್ನೆಳೆದರು; ಕಣ್ಣುಗಳು ನಾಟಿದ ದೃಷ್ಟಿಯನ್ನು ಹೊಂದಿದ್ದುವು; ಕ್ರೈಟೊ ಆತನ ಕಣ್ಣು ಬಾಯಿ ಮುಚ್ಚಿದನು.

ಎಕಿಕ್ರಾಟೀಸ್, ನಮ್ಮ ಮಿತ್ರನ ಮರಣ ಹೀಗಾಯಿತು: ಅವನನ್ನು ಕುರಿತು ನಾನು ನಿಜವಾಗಿಯೂ ಹೇಳಬಲ್ಲೆ—ನನಗೆ ತಿಳಿದ ಮಟ್ಟಿಗೆ ಅವನ ಕಾಲದ ಜನರಲ್ಲೆಲ್ಲಾ ಅತ್ಯಂತ ಶ್ರೇಷ್ಠಜ್ಞಾನಿಯೂ, ನ್ಯಾಯತತ್ಪರನೂ, ಸರ್ವೋತ್ಕೃಷ್ಟನೂ ಆದವನು ಅವನೇ."

## ಅಧ್ಯಾಯ ೧೨.

## ಪ್ಲೇಟೊ

ಸಾಕ್ರಟೀಸನು ಪ್ರಪಂಚತತ್ವಪರಿಶೋಧನೆಯ ವಿಷಯವಾಗಿ ಉದಾಸೀನನಾಗಿರಲಿಲ್ಲವಾದರೂ ತನ್ನ ಜೀವನದ ಉತ್ತರಭಾಗವನ್ನು ಸಂಪೂರ್ಣವಾಗಿ ಸಮಾಜಸುಧಾರಣೆಗೆ ವಿನಿಯೋಗಿಸಿಬಿಟ್ಟನು. ಆತನ ಸಾಮಾನ್ಯವಾದದ ಪರಿಪೂರ್ಣಾರ್ಥವನ್ನು ಹೊರಪಡಿಸಬೇಕಾದರೆ ಸತ್ಯವಸ್ತುವಿನ ಸ್ವರೂಪ, ಸ್ಥಿತಿ, ಇವುಗಳನ್ನು ಕುರಿತು ಸಮಾಲೋಚನೆ ಮಾಡುವುದು ಅತ್ಯಂತಾವಶ್ಯಕವೆನಿಸಿತು. ಮಾನವಜೀವನ, ಮಾನವ ಜ್ಞಾನ, ಮನುಷ್ಯನ ಆಚಾರವ್ಯವಹಾರ—ಈ ಮೊದಲಾದ ಮಾನವ ಸಮಸ್ಯೆಗಳನ್ನೇ ಪರಿಶೀಲಿಸಿದರೂ ಅವುಗಳ ಸಂಪೂರ್ಣಾರ್ಥವನ್ನು ಬಿಡಿಸಿ ಹೇಳಬೇಕಾದರೆ ಸತ್ಯವಸ್ತುಸಂಬಂಧವಾದ ಪ್ರಶ್ನೆಗಳಿಗೆ ಮೊದಲು ಉತ್ತರವನ್ನು ಕೊಡಬೇಕಾಗುವುದು. ಈ ರೀತಿಯಾಗಿ ತನ್ನ ಗುರು ಪ್ರಾರಂಭಿಸಿದ ಕಾರ್ಯವನ್ನು ಅನುನಯುವಾದ ರೀತಿಯಲ್ಲಿ ಕೊನೆಗಾಣಿಸಿ ಅಶೇಷಕೀರ್ತಿಯನ್ನು ಪಡೆಯುವುದೇ ಪ್ಲೇಟೊ ಎಂಬ ಶಿಷ್ಯನ ಭಾಗ್ಯವಾಯಿತು. ಪ್ಲೇಟೊ ಜ್ಞಾನಸಿದ್ಧಾಂತ, ಕರ್ಮಸಿದ್ಧಾಂತ, ಮತ್ತು ರಾಜ್ಯಸಿದ್ಧಾಂತಗಳನ್ನು ಬರೆದುದಲ್ಲದೆ ಆಧುನಿಕತತ್ವಶಾಸ್ತ್ರದ ಬೀಜಾಂಕುರಪ್ರಾಯವಾದ ಪ್ರಪಂಚ ತತ್ವಸಿದ್ಧಾಂತವನ್ನೂ—ಅಂದರೆ ಸಾಕ್ರಟೀಸನ ಸಾಮಾನ್ಯವಾದವನ್ನೂ—ಪ್ರಗಾಢತರವಾದ ರೀತಿಯಲ್ಲಿ ಪರಿಷ್ಕರಿಸಿ ಪರಿಪೂರ್ಣಗೊಳಿಸಿದನು.

ಕ್ರಿ.ಪೂ. ೪೨೭ರಲ್ಲಿ ಘನವಂತರಾದ ತಾಯಿತಂದೆಗಳ ಮಗನಾಗಿ ಪ್ಲೇಟೊ ಜನಿಸಿದನು. ಸಂಗೀತ, ಸಾಹಿತ್ಯ, ಚಿತ್ರಕಲೆ ಮುಂತಾದ ವಿದ್ಯೆಗಳಲ್ಲಿ ಪಾರಂಗತನಾಗಿ ಕ್ರಿ. ಪೂ. ೪೦೭ ರಲ್ಲಿ ಸಾಕ್ರಟೀಸನ ಶಿಷ್ಯನಾದನು. ಕ್ರಿ. ಪೂ. ೩೯೯ ರಲ್ಲಿ ಸಾಕ್ರಟೀಸನ ಮರಣಾನಂತರ ಮೆಗಾರ ಎಂಬಲ್ಲಿಗೆ ಸಾಕ್ರಟೀಸನ ಇತರ ಶಿಷ್ಯರೊಂದಿಗೆ ಹೋಗಿ ನಿಂತನು. ಈತನು ಈಜಿಪ್ಟ್, ಏಷಿಯಾ ಮೈನರ್, ಇಟಲಿ ಮುಂತಾದ ಕಡೆಗಳಲ್ಲೆಲ್ಲಾ ಸಂಚಾರಮಾಡಿ ಬಂದನೆಂದೂ, ಕಡೆಯಲ್ಲಿ ಸಿರಕೂಸ್ ಎಂಬ

ನಗರದ ಪಾಳೆಯಗಾರನಾದ ಡಯಾನಿಸಿಯೂಸ್ ಎಂಬವನ ದ್ವೇಷ ಕಟ್ಟಿಕೊಂಡದ್ದರಿಂದ ಗುಲಾಮನಾಗಿ ಮಾರಲ್ಪಟ್ಟನೆಂದೂ ಪ್ರವಾದವಿದೆ. ಈತನು ಕಡೆಯಲ್ಲಿ ಅಥೆನ್ಸ್ ನಗರದಲ್ಲಿ ನಿಂತು ಅಕೆಡಮಸ್ ಎಂಬ ಸ್ಥಳದಲ್ಲಿ "ದಿ ಅಕೆಡಮಿ" ಎಂಬ ಪಾಠಶಾಲೆಯನ್ನು ಸ್ಥಾಪಿಸಿ, ಗಣಿತ ಶಾಸ್ತ್ರ, ತತ್ವಶಾಸ್ತ್ರ ಮುಂತಾದುವುಗಳನ್ನು ಬೋಧಿಸುತ್ತಿದ್ದನು. ಈ ಮಧ್ಯೆ ಕ್ರಿ.ಪೂ. ೩೬೭ ಮತ್ತು ೩೬೧ ರಲ್ಲಿ ತನ್ನ "ಆದರ್ಶ ರಾಜ್ಯ"ವನ್ನು ಸ್ಥಾಪಿಸಬೇಕೆಂಬ ಅಭೀಷ್ಟವನ್ನು ಪೂರ್ತಿಗೊಳಿಸಲು ಸಿರಕೂಸಿಗೆ ಮರಳಿ ಹೋಗಿದ್ದನೆಂದು ಹೇಳಿಕೊಳ್ಳುತ್ತಾರೆ. ಕ್ರಿ.ಪೂ. ೩೪೭ ರಲ್ಲಿ ಈತನು ಮರಣಹೊಂದಿದನು. ಪ್ಲೇಟೊ ಗಣಿತಜ್ಞ ಮತ್ತು ತತ್ವಜ್ಞಾನಿಯೆಂದು ಪ್ರಸಿದ್ಧಗೊಂಡುದಲ್ಲದೆ ಅಸಾಧಾರಣನಾದ ಕಲಾಕೋವಿದನೆಂದೂ ದೈವಭಕ್ತನೆಂದೂ ಖ್ಯಾತಿಗೊಂಡಿದ್ದನು.

ಜೀವನದ ಕೊಂಕುಡೊಂಕುಗಳನ್ನೆಲ್ಲಾ ಸರಿಪಡಿಸಿಕೊಂಡು, ಧರ್ಮ ಬದ್ಧವಾದ ರೀತಿಯಲ್ಲಿ ನಡೆಯಬೇಕಾದರೆ, ಮಾನವನ ಪರಮಶ್ರೇಯ ಯಾವುದೆಂಬ ಸಮ್ಯಗ್‌ಜ್ಞಾನವನ್ನು ಪಡೆಯುವುದು ಅತ್ಯಂತಾವಶ್ಯಕ ವೆಂದು ಸಾಕ್ರಟೀಸನು ಸಾರಿದ್ದನಷ್ಟೆ. ಇಂಥ ಜ್ಞಾನವನ್ನು ಹೊಂದುವುದು ಸಾಧ್ಯವೆಂದು ಸಿದ್ಧಾಂತರೀತಿಯಲ್ಲಿ ತೋರಿಸಿಕೊಡದಿದ್ದರೂ ತನ್ನ ಅನುದಿನದ ಜೀವನದಲ್ಲಿಯೇ — ತನ್ನ ಅಸದೃಶವಾದ ವಾದವಿಧಾನ ದಿಂದಲೇ—ಇಂಥ ಜ್ಞಾನಾರ್ಜನೆ ಸಾಧ್ಯವೆಂಬುದನ್ನು ತೋರ್ಪಡಿಸಿದ್ದನು. ಈಗ ಆತನ ಶಿಷ್ಯವರ್ಯನೆನಿಸಿದ ಪ್ಲೇಟೋವಾದರೋ ಈ ವಿಧವಾದ ಸಂವಾದ ಸೋಜಿಗವನ್ನು ತನ್ನ ಬರವಣಿಗೆಗಳಲ್ಲಿ ಅತ್ಯಂತ ಮನೋಹರ ವಾದ ಶೈಲಿಗೆ ತಂದುದಲ್ಲದೆ ಸಿದ್ಧಾಂತರೂಪವಾಗಿಯೂ ಸಹ, ಸತ್ಯಜ್ಞಾನ ವೆಂದರೇನು, ಅದನ್ನು ದೊರಕಿಸಿಕೊಳ್ಳುವ ಬಗೆ ಹೇಗೆ, ಮುಂತಾದ ಪ್ರಶ್ನೆಗಳನ್ನು ಚರ್ಚೆಮಾಡುವ ನ್ಯಾಯಶಾಸ್ತ್ರವೊಂದನ್ನೇರ್ಪಡಿಸಿದನು. ಆದರೂ ಸತ್ಯಜ್ಞಾನವನ್ನು ಪಡೆದು ಅದರ ಸಹಾಯದಿಂದ ಸತ್ಯವಸ್ತುವಿನ ಸ್ವರೂಪ ನಿರ್ಣಯ ಮಾಡುವುದೇ ಈತನ ಮುಖ್ಯ ಆಶಯವಾಗಿದ್ದುದ ರಿಂದ ಜ್ಞಾನಸಿದ್ಧಾಂತದ ಜೊತೆಗೆ ಪ್ರಪಂಚತತ್ವಪರಿಶೋಧನೆಯ ವಿಚಾರಗಳನ್ನೂ ಕೈಗೊಂಡವನಾಗಿ ಅಪೂರ್ವವಾದ ತತ್ವಶಾಸ್ತ್ರವನ್ನೂ

ಬರೆದನು. ಈತನ ಅಭಿಪ್ರಾಯಗಳನ್ನೆಲ್ಲಾ ಕ್ರಮವಾಗಿ ಅಭ್ಯಾಸಮಾಡ ಬೇಕಾದರೆ ನ್ಯಾಯ ಅಥವಾ ತರ್ಕಶಾಸ್ತ್ರ, ವಿಜ್ಞಾನ ಅಥವಾ ಪ್ರಪಂಚ ತತ್ವಶಾಸ್ತ್ರ, ಧರ್ಮ ಅಥವಾ ರಾಜ್ಯತಂತ್ರಗಳನ್ನೊಳಗೊಂಡಿರುವ ನೀತಿ ಶಾಸ್ತ್ರ, ಎಂಬೀ ಪ್ರಕರಣಗಳನ್ನನುಸರಿಸಿ ಅಭ್ಯಸಿಸುವುದು ಮೇಲು. ಆದರೆ ಈತನ ಸಿದ್ಧಾಂತಗಳನ್ನು ವಿವರಿಸುವುದಕ್ಕೆ ಮೊದಲು ಈತನ ಗ್ರಂಥದ ವಿಚಾರವಾಗಿ ಒಂದೆರಡು ಮಾತು ಹೇಳುವುದು ಆವಶ್ಯಕವೆಂದು ತೋರುತ್ತದೆ.

" ಸಂವಾದಗಳು " ಎಂಬುದೇ ಈತನ ಮುಖ್ಯ ಗ್ರಂಥ. ಈ ಗ್ರಂಥದಲ್ಲಿ ಮೇಲೆ ಹೇಳಿದ ಸಾಕ್ರಟೀಸನ ವಾದ ಚಮತ್ಕಾರವನ್ನೂ, ಪ್ಲೇಟೋವಿನ ಅದ್ಭುತವಾದ ತತ್ವನಿರ್ಣಯಗಳನ್ನೂ ಅವುಗಳನ್ನು ಸಮರ್ಥಿಸುವ ವಿಚಾರದಲ್ಲಿ ಗುರುವಾದ ಸಾಕ್ರಟೀಸನು ಈತನ ಮೇಲೆ ಬೀರಿದ್ದ ಅಸಾಧಾರಣವಾದ ಸಂಸ್ಕಾರ ಬಲವನ್ನೂ ನಾವು ಕಾಣಬಹುದು. ಈ ಗ್ರಂಥ, ಆರ್ಯರ ತತ್ವಶಾಸ್ತ್ರಕ್ಕೆ ಮೂಲಾಧಾರ ಗಳಾದ " ಪ್ರಸ್ಥಾನತ್ರಯ " ಗಳೆನಿಸಿಕೊಂಡಿರುವ, ಉಪನಿಷತ್ತುಗಳು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ—ಎಂಬಿವು ನಮ್ಮ ಅಧ್ಯಾತ್ಮ ಸಂಸ್ಕೃತಿ ಯಲ್ಲಿ ಯಾವ ಸ್ಥಾನವನ್ನು ಹೊಂದಿರುವುವೋ, ಪಾಶ್ಚಾತ್ಯ ತತ್ವಶಾಸ್ತ್ರ ದಲ್ಲಿ ಕ್ಯಾಂಟನ " ಶುದ್ಧ ಬುದ್ಧಿಯ ಮೀಮಾಂಸೆ " (The Critique of Pure Reason) ಹೇಗೆಲ್ ಎಂಬವನ " ನ್ಯಾಯಶಾಸ್ತ್ರ " (Logic) ಮುಂತಾದ ಗ್ರಂಥಗಳೊಂದಿಗೆ ಅದೇ ಸ್ಥಾನವನ್ನು ಪಡೆದಿರುವುದು. ವಾಸ್ತವಿಕವಾಗಿಯೂ ಈ ಸಂವಾದಗಳನ್ನು ಪಾಶ್ಚಾತ್ಯರ ಉಪನಿಷತ್ತು ಗಳೆನ್ನಬಹುದು. ಇಂಗ್ಲಿಷ್ ಭಾಷೆಯನ್ನರಿತವರಲ್ಲಿ ಜೊವೆಟ್ ಎಂಬ ಪ್ರಸಿದ್ಧ ಆಂಗ್ಲೇಯ ಪಂಡಿತನಿಂದ ಆ ಭಾಷೆಗೆ ಅನುವಾದಿಸಲ್ಪಟ್ಟಿರುವ ಈ ಗ್ರಂಥವನ್ನು ಓದದವರೇ ಅತಿ ವಿರಳ. ಇದರ ಶೈಲಿ ಬಹು ಮನೋಹರವಾಗಿ ಸುಲಲಿತವಾಗಿರುವುದರಿಂದಲೂ, ವಿಷಯ ಕಥಾ ರೂಪದಲ್ಲಿ — ಅದರಲ್ಲಿಯೂ ಸಂವಾದರೂಪದಲ್ಲಿ — ಪ್ರತಿಪಾದಿಸಲ್ಪಟ್ಟಿ ರುವುದರಿಂದಲೂ, ಮನೆಗೆಲಸಗಳು ಮೊದಲುಗೊಂಡು ರಾಜ್ಯತಂತ್ರಗಳು, ಸಾಮಾಜಿಕ ಸುಧಾರಣೆಗಳು, ಮತ, ತತ್ವ, ನೀತಿ ನಿರ್ಣಯಗಳವರೆಗೂ

ಇದರಲ್ಲಿ ಚರ್ಚಿಸಲ್ಪಡದಿರುವ ವಿಷಯವೇ ಇಲ್ಲದಿರುವುದರಿಂದಲೂ, ಇದು ಮಾನವ ಜಾತಿಗೇ ಶಾಶ್ವತವಾದ ಸುಖವನ್ನೀಯುವುದಲ್ಲದೆ ಆಬಾಲ ವೃದ್ಧರಿಗೂ ಪಂಡಿತಪಾಮರರೆಲ್ಲರಿಗೂ ಆದರಣೀಯವಾಗಿರುವುದು.

ಸಾಕ್ರಟೀಸನು ತನ್ನ ಬೋಧನೆಯನ್ನೆಲ್ಲಾ ವಾದರೂಪದಲ್ಲಿಯೇ ನಡಸಿದನೆಂದು ಹಿಂದೆಯೇ ಹೇಳಿದೆ. ಈ ರೂಪದ ಸೊಬಗನ್ನೂ ಅದರಿಂದ ಶ್ರೋತೃಗಳ ಮೇಲುಂಟಾದ ಪರಿಣಾಮವನ್ನೂ ಸ್ಪಷ್ಟಪಡಿಸುವುದಕ್ಕೋಸ್ಕರ ಆತನ ಶಿಷ್ಯಶ್ರೇಷ್ಠನಾದ ಪ್ಲೇಟೊ ಗುರುವಿನ ಬೋಧನೆಯ ವಿಕಾಸರೂಪವಾದ ತನ್ನ ತತ್ತ್ವಶಾಸ್ತ್ರವನ್ನು ಸಂವಾದರೂಪದಲ್ಲಿ ಬರೆದನು. ಅಲ್ಲದೆ ಹೀಗೆಮಾಡುವುದರಿಂದ ಸತ್ಯಾಂಶ ಹಠವಾದವೆಂದು ತೋರದೆ ಕ್ರಮಕ್ರಮವಾಗಿ ರೂಪುಗೊಂಡು ತನಗೆ ತಾನೇ ಹೊರಬೀಳುವುದಕ್ಕೆ ಅವಕಾಶ ದೊರೆಯುವುದು, ಮತ್ತು ವಾಚಕರು ತಮ್ಮ ಸ್ವಂತ ಅಭಿಪ್ರಾಯವನ್ನು ನಿರ್ಣಯಿಸಿಕೊಳ್ಳಲು ಅನುಕೂಲವಾಗುವುದು. ಇವೆಲ್ಲಕ್ಕಿಂತಲೂ ಬಲವಾದ ಕಾರಣವೇನೆಂದರೆ — ಪ್ಲೇಟೊ ಕಲಾವಿಶಾರದನಾದುದರಿಂದ ತನ್ನ ಕಲಾನೈಪುಣ್ಯವನ್ನು ಪ್ರದರ್ಶಿಸುವುದಕ್ಕೆ ವಾದಸಂವಾದರೂಪ ಅನುಗುಣವಾದ ಮಾರ್ಗವೆಂಬುದೇ. ತತ್ತ್ವಶಾಸ್ತ್ರವೆಂಬುದು ಪ್ಲೇಟೋವಿಗೆ ಸಿದ್ಧಾಂತ ಮಾತ್ರವಾಗಿರಲಿಲ್ಲ: ಅದು ಜೀವನದ ಒಂದು ಹಾದಿ, ಜ್ಞಾನಿಯ ವ್ಯಕ್ತಿತ್ವದಲ್ಲಡಗಿದ್ದು ಪ್ರಕಾಶಿಸುವ ಒಂದು ಶಕ್ತಿ ವಿಶೇಷ. ಆದರೆ ಪ್ಲೇಟೊ ಕೇವಲ ಜ್ಞಾನಿಯಾಗಿರದೆ ಕಲಾವಿದನೂ ಆಗಿದ್ದುದರಿಂದ ಈ ಶಕ್ತಿ ಕಲಾರೂಪವನ್ನು ಹೊಂದಿತು. ಈತನ ಸಂವಾದಗಳು ಪ್ರಪಂಚದ ಮತ್ತು ಜನರ ವಿಚಾರವಾಗಿ ಈತನು ಹೊಂದಿದ್ದ — ನಿರ್ಣಯಿಸಿ ಹೊಂದಿದ್ದ—ಭಾವಗಳನ್ನು ನಮ್ಮ ಕಣ್ಣೆದುರಿಗೆ ಹೊಳೆವ ಚಿತ್ರಗಳಂತೆ ತಂದು ನಿಲ್ಲಿಸುವುವು. ಇವು ಒಂದು ಸಲ ವರ್ಣನಾರೂಪವನ್ನೂ, ಮತ್ತೊಂದು ಸಲ ನಾಟಕ ರೂಪವನ್ನೂ, ಮಗುದೊಂದು ಸಲ ಕಥಾ (ಚಾರಿತ್ರ) ರೂಪವನ್ನೂ ಹೊಂದಿ, ಕಾರುಣ್ಯ, ಮಾರ್ದವ, ಹಾಸ್ಯ, ಗಾಂಭೀರ್ಯ ಮುಂತಾದ ರಸಗಳು ವಸಂತಪ್ರಾತಃಕಾಲದ ಛಾಯಾ—ಪ್ರಕಾಶದಂತೆ ಒಂದಾದಮೇಲೊಂದು ಉಕ್ಕಿಬರುವಂತೆ ಮಾಡುವುವು.

ಇವುಗಳ ವೈವಿಧ್ಯ, ನಿಗಿನಿಗಿಸುವ ಮಿಂಚು, ಉಲ್ಲಾಸ, ರಮಣೀಯವಾದ ವರ್ಣನೆಗಳು, ಸೂಕ್ಷ್ಮವಾದ ಗುಣಕಥನಚಿತ್ರಗಳು, ವ್ಯಂಗ್ಯ, ವಿಡಂಬನ, ಹಾಸ್ಯ, ಪ್ರಹಸನ—ಇವೆಲ್ಲಕ್ಕಿಂತಲೂ ಮಿಗಿಲಾಗಿ ಪ್ಲೇಟೋವಿನ ಶೈಲಿಯ ಸರಳತೆ, ಶುದ್ಧತೆ ಮತ್ತು ಲಾವಣ್ಯ—ಇವೆಲ್ಲವೂ ಸೇರಿ ಪ್ಲೇಟೋವನ್ನು ನಾಟಕಶೈಲಿಯ ಸಾಹಿತ್ಯರಚನೆಯಲ್ಲಿ ಪ್ರಸಿದ್ಧಿಗೊಂಡಿರುವ ಪಂಡಿತೋತ್ತಮರಲ್ಲಿ ಅಗ್ರಸ್ಥಾನಕ್ಕೆ ಅರ್ಹನನ್ನಾಗಿ ಮಾಡಿವೆ.

ಈ ವಾದ ಸಂವಾದಗಳಲ್ಲಿ ಭಾಗ ತೆಗೆದುಕೊಳ್ಳುವವರೋ ಅಂದರೆ ಷೇಕ್ಸ್‌ಪಿಯರ್ ಮಹಾಕವಿಯ ನಾಟಕಗಳ ವ್ಯಕ್ತಿಗಳಂತೆ ಜೀವಚ್ಚಿತ್ರಗಳಾದ ಚಾರಿತ್ರಪುರುಷರು. ಸಾಧಾರಣವಾಗಿ ಪ್ರತಿ ಒಂದು ಸಂವಾದದಲ್ಲಿಯೂ ಸಾಕ್ರಟೀಸನೇ ಕೇಂದ್ರ ಪುರುಷನು. ಪ್ಲೇಟೊ ಒಂದುಸಲವಾದರೂ ತನ್ನ ಸ್ವಂತ ರೂಪದಲ್ಲಿ ತುಟಿ ಅಲ್ಲಾಡಿಸುವುದಿಲ್ಲ. ಆದಾಗ್ಯೂ ವಿಶೇಷವಾಗಿ ತನ್ನ ಪಾತ್ರಗಳಲ್ಲಿ ಕಾಣಿಸತಕ್ಕವನು ಅವನೇ. ಸಂದೇಹಿ, ಹಠವಾದಿ, ಯೋಗಿ, ಗಣಿತಜ್ಞ, ತಾತ್ವಿಕ, ಕಲಾಸಂಪನ್ನ, ಕವಿಪುಂಗವ—ಈ ರೀತಿಯಾಗಿ ತನ್ನ ಜೀವಮಾನದಲ್ಲಿ ಸುಮಾರು ೫೦ ವರುಷ ಕಾಲ ಬೇರೆ ಬೇರೆ ಪಾತ್ರಗಳನ್ನು ವಹಿಸಿ ಸಾಹಿತ್ಯಲೋಕದಲ್ಲಿ ವಿಹರಿಸಿದವನು ಪ್ಲೇಟೋವೇ.

ಈ ಸಂವಾದಗಳನ್ನು ಒಟ್ಟಿನಲ್ಲಿ ಮೂರು ಗುಂಪುಗಳಾಗಿ ವಿಂಗಡಿಸಬಹುದು—ಸೊಕ್ರಾಟಿಕ್ ಅಥವಾ ತಾರುಣ್ಯ ಕಾಲದ್ದು; ಮೆಗಾರಿಕ್ ಅಥವಾ ಮಧ್ಯಕಾಲದ್ದು; ಪೈಥಗೋರಿಯನ್ ಅಥವಾ ಕೊನೆಯ ಕಾಲದ್ದು.

**(೧) ಸೊಕ್ರಾಟಿಕ್ ಸಂವಾದಗಳು.**—ಇವು ಪ್ಲೇಟೋವಿನ ತಾರುಣ್ಯದಲ್ಲಿ ಬರೆಯಲ್ಪಟ್ಟವು. ಇವುಗಳಲ್ಲಿ ಸಾಕ್ರಟೀಸನು ಸೋಫಿಸ್ಟರ ಬಂಡವಾಳವಿಲ್ಲದ ಬಡಾಯಿಯನ್ನೂ, ತಿರುಳಿಲ್ಲದ ತರ್ಕವನ್ನೂ, ಅಸಂಬದ್ಧ ಪ್ರಲಾಪವನ್ನೂ ಖಂಡಿಸುತ್ತಾನೆ. ಇವುಗಳಲ್ಲಿ "ಚಾರ್ಮಿಡೀಸ್" ಎಂಬುದು ಮಿತವ್ಯವಹಾರವನ್ನು ಕುರಿತು ಚರ್ಚಿಸುತ್ತದೆ; ಲೈಸಿಸ್ ಎಂಬುದು ಸ್ನೇಹಭಾವವನ್ನೂ; "ಲ್ಯಾಚಿಸ್" ಎಂಬುದು ಸ್ಥೈರ್ಯವನ್ನೂ; "ಹಿಪ್ಪಿಯಸ್ ಮೈನರ್" ಎಂಬುದು ಇಚ್ಛಾಪೂರ್ವಕ

ವಾದ ಕೆಡಕುತನವನ್ನೂ; "ಮೊದಲನೆಯ ಆಲ್ಕಿಬಿಯಾಡಿಸ್" ಎಂಬುದು ರಾಜನೀತಿಪ್ರೌಢಿಮೆಯನ್ನೂ; "ಪ್ರೊಟಾಗೊರಾಸ್" ಎಂಬುದು ಸೋಫಿಸ್ಟರ ತರ್ಕಮಾರ್ಗ ಮತ್ತು ಸಂಸ್ಕಾರ ಬಲಗಳೊಂದಿಗೆ ಸಾಕ್ರಟೀಸನು ಸಾರುತ್ತಿದ್ದ ಸದ್ಗುಣವೆಂದರೇನು ಎಂಬುದನ್ನೂ; "ಗಾರ್ಜಿಯಾಸ್" ಎಂಬುದು ಸೋಫಿಸ್ಟರ ಮತಪ್ರಕಾರವಾಗಿ ಸದ್ಗುಣವೂ ಭೋಗವೂ ಒಂದೇ ಎಂಬ ಕುತರ್ಕದ ಜೊತೆಗೆ ನಿಜವಾದ ಶ್ರೇಯದ ಸ್ವರೂಪ, ಕೇವಲ ಔಪಯೋಗಿಕ ಮತ್ತು ಭೋಗಾರ್ಹವಾದ ವಸ್ತುಗಳಿಗಿಂತ ಅದರ ಉತ್ಕೃಷ್ಟತೆ—ಈ ಅಂಶಗಳನ್ನೂ ಕುರಿತು ಚರ್ಚಿಸುತ್ತವೆ. ಅಲ್ಲದೆ ನಾವು ಹಿಂದೆ ಕಂಡಂತೆ ಸಾಮಾನ್ಯವಾದ ಈ ಸಂವಾದಗಳಲ್ಲಿಯೇ ಮೊದಲು ಅಂಕುರಿಸುತ್ತದೆ. "ಫೀಡೊ" ಎಂಬ ಸಂವಾದದಲ್ಲಿ ಸಾಕ್ರಟೀಸನು ಆತ್ಮ ನಿತ್ಯವೆಂಬುದನ್ನು ಸಾಮಾನ್ಯ ಸಿದ್ಧಾಂತದ ಆಧಾರದಿಂದ ಸಮರ್ಥಿಸುತ್ತಾನೆ. "ಸಿಂಪೋಸಿಯಂ"ನಲ್ಲಿ ನಾವು ಹಿಂದೆಯೇ ಕಂಡಂತೆ ಪ್ರೇಮದ ಆಂತರಿಕಸ್ವರೂಪ, ಮತ್ತು ಮಾನವನ ಜೀವನದಲ್ಲಿ ಅದರ ಉನ್ನತಸ್ಥಾನ— ಇವುಗಳನ್ನು ಡಯೊಟೀಮ ಎಂಬ ಯೋಗಿನಿ ಸಾಕ್ರಟೀಸನಿಗೆ ಅರುಹುತ್ತಾಳೆ.

**(೨) ಮೆಗಾರಿಕ್ ಸಂವಾದಗಳು.—** ಇವುಗಳು ರೂಪದಲ್ಲಿ ಕಾವ್ಯದಂತೆಯೂ ಭಾಷಾ ಪ್ರಯೋಗದಲ್ಲಿ ಅಸ್ಪಷ್ಟವಾಗಿಯೂ ಕ್ಲಿಷ್ಟತರವಾಗಿಯೂ ಇವೆ; ಸಾಮಾನ್ಯಗಳ ಸ್ವರೂಪ ಮತ್ತು ರಚನೆ, ಜ್ಞಾನದ ಮೂಲಾಧಾರಗಳು—ಇವೇ ಮುಖ್ಯವಾದ ವಿಷಯಗಳು. "ದಿ ಥಿಯಾಟಿಟೀಸ್" ಎಂಬುದೇ ಈ ಗುಂಪಿನಲ್ಲಿ ಮೊದಲನೆಯದು. ಸಾಮಾನ್ಯಗಳು ಸ್ವತಂತ್ರ ಅಸ್ತಿತ್ವವನ್ನು ಹೊಂದಿ ಇಂದ್ರಿಯಾವಲೋಕನವನ್ನು ಅವಲಂಬಿಸಿಲ್ಲವೆಂದು ಸೂಚಿಸುತ್ತದೆ. ಸಾಮಾನ್ಯಗಳೇ ಸಮಸ್ತ ಚಿಂತನೆಯ ಮೂಲರೂಪಗಳು, ಈ ಸಾರ್ವತ್ರಿಕ ಭಾವಗಳಿಂದಲೇ ಸಮಸ್ತವಿಧವಾದ ಜ್ಞಾನವೂ ಕರ್ಮವೂ ಫಲಿಸುವುವು. "ದಿ ಸೋಫಿಸ್ಟ್" ಎಂಬುದು ಸಾಮಾನ್ಯಗಳ ಪರಸ್ಪರ ಸಂಬಂಧವನ್ನೂ "ಪಾರ್ಮಿನೈಡೀಸ್" ಎಂಬುದು ಸಾಮಾನ್ಯಗಳಿಗೂ ತೋರಿಕೆಯ ಪ್ರಪಂಚಕ್ಕೂ ಇರುವ ಸಂಬಂಧವನ್ನೂ ಚರ್ಚಿಸುತ್ತವೆ.

(೩) **ಪೈಥಗೋರಿಯರ್ಜ ಗುಂಪಿನ** ಸಂವಾದಗಳಲ್ಲಿ ಪ್ಲೇಟೊ ಸಾಮಾನ್ಯವಾದವನ್ನು ಮನಶ್ಶಾಸ್ತ್ರ, ನೀತಿಶಾಸ್ತ್ರ,ಪದಾರ್ಥವಿಜ್ಞಾನ— ಈ ಮೊದಲಾದ ಶಾಸ್ತ್ರಗಳಿಗೆ ಅನ್ವಯಿಸಿ ಉದಹರಿಸುತ್ತಾನೆ. ಈ ಸಂವಾದ ಗಳನ್ನು ಬರೆಯುವುದಕ್ಕೆ ಮುಂಚೆ ಪ್ಲೇಟೊ ನಾನಾ ದೇಶಗಳನ್ನು ಸುತ್ತಿ, ನಾನಾ ವಿಧವಾದ ಜ್ಞಾನವನ್ನು ಪಡೆದು ಗ್ರೀಸಿಗೆ ಹಿಂತಿರು ಗಿದ್ದನು. ಪೈಥಗೋರಿಯರ್ಜ ತತ್ವಶಾಸ್ತ್ರದ ಸಂಸ್ಕಾರ ಬಲವೇ ಇವುಗಳಲ್ಲಿ ಕಂಡುಬರುವ ನೂತನ ಚೈತನ್ಯ. ಈ ಕಾರಣದಿಂದ ಪ್ಲೇಟೋವಿನ ಈ ಕಾಲದ ಬರವಣಿಗೆಯಲ್ಲಿ ಒಂದು ವಿಧವಾದ ಗೂಢಾರ್ಥ — ಪುರಾಣಪ್ರಸಂಗಗಳಲ್ಲಡಗಿರುವ ಒಂದು ತೆರನಾದ ರಹಸ್ಯ ವಾಣಿ —ಎಲ್ಲೆಲ್ಲಿಯೂ ಅಡಗಿರುತ್ತದೆ. ಇವುಗಳ ಪಲ್ಲವಿ: ಸಾಮಾನ್ಯಗಳು ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವ ವಸ್ತುಮೂಲಗಳಾಗಿ ಯಥಾರ್ಥ ಜ್ಞಾನದ ಆಧಾರಗಳಾಗಿರುವುವಲ್ಲದೆ ಭವಪ್ರಪಂಚದ ವ್ಯಾಪಾರಗಳ 'ನಮೂನೆ'ಗಳಾಗಿಯೂ ಇರುವುವು; ಈ ವ್ಯಾಪಾರಗಳಾದರೋ ಈ ಮಾದರಿ ರೂಪಗಳ "ನಕಲು" ಅಥವಾ ಪ್ರತಿಗಳಷ್ಟೇ.

"ಫೇಡ್ರಸ್" ಮತ್ತು "ಬ್ಯಾಂಕ್ವೆಟ್" ಎಂಬವು ಸತ್ಯಾರ್ಥ ಪ್ರೇಮ —ವಸ್ತುಸ್ವರೂಪವನ್ನು ತಿಳಿಯಬೇಕೆಂಬ ಅಗಾಧವಾದ ಆಕಾಂಕ್ಷೆ— "ಸಾಮಾನ್ಯ ಭಕ್ತಿ"— ಇದ್ದಲ್ಲದೆ ಜ್ಞಾನಯಾತ್ರೆಯಲ್ಲಿ ಶಾಸ್ತ್ರೀಯ ಮಾರ್ಗ ದೊರಕುವುದಿಲ್ಲವೆಂದೂ, ನಮ್ಮ ವಿಚಾರಪ್ರಯತ್ನಗಳಲ್ಲಿ ದುರಾಗ್ರಹವೂ, ದುರ್ನಿರ್ಣಯಗಳೂ, ಹಠಮಾರಿತನವೂ ತೊಲಗು ವುದಿಲ್ಲವೆಂದೂ ಘೋಷಿಸುತ್ತವೆ. "ಫೈಲೀಬಸ್" ಎಂಬುದರಲ್ಲಿ ಪ್ಲೇಟೊ "ಶ್ರೇಯ" ಮತ್ತು "ಪ್ರೇಯ" ಎಂಬ ಭಾವಗಳನ್ನು ತನ್ನ ದರ್ಶನದ ಉದಾತ್ತತತ್ವಗಳ ಮೂಲಕ ವಿಚಾರಮಾಡುತ್ತಾನೆ. "ಟಿಮೇಯಸ್" ಎಂಬುದು (ಇದನ್ನು ಕುರಿತು ಮುಂದೆ ಪ್ರಸ್ತಾಪಿಸು ವೆವು) ಪ್ರಕೃತಿಯ ಸ್ವರೂಪವನ್ನೂ, ಭೌತ ಪ್ರಪಂಚದ ಉತ್ಪತ್ತಿ ಮೊದಲಾದ ವಿಷಯಗಳನ್ನೂ ತಿಳಿಸುತ್ತದೆ. ಇನ್ನು "ಆದರ್ಶ ರಾಜ್ಯ" (The Republic) ಎಂಬ ಗ್ರಂಥವಾದರೋ ಪ್ಲೇಟೋವಿನ ಬರವಣಿಗೆ ಗಳಲ್ಲೆಲ್ಲಾ ಅತ್ಯದ್ಭುತವಾದ ಚಿತ್ರವನ್ನು ವಾಚಕರ ಮನಸ್ಸಿನಲ್ಲಿ

ಕಲ್ಪಿಸತಕ್ಕ ಶಕ್ತಿಯನ್ನು ಹೊಂದಿ ನೀತಿಶಾಸ್ತ್ರದ ಮತ್ತು ರಾಜ್ಯಸಿದ್ಧಾಂತದ ನಿಜವಾದ ತಳಹದಿಯನ್ನು ಹಾಕಿ ಕಟ್ಟಡವನ್ನೂ ಕಟ್ಟಲು ಪ್ರಯತ್ನ ಪಡುತ್ತದೆ. ಇದನ್ನು ಪ್ರಾಯಶಃ ಪ್ಲೇಟೊ ತನ್ನ ತಾರುಣ್ಯ ದಲ್ಲಿಯೇ ಪ್ರಾರಂಭಿಸಿ ಕ್ರಮಕ್ರಮವಾಗಿ ಕೊಂಚಕೊಂಚವಾಗಿ ಬರೆಯುತ್ತಾ, ತನ್ನ ಕೊನೆಗಾಲದಲ್ಲಿ ಪೂರೈಸಿದನೆಂದು ಕಾಣುತ್ತದೆ. ಈ ಕಾರಣದಿಂದ ತನ್ನ ಇತರ ಸಂವಾದಗಳನ್ನೆಲ್ಲಾ ಬರೆಯುವುದರ ಮೂಲಕ ಹೊಂದಿದ ಜ್ಞಾನರಸವನ್ನು ಶೋಧಿಸಿ ಕುದಿಸಿ, ಅದು ಬಟ್ಟೀ ಇಳಿದು ಶ್ರೇಷ್ಠ ಪಾಕವಾದಾಗ ಪ್ಲೇಟೊ ಈ ಸಂವಾದವನ್ನು ಪೂರ್ಣಗೊಳಿಸಿದ ನೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೂ ಇದರಲ್ಲಿ ಕಾಣುವ ತತ್ವವನ್ನು ಪುಟ ಹಾಕಿದ ಚಿನ್ನವೆಂದು ಹೇಳಲಾಗುವುದಿಲ್ಲ; ಏಕೆಂದರೆ, "ರಾಜನೀತಿ ಕುಶಲ" (the Statesman) ಮತ್ತು "ಶಾಸನ ಗಳು" (the Laws) ಎಂಬ ಕೊನೆಯ ಸಂವಾದಗಳಲ್ಲಿ "ಆದರ್ಶ ರಾಜ್ಯ" ದಲ್ಲಿನ ಅನೇಕ ಸಿದ್ಧಾಂತಗಳನ್ನು ಪ್ಲೇಟೊ ಬಿಟ್ಟು ಕೊಡುವುದಲ್ಲದೆ ಸಾಮಾಜಿಕ ಮತ್ತು ರಾಜಕೀಯ ವ್ಯವಹಾರಗಳಲ್ಲಿ ಹಿಂದಿನ ಅಭಿಪ್ರಾಯಗಳನ್ನು ವಿಶೇಷಿಸಿ ನೂತನವಾದ ಸಲಹೆಗಳನ್ನು ಕೊಡುತ್ತಾನೆ.

ಒಟ್ಟನಲ್ಲಿ "ಸಂವಾದಗಳು" ಅಮೋಘವಾದ ಗ್ರಂಥ. ಪ್ರಪಂಚ ದಲ್ಲಿರುವ ತಾತ್ವಿಕ ಮತ್ತು ಮತಸಂಬಂಧವಾದ ಪುಸ್ತಕ ಭಂಡಾರಗಳೆಲ್ಲ ನಾಶವಾದರೂ ಪ್ಲೇಟೋವಿನ "ಸಂವಾದಗಳು", ಕ್ರೈಸ್ತರ "ಹೊಸ ಒಡಂಬಡಿಕೆ", ಹಿಂದೂಗಳ "ಉಪನಿಷತ್ತುಗಳು" ಮತ್ತು "ಗೀತೆ", ಇವು ನಾಲ್ಕು ಮಾತ್ರ ಉಳಿದರೆ ಮಾನವನ ಅಧ್ಯಾತ್ಮಜೀವನಕ್ಕೆ ಭಯವಿಲ್ಲ ವೆಂದು ಹೇಳಬಹುದು.

## ನ್ಯಾಯಶಾಸ್ತ್ರ (Dialectics)

ಯಾವ ಪ್ರಸಂಗದಲ್ಲಿಯೇ ಆಗಲಿ ಸತ್ಯಜ್ಞಾನವನ್ನು ಪಡೆಯ ಬೇಕಾದರೆ ಅದಕ್ಕೆ ಬೀಜಪ್ರಾಯವಾದ ನ್ಯಾಯಶಾಸ್ತ್ರದ ತತ್ವವನ್ನು ಮೊದಲು ಆಮೂಲಾಗ್ರವಾಗಿ ಗ್ರಹಿಸಿರಬೇಕೆಂದು ಪ್ಲೇಟೊ ಚೆನ್ನಾಗಿ ಅರಿತಿದ್ದನು. ಕಾರಣವೇನೆಂದರೆ, ನಮ್ಮ ಜ್ಞಾನ ಯಾವ ವಿಧದಲ್ಲಿ ಉತ್ಪತ್ತಿ

ಯಾಗುತ್ತದೆ, ಎಷ್ಟರಮಟ್ಟಿಗೆ ನಾವು ಸತ್ಯಜ್ಞಾನವನ್ನು ಪಡೆಯಲು ಸಾಧ್ಯ, ಈ ತೆರನಾದ ಪ್ರಶ್ನೆಗಳಿಗೆ ನಾವೀಯುವ ಉತ್ತರವೇ ನಮ್ಮ ಮುಂದಿನ ತತ್ವಪರಿಶೋಧನಾಕ್ರಮವನ್ನು ಬಹುಮಟ್ಟಿಗೆ ನಿರ್ಧರಿಸುವುದು. ನಮ್ಮ ಜ್ಞಾನವೆಲ್ಲಾ ಇಂದ್ರಿಯಗ್ರಹಣಜನ್ಯವಾದುದೂ, ಜನರ ಅಭಿಮತಸಿದ್ಧವಾದುದೂ ಆದರೆ, ನಮ್ಮ ಜ್ಞಾನ ಯಥಾರ್ಥ ಜ್ಞಾನವೆಂದು ಹೇಳಲಾಗದೆನ್ನುವ ಸೋಫಿಸ್ಟರ ವಾದ ನಿಜವಾಗಿರಬೇಕು. ಏಕೆಂದರೆ ಇಂದ್ರಿಯೋತ್ಪನ್ನವಾದ ಜ್ಞಾನ ಸತ್ಯಜ್ಞಾನವೆಂದು ಹೇಳುವುದು ಹೇಗೆ ? ಒಬ್ಬ ಮನುಷ್ಯನು ನನ್ನ ಕಣ್ಣಿಗೆ ರಾಕ್ಷಸಾಕಾರದಲ್ಲಿ ಕಾಣಿಸಿದರೆ, ರಾಕ್ಷಸಾಕಾರವಾಗಿ ತೋರುವಿಕೆ ಸತ್ಯವಾದರೂ, ಆ ಮನುಷ್ಯನು ರಾಕ್ಷಸನೆಂದು ಸತ್ಯವಾಗಿ ಹೇಳಲು ಸಾಧ್ಯವೆ? ಹಾಗೂ ಆ ವ್ಯಕ್ತಿ ಮನುಷ್ಯನೇ ಸರಿಯೆಂದು ಹೇಳುವುದುತಾನೆ ಹೇಗೆ ? ನಮ್ಮ ಚಕ್ಷುರಿಂದ್ರಿಯಕ್ಕೇನೋ ಮನುಷ್ಯಾಕಾರ ಕಂಡುಬರುತ್ತದೆ, ಇದನ್ನು ಇಲ್ಲವೆನ್ನುವುದಕ್ಕಾಗುವುದಿಲ್ಲ. ಆದರೆ ಈ ಇಂದ್ರಿಯಗೋಚರಾಸ್ಪದವಾದ ಆ ವ್ಯಕ್ತಿ ಮನುಷ್ಯನೋ ಮೃಗವೋ ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲ. ಈ ಕಾರಣದಿಂದ ಶುದ್ಧ ಇಂದ್ರಿಯಜನ್ಯವಾದ ಜ್ಞಾನವೆಲ್ಲಾ—ಇಂಥ ಜ್ಞಾನಕ್ಕೆ ಬೇರೆ ಯಾವ ವಿಧವಾದ ಆಧಾರವಾಗಲಿ ಸಹಾಯವಾಗಲಿ ಇಲ್ಲದಿದ್ದರೆ—ತೋರಿಕೆಯೆಂದು ಹೇಳಬಹುದಲ್ಲದೆ ಯಥಾರ್ಥಜ್ಞಾನವೆಂದು ಹೇಳಲಾಗದು. ಜನರ ಅಭಿಮತಸಿದ್ಧವಾದ ಜ್ಞಾನವೂ ಹೀಗೆಯೇ : ಜನರ ಅಭಿಪ್ರಾಯಗಳು ವಿಧವಿಧವಾಗಿವೆ, ಯಾವುದು ನಿಜವೆಂದು ಹೇಳಲು ತೀರದು; ಒಂದು ಪಕ್ಷ ಈ ಅಭಿಪ್ರಾಯಗಳೆಲ್ಲಾ ಏಕೀಭವಿಸಿದ್ದರೂ ಅದು ಸತ್ಯವಾದುದೆಂದು ಯಾವ ಆಧಾರದಿಂದ ಹೇಳಬೇಕು ? ಸತ್ಯವೆಂದು ಹೇಳಲು ಕಾರಣಗಳೇನು ? ಸತ್ಯಜ್ಞಾನವಾಗಬೇಕಾದರೆ ಅದಕ್ಕೆ ಸರಿಯಾದ ಕಾರಣಗಳಿರಬೇಕು : ಇಂಥ ಕಾರಣಗಳಿಂದಲೇ ಅದು ಸತ್ಯವಾಗಬೇಕಲ್ಲದೆ ಜನರ ಹೇಳಿಕೆಯಿಂದಾಗಲಿ, ಇಂದ್ರಿಯಗಳ ಗೋಚರದಿಂದಾಗಲಿ ಎಂದಿಗೂ ಸತ್ಯವೆನಿಸದು. ಇಂದ್ರಿಯಗಳ ತೋರಿಕೆಯೇ, ಜನರ ಹೇಳಿಕೆಯೇ, ಕಾರಣವಾಗುವುದಾದರೆ, ಅಂಥ ಜ್ಞಾನ ಸತ್ಯವೆಂದು

ಹೇಳಲ್ಪಟ್ಟರೂ, ಅದು ಮಿಥ್ಯವಾಗಿರಬಹುದೆಂಬ ಸಂಶಯವೇನೋ ಎಂದಿಗೂ ನಿವೃತ್ತಿಯಾಗುವುದಿಲ್ಲ. ಸಾಮಾನ್ಯವಾಗಿ ಜನರು ಆಲೋಚಿಸುವಾಗ ತಾವು ಆಲೋಚಿಸುತ್ತಿದ್ದೇವೆಂಬ ಪರಿಜ್ಞಾನ ಬಹುತರ ಇರುವುದಿಲ್ಲ. ನಾವೇಕೆ ಹೀಗೆ ಎಣಿಸುತ್ತೇವೆ, ನಮ್ಮ ಎಣಿಕೆ ನಿಜವಾಗಿರಬಹುದೇ, ಸುಳ್ಳಾಗಿರಬಹುದೇ, ಎಂಬ ವಿವೇಚನಾಜ್ಞಾನವಿಲ್ಲದೆಯೇ ಯೋಚಿಸುತ್ತೇವೆ. ನಾವು ಮಾಡುವ ಕಾರ್ಯಗಳೂ ಹೀಗೆಯೇ: ನಾವು ಏಕೆ ಹೀಗೆ ಆಚರಿಸುತ್ತೇವೆ, ನಮ್ಮ ಆಚರಣೆ ಬುದ್ಧಿಬದ್ಧವಾದುದೇ, ನ್ಯಾಯವಾದುದೇ, ಎಂಬ ವಿಮರ್ಶಾವಲೋಕನವಿಲ್ಲದೆಯೇ, ಅಭ್ಯಾಸದಿಂದಲೋ, ಜನಪದ್ಧತಿ ಕಟ್ಟಳೆಗಳನ್ನನುಸರಿಸಿಯೋ, ಕೆಲಸ ಮಾಡುತ್ತೇವೆ. ಇರುವೆಗಳೂ ಜೇನುನೊಣಗಳೂ ಕ್ರಿಮಿಕೀಟಾದಿಗಳೂ ಸಹ ಇಂಗಿತಜ್ಞಾನದಿಂದ, ಹುಟ್ಟುಬುದ್ಧಿಯಿಂದ, ಕೆಲಸ ಮಾಡುತ್ತವೆ—ನಮಗೂ ಅವುಗಳಿಗೂ ವ್ಯತ್ಯಾಸವೇನು ?

ಇಂಥ ಇಂಗಿತಜ್ಞಾನವನ್ನೂ, ಇಂದ್ರಿಯಾವಲೋಕನವನ್ನೂ, ಜನರ ಅಭಿಮತವನ್ನೂ ಯಥಾರ್ಥವೆಂದೆಣಿಸದೆ ಸತ್ಯಜ್ಞಾನವನ್ನು ನಾವು ಪಡೆಯಬೇಕಾದರೆ, ಪ್ರಥಮದಲ್ಲಿ ಸತ್ಯವನ್ನು ಪಡೆಯಬೇಕೆಂಬ ಅಪಾರವಾದ ಆಕಾಂಕ್ಷೆ ಇರಬೇಕು. ಇಂಥ ಆಕಾಂಕ್ಷೆಯೇ ಸಮಸ್ತ ವಿಧವಾದ ತತ್ವಪರಿಶೋಧನೆಗೆ ಮೂಲ. ಸೌಂದರ್ಯವನ್ನು—ಸುಂದರತರವಾದ ವಸ್ತುಗಳ ಸೊಬಗನ್ನು—ಈಕ್ಷಿಸಿ ಧ್ಯಾನಿಸಿದಲ್ಲದೆ ಈ ಆಕಾಂಕ್ಷೆ ಹುಟ್ಟಲಾರದು : ಸೌಂದರ್ಯಾವಲೋಕನದಿಂದ ಸತ್ಯಾನ್ವೇಷಣ. ಇಂದ್ರಿಯಾವಲೋಕನವನ್ನು ಒತ್ತಿಟ್ಟು ವಸ್ತುಸ್ವರೂಪಭಾವನೆಯನ್ನು ಪಡೆಯುವುದೇ ಈ ಸತ್ಯಶೋಧನೆಯ ಮೊದಲನೆಯ ಮೆಟ್ಟಲು. ಕೇವಲ ಇಂದ್ರಿಯಾವಲೋಕನದಿಂದ ನಮಗೆ ವಸ್ತುಸ್ವರೂಪಜ್ಞಾನ ಹುಟ್ಟಲಾರದು. ಇಂತಹ ಜ್ಞಾನ ನಮಗುಂಟಾಗಬೇಕಾದರೆ ಇಂದ್ರಿಯ ಗೋಚರಾಸ್ಪದವಾದ ಒಂದೇ ಜಾತಿಯ ಅಸಂಖ್ಯಾತ ವಸ್ತುಗಳಲ್ಲೆಲ್ಲಾ ಅಡಗಿರುವ ಸಾಮಾನ್ಯ ಗುಣ ಯಾವುದು, ಎಂಬುದನ್ನು ಪರಿಶೀಲಿಸಬೇಕು. ಒಂದೇ ಜಾತಿಯ ವಸ್ತುಗಳಲ್ಲಿರಬಹುದಾದ ಪರಸ್ಪರ ವೈವಿಧ್ಯ, ವ್ಯತ್ಯಾಸಗಳನ್ನು ಳಿದು, ಸರ್ವಸಾಮಾನ್ಯವಾಗಿ ಕಂಡುಬರುವ ಗುಣವಿಶೇಷವನ್ನರಿತು

ಅದರ ಭಾವನೆಯೊಂದನ್ನು ಚಿತ್ತಪ್ರಪಂಚದಲ್ಲಿಟ್ಟುಕೊಂಡರೆ ವಸ್ತು ಸ್ವರೂಪಜ್ಞಾನ ಯಾವ ರೀತಿಯಲ್ಲಿರುವುದೆಂಬುದನ್ನು ಊಹಿಸಿಕೊಳ್ಳ ಬಹುದು. ಪ್ರತ್ಯೇಕವೆಂದರೆ ಒಂದೇ ಜಾತಿಯ, ಹಾಗೂ ಬೇರೆ ಬೇರೆ ಯಾದ, ಗುಣಯುಕ್ತವಾದ, ಸ್ಥೂಲವಾದ, ಪ್ರತಿ ಒಂದು ವ್ಯಕ್ತ ವಸ್ತು. ಸಾಮಾನ್ಯವೆಂದರೆ ಈ ಪ್ರತಿಯೊಂದು ವ್ಯಕ್ತವಸ್ತುವಿ ನಲ್ಲಿಯೂ ತೋರಿಬರುವ, ಅವುಗಳ ಸಾರಭೂತವಾದ, ಆಧಾರರೂಪ ವಾದ, ಒಂದೇ ವಿಧವಾದ, ಸೂಕ್ಷ್ಮವಾದ, ಸಾಮಾನ್ಯ ಗುಣವಿಶೇಷ ಮತ್ತು ಅದರ ಭಾವ. ನ್ಯಾಯಶಾಸ್ತ್ರದ ರೀತಿಯಾಗಿ ಸತ್ಯಜ್ಞಾನ ವನ್ನು ಪಡೆಯಲು ಮಾರ್ಗಗಳೆರಡುಂಟು. ಪ್ರಥಮದಲ್ಲಿ ಪ್ರತ್ಯೇಕಗಳ ನ್ನೆಲ್ಲಾ—ವಿಧವಿಧವಾಗಿ ಹರಡಿರುವ ವ್ಯಕ್ತವಸ್ತುಗಳನ್ನೆಲ್ಲಾ—ಸಾಮಾ ನ್ಯಭಾವವೊಂದರಲ್ಲಡಗಿಸುವುದು ; ತದನಂತರದಲ್ಲಿ ಆ ಸಾಮಾನ್ಯಭಾವ ವನ್ನು (ವರ್ಗವನ್ನು ) ಮತ್ತೂ ಸಣ್ಣದಾಗಿರುವ "ಜಾತಿ" ಪರವಾಗಿ ವಿಭಜಿಸುವುದು. ಸಾಮಾನ್ಯಗಳನ್ನು ಅಧಿಕ ಸಾಮಾನ್ಯವಾಗಿರುವ ವರ್ಗಗಳಲ್ಲಿ ಕೂಡಿಸುವುದು; ವರ್ಗಗಳನ್ನು ಜಾತಿಪರವಾಗಿ ವಿಂಗಡಿಸು ವುದು : ಈ ವಿಧವಾಗಿ ಭಾವದಿಂದ ಭಾವಕ್ಕೆ ಏರುವ ಮತ್ತು ಇಳಿಯುವ ; ಸಾಮಾನ್ಯಗಳನ್ನು ಪರಸ್ಪರ ಕೂಡಿಸುವ, ವಿಂಗಡಿಸುವ ; ಸಂಯೋಗಿ ಸುವ, (synthesis) ವಿಭಾಗಿಸುವ (analysis); ಸಾಮಾನ್ಯವೆನಿಸುವ, ವ್ಯಕ್ತೀಕರಿಸುವ, ಕ್ರಮಕ್ಕೆ—ಈ ಕ್ರಮವನ್ನು ಬೋಧಿಸುವ ವಿದ್ಯೆಗೆ— ತರ್ಕ ಅಥವಾ ನ್ಯಾಯಶಾಸ್ತ್ರವೆಂದು ಹೆಸರು. ತರ್ಕದಲ್ಲಿ ಪ್ರಮೇಯ ವೆಂದರೆ ಭಾವಗಳ ಪರಸ್ಪರಸಂಬಂಧಗಳನ್ನು ವ್ಯಕ್ತಪಡಿಸುವ ವಾಕ್ಯ ; ಈ ಪ್ರಮೇಯಗಳನ್ನು ಮನನಕಾರ್ಯದಲ್ಲಿ ಪರಸ್ಪರ ಕೂಡಿಸಿ ಹೋಲಿಸು ವುದೇ ತರ್ಕ, ನ್ಯಾಯ ಅಥವಾ ಅವಯವಘಟಿತವಾಕ್ಯ (syllogism) ಎನ್ನಲ್ಪಡುವುದು. ವಸ್ತುಸ್ವರೂಪವನ್ನು ತಿಳಿಸುವ ಸಾಮಾನ್ಯಭಾವಗಳೇ ಸಮ್ಯಗ್‌ಜ್ಞಾನವನ್ನು ಕೊಡುವವಲ್ಲದೆ ಕೇವಲ ಇಂದ್ರಿಯದರ್ಶನವಾಗಲಿ, ತತ್ಸಂಬಂಧವಾದ ಚಿತ್ತಬಿಂಬಗಳಾಗಲಿ ಕೊಡಲಾರವು. ಉದಾಹರಣೆಗೆ— ಮೊದಲು ನ್ಯಾಯಶೀಲತೆ ಎಂಬ ಭಾವವೇನು,ಅದರ ಅರ್ಥವೇನು, ಎಂಬು ದನ್ನು ಗ್ರಹಿಸದೆಯೇ, ಒಬ್ಬಾನೊಬ್ಬ ಮನುಷ್ಯನನ್ನು ನಾವು ನ್ಯಾಯ

ಶೀಲನೆಂದು ಹೇಳಲಾಗುವುದೇ? ಹಾಗೆ ಆತನನ್ನು ನ್ಯಾಯಶೀಲನೆನ್ನ ಬೇಕಾದರೆ, ನ್ಯಾಯ—ನ್ಯಾಯಶೀಲತೆ—ಎಂಬುದರ ಭಾವವನ್ನು, ಸಾಮಾನ್ಯವನ್ನು, ವರ್ಗೀಯಜ್ಞಾನವನ್ನು, ಮೊಟ್ಟಮೊದಲು ನಿರ್ಧರಿಸಿ ಕೊಳ್ಳುವುದು ಅತ್ಯಂತಾವಶ್ಯಕ.

ಆದರೆ ಇಲ್ಲಿ ಒಂದು ವಿಶೇಷವುಂಟು. ಸಾಮಾನ್ಯವೆಂದರೆ ಪ್ರತ್ಯೇಕ ವಸ್ತುಗಳಲ್ಲಿ, ಇಲ್ಲವೆ ವಿಷಯಗಳಲ್ಲಿ, ಪರಸ್ಪರ ತೋರುವ ವ್ಯತ್ಯಾಸಗಳ ನ್ನುಳಿದು ಸರ್ವಸಾಧಾರಣವೆಂದು ಕಂಡುಬರುವ ಗುಣವಿಶೇಷದ ಭಾವ ವೆಂದು ಹೇಳಿರುವುದು ಸರಿಯೆ. ಪದದ ಅರ್ಥವನ್ನು ತಿಳಿಯಪಡಿಸಲು ಈ ರೀತಿಯಾಗಿ ವಿವರಿಸಿದೆವಲ್ಲದೆ ಪ್ಲೇಟೋವಿನ ನಿಜವಾದ ಅಭಿಪ್ರಾಯ ವಿದೆಂದಲ್ಲ. ಪ್ಲೇಟೋವಿನ ತತ್ವಶಾಸ್ತ್ರ ಪ್ರಕಾರವಾಗಿ ಸಾಮಾನ್ಯಗಳು ಅನುಭವದಲ್ಲಿ ದೊರಕುವ ವಸ್ತುವಿಶೇಷಗಳಲ್ಲ.[೧] "ನ್ಯಾಯ" (Justice) ಎಂಬ ಸಾಮಾನ್ಯ ನಮಗೆ ತಿಳಿದಿದೆಯಷ್ಟೆ: ಈ ಸಾಮಾನ್ಯವಾದರೋ ನ್ಯಾಯಮೂಲವಾದ ವ್ಯಕ್ತ ವಿಷಯಗಳಿಂದ—ಅನೇಕ ನ್ಯಾಯವಾದ ಕಾರ್ಯ ಅಥವಾ ವಿದ್ಯಮಾನಗಳಿಂದ—ನ್ಯಾಯಪ್ರತ್ಯೇಕಗಳಿಂದ—ನಮಗೆ ಗೋಚರವಾಗುವುದಿಲ್ಲ. ಈ ಪ್ರತ್ಯೇಕಗಳಾದ ನ್ಯಾಯಸಂಗತಿಗಳೆಲ್ಲಾ "ನ್ಯಾಯ" ವೆಂಬ ಸಾಮಾನ್ಯವನ್ನು ಉದಹರಿಸಿ—ಪ್ರಮಾಣಿಸಿ—ಅದರ ಅರ್ಥವನ್ನು ನಮ್ಮ ಚಿತ್ತಪ್ರಪಂಚಕ್ಕೆ ಸ್ಪಷ್ಟಪಡಿಸುತ್ತವೆ, ಅಷ್ಟೆ. ಆ ಪಕ್ಷ ದಲ್ಲಿ ಆ ಸಾಮಾನ್ಯ ಎಲ್ಲಿಂದ ಬಂದಿತೆಂದರೆ, ಅದು ನಮ್ಮ ಆತ್ಮ ನಲ್ಲಿಯೇ ಅಸ್ಪಷ್ಟವಾಗಿ, ಅವ್ಯಕ್ತವಾಗಿ, ಮುಸುಕುಮುಸುಕಾಗಿ, ಮೊದಲೇ ಇದ್ದಿತೆಂದು ಪ್ಲೇಟೋವಿನ ಉತ್ತರ. ಹೀಗೆ ಅವ್ಯಕ್ತವಾಗಿ ಅಡಗಿರುವ ಸಾಮಾನ್ಯವನ್ನು ಸ್ಪಷ್ಟಪಡಿಸಿದ ಮೇಲೆ ಇದರ ಸಹಾಯದಿಂದ ತತ್ಸಂಬಂಧವಾದ ಭಾವಗಳನ್ನು ಸಹ ವ್ಯಕ್ತಪಡಿಸಿ ಈ ಕ್ರಮದಿಂದ ಶುದ್ಧ ಸತ್ಯಜ್ಞಾನವನ್ನು ಹೊಂದಬಹುದು. ಆದರೆ ಸಾಮಾನ್ಯಗಳು ಮಾತ್ರ ಮಾನವನ ಚಿತ್ತಪ್ರಪಂಚದಲ್ಲಿ ಆಜನ್ಮತಃ — ಅಲ್ಲ, ಜನ್ಮಪೂರ್ವಿಕ ವಾಗಿಯೇ—ಅಂತರ್ಗತವಾಗಿರುತ್ತವೆ. ಅವು ಬುದ್ಧ್ಯಾರೂಢವಾದ, ನಿಶ್ಚಯಾರೂಢವಾದ, ಅನುಭವಪೂರ್ವಿಕವಾದ, ತತ್ವಗಳು. ಅವುಗಳನ್ನು

---

೧. ಹಿಂದಿನ ೧೪೨—೧೪೩ನೇ ಪುಟಗಳನ್ನು ನೋಡಿ.

ನಮ್ಮ ಜ್ಞಾನಚಕ್ಷುಸ್ಸಿಗೆ ಸ್ಪಷ್ಟಪಡಿಸಲು ಅನುಭವ ಬೇಕಾಗಬಹುದು, ಆದರೆ ಸ್ವರೂಪೇಣ ಅವು ಅನುಭವಕ್ಕೆ ಪೂರ್ವವಾದುವು, ಅವುಗಳಿಲ್ಲದಿದ್ದರೆ ಅನುಭವವನ್ನು ಅರ್ಥಮಾಡುವುದಕ್ಕೇ ಆಗುವುದಿಲ್ಲ. ವ್ಯತ್ಯಾಸ, ಸಮಾನತೆ, ಎಂಬ ಭಾವಗಳು ನಮಗೆ ಮೊದಲೇ ಗೊತ್ತಿರುವುದರಿಂದ ಎರಡು ವಸ್ತುಗಳ ವ್ಯತ್ಯಾಸವನ್ನು ಅಥವಾ ಸಮಾನತೆಯನ್ನು ಗ್ರಹಿಸಲು ಸಾಧ್ಯವಾಗುವುದೇ ವಿನಾ, ಈ ಭಾವಗಳೇ ಮನಸ್ಸಿನಲ್ಲಿ ಮೂಡದ ಮಡೆಯನ ಮುಂದೆ ವ್ಯತ್ಯಾಸವಾಗಿರುವ, ಇಲ್ಲವೆ ಸಮಾನವಾಗಿರುವ, ಎಷ್ಟು ವಸ್ತುಗಳನ್ನು ಪ್ರದರ್ಶಿಸಿದರೂ ಅದರಿಂದ ಅವನಿಗೇನೂ ಅರ್ಥವಾಗಲಾರದು. ಈ ಸಿದ್ಧಾಂತದ ಆಧಾರದಮೇಲೆಯೇ ವಿದ್ಯಾಭ್ಯಾಸವೆಂಬುದೆಲ್ಲಾ ಆತ್ಮನಲ್ಲಿ ಅಡಗಿರುವ ಜ್ಞಾನವನ್ನು ಅನುಭವದ ಮೂಲಕವೂ ಬೋಧನೆಯ ಮೂಲಕವೂ ಪ್ರಕಾಶಪಡಿಸುವ ಪ್ರಯತ್ನಮಾತ್ರವೇ ವಿನಾ ಆತ್ಮನಲ್ಲಿಲ್ಲದ ಹೊಸ ಅರಿವನ್ನು ತಿಳಯಪಡಿಸುವುದೆಂದಲ್ಲ—ಎಂದು ಪ್ಲೇಟೊ ತೋರಿಕೊಟ್ಟನು. ಸಾಕ್ರಟೀಸನ ಸ್ಮೃತಿವಾದವೇ ಇದೆಂದು ಬೇರೆ ಹೇಳಬೇಕಾಗಿಲ್ಲ.[೧] ಅನುಭವಪೂರ್ವಿಕವಾದ ಈ ಸಾಮಾನ್ಯಗಳೇ ಸಮಸ್ತ ವಿಧವಾದ ಜ್ಞಾನಕ್ಕೂ ಮೂಲಾಧಾರಗಳು. ನಿಸ್ಸಂದೇಹವಾಗಿಯೂ ಈಗ ನಾವು ಹೇಳಬಹುದು—ಎಲ್ಲಾ ವಿಷಯಗಳಲ್ಲಿಯೂ ಮಾನವನೇ ತನ್ನ ಸೂತ್ರ, ಮಾನವನೇ ತನ್ನ ಅಳತೆಯ ಕೋಲು.

ಸಾಮಾನ್ಯಗಳು ಅನುಭವಪೂರ್ವಿಕವಾಗಿ ಆತ್ಮನಲ್ಲಿ ಸಹಜವಾಗಿರುವ ತತ್ವಗಳು ಎಂಬ ವಿಚಾರವಾಗಿ ಷೆಲ್ಲಿ ಎಂಬ ಪ್ರಸಿದ್ಧ ಆಂಗ್ಲೇಯ ಕವಿಯ ಕತೆಯೊಂದಿದೆ. ಈತನು ಯುವಕನಾಗಿದ್ದಾಗ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ಲೇಟೋವಿನ ದರ್ಶನವನ್ನು ಬಹು ಕುತೂಹಲದಿಂದಲೂ ಮಮತೆಯಿಂದಲೂ ಪಾಠ ಮಾಡುತ್ತಿದ್ದನು. ಒಂದು ದಿನ ಥೇಮ್ಸ್ ನದಿಯ ಸೇತುವೆಯ ಮೇಲೆ ಹೋಗುತ್ತಿದ್ದಾಗ ಕೂಸನ್ನೆತ್ತಿಕೊಂಡಿದ್ದ

೧. ಮೆನೊ ಎಂಬ ಸಂವಾದದಲ್ಲಿ ಈ ವಿಧದ ಬೋಧನಾಕ್ರಮ ಉದಹರಿಸಲ್ಪಟ್ಟಿದೆ. ನಿರಕ್ಷರಸ್ಥನಾದ ಸಣ್ಣ ವಯಸ್ಸಿನ ಒಬ್ಬ ಗುಲಾಮ ಹುಡುಗನಿಗೆ ಚತುರವಾದ ರೀತಿಯಲ್ಲಿ ಕೆಲವು ಪ್ರಶ್ನೆಗಳನ್ನು ಹಾಕುವುದರ ಮೂಲಕ ರೇಖಾಗಣಿತದ (Geometry) ಮೂಲತತ್ವಗಳನ್ನು ಏನೂ ಅರಿಯದ ಆ ಬಾಲಕನ ಬಾಯಿಂದ ಹೊರಡಿಸಬಹುದೆಂಬುದನ್ನು ದೃಷ್ಟಾಂತಪಡಿಸಿದೆ.

ಭಿಕ್ಷುಕ ಹೆಂಗುಸೊಬ್ಬಳನ್ನು ಎದುರುಗೊಂಡನಂತೆ. ಪ್ಲೇಟೋವಿನ ಸ್ಮೃತಿವಾದವನ್ನು ಪರೀಕ್ಷೆ ಮಾಡಬೇಕೆಂಬ ಆತುರದಿಂದ ಓಡಿಹೋಗಿ ಕೂಸನ್ನು ಎರಡು ಕೈಗಳಿಂದಲೂ ಹಿಡಿದು ಅಲ್ಲಾಡಿಸಿ ಅದರ ಸಹಜ ಜ್ಞಾನವನ್ನು ಪ್ರಕಾಶಪಡಿಸುವಂತೆ ಕೇಳಿದನು. ಅದಕ್ಕೆ ತಾಯಿ "ಸ್ವಾಮಿ, ಕೂಸಿಗಿನ್ನೂ ಮೂರೇತಿಂಗಳು, ಮಾತಾಡಲಾರದು," ಎಂದು ಮೊರೆಯಿಟ್ಟಳಂತೆ. "ಆದರೇನು, ಮತ್ತೂ ಒಳ್ಳೆಯದಾಯಿತು, ತನ್ನ ಜ್ಞಾನವನ್ನು ಮರೆತುಹೋಗುವ ಸಂಭವ ಇನ್ನೂ ಬಂದಿಲ್ಲ" ಎಂದು ಷೆಲ್ಲಿ ಉತ್ತರವಿತ್ತನು. ಏನಾದರೇನು, ಕೂಸು ಸುಮ್ಮನೆ ಅರಚಿಕೊಂಡಿತಷ್ಟೆ. ಆದರೂ ಆತನು ಅನಂತರ ಬರೆದ ಕಾವ್ಯಗಳಿಂದ ಷೆಲ್ಲಿ ತಾನು ಪ್ಲೇಟೊದರ್ಶನದಲ್ಲಿಟ್ಟಿದ್ದ ವಿಶ್ವಾಸವನ್ನು ಕಳೆದುಕೊಳ್ಳಲಿಲ್ಲವೆಂದು ಧಾರಾಳವಾಗಿ ಹೇಳಬಹುದು.

ಆದುದರಿಂದ ಸಾಮಾನ್ಯಭಾವಗಳನ್ನು ನಾವು ಅನುಭವದಿಂದ ಹೊಂದುವುದಿಲ್ಲ: ಇಂದ್ರಿಯಪ್ರಪಂಚದಲ್ಲಿ — ಪ್ರತ್ಯೇಕಮಯವಾದ ಬಾಹ್ಯಲೋಕದಲ್ಲಿ—ಈ ಸಾಮಾನ್ಯಗಳನ್ನು ಹೋಲುವ ವಸ್ತು ವಿಷಯಗಳು ಯಾವುವೂ ಇಲ್ಲವೇ ಇಲ್ಲ. ಸತ್ಯ, ಸೌಂದರ್ಯ, ಸೌಹಾರ್ದ ; ಶಮ, ದಮ, ಶಾಂತಿ ; ಈ ಮುಂತಾದ ಸಾಮಾನ್ಯಗಳನ್ನು ಸರಿಸಮಾನವಾಗಿ ಹೋಲುವ ವಸ್ತುವೊಂದೂ ಇಲ್ಲ. ನಿರ್ವಿಶೇಷವಾಗಿ ಸುಂದರವಾದುದು, ಸಂಪತ್ಕರವಾದುದು, ಎಂದು ನಾವು ಹೇಳಬಹುದಾದ ವಸ್ತು ಯಾವುದೂ ಇಂದ್ರಿಯಲೋಕದಲ್ಲಿಲ್ಲ. ಈ ವಿಧವಾದ ಸಾಮಾನ್ಯಗಳೆಂಬ ಧ್ಯೇಯಗಳನ್ನು—ಪರಿಮಾಣಸೂತ್ರಗಳನ್ನು—ನಮ್ಮ ಆತ್ಮನ ಅಂತರಂಗದಲ್ಲಿಟ್ಟುಕೊಂಡೇ ನಾವು ಬಾಹ್ಯಪ್ರಪಂಚ ವಿಷಯಗಳನ್ನು ಗ್ರಹಿಸಲು ತೊಡಗುತ್ತೇವೆ. ಈ ಭಾವಗಳ ಜೊತೆಗೆ ಗಣಿತಶಾಸ್ತ್ರದ ಕೆಲವು ಭಾವಗಳನ್ನೂ, ತರ್ಕಶಾಸ್ತ್ರದಲ್ಲಿರುವ ಸತ್, ಅಸತ್, ಏಕತ್ವ, ಬಹುತ್ವ, ವೈವಿಧ್ಯ, ಸಮತ್ವ, ಭೇದತ್ವ ಮೊದಲಾದ ಕೆಲವು ಆರೋಪಭಾವಗಳನ್ನೂ ಸಾಮಾನ್ಯಗಳೆಂದೇ ಪ್ಲೇಟೊ ತಿಳಿದನು.

ಈ ರೀತಿಯಲ್ಲಿ ಸಾಮಾನ್ಯಜ್ಞಾನವೇ ಯಥಾರ್ಥಜ್ಞಾನವೆಂದು ಸಿದ್ಧವಾಯಿತಷ್ಟೆ. ಆದರೆ ಈ ವಿಧವಾದ ಜ್ಞಾನ ಸತ್ಯವಾದುದೆಂದು

ಹೇಳಲು ನಮಗೆ ಆಧಾರಗಳೇನು? ನಮ್ಮ ಚಿತ್ತಪ್ರಪಂಚದಲ್ಲಿ ಅವು ಅವ್ಯಕ್ತವಾಗಿ ಅಡಗಿರುವುದರಿಂದಲೇ ಅವು ಸತ್ಯವೆಂದು ಹೇಳಲಾದೀತೇ? ಅವುಗಳ ಸತ್ಯಸ್ವರೂಪವನ್ನು ಸಾಧಿಸುವ ಅಂಶಯಾವುದು? ನಮ್ಮ ಚಿಂತನೆಗಳು ವಸ್ತುಗಳನ್ನು ಕುರಿತು ಚಿಂತನೆಗಳಾಗಿರಬೇಕಲ್ಲದೆ ವಿಷಯವಿಲ್ಲದೆಯೆ ಚಿಂತನೆಯುಂಟಾಗದು. ಹೀಗೆಂದಮೇಲೆ ಚಿಂತಿತವಾದ ವಸ್ತುವಿನೊಡನೆ ನಮ್ಮ ಚಿಂತನೆ ಸರಿಹೋಲಬೇಕು. ಆದುದರಿಂದ ನಮ್ಮ ಭಾವಗಳು ಸತ್ಯಜ್ಞಾನವನ್ನೀಯಬೇಕಾದರೆ ಈ ಭಾವಗಳಿಗೆ ಸರಿಯಾದ ಸತ್ಯವಸ್ತುಗಳು ಪ್ರಪಂಚದಲ್ಲಿರಬೇಕು. ಶುದ್ಧಸೌಂದರ್ಯ ಎಂಬುದೊಂದು ಭಾವ. ಈ ಭಾವ ನಿಜವಾದ ಜ್ಞಾನವನ್ನುಂಟುಮಾಡಬೇಕಾದರೆ ಅದಕ್ಕೆ ಅನುರೂಪವಾದ ಶುದ್ಧಸತ್ವ ಒಂದಿರಬೇಕು. ನಮ್ಮ ಭಾವಗಳಿಗೆ ಅನುಗುಣವಾದ ಸತ್ವಗಳು ಇಲ್ಲದೇ ಇದ್ದ ಪಕ್ಷದಲ್ಲಿ ನಮ್ಮ ಜ್ಞಾನ ಯಥಾರ್ಥಜ್ಞಾನವಾಗಿರಲಾರದು. ಗಣಿತಶಾಸ್ತ್ರದ ತತ್ವಗಳು, ಸೌಜನ್ಯ ಸೌಶೀಲ್ಯ ಮೊದಲಾದ ನೀತಿಶಾಸ್ತ್ರದ ತತ್ವಗಳು, ಕ್ರಮ, ಸಮೀಚೀನತೆ, ಸೌಂದರ್ಯ ಮುಂತಾದ ರಸಭಾವಗಳು—ಈ ಸಾಮಾನ್ಯಗಳು ವಾಸ್ತವಿಕವಾಗಿಯೂ ಸ್ವತಂತ್ರ ಅಸ್ತಿತ್ವವನ್ನು ಪಡೆದಿರಬೇಕೇ ಹೊರತು ಜನರ ತಲೆಗಳಲ್ಲಿ ಬಂದುಹೋಗುವ ಕೇವಲ ಊಹಾಪೋಹಗಳಾಗಿರಲಾರವು.

ಇದೇ ಅರ್ಥವನ್ನೇ ಮತ್ತೊಂದುರೂಪದಲ್ಲಿ ಹೇಳಬಹುದು. ಯಾವುದು ಅಕ್ಷರವಾದುದೋ, ಸ್ಥಿತವಾದುದೋ, ಶಾಶ್ವತವಾದುದೋ ಅಂಥ ಸತ್ವದ ಜ್ಞಾನವೇ ಸತ್ಯಜ್ಞಾನವೆನಿಸುವುದು. ನಮ್ಮ ಪ್ರಪಂಚ ವಸ್ತುಗಳಾದರೋ ಕ್ಷಣಿಕವಾದುವು, ಸರ್ವದಾ ಪರಿಣಾಮವನ್ನು ಹೊಂದುತ್ತಿರುವುವು. ಆದುದದರಿಂದ ಅವುಗಳನ್ನು ಕೇವಲ ತೋರಿಕೆಯೆಂದು ಹೇಳಬಹುದು. ಸತ್ಯಸತ್ವ ವಿಕಾರರಹಿತವಾದುದು, ಶಾಶ್ವತವಾದುದು. ಈ ಕಾರಣದಿಂದ ಯಥಾರ್ಥಜ್ಞಾನ ನಮಗೆ ಲಭಿಸಬೇಕಾದರೆ ಈ ತೋರಿಕೆ ಪ್ರಪಂಚದ ಆಧಾರಭೂತವಾದ, ಪರಿಣಾಮರಹಿತವಾದ ಅಕ್ಷರಸತ್ವವನ್ನು ನಾವು ತಿಳಿಯಬೇಕು. ನಮ್ಮ ಭಾವಜ್ಞಾನವೇ ಈ ವಿಧವಾದ ಅಕ್ಷರಸತ್ವವನ್ನು ತಿಳಿಯಲು ಶಕ್ತಿಯುಳ್ಳದ್ದಾಗಿರುವುದು. ಇಂದ್ರಿಯ

ಜನ್ಯ ಜ್ಞಾನವಾದರೋ ಮಾಯವಾಗುವ, ವ್ಯತ್ಯಾಸವಾಗುವ, ಪ್ರತ್ಯೇಕ —ವ್ಯಕ್ತಿ—ವಿಷಯಕವಾದುದು: ಸತ್ಯಸತ್ವದ ನಿಜಸ್ವರೂಪವನ್ನು ಅದು ನಮಗೆ ತಿಳಿಸಲಾರದು. ಭಾವಜ್ಞಾನ ವಸ್ತುಗಳ ಅಂತರ್ಗತವಾದ, ಆಧಾರಭೂತವಾದ, ಸಾಮಾನ್ಯವಾದ ಅಂಶವನ್ನು ನಮಗೆ ತೋರ್ಪಡಿಸುವುದು. ತತ್ವಶಾಸ್ತ್ರ ಈ ವಿಧವಾದ ನಿತ್ಯವಾದ, ನಿರ್ವಿಕಾರವಾದ, ಸರ್ವವ್ಯಾಪಕವಾದ ಸತ್ವಜ್ಞಾನವನ್ನು ತಿಳಿಯಲು ಪ್ರಯತ್ನಪಡುವುದರಿಂದ ಸಾಮಾನ್ಯಗಳೇ ತತ್ವಶಾಸ್ತ್ರದ ಮೂಲಸ್ತಂಭಗಳು.

## ಅಧ್ಯಾಯ ೧೩.

### ಪ್ಲೇಟೋವಿನ ಅಧ್ಯಾತ್ಮ ಅಥವಾ ಸ್ಥಿತಿತತ್ವಶಾಸ್ತ್ರ (Ontology): ಸಾಮಾನ್ಯವಾದ

ಆದರೆ ಈ ಸಾಮಾನ್ಯಗಳ ಸ್ವರೂಪವೆಂಥದು? ಹಿಂದೆ ಹೇಳಿದಂತೆ ಅನೇಕ ಪ್ರತ್ಯೇಕ ವಸ್ತುಗಳಲ್ಲಿ ಸರ್ವಸಾಮಾನ್ಯವಾಗಿರುವ—ಪ್ರಾಧಾನ್ಯವಾಗಿರುವ—ಗುಣವಿಶೇಷವೇ ಸಾಮಾನ್ಯ. ಅಂದಮೇಲೆ ಇಂತಹ ಸಾಮಾನ್ಯಗಳು ನಮ್ಮ ಚಿತ್ತಪ್ರಪಂಚದ ಕೇವಲ ಭಾವಗಳು ಎಂದು ನಾವು ವಿಪರ್ಯಾಯಹೊಂದಬಹುದು. ಏಕೆಂದರೆ ನಾವು ಕಂಡಹಾಗೆ ಪ್ರತ್ಯೇಕಗಳೇ ಪ್ರಪಂಚದಲ್ಲಿರತಕ್ಕ ವಸ್ತುಗಳು. ಆಂಟಿಸ್ತನೀಸ್ ಎಂಬಾತನು "ಅಶ್ವವೊಂದನ್ನು ನಾನು ನೋಡಬಲ್ಲೆನೇ ಹೊರತು 'ಅಶ್ವತ್ವ' (horseness) ಎಂಬುದನ್ನು ಎಲ್ಲಿ ಕಾಣಬಲ್ಲೆ?" ಎಂದು ಚರ್ಚೆ ಮಾಡಿದನು. ಪ್ಲೇಟೋವಾಗಲಿ, ಸಾಕ್ರಟೀಸನಾಗಲಿ, ಹಾಗೆ ಅಭಿಪ್ರಾಯಪಡಲಿಲ್ಲ. ಸಾಮಾನ್ಯಗಳು—ವಸ್ತುರೂಪಗಳು—ಮಾನವನ ಚಿತ್ತವೃತ್ತಿಗಳೂ ಅಲ್ಲ, ಪರಮಾತ್ಮನ ಮನೋಭಾವಗಳೂ ಅಲ್ಲ: ಅವು ಸ್ವತಃಸ್ಥಿತವಾದುವು, ಶಾಶ್ವತವಾದುವು, ವಸ್ತುತ್ವವನ್ನುಳ್ಳ ದ್ರವ್ಯರೂಪಗಳು, ಪ್ರಪಂಚವಸ್ತುಗಳೆಲ್ಲಕ್ಕೂ ಆಧಾರವಾದ, ಅತೀಂದ್ರಿಯವಾದ ಅಥವಾ ಲೋಕೋತ್ತರವಾದ ಮೂಲರೂಪಗಳು. ವಸ್ತುಗಳಿಗೆ ಪೂರ್ವವಾಗಿಯೇ ಇದ್ದು, ಆದ್ಯಂತರಹಿತವಾಗಿ, ಸ್ವಾಭಾವಿಕವಾಗಿ ಸ್ವತಂತ್ರವಾದವುಗಳಾಗಿ, ವಸ್ತುಗಳಿಂದಾಗಲಿ, ಅವುಗಳ ಅಸಂಖ್ಯಾತವಾದ ಪರಿಣಾಮಗಳಿಂದಾಗಲಿ ಸ್ವಲ್ಪವೂ ವಿಕಾರಹೊಂದದೆ ಶುದ್ಧ ಸತ್ವಗಳಾಗಿರತಕ್ಕವು. ನಾವು ಕಾಣುವ ಪ್ರತ್ಯೇಕ ವಸ್ತುಗಳೆಲ್ಲವೂ ಈ ನಿತ್ಯವಾದ ಮೂಲರೂಪಗಳ ಅಥವಾ 'ನಮೂನೆ'ಗಳ ಪ್ರತಿ

ಬಿಂಬಗಳು, 'ನಕಲುಗಳು'. ಈ ಪ್ರತ್ಯೇಕಗಳು ಇಂದು ಜನಿಸಬಹುದು, ನಾಳೆ ಕ್ಷಯಿಸಿ ನಾಶವಾಗಬಹುದು. ಸಾಮಾನ್ಯಗಳು ಅಥವಾ ವಸ್ತುರೂಪಗಳಾದರೋ ನಿತ್ಯವಾದುವು. ಪ್ರತ್ಯೇಕಮನುಷ್ಯರು ಹುಟ್ಟಬಹುದು, ಸಾಯಬಹುದು; "ಮಾನವ" ಎಂಬ ಸಾಮಾನ್ಯವಾದರೋ, ಮೂಲರೂಪ ಅಥವಾ ವರ್ಗೀಯಭಾವವಾಗಿ ಶಾಶ್ವತವಾಗಿರತಕ್ಕದು. ಪ್ರತಿಗಳು ಅಥವಾ 'ನಕಲುಗಳು' ಸಾವಿರವಿರಬಹುದು ; ಒಂದು ವರ್ಗದ ವಸ್ತುಗಳ ಸಾಮಾನ್ಯ ಎಂದೆಂದಿಗೂ ಒಂದೇ. ಈ ವಿಧವಾದ ಸ್ವತಂತ್ರರೂಪಗಳು ಅಸಂಖ್ಯಾತವಾಗಿವೆ: ಯಾವ ವಸ್ತುವೂ ಅದಕ್ಕನುಗುಣವಾದ ಸಾಮಾನ್ಯವನ್ನು ಪಡೆಯದೇ ಇರುವಷ್ಟು ಅಲ್ಪವಾದುದಲ್ಲ, ನಿಕೃಷ್ಟವಾದುದಲ್ಲ. ಪದಾರ್ಥಗಳು, ಪದಾರ್ಥಗಳ ಪರಸ್ಪರ ಸಂಬಂಧಗುಣವಿಶೇಷಗಳು ಮತ್ತು ಕರ್ಮಗಳು ; ಮೇಜು, ಹಾಸಿಗೆ, ಆಸನ, ದೀಪ, ಮುಂತಾದ ಮಾನವಕೃತವಸ್ತುಗಳು ; ವರ್ಣ, ರಾಗ, ರೋಗ, ಆರೋಗ್ಯ, ವಿಶ್ರಾಂತಿ, ಸುಖ, ದುಃಖ, ಚಲನೆ, ಸ್ಥಿತಿ ಮುಂತಾದ ಸ್ವಾಭಾವಿಕ—ಪ್ರಾಕೃತಿಕ—ಸಂಭವಗಳು, ವ್ಯಾಪಾರಗಳು, ವೃತ್ತಿಗಳು ; ಅಣುತ್ವ, ಮಹತ್ವ, ಗುರುತ್ವ, ಲಘುತ್ವ, ವೈವಿಧ್ಯ, ವ್ಯತ್ಯಾಸ, ಸಮಾನತೆ ಮೊದಲಾದ ಆರೋಪಭಾವಗಳು ; ಏಕತ್ವ, ಬಹುತ್ವ, ತ್ರಿಕೋಣ, ಚದರ ಮುಂತಾದ ಗಣಿತಶಾಸ್ತ್ರದ ಭಾವಗಳು ; ಸೌಂದರ್ಯ, ಸತ್ಯ, ಸೌಜನ್ಯ, ಶ್ರೇಯ, ಪ್ರೇಯ, ಧ್ಯೇಯ ಈ ಮೊದಲಾದ ನೈತಿಕ— ಧಾರ್ಮಿಕ—ತತ್ವಗಳು, — ಒಟ್ಟಿನಲ್ಲಿ, ಪ್ರತಿಒಂದು ಜಾತಿವಿಷಯಕ ವಸ್ತು ಅಥವಾ ಭಾವವೂ ಸಹ ತನ್ನ ಸ್ವರೂಪವನ್ನು ತೋರ್ಪಡಿಸುವ ಸಾಮಾನ್ಯವನ್ನು ಹೊಂದಿಯೇ ಇರುತ್ತದೆ.

ಹೀಗೆ ಸಾಮಾನ್ಯಗಳು ಅಸಂಖ್ಯಾತವಾದರೂ ಇವುಗಳಲ್ಲಿ ಕ್ರಮಸಮೀಚೀನತೆಗಳಿಲ್ಲದೆ ಪರಸ್ಪರ ಮಿಶ್ರವಾಗೋಣದರಿಂದುಂಟಾಗುವ ಅವ್ಯವಸ್ಥೆಗಳೇನೂ ಇಲ್ಲ. ಸಾಮಾನ್ಯಗಳೆಲ್ಲವೂ ಪರಸ್ಪರ ಯೋಗ್ಯವಾದ ಸಂಬಂಧಗಳನ್ನು ಹೊಂದಿದ—ಸಮಾಜದೋಪಾದಿಯಲ್ಲಿ ವ್ಯವಸ್ಥೆ ಮಾಡಲ್ಪಟ್ಟ — ಸುಗತಿಕ್ರಮಗಳನ್ನು ಹೊಂದಿದ—ಜಗತ್ತಾಗಿ ಪರಿಣಮಿಸಿವೆ. ಜಾತಿಸಾಮಾನ್ಯಗಳು ತಮಗಿಂತಲೂ ಅಧಿಕ ಸಾಧಾರಣಗಳಾದ ವರ್ಗಸಾಮಾನ್ಯಗಳ ಕೆಳಗೆ ; ವರ್ಗಸಾಮಾನ್ಯಗಳು ಮತ್ತೂ ವಿಸ್ತಾರವಾದ

ಸಂಘಸಾಮಾನ್ಯಗಳ ಕೆಳಗೆ–ಈ ವಿಧದಲ್ಲಿ ಅನುಕ್ರಮಣಿಕೆಯನ್ನು ಹೊಂದಿ ಒಟ್ಟಿನಲ್ಲಿ ಸುಂದರತಮವಾದ ಸ್ವತಂತ್ರರಾಜ್ಯವಾಗಿ ಸ್ಥಾಪಿಸಲ್ಪಟ್ಟಿವೆ. ಕೊನೆಯಲ್ಲಿ ಸತ್ಯ, ಸೌಂದರ್ಯ, ಶ್ರೇಯ ಅಥವಾ ಶುಭ—ಈ ಮೂರು ಪರಮ ಸಾಮಾನ್ಯಗಳ ಕೆಳಗೆ ಉಳಿದ ಸಾಮಾನ್ಯಗಳೆಲ್ಲವೂ ಅನುಕ್ರಮ ಮಾಡಲ್ಪಟ್ಟಿವೆ. ಇದಕ್ಕನುಸಾರವಾಗಿ ಸಾಮಾನ್ಯಗಳ ಸಾನ್ನಿಧ್ಯವನ್ನು ಸೇರಬೇಕಾದರೆ ಮೂರು ಮಾರ್ಗಗಳಿವೆಯೆಂದು ತಿಳಿಯಬೇಕು: ಚಿಂತನೆ ಅಥವಾ ಪರಾಮರ್ಶೆ, ಪ್ರೇಮ, ಮತ್ತು ಧರ್ಮಸೂಕ್ಷ್ಮದ ಅಂತರ್ದೃಷ್ಟಿ. ಎಲ್ಲಾ ಸಾಮಾನ್ಯಗಳಿಗೂ ಅತ್ಯಂತ ಉಚ್ಚವಾದ, ಇತರ ಸಾಮಾನ್ಯಗಳೆಲ್ಲಕ್ಕೂ ಆಧಾರಭೂತವಾದ, ಮೂಲರೂಪ ಶ್ರೇಯವೆಂಬುದು. ಇದಕ್ಕಿಂತಲೂ ವಿಸ್ತಾರವಾದ, ಉತ್ಕೃಷ್ಟತರವಾದ ಸಾಮಾನ್ಯ ಯಾವುದೂ ಇಲ್ಲ. ಪ್ಲೇಟೊ ಈ ಸಾಮಾನ್ಯವನ್ನು ಸೂರ್ಯನಿಗೆ ಹೋಲಿಸುತ್ತಾನೆ. ಸೂರ್ಯನು ಹೇಗೆ ಸಮಸ್ತಪದಾರ್ಥಗಳ ಉತ್ಪತ್ತಿ ಮತ್ತು ಬೆಳವಣಿಗೆಗೆ ಮೂಲಕಾರಣನಾಗಿಯೂ, ತನ್ನ ಪ್ರಕಾಶದಿಂದ ಅವುಗಳನ್ನು ಬೆಳಗಿಸುವವನಾಗಿಯೂ ಇರುವನೋ, ಅದರಂತೆಯೇ ಶ್ರೇಯವೆಂಬ ಸಾಮಾನ್ಯ ಸ್ವಯಂಪ್ರಭೆಯುಳ್ಳುದಾಗಿ, ಮಿಕ್ಕ ಸಾಮಾನ್ಯಗಳೆಲ್ಲಕ್ಕೂ — ಸರ್ವವಿಧವಾದ ಸತ್ವಕ್ಕೂ — ಮೂಲಸ್ಥಾನವಾಗಿಯೂ ಶಕ್ತಿ ಜ್ಯೋತಿಪ್ರದವಾಗಿಯೂ ಇರುವುದು. ಸತ್ವಜ್ಞಾನವನ್ನು ಪಡೆಯಬೇಕಾದರೂ ಶ್ರೇಯದ ಮುಖಾಂತರವಾಗಿಯೇ. ಪ್ರಪಂಚದಲ್ಲಿ ಪ್ರತಿಒಂದು ವಸ್ತುವಿಗೂ ತದನುಗುಣವಾದ ಒಂದು ಉದ್ದೇಶ ಅಥವಾ ಪ್ರಯೋಜನವಿದೆ. ಆ ಪ್ರಯೋಜನವನ್ನು ಪಡೆಯುವುದೇ, ಆ ಉದ್ದೇಶವನ್ನು ಸಫಲಗೊಳಿಸುವುದೇ, ಆ ಧ್ಯೇಯವನ್ನು ಸಾಧಿಸುವುದೇ, ಆ ವಸ್ತುವಿನ ಜೀವನದ ಆಂತರಿಕ ಸ್ಥಿತಿ ತತ್ವ. ಇದರಂತೆಯೇ, ಆ ವಸ್ತುವಿನ ಸ್ವರೂಪಜ್ಞಾನವುಂಟಾಗಬೇಕಾದರೆ, ಅದರಿಂದಾಗುವ ಉಪಯೋಗವೇನು, ಅದರ ಜೀವನದ ಗುರಿಯೇನು, ಎಂಬುದನ್ನು ತಿಳಿದುಕೊಳ್ಳಬೇಕು. 'ಕುರ್ಚಿ' ಎಂದರೇನು, ಎಂಬುದನ್ನು ತಿಳಿಯಬೇಕಾದರೆ ಅದು ಇರುವುದೇತಕ್ಕೆ, ಎಂಬುದನ್ನು ಗೊತ್ತುಮಾಡಬೇಕು. ವಸ್ತುವಿನ ಈ ಅರ್ಥವೇ, ಉದ್ದೇಶವೇ, ಪ್ರಯೋಜನವೇ, ಅದರ ಜೀವನದ ಗುರಿಯೇ, ಅದರ ನಿಜವಾದ

ಶ್ರೇಯ ಅಥವಾ ಪರಿಪೂರ್ಣತೆ, ಎಂದು ಪ್ಲೇಟೊ ಹೇಳುವನು. ಈ ಅರ್ಥದಲ್ಲಿ ಪರಿಪೂರ್ಣತೆಯನ್ನು ಪಡೆಯುವುದೇ ಪ್ರತಿ ಒಂದು ಪದಾರ್ಥದ ಸತ್ವದ ತತ್ವ. ಕೇಡೆಂಬುದು (evil) ಇಂತಹ ಪರಿಪೂರ್ಣದ ಅಭಾವ ಅಥವಾ ಕೀಳ್ತರದ ಶ್ರೇಯವೇ ಹೊರತು ಸ್ವತಃ ವಾಸ್ತವವಾದ ಸಿದ್ಧತತ್ವವಲ್ಲ. ಕತ್ತಲೆಯನ್ನು ಬೆಳಕಿನ ಅಭಾವ ಅಥವಾ ಮುಸುಕುಮುಸುಕಾದ ಬೆಳಕೆಂದು ಹೇಳುವಂತೆಯೇ, ಧೂರ್ತನನ್ನು ಬಹುಕೀಳ್ತರದ ಸಾಧುವೆಂದು ಹೇಳಬಹುದು.

ಈ ಪ್ರಕಾರವಾಗಿ ಶ್ರೇಯವೆಂಬುದು ಪ್ರಪಂಚದ ಪರಮಾತಿಶಯವಾದ ಹಿತ, ರಹಸ್ಯ ; ಸರ್ವವಿಧವಾದ ವಿಪರ್ಯಾಸಗಳನ್ನೂ ಸಮೀಚೀನಗೊಳಿಸುವ ಸ್ನೇಹತತ್ವ. ಆದುದರಿಂದ ಪ್ರಪಂಚದಲ್ಲಿ ಬಹುತ್ವವೇ ಮುಖ್ಯವಲ್ಲ ; ಬಹುತ್ವಕ್ಕೆಲ್ಲಾ ಸ್ತಂಭಪ್ರಾಯವಾದ ಏಕತೆ ಪ್ರಾಧಾನ್ಯವಾದುದು. ವೈವಿಧ್ಯದಲ್ಲಿ ಸಮಾನತ್ವ, ಬಹುತ್ವದಲ್ಲಿ ಏಕತ್ವ—ಇದೇ ಪ್ಲೇಟೋವಿನ ಪ್ರಪಂಚದ ಸೌಂದರ್ಯದ ಗುಟ್ಟು. ಅತ್ಯಂತ ಶ್ರೇಷ್ಠವಾದ ಧರ್ಮಸಾಧನೆಯನ್ನು ಸಾಧ್ಯಗೊಳಿಸುವುದೇ ಈ ಪ್ರಪಂಚದ ಮುಖ್ಯೋದ್ದೇಶ. ಈ ಸಾಮಾನ್ಯಲೋಕದ ಪೂರ್ಣಾರ್ಥವನ್ನು ನಮ್ಮ ಇಂದ್ರಿಯಗಳು ತಿಳಿಯಲಾರವು. ಕ್ಷಣಿಕವಾದ, ಅಪೂರ್ಣವಾದ, ಸಾಮಾನ್ಯಗಳ ಪ್ರತಿಬಿಂಬಗಳಾದ, ನಮ್ಮ ಪ್ರಪಂಚವಸ್ತುಗಳನ್ನು ಗೋಚರಿಸುವಷ್ಟರಿಂದಲೇ ತೃಪ್ತಿಪಡುವ ನಮ್ಮ ದುರ್ಬಲೇಂದ್ರಿಯಗಳ ಮೂಲಕ, ಪೂರ್ಣಜ್ಞಾನವನ್ನು ಕೊಡುವಂತಹ ಸಾಮಾನ್ಯಲೋಕದ ಸೌಂದರ್ಯವನ್ನು ಅನುಭವಿಸಲಾರೆವು. ತತ್ವಜ್ಞಾನಮಾತ್ರವೇ ಈ ಪ್ರಪಂಚದ ಸೊಬಗನ್ನೂ, ಕ್ರಮವನ್ನೂ, ಸಾಮಾನ್ಯಗಳ ಪರಸ್ಪರ ಸಂಬಂಧವನ್ನೂ ತಿಳಿದು ಆನಂದಪಡಬಲ್ಲುದು.

ಈ ಪರಮಶ್ರೇಯದ ಸ್ವರೂಪವನ್ನರಿಯುವುದೇ ಪ್ರಪಂಚದಲ್ಲಿ ಅತಿಶಯವಾದ ವಿದ್ಯೆ. ಉಳಿದ ತತ್ವಗಳೆಲ್ಲವನ್ನೂ ತಿಳಿದು ಶ್ರೇಯದ ತತ್ವವನ್ನರಿಯದಿದ್ದರೆ, ಅಂತಹ ಜ್ಞಾನದಿಂದೇನೂ ಫಲವಿಲ್ಲ. ಉಳಿದ ವಸ್ತುಗಳೆಲ್ಲವನ್ನೂ ಹೊಂದಿ, ನಮಗೆ ಶ್ರೇಯಸ್ಕರವಾದ ವಸ್ತು ಯಾವುದೋ ಅದನ್ನೇ ಪಡೆಯದಿದ್ದರೆ, ಇಂತಹ ಆಸ್ತಿಯಿಂದ ನಮಗೆ

ಉಪಯೋಗವೇನು? ಅದಕ್ಕೆ ಬದಲಾಗಿ ಈ ಪರಮೋತ್ಕೃಷ್ಟವಾದ ಶ್ರೇಯವನ್ನು ಹೊಂದಿದ್ದರೆ, ಉಳಿದ ವಸ್ತುಗಳೆಲ್ಲವೂ ಅದರ ಮಹಿಮೆ ಯಿಂದ ಒಳ್ಳೆತಾಗುವುವು, ಉಪಯೋಗವಾದವುಗಳೂ, ಫಲಕಾರಿಗಳೂ ಆಗುವುವು. ಸಾಮಾನ್ಯ ಜನರು ಇಂದ್ರಿಯಸುಖವೇ ಈ ಪರಮಶ್ರೇಯ ವೆಂದು ಭಾವಿಸುವರು; ಸ್ವಲ್ಪ ತಿಳಿವಳಿಕೆಯುಳ್ಳವರು ವಿವೇಕ ಅಥವಾ ಒಳದೃಷ್ಟಿ ಎನ್ನುವರು. ಆದರೆ ವಿವೇಕವೆಂದರೇನು? ಯಾವುದರ ಸ್ವರೂ ಪದ ಅಂತರ್ದೃಷ್ಟಿ ಎಂದು ಹೇಳಬೇಕು? ಪುನಃ ಶ್ರೇಯದ ವಿಚಾರ ದಲ್ಲಿ ವಿವೇಕ ಅಥವಾ ಒಳದೃಷ್ಟಿ ಎಂದೇ ಹೇಳಬೇಕು. ಇದು ಚಕ್ರ ರೂಪದ ತರ್ಕವಾಗುವುದು. ಇನ್ನು ಇಂದ್ರಿಯಸುಖವೇ ಶ್ರೇಯವೆನ್ನು ವವರ ಮಾತನ್ನು ನೋಡೋಣ. ಸುಖವೇ ಶ್ರೇಯವಾದ ಪಕ್ಷದಲ್ಲಿ ನೀಚವಾದ, ಹಾಗೂ ಕೇಡುಂಟುಮಾಡುವ, ಸುಖಗಳಿಲ್ಲವೇನು? ಇದ್ದರೆ ಅಲ್ಲಿಗೆ ಒಂದೇ ವಸ್ತು ಏಕಕಾಲದಲ್ಲಿಯೇ ಒಳ್ಳೆಯದು ಮತ್ತು ಕೆಟ್ಟದು ಎಂದು ಹೇಳಿದಹಾಗಾಗಲಿಲ್ಲವೇ? ನ್ಯಾಯವೇ ಅಥವಾ ಸೌಂದರ್ಯವೇ ಶ್ರೇಯವೆಂದು ಹೇಳುವವರೂ ಇದ್ದಾರೆ. ಆದರೆ ಅನೇಕ ವೇಳೆ ಜನರು ನ್ಯಾಯದ ಅಥವಾ ಸೌಂದರ್ಯದ ಛಾಯೆಯನ್ನು ಮಾತ್ರ ಹೊಂದಿ ತೃಪ್ತಿಪಡಲು ಒಡಂಬಟ್ಟರೂ ಶ್ರೇಯದ ವಿಚಾರದಲ್ಲಿಯೋ ಎಂದರೆ ತೋರಿಕೆಗಳನ್ನೂ ಛಾಯೆಗಳನ್ನೂ ಕಂಡರೆ ತುಚ್ಛೀಕಾರಮಾಡಿ ಸಾಚಾ ನಾಣ್ಯವನ್ನೇ ಹೊಂದಲು ಬಯಸುವರು. ಈ ಶ್ರೇಯದ ಜೊತೆಗೆ ಸೇರುವುದರಿಂದಲೇ ಸೌಂದರ್ಯವೂ ನ್ಯಾಯವೂ ಶುಭಕಾರಿ ಗಳಾಗುವುವು. ಈ ಶ್ರೇಯದ ಮಹಿಮೆಯನ್ನು ತಿಳಿದಹೊರತು ನ್ಯಾಯ ಸೌಂದರ್ಯಗಳ ರೂಪವನ್ನು ತಿಳಿಯಲಾಗುವುದಿಲ್ಲ. ಇದನ್ನೆಲ್ಲಾ ನೋಡಿದರೆ ಪ್ರತಿಯೊಂದು ಪ್ರಾಣಿಯೂ ತನ್ನ ಶ್ರೇಯವನ್ನೇ ಬಯಸು ತ್ತದೆ; ಆದರೆ ಆ ಶ್ರೇಯವೇನೆಂಬ ವಿಷಯದಲ್ಲಿ ಮುಸುಕುಮುಸುಕಾದ, ಮಂಜುಕವಿದಿರುವ ತಿಳಿವಳಿಕೆಯನ್ನು ಹೊಂದಿರುವುದೇ ಹೊರತು, ನಿರ್ಮಲವಾದ, ನಿಚ್ಚಳವಾದ, ನಿಷ್ಕೃಷ್ಟವಾದ ಜ್ಞಾನವನ್ನು ಪಡೆದಿರು ವುದಿಲ್ಲ. ಪರಂತು ಈ ಶ್ರೇಯದ ಮೂಕವಾಂಛಲ್ಯದಿಂದಲೇ, ವಾಸನೆ ಯಿಂದಲೇ, ಸಂಸ್ಕಾರದಿಂದಲೇ, ಅದರ ಪ್ರತಿಯೊಂದು ಕಾರ್ಯವೂ

ಪ್ರೇರೇಪಿಸಲ್ಪಡುವುದು ! ಈ ವಿಷಯದಲ್ಲಿ ಸಾಕ್ರಟೀಸನ ತರ್ಕವನ್ನು ಕೊಂಚ ಕೇಳೋಣ.

**ಗ್ಲಾಕನ್.**—"ಹಾಗಾದರೆ, ಸಾಕ್ರಟೀಸ್, ಪರಮಶ್ರೇಯದ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು? ಅದು ಜ್ಞಾನವೇ, ಸುಖವೇ, ಇಲ್ಲವೆ ಇವೆರಡಕ್ಕೂ ಭಿನ್ನವಾದುದೇ?"

**ಸಾಕ್ರಟೀಸ್.**—"ಹೋ, ಹೋ, ನನ್ನ ಮಿತ್ರನೇ! ಈ ವಿಚಾರಗಳಲ್ಲಿ ಇತರರ ಅಭಿಮತಗಳನ್ನು ಕೇಳಿ ನೀನು ತೃಪ್ತನಾಗುವುದಿಲ್ಲವೆಂದು ನಾನು ಆಗಲೇ ಕಂಡುಕೊಂಡೆ."

"ಇದೇನು, ಸಾಕ್ರಟೀಸ್, ಇಂತಹ ಗಹನವಾದ ವಿಚಾರಗಳ ಪರಾಮರ್ಶೆಗೆ ಇಷ್ಟು ದೀರ್ಘಕಾಲ ಗಮನಕೊಟ್ಟಿರುವ ನೀನು ಕೇವಲ ಪರರ ಅಭಿಪ್ರಾಯಗಳನ್ನೇ ಹೇಳುತ್ತ ನಿನ್ನ ಸ್ವಂತ ಅಭಿಪ್ರಾಯವನ್ನು ನಿರೂಪಿಸದಿರುವುದು ತಪ್ಪಲ್ಲವೇ?"

"ನಿಜ, ಆದರೆ ಯಾವ ವಿಷಯದಲ್ಲಿ ನಮಗೆ ಹೆಚ್ಚು ಪರಿಶ್ರಮವಿಲ್ಲವೋ ಆದನ್ನು ಕುರಿತು ಬೃಹಸ್ಪತಿಯಂತೆ ಮಾತನಾಡಲು ಪ್ರಯತ್ನಪಡುವುದು ಸರಿಯೋ?"

"ಬೃಹಸ್ಪತಿಯಂತೆ ಮಾತನಾಡಲು ಪ್ರಯತ್ನಪಡಬೇಕಾದುದಿಲ್ಲ; ಆದರೆ ತನಗೆ ತಿಳಿದ ವಿಷಯವನ್ನು—ಅದು ತಪ್ಪಾಗಲಿ, ನೆಪ್ಪಾಗಲಿ—ತಿಳಿದ ಮಟ್ಟಿಗೆ ಹೇಳುವುದರಲ್ಲಿ ತಪ್ಪೇನಿದೆ?"........

"ಈ ಚರ್ಚೆ ಮುಂದುವರಿಯುತ್ತಿರುವಾಗ, ಸೌಂದರ್ಯವುಳ್ಳ ಮತ್ತು ಶುಭಪ್ರದವಾದ ಪ್ರತ್ಯೇಕವಸ್ತುಗಳು ಅನೇಕಾನೇಕ ಇವೆ ಎಂದು ನಾವು ತೀರ್ಮಾನ ಮಾಡಿದೆವಲ್ಲವೆ?"

"ನಿಜ, ಮಾಡಿದೆವು."

"ಮತ್ತು ಈ ಅನೇಕಾನೇಕ ಪ್ರತ್ಯೇಕಗಳನ್ನು ಪ್ರತಿ ಒಂದು ಜಾತಿಯಲ್ಲಿಯೂ ತದನುಗುಣವಾದ, ವಾಸ್ತವಿಕವಾದ ಸೌಂದರ್ಯ, ವಾಸ್ತವಿಕವಾದ ಶ್ರೇಯಸ್ಸು — ಇವೇ ಮೊದಲಾದ ಒಂದೊಂದು ವಸ್ತು ರೂಪದಲ್ಲಿಯೂ, ಸತ್ವದಲ್ಲಿಯೂ, ಅಂತರ್ಗತಮಾಡಿ, ಇಂತಹ

ಸಾಮಾನ್ಯಗಳು ಪ್ರತಿ ಒಂದೂ ಸ್ವತಂತ್ರ ಅಸ್ತಿತ್ವವನ್ನುಳ್ಳ ದ್ರವ್ಯವೆಂದು ಹೇಳಿದೆವಲ್ಲವೆ ?"

"ಹೌದು, ಅದೇ ರೀತಿಯಾಗಿಯೇ ಹೇಳಿದ್ದು."

"ಪ್ರತ್ಯೇಕಗಳು ಕಣ್ಣಿಗೆ ಕಾಣಿಸತಕ್ಕವುಗಳು, ಮಾನಸಗೋಚರಗಳಲ್ಲ; ಸಾಮಾನ್ಯಗಳಾದರೋ ಜ್ಞಾನಚಕ್ಷುಸ್ಸಿಗೆ ಗೋಚರವಾಗತಕ್ಕವುಗಳು, ಚರ್ಮಚಕ್ಷುಸ್ಸಿಗಲ್ಲ".

"ನಿಜ."

"ಒಳ್ಳೆಯದು, ನಮ್ಮ ಶರೀರದ ಯಾವ ಭಾಗದಿಂದ ನಾವು ದೃಶ್ಯ ಪದಾರ್ಥಗಳನ್ನು ನೋಡುತ್ತೇವೆ?"

"ಕಣ್ಣಿನ ದೃಷ್ಟಿಯಿಂದ."

"ಅದೇ ಪ್ರಕಾರವಾಗಿ ಕಿವಿಯಿಂದ ಶಬ್ದವನ್ನು ಕೇಳುತ್ತೇವೆ, ಮತ್ತು ಇಂದ್ರಿಯ ಗೋಚರವಾದ ವಸ್ತುಗಳೆಲ್ಲವನ್ನೂ ಇತರ ಇಂದ್ರಿಯಗಳ ಮೂಲಕ ಗ್ರಹಿಸುತ್ತೇವೆ ಅಲ್ಲವೆ?"

"ಸಂದೇಹವೇನು ? "

"ಹಾಗಾದರೆ ಎಂತಹ ಲೋಕೋತ್ತರವಾದ ಸಾಹಸದಿಂದ ಇಂದ್ರಿಯನಿರ್ಮಾಪಕನು ದರ್ಶನ ಮತ್ತು ದೃಶ್ಯ ಶಕ್ತಿಯನ್ನು ಏರ್ಪಡಿಸಿದ್ದಾನೆ, ಎಂಬುದನ್ನು ಗಮನಿಸಿರುವೆಯೋ ? "

"ನನಗಿದು ಅಷ್ಟು ಸ್ಪಷ್ಟವಾಗಿ ಕಾಣುವುದಿಲ್ಲ."

"ಒಳ್ಳೆಯದು, ಈ ರೀತಿಯಲ್ಲಿ ಪರಾಮರ್ಶಿಸು. ಧ್ವನಿ ಕಿವಿಗೆ ಕೇಳಿಸುತ್ತದೆ. ಕಿವಿ ಕೇಳಬೇಕಾದರೆ, ಅಥವಾ ಧ್ವನಿ ಕೇಳಲ್ಪಡಬೇಕಾದರೆ, ಇವೆರಡಕ್ಕೂ ಭಿನ್ನವಾದ ಮೂರನೆಯ ಪದಾರ್ಥ ಯಾವುದಾದರೂ ಬೇಕಾಗಿದೆಯೇನು? ಅದರ ಅಭಾವದಿಂದ ಕಿವಿ ಕೇಳಿಸುವುದಿಲ್ಲ, ಅಥವಾ ಧ್ವನಿ ಕೇಳಲ್ಪಡುವುದಿಲ್ಲ, ಎಂದು ಹೇಳುತ್ತೇವೆಯೇನು ? "

"ಅಂತಹ ಪದಾರ್ಥ ಯಾವುದೂ ಇಲ್ಲ."

"ಮತ್ತು ಇತರ ಇಂದ್ರಿಯಗಳು ಯಾವುವೂ ಸಹ ಇಂತಹ ಮೂರನೆಯ ಪದಾರ್ಥವನ್ನು ಅಪೇಕ್ಷಿಸುವುದಿಲ್ಲ, ಎಂದು ನಾನು ತಿಳಿಯುತ್ತೇನೆ. ಹಾಗೆ ಅಪೇಕ್ಷಿಸತಕ್ಕ ಇಂದ್ರಿಯವೊಂದನ್ನು ನೀನು ಹೇಳಬಲ್ಲೆಯಾ ?"

"ಇಲ್ಲ, ಹೇಳಲಾರೆನು."

"ಆದರೆ ದೃಷ್ಟಿಯ ಮತ್ತು ದೃಶ್ಯಪದಾರ್ಥಗಳ ವಿಷಯದಲ್ಲಿ ಈ ರೀತಿಯಾದ ಅಧಿಕ ಪದಾರ್ಥವೊಂದು ಬೇಕಾಗಿರುವುದನ್ನು ನೋಡಲಾರೆಯಾ?"

"ಅದು ಹೇಗೆ?"

"ನೋಟ ಕಣ್ಣಿನಲ್ಲಿದೆ ಎನ್ನು, ಬಣ್ಣ ಪದಾರ್ಥಗಳಲ್ಲಿದೆ ಎನ್ನು. ನೋಟ ಹೊಂದಿರತಕ್ಕವನು ಬಣ್ಣವನ್ನು ನೋಡಲು ಪ್ರಯತ್ನಪಡುತ್ತಾನೆ. ಆದರೂ ಇದೇ ಉದ್ದೇಶಕ್ಕೆಂದು ಏರ್ಪಡಿಸಿರುವ ಮೂರನೆಯ ವಿಧದ ಪದಾರ್ಥವೊಂದು ಇಲ್ಲದೆ ಹೋದರೆ, ದೃಷ್ಟಿ ಏನನ್ನೂ ನೋಡಲಾರದು, ಬಣ್ಣಗಳು ಗೋಚರವಾಗಲಾರವು — ಇದು ನೀನು ಬಲ್ಲೆಯಷ್ಟೆ?"

"ನೀನು ಸೂಚಿಸುವ ಮೂರನೆಯ ಪದಾರ್ಥ ಯಾವುದು, ದಯವಿಟ್ಟು ತಿಳಿಸುವೆಯಾ?"

"ಲೋಕವೆಲ್ಲವೂ ಬೆಳಕೆಂದು ಕರೆಯುವ ಪದಾರ್ಥವೇ."

"ನೀನು ಹೇಳುವುದು ನಿಜ."

"ಆದುದರಿಂದ ಮೇಲೆ ಹೇಳಿದ ದ್ವಂದ್ವಗಳಲ್ಲೆಲ್ಲಾ ಚಕ್ಷುರಿಂದ್ರಿಯ ಮತ್ತು ದೃಶ್ಯಶಕ್ತಿ, ಇವೆರಡೂ ಅತ್ಯಂತ ಉತ್ಕೃಷ್ಟವಾದ ಸ್ನಿಗ್ಧಪದಾರ್ಥದಿಂದ ಪರಸ್ಪರ ಅಂಟಿಕೊಂಡಿವೆ ಎಂದು ಹೇಳಬೇಕಲ್ಲದೆ—ಬೆಳಕನ್ನು ತುಚ್ಛಪದಾರ್ಥವೆಂದು ಹೇಳುವೆಯೇನು?"

"ಎಲ್ಲಿಯಾದರೂ ಉಂಟೆ, ತುಚ್ಛಕ್ಕೂ ಅದಕ್ಕೂ ಬಹಳ ದೂರ."

"ದೇವತೆಗಳಲ್ಲಿ ಯಾರ ಕೃಪೆಯಿಂದ ನಮಗೆ ಇಂತಹ ಪರಮಾನುಗ್ರಹ ಉಂಟಾಗಿದೆಯೆಂದು ನೀನು ಭಾವಿಸುತ್ತೀಯೆ? ಯಾರ ಬೆಳಕಿನ ಸಹಾಯದಿಂದ ಪದಾರ್ಥಗಳು ನಮಗೆ ಗೋಚರವಾಗುತ್ತವೆ, ಮತ್ತು ನಮ್ಮ ದೃಷ್ಟಿ ಪದಾರ್ಥಗಳನ್ನು ಇಷ್ಟು ಉತ್ಕೃಷ್ಟವಾದ ರೀತಿಯಲ್ಲಿ ನೋಡಬಲ್ಲುದು?"

"ನಿನ್ನ ಪ್ರಶ್ನೆಗೆ ಇರುವುದು ಒಂದೇ ಉತ್ತರ. ಸೂರ್ಯನು ತಾನೇ ನಮಗೆ ಇಂತಹ ಬೆಳಕನ್ನು ಕೊಡುವವನು."

"ಹಾಗಾದಪಕ್ಷದಲ್ಲಿ ನಮ್ಮ ಕಣ್ಣಿನ ದೃಷ್ಟಿಗೂ ಈ ದೇವನಿಗೂ ಇರತಕ್ಕ ಸಂಬಂಧವನ್ನು ಈ ಕೆಳಗೆ ಕಂಡ ರೀತಿಯಲ್ಲಿ ನಿರೂಪಿ ಸೋಣವೇ?"

"ವಿವರಿಸು, ನೋಡೋಣ."

"ದೃಷ್ಟಿಯೂ ಸೂರ್ಯನೂ ಒಂದೇ ಎಂದು ಹೇಳಲಾಗುವುದಿಲ್ಲ; ಇಲ್ಲವೆ ದೃಷ್ಟಿಯನ್ನು ಹೊಂದಿರತಕ್ಕ ಕಣ್ಣೂ ಸೂರ್ಯನೂ ಒಂದೇ ಎಂದೂ ಹೇಳಲಾಗುವುದಿಲ್ಲ."

"ಆಗುವುದಿಲ್ಲ."

"ಆದರೂ ಕೂಡ, ಜ್ಞಾನೇಂದ್ರಿಯಗಳಲ್ಲೆಲ್ಲಾ ಕಣ್ಣೇ ಸೂರ್ಯನನ್ನು ಅತ್ಯಂತ ನಿಕಟವಾದ ರೀತಿಯಲ್ಲಿ ಹೋಲುತ್ತದೆಂದು ನನಗೆ ತೋರುತ್ತದೆ."

"ಹೌದು, ಅದು ನಿಜ."

"ಅಲ್ಲದೆ ಕಣ್ಣಿಗಿರುವ ದೃಷ್ಟಿಶಕ್ತಿ ಸೂರ್ಯನಿಂದ ಬಂದದ್ದೆಂದೂ, ಈ ಕಾರಣದಿಂದ ಆ ಶಕ್ತಿ ಕಣ್ಣಿಗೆ ಆಕಸ್ಮಿಕ ಅಥವಾ ದೈವಯೋಗ ಲಬ್ಧವಾದುದೆಂದೂ ಹೇಳಬೇಕಲ್ಲವೆ?"

"ಹೌದು, ಹಾಗೆಯೇ ಹೇಳಬೇಕು."

"ಆ ಪಕ್ಷದಲ್ಲಿ ಸೂರ್ಯನೂ ದೃಷ್ಟಿಯೂ ಒಂದೇ ಎಂದು ಹೇಳ ದಿದ್ದರೂ ಸೂರ್ಯನು ದೃಷ್ಟಿಯ ಕಾರಣನೆಂದೂ, ದೃಷ್ಟಿಯ ಸಹಾಯ ದಿಂದಲೇ ನೋಡಲ್ಪಡುವವನೆಂದೂ ಏಕೆ ಹೇಳಕೂಡದು?"

"ನಿನ್ನ ಮಾತು ದಿಟ."

"ಒಳ್ಳೆಯದು, ಪರಮಶ್ರೇಯ ತನ್ನ ಹೋಲಿಕೆಯಲ್ಲಿಯೇ ಪಡೆದ ಸಂತಾನದ ವಿಚಾರವಾಗಿ ನಾನು ಹಿಂದೆ ಪ್ರಸ್ತಾಪಮಾಡಿದೆನಲ್ಲಾ— ಆಗ ಸೂರ್ಯನ ಸಾಮ್ಯವನ್ನೇ ನಾನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದುದು. ಅಂದರೆ ದೃಶ್ಯ ಪ್ರಪಂಚದಲ್ಲಿ ಸೂರ್ಯನು ದೃಷ್ಟಿಗೂ ಆದಕ್ಕೆ ತಕ್ಕ ಪದಾರ್ಥಗಳಿಗೂ ಯಾವ ಸಂಬಂಧವನ್ನು ಹೊಂದಿರುವನೋ, ಜ್ಞಾನ ಪ್ರಪಂಚದಲ್ಲಿ ಪರಮಶ್ರೇಯ ಶುದ್ಧಬುದ್ಧಿಗೂ ತದನುಗುಣವಾದ ಪದಾರ್ಥಗಳಿಗೂ ಅದೇ ಸಂಬಂಧವನ್ನು ಹೊಂದಿರುವುದು."

"ಅದು ಹೇಗೆ? ದಯವಿಟ್ಟು ಅದನ್ನು ಸ್ವಲ್ಪ ವಿಶದವಾಗಿ ವಿವರಿಸು."

"ಸೂರ್ಯನ ಪ್ರಕಾಶ ಬೀಳುತ್ತಿರುವ ಪದಾರ್ಥಗಳನ್ನು ನೋಡಲೆಳಸಿ ಒಬ್ಬನು ಅದಕ್ಕೆ ಬದಲಾಗಿ ಚಂದ್ರನ ಮತ್ತು ನಕ್ಷತ್ರಗಳ ಪ್ರಕಾಶ ಬೀಳುತ್ತಿರುವ ಪದಾರ್ಥಗಳ ಕಡೆಗೆ ತನ್ನ ದೃಷ್ಟಿ ತಿರುಗಿಸಿದರೆ ಆತನ ಕಣ್ಣುಗಳು ಮುಂಜುಕವಿದುಕೊಂಡಂತಾಗಿ, ಕಣ್ಣಿನಲ್ಲಿ ದೃಷ್ಟಿಯೇ ಇಲ್ಲದೆ ಕುರುಡಾಗಿರುವುದೋ ಎಂಬಂತೆ ತೋರುವುದನ್ನು ನೀನು ಬಲ್ಲೆಯಾ?"

"ಚೆನ್ನಾಗಿ ಬಲ್ಲೆ."

"ಆದರೆ ಅದೇ ಮನುಷ್ಯನು ಸೂರ್ಯನ ಕಾಂತಿ ಬೀಳುತ್ತಿರುವ ಪದಾರ್ಥಗಳ ಕಡೆಗೆ ನೋಡಿದರೆ, ಆಗ ಹಿಂದೆ ಕುರುಡಾದಂತಿದ್ದ ಕಣ್ಣುಗಳಲ್ಲಿ ಪ್ರಸನ್ನವಾದ ದೃಷ್ಟಿ ಬಂದು ಪದಾರ್ಥಗಳು ಸ್ಪಷ್ಟವಾಗಿ ಕಂಡು ಬರುವುವಲ್ಲವೇ?"

"ನಿಸ್ಸಂದೇಹವಾಗಿಯೂ ಹಾಗೆಯೇ ಆಗುವುದು."

"ಅದೇ ಪ್ರಕಾರವಾಗಿ ಆತ್ಮದ ಸ್ಥಿತಿ ಈ ರೀತಿ ಇರುವುದೆಂದು ತಿಳಿ: ಸತ್ಯವೂ ಸತ್ಯಸತ್ವವೂ ಪ್ರಕಾಶಿಸುತ್ತಿರುವ ಪದಾರ್ಥದ ಮೇಲೆ ಆತ್ಮದ ವೀಕ್ಷಣ ಬಿದ್ದರೆ, ಆ ಪದಾರ್ಥವನ್ನು ತಕ್ಷಣವೇ ಆತ್ಮ ತನ್ನ ಜ್ಞಾನಚೇತನದಿಂದ ಹಿಡಿದು ಅದನ್ನು ಗ್ರಹಿಸುತ್ತದೆ. ಮತ್ತು ಈ ಮೂಲಕ ತನ್ನಲ್ಲಿ ಜ್ಞಾನಬಲವಿದೆಯೆಂದು ತೋರ್ಪಡಿಸುತ್ತದೆ; ಆದರೆ ತಮಸ್ಸೊಡನೆ ಸಂಯೋಜಿತವಾಗಿರುವ ವಸ್ತುಗಳಮೇಲೆ — ಜನನ ಮರಣಭರಿತವಾದ ಪ್ರಪಂಚದ ಮೇಲೆ — ಆತ್ಮದ ದೃಷ್ಟಿ ಬಿದ್ದಿತೆಂದರೆ, ಆಗ ಅಭಿಮತವನ್ನು—ಊಹಾಪೋಹಗಳನ್ನು—ಅದು ಅವಲಂಬಿಸುತ್ತದೆ; ಮತ್ತು ಈ ಊಹಾಪೋಹಗಳು ಕ್ಷಣಕ್ಷಣಕ್ಕೂ ವ್ಯತ್ಯಾಸವಾದ ಹಾಗೆಲ್ಲಾ, ಅದರ ದೃಷ್ಟಿಯೂ ಮಂದವಾಗಿ, ಅದರ ಜ್ಞಾನವೇ ಹಾರಿ ಹೋದಹಾಗೆ ಕಾಣುತ್ತದೆ."

"ನಿಜ, ಹಾಗೆಯೇ ಕಾಣುತ್ತದೆ."

"ಸತ್ಯಜ್ಞಾನದ ವಿಷಯಕವಾದ ಪದಾರ್ಥಗಳಿಗೆ ಅವುಗಳಲ್ಲಿರುವ ಸತ್ಯವನ್ನಿತ್ತು, ಅವುಗಳನ್ನರಿಯಲೆಳಸುವ ಪುರುಷನಿಗೆ ಅವುಗಳನ್ನು

ಗ್ರಹಿಸುವ ಶಕ್ತಿಯನ್ನೂ ಕೊಡುವ ಈ ಚೈತನ್ಯವನ್ನೇ ಪರಮಶ್ರೇಯದ ಪ್ರಧಾನರೂಪವೆಂದು ನೀನು ತಿಳಿಯಬೇಕು. ಇದೇ ಜ್ಞಾನದ ಮತ್ತು, ನಾವು ತಿಳಿಯಲು ಸಾಧ್ಯವಾದಮಟ್ಟಿಗೆ, ಸತ್ಯಸತ್ವದ ಮೂಲ. ಜ್ಞಾನವೂ ಸತ್ಯವೂ ಬಹು ಸುಂದರವಾದ ವಸ್ತುಗಳೇನೋ ಹೌದು; ಆದರೂ ಶ್ರೇಯವೆಂಬುದು ಇವುಗಳೆರಡಕ್ಕೂ ಭಿನ್ನವಾದುದು, ಮತ್ತು ಅವುಗಳಿಗಿಂತ ಅತಿಶಯವಾದ ಅನುಪಮ ಸೌಂದರ್ಯವನ್ನು ಹೊಂದಿರುವಂತಹದು — ಹೀಗೆಂದು ತಿಳಿಯುವುದರಲ್ಲಿ ತಪ್ಪೇನೂ ಇರಲಾರದು. ಬೆಳಕನ್ನೂ ದೃಷ್ಟಿಯನ್ನೂ ಸೂರ್ಯನಿಗೆ ಹೋಲಿಸಬಹುದೇ ಹೊರತು, ಅವೂ ಸೂರ್ಯನೂ ಒಂದೇ ಎಂದು ಹೇಳಿದರೆ ತಪ್ಪಾಗುವಂತೆ, ಜ್ಞಾನ ಮತ್ತು ಸತ್ಯದ ವಿಷಯದಲ್ಲಿಯೂ ಕೂಡ, ಅವು ಶ್ರೇಯವನ್ನು ಹೋಲುತ್ತವೆಂದರೆ ಆಗಬಹುದು, ಆದರೆ ಅವೆರಡರಲ್ಲಿ ಯಾವುದೇ ಆಗಲಿ ಶ್ರೇಯಕ್ಕೆ ಸರಿಸಮವೆಂದಾಗಲಿ, ಶ್ರೇಯವೇ ಅದೆಂದಾಗಲಿ ಹೇಳಿದರೆ ತಪ್ಪಾಗುವುದು, ಏಕೆಂದರೆ ಶ್ರೇಯವೆಂಬ ಗುಣಕ್ಕೆ ಅವುಗಳಿಗಿಂತಲೂ ಹೆಚ್ಚಿನ ಬೆಲೆಯನ್ನೇ ಕಟ್ಟಬೇಕು."

"ಶ್ರೇಯವೆಂಬುದು ಜ್ಞಾನ ಸತ್ಯಗಳ ಮೂಲ ಮಾತ್ರವಾಗಿರದೆ ಅವುಗಳನ್ನು ಸೌಂದರ್ಯದಲ್ಲಿಯೂ ಮೀರಿಸುತ್ತದೆಂದು ಹೇಳಿದಮೇಲೆ, ಅದರದು ಲೋಕೋತ್ತರವಾದ, ಅನಿರ್ವಚನೀಯವಾದ, ಸೌಂದರ್ಯವೇ ಆಗಿರಬೇಕು; ಏಕೆಂದರೆ,—ಅದು 'ಪ್ರೇಯ'(ಸುಖ)ವೆಂದು ನಿನ್ನ ಅರ್ಥವಲ್ಲ ತಾನೆ?"

"ಸಾಕು, ಸುಮ್ಮನಿರು! ಆ ಸೊಲ್ಲನ್ನೇ ಎತ್ತಬೇಡ ಇಲ್ಲಿ! ಬೇಕಾದರೆ, ನಾನು ಕೊಟ್ಟ ದೃಷ್ಟಾಂತವನ್ನು ಮುಂದೆಗಾಣುವ ರೀತಿಯಲ್ಲಿ ಇನ್ನೂ ಪರಿಶೀಲಿಸು."

"ಹೇಗೆ, ತೋರಿಸು."

"ಸೂರ್ಯನು ದೃಶ್ಯ ವಸ್ತುಗಳಿಗೆ ಅವು ನಮ್ಮ ಕಣ್ಣಿಗೆ ಗೋಚರವಾಗಬಲ್ಲ ಶಕ್ತಿಯೊಂದನ್ನೇ ಅಲ್ಲ—ಅವುಗಳಲ್ಲಿ ಜೀವಶಕ್ತಿಯನ್ನೂ, ಬೆಳವಣಿಗೆಯನ್ನೂ, ಆಹಾರವನ್ನೂ ತುಂಬುತ್ತಾನೆ, ಆದರೂ ಜೀವಶಕ್ತಿಯೇ ಸೂರ್ಯನೆನ್ನಲಾಗುವುದಿಲ್ಲ — ಇದಕ್ಕೆ ನೀನು ಒಪ್ಪುವೆಯಲ್ಲವೇ?"

“ ಒಪ್ಪುತ್ತೇನೆ.”

“ ಹಾಗಾದರೆ ಅದೇ ಪ್ರಕಾರವಾಗಿಯೇ ಜ್ಞಾನವಿಷಯಕ ವಸ್ತುಗಳು ಶ್ರೇಯದಿಂದ ಜ್ಞೇಯತ್ವವೊಂದನ್ನೇ ಅಲ್ಲ—ಇದರ ಜೊತೆಗೆ ಯಥಾರ್ಥವಾದ ಮತ್ತು ಆಧಾರಭೂತವಾದ ಸತ್ತನ್ನೂ (ಇರುವಿಕೆಯನ್ನೂ) ಪಡೆಯುವುವೆಂದು ನೀನು ಒಪ್ಪಬೇಕು; ಆದರೂ ಯಥಾರ್ಥ ಸತ್ತೇ ಶ್ರೇಯವಲ್ಲ, ಶ್ರೇಯವೆಂಬುದು ಶಕ್ತಿಯಲ್ಲಿಯೂ ಮಹಿಮೆಯಲ್ಲಿಯೂ ಸತ್ತನ್ನು ಮೀರಿಸುತ್ತದೆ.”

ಇದನ್ನು ಕೇಳಿ ಗ್ಲಾಕನ್ನನು ಒಂದು ವಿನೋದವಾದ ರೀತಿಯಲ್ಲಿ “ ಅಹಹ! ಎಂತಹ ವಿಚಿತ್ರವಾದ ಘನತೆ ” ಎಂದು ಕೂಗಿಕೊಂಡನು. “ ವಿಚಿತ್ರವೋ, ಸಚಿತ್ರವೋ, ನನಗೆ ತಿಳಿದದ್ದನ್ನು ಹೇಳಬೇಕೆಂದು ನಿರ್ಬಂಧಪಡಿಸಿದವನು ನೀನೇ, ಆದುದರಿಂದ ಇದಕ್ಕೆಲ್ಲಾ ನೀನೇ ಜವಾಬ್ದಾರ ” ಎಂದು ನಾನು ಹೇಳಿದೆನು........”೧

## ಸಾಮಾನ್ಯವಾದದ ಉಪಸಂಹಾರ

ಸಾಕ್ರಟೀಸನಲ್ಲಿಯೂ ಪ್ಲೇಟೋವಿನಲ್ಲಿಯೂ ಕಂಡುಬರುವ ಸಾಮಾನ್ಯವಾದ ಅನೇಕರಿಗೆ ಸೋಜಿಗವಾದ ಸಿದ್ಧಾಂತವೆಂದು ತೋರಬಹುದು. ಆಂಟಿಸ್ತೆನೀಸ್ ಹೇಳಿದಂತೆಯೇ ಅವರೂ, ಪ್ರತ್ಯೇಕಗಳನ್ನು ನಾವು ಕಾಣುತ್ತೇವೆ, ಅವುಗಳ ಅನುಭವ ಹೊಂದುತ್ತೇವೆ, ಆದರೆ ಸಾಮಾನ್ಯಗಳನ್ನು ನೋಡಿರುವವರು ಯಾರು? ಎಂದು ಪ್ರಶ್ನಿಸಬಹುದು. ನ್ಯಾಯ, ಸತ್ಯ, ಸೌಂದರ್ಯ — ಇವು ಕೇವಲ ಭಾವನಾಮಗಳಲ್ಲವೆ

೧. “ ಆದರ್ಶ ರಾಜ್ಯ”: ೫೦೬ ಬಿ. ಮೇಲೆ ವಿವರಿಸಿದಂತೆ ಶ್ರೇಯತತ್ವಕ್ಕೆ ಇಷ್ಟು ಉಚ್ಚಸ್ಥಾನವನ್ನು ಕೊಟ್ಟಮೇಲೆ ಪ್ಲೇಟೊ ಅದನ್ನು ಈಶ್ವರತತ್ವವೆಂದೇ ಭಾವಿಸಿದನೇ ಇಲ್ಲವೆ ಎಂಬ ವಿಷಯದಲ್ಲಿ ಚರ್ಚೆ ಇದೆ. ಕೆಲ ಭಾಷ್ಯಕಾರರು “ಟಿಮೇಯಸ್” ಎಂಬ ಸಂವಾದದ ಆಧಾರದ ಮೇಲೆ ಶ್ರೇಯವೆಂಬುದು ಈಶ್ವರ ತತ್ವವಲ್ಲವೆಂದೂ ಶ್ರೇಯವೂ ಈಶ್ವರನೂ ಸಮಾನವಾದ ಆದರೂ ಭಿನ್ನವಾದ ತತ್ವಗಳೆಂದೂ ಅಭಿಪ್ರಾಯಪಡುತ್ತಾರೆ. ಆದರೆ ಪ್ಲೇಟೋವಿನ ಅಧ್ಯಂತ ತತ್ವಶಾಸ್ತ್ರದ ಆತ್ಮೀಯತೆಯನ್ನು ಸಮಾಲೋಚಿಸಿದಲ್ಲಿ ಆತನ ಮನಸ್ಸಿನಲ್ಲಿ ಶ್ರೇಯವೂ ಈಶ್ವರ ತತ್ವವೂ ಒಂದೇ ಆಗಿದ್ದುವೆಂಬುದರಲ್ಲಿ ಸಂದೇಹವೇನೂ ಬರುವುದಿಲ್ಲ.

ಮತ್ತೇನು? ಅವುಗಳಲ್ಲಿ ವಸ್ತುತಂತ್ರವಾದ ಅನುಭವವೇನಿದೆ? ಭಾವ ನಾಮಗಳೆಲ್ಲಾ ಮಾನವನ ಭಾವಕಲ್ಪಿತ — ಪುರುಷತಂತ್ರ — ಬಿಂಬ ಗಳಲ್ಲವೆ? ಇಂತಹ ಶಂಕೆಗಳು ಲೋಕರೂಢಿಯ—ಪ್ಲೇಟೊ ಹೇಳುವಂತೆ “ಅಭಿಮತ”ದ—ಮಾತನ್ನು ಆಡುತ್ತವೆಯೇ ಹೊರತು ತಾತ್ವಿಕದೃಷ್ಟಿ ಯನ್ನು ತೋರ್ಪಡಿಸುವುದಿಲ್ಲ. ಸಾಮಾನ್ಯಗಳಿಗೆ ಭಾವಸತ್ತಿಗಿಂತಲೂ ಶ್ರೇಷ್ಠವಾದ ಪಾರಮಾರ್ಥಿಕ ಸತ್ತೊಂದುಂಟು. ವಿಜ್ಞಾನಶಾಸ್ತ್ರವನ್ನು ಪರೀಕ್ಷಿಸಿ. ವೈಜ್ಞಾನಿಕನು ಸಾವಿರಾರು ಪ್ರತ್ಯೇಕಗಳು ಉದಹರಿಸ ಬಹುದಾದ ಸಾಮಾನ್ಯದ ಸ್ವಭಾವವನ್ನು ಶೋಧನೆಮಾಡಲು ಪ್ರಯತ್ನ ಪಡುವನೇ ಹೊರತು ಪ್ರತ್ಯೇಕದ ವೈಯಕ್ತಿಕ ವೈಲಕ್ಷಣ್ಯವನ್ನು ಕಂಡು ಹಿಡಿಯಬೇಕೆಂದಲ್ಲ. ಜೇಡರ ಹುಳುವಿನ—ಅಂದರೆ ಆ ಜಾತಿಗೆ ಸೇರಿದ ಹುಳುವಿನ—ಗುಣಲಕ್ಷಣಗಳು ಯಾವುವು, ವಿದ್ಯುಚ್ಛಕ್ತಿಯ ಮಹಿಮೆ ಯೇನು, ಇಂಗಾಲದಿಂದ ಆಗುವ ಪ್ರಯೋಜನ ಯಾವುದು, ಎಂಬ ಪ್ರಶ್ನೆಗಳನ್ನು ಕೇಳುತ್ತಾನಲ್ಲದೆ ನನ್ನ ಕೊಠಡಿಯಲ್ಲಿ ಬಲೆಕಟ್ಟಿರುವ ಜೇಡರ ಹುಳುವನ್ನಾಗಲಿ, ಉರಿಯುವ ವಿದ್ಯುಚ್ಛಕ್ತಿಯ ದೀಪವನ್ನಾಗಲಿ, ಅಥವಾ ಯಾರೊಬ್ಬರ ಮನೆಯ ಒಲೆಯಲ್ಲಾದರೂ ಸಿಕ್ಕಬಹುದಾದ ಇದ್ದಲಿ ನಲ್ಲಿರುವ ಇಂಗಾಲವನ್ನಾಗಲಿ ಕುರಿತು ಪ್ರಶ್ನಿಸುವುದಿಲ್ಲ. ನಿಜ, ಪ್ರತ್ಯೇಕ ವಸ್ತುಗಳನ್ನು ಪರೀಕ್ಷಿಸಿಯೇ ವೈಜ್ಞಾನಿಕನು ಸಾಮಾನ್ಯದ ಸ್ವರೂಪ ವನ್ನು ಅರಿಯಬಲ್ಲನು; ಆದರೆ ಸಾಮಾನ್ಯದ ಸ್ವರೂಪ ನಿರೂಪಣದ ಸಲುವಾಗಿಯೇ ಇಂತಹ ಪ್ರತ್ಯೇಕಗಳ ಪರೀಕ್ಷೆ. ಅಂದಮೇಲೆ ವೈಜ್ಞಾನಿ ಕನ ದೃಷ್ಟಿಯಲ್ಲಿ ಸಾಮಾನ್ಯಗಳು, ಜಾತೀಯ ಭಾವಗಳು, ವರ್ಗೀಯ ವಸ್ತುಗಳು, ಪ್ರತ್ಯೇಕಗಳಿಗಿಂತಲೂ ಅತಿಶಯವಾದ ಸತ್ವವನ್ನುಳ್ಳ ದ್ರವ್ಯಗಳೆಂದೆನಿಸಿದುವು. ಗಣಿತಶಾಸ್ತ್ರಜ್ಞನು ಪರಿಪೂರ್ಣವೃತ್ತಗಳನ್ನೂ ತ್ರಿಕೋಣಗಳನ್ನೂ ಕುರಿತು ವಿಚಾರಮಾಡುವನು — ಇವುಗಳೆಲ್ಲವೂ ಅವನ ಮನಸ್ಸಿನ ಭ್ರಾಂತಿ ಮಾತ್ರಗಳೇನು? “ಅಬದ್ಧಕ್ಕೆ ಅಪ್ಪಣೆ ಎಂದರೆ ಬಾಯಿಗೆ ಬಂದಹಾಗೆಲ್ಲಾ” ಎನ್ನುವಂತೆ ಭ್ರಾಂತಿ ವಸ್ತುಗಳಿಗೆ ಮನಸ್ಸು ಬಂದ ಆಕಾರವನ್ನೂ ರೂಪವನ್ನೂ ಗುಣಗಳನ್ನೂ ಕೊಡಬಹುದು; ಆದರೆ ತ್ರಿಕೋಣಾಕೃತಿಯನ್ನು ಪರಿಶೀಲಿಸಿದರೆ ಆದರ ಮೂರು ಕೋನಗಳ

ಮೊತ್ತವನ್ನು ಎರಡು ಸಮಕೋನಗಳಿಗೆ ಸರಿಮಾಡಬಹುದೇ ಹೊರತು ಹೆಚ್ಚಾಗಲಿ ಕಡಮೆಯಾಗಲಿ ಮಾಡುವುದಕ್ಕಾಗಲಾರದು. ಗಣಿತ ಲೋಕ ದಲ್ಲಿರುವ ಪದಾರ್ಥಗಳಿಗೆ ಪರಿಪೂರ್ಣತೆಯೇ ಪ್ರಧಾನ ಲಕ್ಷಣ. ಪರಿ ಪೂರ್ಣವಾಗಿ ಮಂಡಲಾಕಾರವುಳ್ಳ ವೃತ್ತವನ್ನಾಗಲಿ, ಸರಳವಾಗಿರುವ ರೇಖೆಯನ್ನಾಗಲಿ ಬರೆಯಲು ಸಾಧ್ಯವಿಲ್ಲ: ಆದರೂ ಪರಿಪೂರ್ಣ ವೃತ್ತಗಳೂ ಸರಳರೇಖೆಗಳೂ ಇಲ್ಲದೆಹೋದಲ್ಲಿ ರೇಖಾಗಣಿತವೇ ಸುಳ್ಳಾಗುವುದು. ಇನ್ನು ಚಿತ್ರಕಲೆಯನ್ನು ಅವಲೋಕಿಸೋಣ. ಚಿತ್ರಗಾ ರನು ಮಾದರಿಯನ್ನಿಟ್ಟುಕೊಂಡೇ ಚಿತ್ರಿಸುವಂತೆ ಕಾಣುತ್ತದೆ; ಆದರೆ ಆತನ ಗುರಿ ಮಾದರಿಯನ್ನು ಇರುವಂತೆಯೇ ಚಿತ್ರದಲ್ಲಿಳಿಸುವುದಲ್ಲ— ಆ ಮಾದರಿಯಲ್ಲಡಗಿರುವ ಶಾಶ್ವತವಾದ ಜಾತೀಯ ಅಥವಾ ವರ್ಗೀಯ ಭಾವಸತ್ವವನ್ನು ಪ್ರಕಾಶಪಡಿಸುವುದು. ದಮಯಂತಿ ಚರಿತ್ರೆಯಲ್ಲಿ ಹುಟ್ಟಿಲ್ಲದಿರಬಹುದು; ಶಕುಂತಲೆ — ದುಷ್ಯಂತ, ಮೇನಕೆ — ವಿಶ್ವಾ ಮಿತ್ರ ಇವರ ವ್ಯಾಪಾರವ್ಯವಹಾರಗಳು ಕೇವಲ ಕಾಲ್ಪನಿಕಕ್ರಿಯೆ ಗಳಿರಬಹುದು. ಆದರೆ ರವಿವರ್ಮನ ಚಿತ್ರಗಳಲ್ಲಿ ನಾವು ಕಾಣಬೇಕಾಗಿರು ವುದು ಚಾರಿತ್ರವ್ಯಾಪಾರಗಳನ್ನಲ್ಲ — ನಿತ್ಯಗಳಾದ, ನಿರ್ವಿಕಾರಗಳಾದ, ಮಾನವಮಾದರಿಗಳನ್ನು. ಪ್ರತ್ಯೇಕದ ಪ್ರತಿಬಂಧಕದ ಮೂಲಕವಾಗಿ ಸಾಮಾನ್ಯದ ಸೊಬಗನ್ನು ಸೂಚಿಸುವುದೇ ಎಲ್ಲಾ ಶ್ರೇಷ್ಠಕಲೆಯ ಹೆಗ್ಗುರುತು. ಭೈರವಿರಾಗದ ಸೊಬಗನ್ನು ಚೆಲ್ಲುವ ಸಲುವಾಗಿ 'ವಿರಿ ಬೋಣಿ' ಎಂಬ ವರ್ಣ ಹುಟ್ಟಿತಲ್ಲದೆ ಈ ವರ್ಣಕ್ಕೋಸುಗ ಆ ರಾಗ ಹುಟ್ಟಲಿಲ್ಲ.

ಈ ರೀತಿಯಾಗಿ ಜೀವನದ ಯಾವ ಪ್ರಾಂತರವನ್ನು ಪರಿಗಣಿ ಸಿದರೂ ಸಾಮಾನ್ಯಗಳು ಭ್ರಾಂತಿದರ್ಶನಗಳೆನ್ನುವ ಲೋಕರೂಢಿಯ ಭಾವ ತಲೆಕೆಳಗಾಗುತ್ತದೆ. ಸಾಮಾನ್ಯಗಳೇ ಇರುವಿಕೆಯನ್ನುಳ್ಳ ವಸ್ತು ಗಳು, ಪ್ರತ್ಯೇಕಗಳು ಇರುವಿಕೆ ಇಲ್ಲದ ಅವಸ್ತುಗಳು; ಸಾಮಾನ್ಯಗಳು ನಿತ್ಯನಿರುತ್ಪನ್ನ ನಿರ್ವಿಕಾರಗಳು, ಪ್ರತ್ಯೇಕಗಳು ಕ್ಷಣಿಕಗಳು, ಕಾಲವಶ ವಾದುವು, ಪರಿಣಾಮಹೊಂದತಕ್ಕವು; ಸಾಮಾನ್ಯಗಳು ಕಾಲಾತೀತ ವಾದುವು, ಪ್ರತಿ ಒಂದೂ ಏಕವಾದುದು ಮತ್ತು ಪರಿಪೂರ್ಣವಾದುದು;

ಪ್ರತ್ಯೇಕಗಳು ಅಪರಿಪೂರ್ಣವಾದುವು ಮತ್ತು ಅಸಂಖ್ಯಾತವಾದುವು. ಪರಿಪೂರ್ಣವಾದ ಪ್ರಪಂಚವೇ ಹೆಚ್ಚು ಸತ್ತನ್ನುಳ್ಳುದೆಂದು ಹೇಳುವುದರಲ್ಲಿ ತಪ್ಪೇನಿದೆ? ಯಾವುದು ತನ್ನ ಜಾತಿಯಗುಣವನ್ನು ಹೆಚ್ಚು ಸ್ಪಷ್ಟವಾಗಿ ತೋರ್ಪಡಿಸುತ್ತದೋ ಅದನ್ನು ನಿಜತರವಾದುದೆಂದು ನಾವು ಹೇಳುವುದಿಲ್ಲವೇ? ನಿಜವಾದ ನಾಯಿ, ನಿಜವಾದ ರೇಷ್ಮೆ, ಸಾಚಾಸರಿಗೆ—ಇವುಗಳ ಅರ್ಥವಿದೇ ಅಲ್ಲವೇ? ಪ್ರತ್ಯೇಕಗಳು ಸಾಮಾನ್ಯಗಳಲ್ಲಿ ಭಾಗಿಗಳಾಗಿರುವುವೆಂದು ಪ್ಲೇಟೊ ಹೇಳುತ್ತಾನೆ. ಸಾಕ್ರಟೀಸನು ಪ್ರತ್ಯೇಕಗಳು ಸಾಮಾನ್ಯಗಳನ್ನು ಅನುಕರಣಮಾಡುತ್ತವೆಂದು ದೀರ್ಘಕಾಲ ನಂಬಿದ್ದನು. ಸಾಕ್ರಟೀಸನ ಅಭಿಪ್ರಾಯದಲ್ಲಿ ಸಾಮಾನ್ಯಪ್ರಪಂಚಕ್ಕೂ ಪ್ರತ್ಯೇಕ ಲೋಕಕ್ಕೂ ಮಧ್ಯೆ ದಾಟಲಸಾಧ್ಯವಾದ ಕಂದರವಿದ್ದೇ ಇತ್ತು. ಈಗ ಪ್ಲೇಟೋವಾದರೋ ಸಾಮಾನ್ಯಗಳು ಪ್ರತ್ಯೇಕಗಳಲ್ಲಿಯೇ ಇರುವುವು, ಬೇರೆಯಾವುದೋ ತಮ್ಮದೇ ಒಂದು ಲೋಕದಲ್ಲಿಲ್ಲವೆಂದು ಸಾರಿದನು[೧]. ಪ್ರತ್ಯೇಕಗಳಲ್ಲಿರುವ ವಸ್ತುಸತ್ವಗಳೇ ಸಾಮಾನ್ಯಗಳು. ವಸ್ತುಗಳ

೧. ಈ ವಿಚಾರದಲ್ಲಿ ಪ್ಲೇಟೋವಿನ ಭಾವವಿದೇ ಎಂದು ನಿಖರವಾಗಿ ನಾವು ಹೇಳುವಂತಿಲ್ಲ. ಪ್ಲೇಟೊ ಪಂಡಿತರಲ್ಲಿಯೇ ಬಹು ವಿಧದ ಭಿನ್ನಾಭಿಪ್ರಾಯಗಳಿವೆ. ಅರಿಸ್ಟಾಟಲನ ಕಾಲದಿಂದಲೂ ನಡೆದುಕೊಂಡು ಬಂದಿರುವ ಸಾಂಪ್ರದಾಯಿಕ ವಿವರಣೆ ಪ್ರಕಾರವಾಗಿ ಸಾಮಾನ್ಯಲೋಕವೂ ಪ್ರತ್ಯೇಕಲೋಕವೂ ಬೇರೆ ಬೇರೆ; ಈ ಅಭಿಪ್ರಾಯ ಹತ್ತೊಂಬತ್ತನೆಯ ಶತಮಾನದವರೆಗೂ ಬೇರೂರಿತ್ತು, ಸೆಲ್ಲರ್ ಎಂಬ ಉದ್ದಾಮಪಂಡಿತರೇ ಇದನ್ನು ಎತ್ತಿ ಹಿಡಿದವರು. ಹತ್ತೊಂಬತ್ತನೆಯ ಶತಮಾನದಲ್ಲಿ ನೆಟಾರ್ಪ್, ಸ್ಟೂಯರ್ಟ್ ಎಂಬ ಕೆಲ ಪಂಡಿತರು ಈ ಸಿದ್ಧಾಂತ ತಪ್ಪೆಂದೂ ಸಾಮಾನ್ಯಗಳು ಪ್ರತ್ಯೇಕಗಳಲ್ಲಿವೆಯೇ ಹೊರತು ಬೇರೆಯಾಗಿಲ್ಲವೆಂದೂ ವಿವರಣೆ ಇತ್ತರು. ಈ ದೃಷ್ಟಿಯನ್ನೇ—ಪ್ಲೇಟೋವಿಗೆ ಈ ಸಾಮಾನ್ಯಸಿದ್ಧಾಂತ ಅನ್ವಯವಾಗುವಮಟ್ಟಿಗೆ—ಈ ಪುಸ್ತಕದಲ್ಲಿ ಅನುಸರಿಸಿರುವುದು. ಆದರೆ ಈಗ ಇಪ್ಪತ್ತನೆಯ ಶತಮಾನದಲ್ಲಿಯೋ ಅಂದರೆ ಪುನಃ ದ್ವೈತವಾದಕ್ಕೇ ಪಂಡಿತರು ಹಿಂತಿರುಗಿದಂತಿದೆ. ರಿಟ್ಟರ್ ಎಂಬ ಜರ್ಮನ್ ಪಂಡಿತರೂ, ಕಾರ್ಲಫರ್ಡ್ ಮತ್ತು ಹಾರ್ಡೀ ಎಂಬ ಆಂಗ್ಲೇಯ ವಿದ್ವಾಂಸರೂ ಸಾಮಾನ್ಯಗಳು ಪ್ರತ್ಯೇಕಗಳಲ್ಲಿದ್ದರೂ ಅವುಗಳನ್ನು ಮೀರಿದ—ಅವುಗಳಿಗಿಂತಲೂ ಬೇರೆಯಾದ (Transcendent)—ಸತ್ತನುಳ್ಳವುಗಳೆಂದು ಹೇಳುತ್ತಿದಾರೆ. ಬರ್ನೆಟ್ ಮತ್ತು ಟೇಲರ್-ಇವರು ಈ ಪುಸ್ತಕದಲ್ಲಿ ಅನುಸರಿಸುವ ದೃಷ್ಟಿಯನ್ನೇ ಪುಷ್ಟೀಕರಿಸುತ್ತಾರೆ.

ಸ್ಥಿತಿತತ್ವಗಳೇ (Principles of Being), ವಿಜ್ಞಾನದಲ್ಲಿ ಕಾಣುವ ಪ್ರಕೃತಿ ನಿಯಮಗಳೇ (Laws of Nature), ಪ್ರಕೃತಿ ಸಂಭವಗಳ ಜ್ಞೇಯ ತತ್ವಗಳೇ(Principles of Explanation), ಸಾಮಾನ್ಯಗಳೆನ್ನಬಹುದು. ಈ ಸಾಮಾನ್ಯಗಳ ಪ್ರಭಾವದಿಂದಲೇ ಪ್ರತ್ಯೇಕಗಳಿಗೆ ಕ್ರಮಸಮೀಚೀನತೆ ಗಳುಂಟಾಗಿ ಅವು ನಮ್ಮ ಜ್ಞಾನಕ್ಕೆ ಸ್ವಲ್ಪಮಟ್ಟಿಗಾದರೂ ನಿಲುಕುವುವು. ಸಾಮಾನ್ಯಗಳು ಪೂರ್ಣವಾಗಿ ಜ್ಞೇಯ-ಜ್ಞಾನದ ಬಣ್ಣವೇ ಅವು ಗಳಿಗಿರತಕ್ಕುದು. ಪ್ರತ್ಯೇಕಗಳು ಸಾಮಾನ್ಯಗಳ ಸಂಪರ್ಕವನ್ನು ಹೊಂದಿ ರುವುದರಿಂದ ಸ್ವಲ್ಪಮಟ್ಟಿಗೆ ನಮ್ಮ ಬುದ್ಧಿಗ್ರಾಹ್ಯವಾಗಿರುವುವು. ಆದರೆ ಇವುಗಳಲ್ಲಿ ಅಸದ್ವಿಶೇಷ ಹೆಚ್ಚಾಗಿರುವುದರಿಂದ ಇವುಗಳನ್ನು ಕುರಿತ ನಮ್ಮ ಜ್ಞಾನ ಮಸುಕುಮಸುಕಾಗಿಯೂ ಮಬ್ಬು ಕವಿದಂತೆಯೂ ಇರುವುದು. ಇಂತಹ ಜ್ಞಾನವನ್ನೇ ಪ್ಲೇಟೋ 'ಅಭಿಮತ' ಅಥವಾ 'ಅಭಿಪ್ರಾಯ'ವೆಂದು ಕರೆಯುವುದು. ಕೇವಲ ಶೂನ್ಯವನ್ನು(non-being) ಕುರಿತು ಯಾವವಿಧವಾದ ಜ್ಞಾನವೂ ಸಾಧ್ಯವಿಲ್ಲವಾದುದರಿಂದ ಇಂತಹ ಜ್ಞಾನದ ಅಭಾವವನ್ನು ಆತನು 'ಅವಿದ್ಯಾ' ಅಥವಾ 'ಅಜ್ಞಾನ' (Ignorance)ಎಂದು ಕರೆಯುವನು.

"ಆದರ್ಶ ರಾಜ್ಯ" ಎಂಬ ಸಂವಾದದ ಆರನೆಯ ಅಧ್ಯಾಯದಲ್ಲಿ ಅಭಿಮತಪ್ರಿಯರಾದ—ವ್ಯಾವಹಾರಿಕದೃಷ್ಟಿಮಾತ್ರವುಳ್ಳ — ಜನರನ್ನು ಪ್ಲೇಟೊ ಈ ರೀತಿಯಲ್ಲಿ ವರ್ಣಿಸುತ್ತಾನೆ. ಒಂದು ನೆಲಮಾಳಿಗೆಯಂತಿ ರುವ ಗುಹೆಯಲ್ಲಿ ಗುಹೆಯ ಬಾಗಿಲಿಗೆ ಬೆನ್ನು ತಿರುಗಿಸಿಕೊಂಡು ಹಲವರು ಕುಳಿತಿರುವರು. ಇವರು ಕತ್ತು, ಕೈಕಾಲುಗಳನ್ನು ಅಲುಗಿಸಲು ಕೂಡ ಆಗದಂತೆ ಬಂಧಿಸಲ್ಪಟ್ಟಿರುವರು. ಗವಿಯ ಹೊರಗಿನ, ಅಂದರೆ ತಮ್ಮ ಬೆನ್ನು ಹಿಂದಿನ, ಪ್ರದೇಶದಲ್ಲಿ ಮುಗಿಲುಮುಟ್ಟುವಂತೆ ಅಗ್ನಿಜ್ವಾಲೆ ಯೊಂದು ಉರಿಯುತ್ತಿದೆ. ಅದರ ದೆಸೆಯಿಂದ ಅಕ್ಕಪಕ್ಕದಲ್ಲಿ ಸರಿದಾಡುವ ವಸ್ತುಗಳ ಛಾಯೆಗಳು ಇವರ ಕಣ್ಣೆದುರಿಗಿರುವ ಗವಿಯ ಗೋಡೆಯ ಮೇಲೆ ಬೀಳುತ್ತಿವೆ. ಇವರು ಆ ಛಾಯೆಗಳನ್ನು ಮಾತ್ರ ದೃಷ್ಟಿಸಬಲ್ಲರೇ ಹೊರತು ಯಾವ ವಿಧವಾದ ಮತ್ತೊಂದು ಪ್ರಪಂಚವನ್ನೂ ಅರಿಯದೆ ಸೆರೆಯಾಳುಗಳಂತೆ ಇದಾರೆ. ಅಪ್ರಬುದ್ಧನಾದ ಮಾನವನ ಸ್ಥಿತಿಯೇ ಇದು.

ಇವರಿಗೆ ತಮ್ಮ ಕಣ್ಣೆದುರಿಗೆ ಸುಳಿದಾಡುವ ಛಾಯೆಗಳೇ ಸರ್ವಸತ್ತ್ವನ್ನುಳ್ಳ ಸತ್ಯವಸ್ತುಗಳಂತೆ ಹೇಗೆ ಕಾಣುವುವೋ, ಹಾಗೆ ನಮ್ಮ ಸದ್ಯದ ವ್ಯಾವಹಾರಿಕ ದೃಷ್ಟಿಗೆ ಈ ಸ್ಥೂಲಪ್ರಪಂಚವೇ ಸತ್ಯಪ್ರಪಂಚವೆಂದು ತೋರಿಬರುವುದು. ಈ ವ್ಯಾವಹಾರಿಕ ದೃಷ್ಟಿಯಲ್ಲಿ ನಮ್ಮ ಇಂದ್ರಿಯಾನುಭವವೊಂದೇ ಅಲ್ಲ: ನಮ್ಮ ಸಂಕುಚಿತ ರಾಗಭಾವಗಳೂ, ಆಶಾಪಾಶಗಳೂ, ನಡೆವಳಿಸಂಪ್ರದಾಯಗಳೂ, ಸೇರಿವೆ. ಸೆರೆಯಾಳುಗಳಲ್ಲಿ ಯಾವನಾದರೂ ದೈವಯೋಗದಿಂದ ಬಂಧನದಿಂದ ಬಿಡುಗಡೆ ಹೊಂದಿ ಗವಿಯ ಮೇಲ್ಭಾಗಕ್ಕೆ ಬಂದು ವಸ್ತುಪ್ರಪಂಚವನ್ನು ಪ್ರತ್ಯಕ್ಷವಾಗಿ ದರ್ಶನಮಾಡಿ ಪುನಃ ಗವಿಗೆ ಹಿಂತಿರುಗಿ ತನ್ನ ಜೊತೆಗಾರರು ನೋಡುತ್ತಿರುವುದು ಕೇವಲ ಛಾಯೆಗಳು, ವಸ್ತುಸ್ಥಿತಿಯೇ ಬೇರೆ, ಎಂದು ಹೇಳಿದರೆ ಅವರು ಆತನನ್ನು ಹುಚ್ಚನೆಂದೂ ಭ್ರಾಂತಿಮೋಹಿತನೆಂದೂ ಅಪಹಾಸ್ಯಮಾಡುವರಲ್ಲವೆ? ವ್ಯಾವಹಾರಿಕವೆಂಬ ಕಣ್ಣಿನ ಪರೆ ಬಿದ್ದುಹೋಗಿ ಸಮ್ಯಗ್ ದೃಷ್ಟಿಯನ್ನು ಪಡೆದಿರುವ ಜ್ಞಾನಿಯನ್ನು ಕಂಡರೆ ನಾವೂ ಹೀಗೆಯೇ ಅವಹೇಳನ ಮಾಡುವೆವು. ಈ ದೃಷ್ಟಿಯನ್ನು ಪಡೆದಿರುವವರು ಅತ್ಯಂತ ವಿರಳ; ಅದನ್ನು ಹೊಂದಿ ಮುಕ್ತರಾಗಬೇಕಾದರೆ, ಇಂದ್ರಿಯಾನುಭವವನ್ನು ಅತಿಕ್ರಮಿಸಿ ತತ್ವಜ್ಞಾನವನ್ನು (dialectic) ಸಂಪಾದಿಸಿ ಸುಳಿದು ಸರಿಯುವ ಪ್ರತ್ಯೇಕ ಸಂಭವಗಳನ್ನು ದಾಟಿ ಸ್ಥಿತವಾಗಿರುವ ಸಾಮಾನ್ಯಗಳನ್ನು ಸಂದರ್ಶಿಸುವ ಸುಯೋಗ ದೊರಕಬೇಕು.

ಸಾಮಾನ್ಯವಾದವನ್ನು ಮಾನವಜಾತಿ ಇದುವರೆಗೂ ಪಡೆದಿರುವ ನಾಗರಿಕತೆಯೇ ಮೊದಲಾದ ಪರಮೋತ್ಕೃಷ್ಟವಾದ ಮಾನವಾರ್ಜಿತ ದಾಯಸೊತ್ತುಗಳಲ್ಲೊಂದು ಎಂದು ನಿರ್ಭಯವಾಗಿ ಹೇಳಬಹುದು. ಅದರ ತಾತ್ವಿಕವಿವರಣೆಯ ವಿಚಾರವಾಗಿ ಎಷ್ಟೇ ವಿಧವಾದ ತರ್ಕವಿತರ್ಕಗಳಿರಲಿ, ನಮ್ಮ ಜೀವನಕ್ಕೆ ಸಂಬಂಧಪಟ್ಟಂತೆ ಅದರ ಸಾರಭೂತವಾದ ಅರ್ಥವೇನೆಂದರೆ: ನಮ್ಮ ಸದ್ಯದ ಜ್ಞಾನದ ಮತ್ತು ಜೀವನದ ದಿಙ್ಮಂಡಲ ನಾವು ದೃಷ್ಟಿಸುವ, ಕೇಳುವ, ಮುಟ್ಟಿನೋಡುವ ಇಂದ್ರಿಯಾನುಭವವೆಂಬ ಮೇರೆಯನ್ನು ಹೊಂದಿ ಸಂಕುಚಿತ ಜ್ಞಾನವಾಗಿ, ಕುಬ್ಜಜೀವನವಾಗಿ ಪರಿಣಮಿಸಿದೆ; ಕಾಲರಹಿತವಾದ, ಭಾವಾತ್ಮಕವಾದ,

ಇಂದ್ರಿಯಾತೀತವಾದ ಬೇರೊಂದುಂಟು ಎಂಬುದೇ. ಇಂಥ ಪ್ರಪಂಚವನ್ನು ಸತ್ವಪ್ರಪಂಚ ಸಾಮಾನ್ಯವಾದ ನಮಗೆ ಅನತಿದೂರದಲ್ಲಿಯೇ ಗೋಚರಪಡಿಸುವುದರಿಂದ ನಮ್ಮ ಕ್ಷಿತಿಜ ಸೀಮಾತೀತವಾಗಿ ನಮ್ಮ ಜ್ಞಾನ ವಿಸ್ತಾರವಾಗಿ ಜೀವನ ಪೂರ್ಣರೂಪವನ್ನು ತಾಳಲು ಸಾಧ್ಯವಾಗುವುದು. ಸ್ಥೂಲಪ್ರಪಂಚ ಸರ್ವಕಾಲದಲ್ಲಿಯೂ ಇರತಕ್ಕುದೆಂದೂ ಸ್ವಾವಲಂಬನವಾದುದೆಂದೂ ನಮ್ಮ ನಂಬಿಕೆ; ಕಾಲವಶವಾದ ಈ ಸ್ಥೂಲ ನಿತ್ಯವಾದ ಸೂಕ್ಷ್ಮಲೋಕದ ಬಿಂಬಮಾತ್ರವೆಂದು ಪ್ಲೇಟೊ ಸಾರುತ್ತಾನೆ. ಒಂದು ಮಾತಿನಲ್ಲಿ, ಯೌಗಿಕದೃಷ್ಟಿಯೇ (mysticism) ಪ್ಲೇಟೋದರ್ಶನದ ಸಾರ. ಆದರೆ ಸಾಕ್ರಟೀಸನಲ್ಲಿರುವಂತೆ ಧ್ಯಾನ ಧಾರಣಸಮಾಧಿಲಬ್ಧವಾದ ಯೌಗಿಕದೃಷ್ಟಿಯಲ್ಲ: ಶಾಸ್ತ್ರೀಯವಾದ, ವೈಜ್ಞಾನಿಕಸಮ್ಮತವಾದ, ಬುದ್ಧಿಬದ್ಧವಾದ, ತಾತ್ವಿಕರೂಪದ ಆಧ್ಯಾತ್ಮಿಕ ( metaphysical ) ಯೌಗಿಕದೃಷ್ಟಿ.

## ಪ್ರಕೃತಿತತ್ವ

ಮೇಲೆ ವಿವರಿಸಿದಂಥ ಸಾಮಾನ್ಯಪ್ರಪಂಚಕ್ಕೂ ನಮ್ಮ ಇಂದ್ರಿಯಗೋಚರಾಸ್ಪದವಾದ ಈ ಸ್ಥೂಲಪ್ರಪಂಚಕ್ಕೂ ಸಂಬಂಧ ಹೇಗೆ ಏರ್ಪಡುವುದೆಂಬುದನ್ನು ಈಗ ನಾವು ಗೊತ್ತುಮಾಡಬೇಕಾಗಿದೆ. ಪ್ರತ್ಯೇಕಗಳೇನೋ ಸಾಮಾನ್ಯಗಳ "ನಕಲು"ಗಳು ಅಥವಾ ಪ್ರತಿಬಿಂಬಗಳೆಂಬುದು ಸರಿಯೆ; ಆದರೆ ಶುದ್ಧಸತ್ವಸ್ವರೂಪಗಳಾದ, ವಿಕಾರರಹಿತಗಳಾದ, ಪರಿಪೂರ್ಣತೆಯನ್ನು ಪಡೆದಿರುವ ಸಾಮಾನ್ಯಗಳು, ಸಂಕುಚಿತಗಳಾದ, ನ್ಯೂನಗಳಾದ, ಸದಾ ಪರಿಣಾಮವನ್ನು ಹೊಂದುವ ವ್ಯಕ್ತವಸ್ತುಗಳಿಗೆ ಹೇಗೆ ಕಾರಣಭೂತಗಳೆನಿಸುವುವು, ಎಂಬುದನ್ನು ಈಗ ವಿಚಾರಮಾಡಬೇಕಾಗಿದೆ. ಈ ವಿಧವಾದ ಸ್ಥೂಲಪ್ರಪಂಚಸೃಷ್ಟಿಗೆ ಮತ್ತೊಂದು ತತ್ತ್ವವನ್ನು ಪ್ಲೇಟೊ ತಂದನು. ಇದೇ " ಪ್ಲೇಟೋವಿನ ಪ್ರಕೃತಿ " ಅಥವಾ ಪ್ರಧಾನವೆಂದು ಪ್ರಸಿದ್ಧಿಗೊಂಡಿರುವ ತತ್ವವಿಶೇಷ. ಇದೇ ಭವಪ್ರಪಂಚಕ್ಕೆ ಮೂಲಾಧಾರವಾದುದು. ಈ ಪ್ರಧಾನ ನಶ್ವರ, ಅಸಿದ್ಧ, ದೋಷಯುತ, ಅಕ್ರಮ, ಅಚಿಂತ್ಯ — ಒಟ್ಟೇನು, ಅಸದ್ವಿಶೇಷ.

ಭವಪ್ರಪಂಚದಲ್ಲಿರಬಹುದಾದ ಸೌಂದರ್ಯ, ಸತ್ಯ, ಸದ್ರೂಪವೆಲ್ಲವೂ ಸಾಮಾನ್ಯಗಳಿಗೆ ಸೇರಿದುದು, ಈ ಪ್ರಕೃತಿಗಲ್ಲ. ಅದರಲ್ಲಿರುವ ಪಾಪ, ದುಃಖ, ಕೇಡು—ಸರ್ವವಿಧವಾದ ಅರಿಷ್ಟಗಳಿಗೆ ಮಾತ್ರ ಈ ಪ್ರಕೃತಿ ಕಾರಣ. ಕೆಲ ಭಾಷ್ಯಕಾರರು ಪ್ಲೇಟೋವಿನ ಪ್ರಕೃತಿಯನ್ನು "ಅಂತರಾಳ" ಅಥವಾ "ಆಕಾಶ"ವೆಂದೂ, ಮತ್ತೆ ಕೆಲವರು ರೂಪರಹಿತವಾದ, ಆದರೂ ವಸ್ತುಗಳಿಗೆಲ್ಲಾ ಆಕಾರವನ್ನು ತುಂಬುವ, ರಾಶಿವಿಶೇಷವೆಂದೂ ಕರೆಯುತ್ತಾರೆ. ಪ್ರಕೃತದಲ್ಲಿ ಗಮನಿಸಬೇಕಾದ ವಿಷಯವೇನೆಂದರೆ, ಇಂದ್ರಿಯಗೋಚರಾಸ್ಪದವಾದ, ಸಾಮಾನ್ಯಲೋಕಕ್ಕಿಂತಲೂ ಒಂದು ದರ್ಜೆ ಕೀಳಾದ ಸತ್ತನ್ನುಳ್ಳ, ಅಂದರೆ ಶುದ್ಧವಾಗಿ ಮಿಥ್ಯವಲ್ಲದ, ಭವಪ್ರಪಂಚದ ಸೃಷ್ಟಿಗೆ, ಸಾಮಾನ್ಯಗಳ ಜೊತೆಗೆ ಮತ್ತೊಂದು ತತ್ವ ಅವಶ್ಯಕವೆಂದು ಪ್ಲೇಟೋವಿಗೆ ಕಂಡುಬಂದಿತು. ಇಂಥ ತತ್ವವನ್ನು ಸಾಮಾನ್ಯಗಳ ಸಂಪರ್ಕರಹಿತವಾದ ಸ್ಥಿತಿಯಲ್ಲಿ ಊಹಿಸಬೇಕಾದರೆ, ಸರ್ವಗುಣರಹಿತವಾದುದೆಂದೂ, ರೂಪರಹಿತವಾದುದೆಂದೂ, ಅಚಿಂತ್ಯ–ಅನಿರ್ವಚನೀಯವಾದುದೆಂದೂ ಹೇಳಬೇಕು. ಶುದ್ಧ ಸತ್ವಗಳಾದ ಸಾಮಾನ್ಯಗಳ ಮತ್ತು ಗುಣರೂಪರಹಿತವಾದ ಈ ಪ್ರಧಾನದ ಸಂಯೋಗದಿಂದ ನಮ್ಮ ದೃಶ್ಯಪ್ರಪಂಚ ಉಂಟಾಗಿದೆಯೆಂದು ಹೇಳಬೇಕು. ತ್ರಿಭುಜಾಕೃತಿಯ ಕಾಜಿನಹರಳಿನಲ್ಲಿ ಸೂರ್ಯನ ಕಿರಣವೊಂದು ಪ್ರವೇಶಮಾಡಿದೊಡನೆಯೇ ಅನೇಕ ಕಿರಣಗಳಾಗಿ ಛಿದ್ರಿಸಲ್ಪಡುವಂತೆ ಪ್ರಧಾನದ ಬಲದಿಂದ ಸಾಮಾನ್ಯ ಅನೇಕ ವ್ಯಕ್ತವಸ್ತುಗಳಾಗಿ ಪರಿಣಮಿಸುವುದು. ಹಾಗಾದರೆ ಈ ಮೂಲಪ್ರಕೃತಿಯ ಸ್ವಭಾವವೆಂತಹುದು? ಇದರ ಸತ್ವವೇನು? ಇದು ಸಂಪೂರ್ಣವಾಗಿ ಸತ್ತೂ ಅಲ್ಲ, ನಿರ್ವಿಶೇಷವಾಗಿ ಅಸತ್ತೂ ಅಲ್ಲ. ಮೇಲೆ ಈ ಪ್ರಧಾನ ಅಸದ್ವಿಶೇಷವೆಂದು ಹೇಳಿದಾಗ, ಪಾರಮಾರ್ಥಿಕಸತ್ತನ್ನುಳ್ಳ ಸಾಮಾನ್ಯಗಳ ದೃಷ್ಟಿಯಿಂದ ಅಸತ್ತೆಂದು ಕಾಣುವುದೇ ವಿನಾ, ಮೊಲದಕೊಂಬು, ಬಂಜೆಯ ಪುತ್ರ ಎಂಬ ಭಾವಗಳು ಸೂಚಿಸುವ ಅತ್ಯಂತ ಅಭಾವಾರ್ಥದಲ್ಲಿ (pure non-being) ಅಸತ್ತೆಂದು ಹೇಳುವುದಕ್ಕಾಗುವುದಿಲ್ಲ. ನಮ್ಮ ಸ್ಥೂಲ ಪ್ರಪಂಚ ಹೇಗೆ ಸಂಪೂರ್ಣವಾಗಿ ಇಂದ್ರಿಯಗಳ ಮಾಯೆಯೆಂದು

ಹೇಳಲಾಗುವುದಿಲ್ಲವೋ ಅದೇ ರೀತಿಯಲ್ಲಿ ಪ್ರಧಾನ ಸಾಮಾನ್ಯಗಳ ಸತ್ವಕ್ಕಿಂತಲೂ ಕೀಳಾದ ಸತ್ವವನ್ನುಳ್ಳುದೆಂದು ಹೇಳಬೇಕು. ಇದು ಹೇಗಾದರೂ ಇರಲಿ. ಪ್ರಪಂಚದಲ್ಲಿರುವ ಪ್ರತ್ಯೇಕಗಳ ಸತ್ವಕ್ಕೆಲ್ಲಾ ಸಾಮಾನ್ಯಗಳೇ ಕಾರಣವಲ್ಲದೆ ಪ್ರಧಾನವಲ್ಲ. ಅವುಗಳ ಅಸತ್ತಿಗೂ, ಅಸಂಪೂರ್ಣತೆಗೂ, ಅಕ್ರಮಕ್ಕೂ, ವೈವಿಧ್ಯಬಾಹುಳ್ಯಕ್ಕೂ ಪ್ರಧಾನವೇ ಕಾರಣ. ಹೀಗೆಂದಮೇಲೆ, ಬೇರೆಬೇರೆಯಾದ, ಪರಸ್ಪರ ವಿರುದ್ಧಗಳಾದ ತತ್ವದ್ವಯಗಳನ್ನು ಭವಪ್ರಪಂಚದ ಮೂಲಕಾರಣಗಳೆಂದು ಹೇಳಿದ ಹಾಗಾಯಿತು. ಪಾರಮಾರ್ಥಿಕ ಸತ್ವವುಳ್ಳ ಸಾಮಾನ್ಯಗಳೊಂದು—ಇದರಿಂದಲೇ ಸಕಲ ಸತ್ವವೂ, ರೂಪವೂ, ಕ್ರಮಕಾಯಿದೆಗಳೂ, ಲೋಕದ ಸಮತೋಲನವೂ ಜನಿಸುವುವು; ಜಡವಾದ, ಅಜ್ಞಾನ ಪೂರ್ವಕವಾದ, ಅವಿದ್ಯಾಭರಿತವಾದ ಶಕ್ತಿವಿಶೇಷವೊಂದು. ಇವೆರಡನ್ನೂ ಪುರುಷ(ಚಿಚ್ಛಕ್ತಿ)—ಪ್ರಕೃತಿ; ಚೈತನ್ಯ—ಜಡ; ಎಂದು ಹೇಳಬಹುದು. ಪುರುಷನು ಚೈತನ್ಯರೂಪನಾಗಿ ಮುಖ್ಯಕಾರಣನು; ಪ್ರಕೃತಿ ಜಡ ರೂಪವಾಗಿ ಉಪಾದಾನ ಅಥವಾ ಸಾಹಾಯ್ಯಕಾರಣಮಾತ್ರ. ಈ ರೀತಿಯಾಗಿ ಪ್ರಕೃತಿ ಏಕಕಾಲದಲ್ಲಿಯೇ ಗೆಳತಿ, ವೈರಿ; ಸಹಾಯಕಿ, ಕಂಟಕಿ. ಸಾಮಾನ್ಯಗಳು ತಮ್ಮ ಸಂಪೂರ್ಣಪ್ರಭೆಯನ್ನು ಪ್ರತ್ಯೇಕಗಳಲ್ಲಿ ತೋರದಿರಲು ಪ್ರಧಾನವೇ ಕಾರಣ. ಸಾಮಾನ್ಯಗಳೆಲ್ಲವೂ ಶುಭದಾಯಕ ವಾದುವು, ಸಾಮಾನ್ಯವಲ್ಲದ್ದೆಲ್ಲವೂ ಅರಿಷ್ಟದಾಯಕವಾದುದು. ಈ ರೀತಿ ಪ್ಲೇಟೋದರ್ಶನದ ಈ ಭಾಗವನ್ನುಮಾತ್ರ ಗಮನಿಸಿದರೆ, ಅದು ದ್ವೈತವಾದವೆಂದು ಹೇಳಬೇಕು.

## ಸೃಷ್ಟಿಸಿದ್ಧಾಂತ

"ಟಿಮೇಯುಸ್" ಎಂಬ ಸಂವಾದದಲ್ಲಿ ಪ್ಲೇಟೊ ಪ್ರಪಂಚದ ಉತ್ಪತ್ತಿಕ್ರಮವನ್ನು ವಿವರಿಸುತ್ತಾನೆ. ಈ ಸೃಷ್ಟಿಸಿದ್ಧಾಂತ ಕೇವಲ ಪುರಾಣಕಥೆಗಳಿಂದೊಡಗೂಡಿರುವುದರಿಂದ ಪ್ಲೇಟೋವಿನ ತತ್ವಶಾಸ್ತ್ರ ದಲ್ಲಿ ಅದೇನೂ ಅಷ್ಟು ಪ್ರಾಧಾನ್ಯವನ್ನು ಹೊಂದಲಾರದೆಂದು ಆಧುನಿಕ ಪಾಶ್ಚಾತ್ಯವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಇಲ್ಲಿ ಒಂದು

ವಿಷಯುವನ್ನು ಗಮನಿಸಬೇಕು. ಅಧ್ಯಾತ್ಮ ಅಥವಾ ಭೂತವಸ್ತುಶಾಸ್ತ್ರದಲ್ಲಿಯೂ ನ್ಯಾಯಶಾಸ್ತ್ರದಲ್ಲಿಯೂ ನೀತಿಶಾಸ್ತ್ರದಲ್ಲಿಯೂ ಅಸಮಾನನಾದ ತತ್ವಜ್ಞಾನಿಯೆನಿಸಿಕೊಂಡ ಪ್ಲೇಟೊ ಈ ಸೃಷ್ಟಿಸಿದ್ಧಾಂತದಲ್ಲಿ ಮಾತ್ರ ತನ್ನ ಪೂರ್ವಿಕರಂತೆಯೇ ಪೊಳ್ಳುಕಥೆಗಳನ್ನೂ ಪುರಾಣಪ್ರಸಂಗಗಳನ್ನೂ ಜೋಡಿಸುತ್ತಾ ಕುಳಿತುಕೊಳ್ಳುವನೇ, ಎಂಬ ಶಂಕೆ ಬಲವಾಗಿ ತಟ್ಟುವುದು. ಇದು ಹೇಗಾದರೂ ಇರಲಿ. ಪ್ಲೇಟೋವಿನ ಕಾಲಾನಂತರ ಗ್ರೀಸ್‌ದೇಶದ ಚಿತ್ತಪ್ರಪಂಚದಮೇಲೆ—ಅದರಲ್ಲಿಯೂ ನಾವು ಮುಂದೆ ವಿವರಿಸಬೇಕೆಂದಿರುವ "ನವೀನ ಪ್ಲೇಟೊ ಸಿದ್ಧಾಂತ"ದ ಮೇಲೆ— ಈ ಟಿಮೇಯಸ್ ಎಂಬ ಸಂವಾದ ಬೀರಿರುವಷ್ಟು ಸಂಸ್ಕಾರ ಪ್ಲೇಟೋವಿನ ಮತ್ತಾವ ಬರೆವಣಿಗೆಯಿಂದಲೂ ಉಂಟಾಗಿಲ್ಲ. ಇಂದೂ ಕೂಡ ಆಂಗ್ಲೇಯ ತಾತ್ವಿಕರಲ್ಲಿ ಪ್ರೊ. ಎ. ಇ. ಟೇಲರ್ ಮತ್ತು ಹಾರ್ಡೀ ಎಂಬವರು ಈ ಸಂವಾದಕ್ಕೆ ಬಹಳ ಪ್ರಾಶಸ್ತ್ಯವನ್ನು ಕಟ್ಟಿದ್ದಾರೆ; ಮತ್ತು ಎ. ಎರ್. ವೈಟ್‌ಹೆಡ್ ಎಂಬ ತಾತ್ವಿಕಶ್ರೇಷ್ಠರು ತಮ್ಮ ಅಮೋಘವಾದ ದರ್ಶನವನ್ನು ಟಿಮೇಯುಸ್ಸಿನಲ್ಲಿನ ಸಿದ್ಧಾಂತಕ್ಕನುಸಾರವಾಗಿ ಸ್ಥಾಪಿಸಿದ್ದಾರೆ. ಈ ಸಂವಾದದಲ್ಲಿ ಪ್ಲೇಟೊ ಈಶ್ವರ(God)ತತ್ವವೊಂದನ್ನೊಪ್ಪುತ್ತಾನೆ. ಈಶ್ವರನು ಮಾನವಚಿತ್ರಗಾರನಂತೆಯೇ ಮಾದರಿಪ್ರಪಂಚವಾಗಿರುವ ಸಾಮಾನ್ಯಲೋಕದ ನಮೂನೆಯನ್ನನುಸರಿಸಿ — ಶ್ರೇಯವೆಂಬ ಸಾಮಾನ್ಯದ ರಹಸ್ಯಕ್ಕನುಸಾರವಾಗಿ—ಕಂಟಕಪ್ರಾಯವಾದ, ಚಂಡಿಸ್ವರೂಪದ ಪ್ರಧಾನ ಹೆಜ್ಜೆಹೆಜ್ಜೆಗೂ ನಿರೋಧಿಸುತ್ತಿರಲು ಸಾಧ್ಯವಾದಷ್ಟುಮಟ್ಟಿಗೆ ಶುಭದಾಯಕವಾಗಿ—ಪ್ರಪಂಚವನ್ನು ರೂಪುಗೊಳಿಸುವನು. ಆದರೆ ಈಶ್ವರನು ತಾನೇ ತನ್ನ ಕೈಯಿಂದ ಸೃಷ್ಟಿಮಾಡುತ್ತಾನೆಂದು ಹೇಳಕೂಡದು. ಚಿತ್ತತ್ವವೂ ಪ್ರಧಾನತತ್ವವೂ ಆದಿಯಲ್ಲಿಯೇ ಇರುವುವಷ್ಟೆ. ಫಲಪ್ರದವಾಗುವಂತೆ ಇವೆರಡನ್ನೂ ಸಂಯೋಜಿಸಲು ಬೇರೆ ಒಬ್ಬ ಕರ್ತೃ ಬೇಕು. ಈ ಕಾರಣದಿಂದ ಈಶ್ವರನು ಪೃಥಿವಿ, ಅಪ್, ತೇಜೋವಾಯುರೂಪಗಳಾದ ಚತುರ್ಭೂತಗಳಿಂದ ಕೂಡಿರುವ ಪ್ರಪಂಚಕ್ಕೆ ಆತ್ಮಶಕ್ತಿಯನ್ನು — ಪ್ರಾಣಶಕ್ತಿಯನ್ನು— ತುಂಬುವನು. ಈ ಆತ್ಮಶಕ್ತಿಯೇ ಲೋಕಾತ್ಮ (Logos) ಅಥವಾ

ಸೂತ್ರಾತ್ಮ (World-Soul)[೧] ಎಂದೆನಿಸುವುದು. ಇದರಲ್ಲಿ ವಿಭಾಜ್ಯ–ಅವಿಭಾಜ್ಯ ತತ್ವಗಳೂ, ನಿತ್ಯತ್ವ–ಪರಿಣಾಮತ್ವವೂ, ಚಿತ್ತತ್ವ–ಪ್ರಧಾನ ತತ್ವವೆರಡೂ ಅಡಕವಾಗಿರುವುವು ; ಏಕೆಂದರೆ ಸೂತ್ರಾತ್ಮನು ಸಾಮಾನ್ಯ ಸ್ವರೂಪವನ್ನರಿತು ಸ್ಥೂಲಪ್ರಪಂಚವನ್ನು ನಿರ್ಮಿಸಬೇಕಾಗಿದೆ. ಈ ಸೂತ್ರಾತ್ಮನು ಸ್ವಂತ ಚಲನಶಕ್ತಿಯುಳ್ಳವನಾಗಿ ತನ್ನ ಚಲನೆಯಿಂದ ಎಲ್ಲಾ ವಸ್ತುಗಳನ್ನೂ ಚಲಿಸುವನು. ಜಗತ್ತಿನಲ್ಲೆಲ್ಲಾ ವ್ಯಾಪಿಸಿಕೊಂಡು ಎಲ್ಲೆಲ್ಲಿ ಸೌಂದರ್ಯ—ಕ್ರಮಸಮೀಚೀನತೆ—ಸಾಮರಸ್ಯಗಳಿರುವುವೋ ಅವಕ್ಕೆಲ್ಲಾ ಕಾರಣನೆನಿಸುವನು: ಈಶ್ವರನ ಪ್ರತಿಬಿಂಬವಿದೇ, ದೃಗ್ಗೋಚರನಾದ ದೇವನಿವನೇ. ಸಮಸ್ತವಿಧವಾದ ನ್ಯಾಯನಿಯಮಗಳು, ಗಣಿತಶಾಸ್ತ್ರದ ರಾಶಿಸಂಬಂಧಗಳು, ಕ್ರಮವ್ಯಾಪಾರ, ಸಮಗಟ್ಟು, ಪ್ರಾಣಶಕ್ತಿ, ಮನಶ್ಶಕ್ತಿ, ಪ್ರಜ್ಞಾಬಲ, ಜ್ಞಾನ—ಇವೆಲ್ಲವೂ ಈತನ ಮಹಿಮಾವಿಶೇಷದ ಪ್ರಕಾಶವೇ. ಸಾಮಾನ್ಯಲೋಕಕ್ಕೂ ದೃಷ್ಟಿಪ್ರಪಂಚಕ್ಕೂ ಮಧ್ಯಸ್ಥಗಾರನಿವನೇ. ಈತನು ತನ್ನ ಸ್ವಭಾವಕ್ಕನುಸಾರವಾದ ರೀತಿಯಲ್ಲಿ ಚಲಿಸುವುದರಿಂದ ಆಕಾಶದಲ್ಲಿರುವ ವಸ್ತುರಾಶಿಯಲ್ಲಿ ಕ್ರಮವಾದ ಗತಿಯುಂಟಾಗಿ ಲೋಕಗಳೆಲ್ಲವೂ ಸೃಷ್ಟಿಯಾಗುವುವು. ಈ ಹಿರಣ್ಯಗರ್ಭನ ಜೊತೆಗೆ ಈಶ್ವರನು ಪೈಥಗೋರಿಯನರ ಸಿದ್ಧಾಂತಕ್ಕನುಸಾರವಾಗಿ ಏರ್ಪಟ್ಟಿದ್ದ ಗ್ರಹಗಳಿಗೆಲ್ಲಾ ಮತ್ತು ಮಾನವಜಾತಿಗೆಲ್ಲಾ ಆತ್ಮಗಳನ್ನು ಸೃಜಿಸಿ ಇತರವಿಧವಾದ ದೇವದಿಂಡರುಗಳನ್ನೂ ನಿರ್ಮಿಸಿ, ಇವರು ಪ್ರಾಣಿವರ್ಗಗಳನ್ನೂ ಮಾನವಾತ್ಮದಲ್ಲಿರತಕ್ಕ ಪಶುತ್ವವನ್ನೂ ಸೃಷ್ಟಿಸುವಂತೆ ನಿಯಾಮಕಮಾಡುವನು. ಮನುಷ್ಯನ ಪ್ರಯೋಜನಕ್ಕೋಸ್ಕರವಾಗಿಯೇ ಸಮಸ್ತವೂ ಸೃಷ್ಟಿಸಲ್ಪಟ್ಟಿರುವುದು : ವೃಕ್ಷಶಾಕಾದಿಗಳು ಆತನ ಜೀವನಕ್ಕೋಸ್ಕರ; ಪ್ರಾಣಿಗಳ ಶರೀರಗಳೋ ಅಂದರೆ ಅಧಃಪತನವನ್ನು ಹೊಂದಿದ ಮಾನವಾತ್ಮಗಳು ನೆಲೆಯನ್ನು ಕಾಣುವುದಕ್ಕೋಸ್ಕರವೇ !

ಈ ಸೃಷ್ಟಿಸಿದ್ಧಾಂತದಲ್ಲಿರುವ ಮುಖ್ಯವಾದ ಗುಟ್ಟೇನೆಂದರೆ, ಡೆಮಾಕ್ರಿಟಸ್ ಮುಂತಾದ ಪರಮಾಣುವಾದಿಗಳು ಹೇಳಿದಂತೆ ಪ್ರಪಂಚ

---

೧. ಆರ್ಯಸಿದ್ಧಾಂತದಲ್ಲಿ ಈ ತತ್ವವನ್ನು "ಹಿರಣ್ಯಗರ್ಭ" "ಬ್ರಹ್ಮ" ಎಂದೆನ್ನುವರು.

ಗೊತ್ತುಗುರಿಯಿಲ್ಲದ ಪರಮಾಣುಗಳ ನಿರ್ಹೇತುಕವಾದ, ನಿರುದ್ದೇಶ ಪೂರ್ವಕವಾದ, ಆಕಸ್ಮಿಕಸಂಯೋಗದಿಂದ ಹುಟ್ಟಿದ ಜಡಸೃಷ್ಟಿ ಎಂದು ಹೇಳದೆ, ಅದು ಸಾಧ್ಯವಾದಷ್ಟು ಪರಿಪೂರ್ಣವಾದುದು, ಸೌಂದರ್ಯ ವುಳ್ಳುದು, ಅದರಲ್ಲಿ ಎಲ್ಲೆಡೆಯಲ್ಲಿಯೂ ಚಿತ್ಪ್ರಕಾಶ ಮೂರ್ತೀಕರಿಸಿದೆ, ಅದಕ್ಕೆ ಒಂದು ಸೂತ್ರವುಂಟು, ಒಂದು ನಿಯಮವುಂಟು, ಪರಮಶ್ರೇಯ ವೆಂಬ ಮಹತ್ತರವಾದ ಧ್ಯೇಯದ ಸಾಧನೆಗಾಗಿಯೇ ಅದು ಸೃಜಿಸಲ್ಪ ಟ್ಟಿರುವುದು, ಎಂದು ಪ್ರಯೋಜನ ಸಿದ್ಧಾಂತವನ್ನು ಸಮರ್ಥಿಸಿದ್ದೇ ಪ್ಲೇಟೋವಿನ ಮಹತ್ವ. ಆಶಯಗಳೇ, ಧ್ಯೇಯಗಳೇ, ಅಂತಿಮ ಪ್ರಯೋಜನಕಾರಣಗಳೇ(final causes), ಪ್ರಪಂಚದ ನಿಜವಾದ ಕಾರಣ ಗಳು: ಭೌತಕಾರಣಗಳು ಸಾಹಾಯ್ಯಕಾರಣಗಳು ಮಾತ್ರ. ಜಗತ್ತಿ ನಲ್ಲಿ ಶುಭಪ್ರದವಾದದ್ದು, ಜ್ಞಾನಬದ್ಧವಾದದ್ದು, ಫಲಪೂರ್ವಕವಾದದ್ದು, ಯಾವುದಿದೆಯೋ ಅದೆಲ್ಲಾ ಚಿದ್ವಿಶೇಷಕ್ಕೆ ಸೇರಿದುದು; ಅರಿಷ್ಟವೂ ಜಡಭರಿತವೂ ನಿರರ್ಥಕವೂ ಆದುದೆಲ್ಲವೂ ಭೌತಾಂಶಕ್ಕೆ ಸೇರಿದುದು.

ಪ್ಲೇಟೋವಿನ ಅಧ್ಯಾತ್ಮಸಿದ್ಧಾಂತವನ್ನು ಪರಿಶೀಲಿಸಿದ್ದಾಯಿತು. ಇನ್ನು ಆತನ ನೀತಿಶಾಸ್ತ್ರವನ್ನು ಸ್ವಲ್ಪಮಟ್ಟಿಗೆ ವ್ಯಕ್ತಪಡಿಸಬೇಕಾಗಿದೆ. ಈತನ ಗುರುವಾದ ಸಾಕ್ರಟೀಸನ ತತ್ವಶೋಧನೆಯಲ್ಲಿ ನಡೆವಳಿಯ ವಿಚಾರವೇ — ಧರ್ಮಜಿಜ್ಞಾಸೆಯೇ — ಹೆಚ್ಚು ರೂಪಗೊಂಡಿದ್ದಿತು. ಪ್ಲೇಟೋವಿನಲ್ಲಿಯೂ ನೀತಿನಿರ್ಣಯವೇ—ಮಾನವನ ಪರಮ ಧ್ಯೇಯ ವನ್ನು ಕಂಡುಹಿಡಿಯುವುದೇ—ಆತನ ತತ್ವಶಾಸ್ತ್ರದ ಗುರಿ; ಆದರೆ ಈ ವಿಧವಾದ ಪರಮಶ್ರೇಯವನ್ನು ನಿರ್ಧರಿಸಬೇಕಾದರೆ ಮೊದಲು ಸಮ್ಯಗ್ ಜ್ಞಾನವಿರಬೇಕು. ಹಾಗಾದರೆ ಸಮ್ಯಗ್ ಜ್ಞಾನವೆಂತಹುದು, ಅದು ಹೇಗೆ ಲಭಿಸುವುದು, ಎಂಬ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದರೆ ಸತ್ಯಸತ್ವದ ವಿಚಾರ ಮಾಡಲೇಬೇಕಾಗುವುದು. ಆದುದರಿಂದ ಪ್ಲೇಟೊ ಪ್ರಥಮದಲ್ಲಿ ಇದುವರೆಗೂ ವಿವರಿಸಲ್ಪಟ್ಟ ಸ್ಥಿತಿತತ್ವಸಿದ್ಧಾಂತವನ್ನು ಏರ್ಪಡಿಸಿದನು.

## ಮನಶ್ಶಾಸ್ತ್ರ

ಪ್ಲೇಟೋವಿನ ನೀತಿಶಾಸ್ತ್ರ ವಿಚಾರಮಾಡುವುದಕ್ಕೆ ಮೊದಲು ಆತನ ಮನಶ್ಶಾಸ್ತ್ರವನ್ನು ಕುರಿತು ಒಂದೆರಡು ಮಾತು ಹೇಳುವುದು

ಅವಶ್ಯಕ. ಜ್ಞಾನಸಿದ್ಧಾಂತದ ಮೇರೆಗೆ, ಇಂದ್ರಿಯಾವಲೋಕನ, ಲೋಕಾಭಿಮತ, ಸತ್ಯಜ್ಞಾನ ಎಂದು ತ್ರಿವಿಧವಾದ ಜ್ಞಾನವುಂಟಷ್ಟೆ. ಇಂದ್ರಿಯಾವಲೋಕನದಲ್ಲೂ ಅಭಿಮತದಲ್ಲೂ ಆತ್ಮ ದೇಹವನ್ನು ಅವಲಂಬಿಸಿರುವುದು. ಆದುದರಿಂದ ದೇಹ ಆತ್ಮಕ್ಕೆ ಶುದ್ಧ ಸತ್ವ ಸ್ವರೂಪಗಳಾದ ಸಾಮಾನ್ಯಗಳನ್ನೀಕ್ಷಿಸಲು ಆತಂಕವೇ ಹೊರತು ಸಹಾಯವಲ್ಲ. ಆದರೂ ದೇಹವನ್ನು ಧರಿಸಿರುವಾಗಲೂ ಕೂಡ ಆತ್ಮ ತನ್ನ ಸ್ವಬಲದಿಂದ ಸಾಮಾನ್ಯಗಳನ್ನು ಕುರಿತು ಚಿಂತಿಸಬಲ್ಲುದು. ಅಲ್ಲದೆ ಸಾಮಾನ್ಯಗಳ ಪ್ರತಿಬಿಂಬಗಳಾದ ಪ್ರತ್ಯೇಕಗಳನ್ನು ನೋಡಿದಾಗಲೆಲ್ಲಾ ಆತ್ಮಕ್ಕೆ ಆ ಶುದ್ಧಸತ್ವಗಳ ಸ್ಮರಣೆಯುಂಟಾಗುತ್ತಿರುವುದು. ಇಲ್ಲಿ ನಾವು ಗಮನಿಸಬೇಕಾದ ವಿಷಯವೇನೆಂದರೆ, ಸಾಕ್ರಟೀಸನಂತೆಯೇ ಪ್ಲೇಟೋವೂ ಮಾನವನಿಗೆ ಜನ್ಮಾಂತರಗಳುಂಟೆಂದೂ, ದೇಹದೊಡನೆ ಬೆರತು ಮಾನವಜನ್ಮವನ್ನು ಧರಿಸುವುದಕ್ಕೆ ಪೂರ್ವದಲ್ಲಿ ಆತ್ಮ ಶುದ್ಧ ಸತ್ವರೂಪದಲ್ಲಿತ್ತೆಂದೂ, ಆ ಸ್ಥಿತಿಯಲ್ಲಿ ಸಾಮಾನ್ಯಗಳನ್ನೆಲ್ಲಾ ಅವಲೋಕಿಸಿತ್ತೆಂದೂ ಬೋಧಿಸುತ್ತಾನೆ. ಆದಕಾರಣ ದೇಹಿಯಾದಮೇಲೆ ಆತ್ಮ ಪ್ರತ್ಯೇಕಗಳನ್ನೀಕ್ಷಿಸುವ ವ್ಯಾಜದಿಂದ ತನ್ನ ಪೂರ್ವಜನ್ಮಾನುಭವಗಳನ್ನೆಲ್ಲಾ ಸ್ಮೃತಿಪಥಕ್ಕೆ ತಂದುಕೊಳ್ಳುತ್ತದೆ. ಸಮಸ್ತ ವಿಧವಾದ ಜ್ಞಾನವೆಲ್ಲಾ ಸ್ಮರಣೆಯೇ ಹೊರತು ಮತ್ತೆ ಬೇರೆಯಲ್ಲ.

ಆದುದರಿಂದ ಆತ್ಮ ಸ್ವಭಾವತಃ ಜ್ಞಾನಮಯುವಾದುದು: ಜ್ಞಾನವೇ ಅದರ ಪ್ರಧಾನವಿಶೇಷ. ದೇಹದೊಡನೆ ಕಲೆತಮೇಲೆ ಅಜ್ಞಾನಪೂರ್ವಕವಾದ ಸ್ವರೂಪವೊಂದು ಆತ್ಮನಲ್ಲಿ ಸೇರುವುದು. ಈ ಸ್ವರೂಪ ಎರಡು ವಿಧವಾಗಿರುವುದು. ಕಾರ್ಯಾಸಕ್ತಿಪ್ರದಗಳಾದ ಕ್ರೋಧ, ಮಹತ್ಕಾಂಕ್ಷೆ, ಪದವೀಪ್ರೌಢಿಮೆ, ಯಶೋಭಿಲಾಷೆ, ಮುಂತಾದ ಉತ್ಕೃಷ್ಟಗಳಾದ ಇಂಗಿತಾಭಿಲಾಷೆಗಳನ್ನು ಹುಟ್ಟಿಸುವ ರಜೋಗುಣವೊಂದು (ಇದರ ಸ್ಥಾನ ಹೃದಯದಲ್ಲಿ); ಕ್ಷುಧೆ, ತೃಷ್ಣೆ, ಮೋಹ, ದ್ವೇಷ ಮೊದಲಾದ ಪಶುವೃತ್ತಿಗಳನ್ನುಂಟುಮಾಡುವ ತಮೋಗುಣವೊಂದು (ಇದರ ಆವಾಸ ಯಕೃತ್ತಿನಲ್ಲಿ). ದೇಹದ ಸಂಪರ್ಕದಿಂದ ಆತ್ಮಕ್ಕೆ ಸಮ್ಯಗ್‌ಜ್ಞಾನ ಸಂಪಾದನೆಗೆ ಅಡಚಣೆಯುಂಟಾಗುವುದಷ್ಟೆ:

ಮೇಲೆ ವಿವರಿಸಿದ ಆಶಾಪಾಶಗಳ ಬಲದಿಂದ ಆತ್ಮ ಪರಮಶ್ರೇಯ ವಾದ ನೀತಿಮಾರ್ಗವನ್ನು ಅನುಸರಿಸಲು ಆತಂಕವುಂಟಾಗುವುದು.

ಒಟ್ಟಿನಲ್ಲಿ ದೇಹಿಯಾದಮೇಲೆ ಆತ್ಮ ತ್ರಿವಿಧಸ್ವರೂಪವಾಗಿರು ವುದು. ಜ್ಞಾನವೇ ಪ್ರಧಾನಲಕ್ಷಣವಾಗಿ ಉಳ್ಳ, ಸಾಮಾನ್ಯಗಳ ಸ್ಮರಣೆ ಯಲ್ಲಿ ಮಗ್ನವಾಗಿರುವ, ಅವುಗಳ ನಿಜಸ್ವರೂಪವನ್ನು ತಿಳಿಯಲೆಳಸುವ, ಸತ್ವಗುಣವೊಂದು; ಉತ್ಕೃಷ್ಟತರವಾದ ಆಶಯುಗಳನ್ನು ಉದ್ಬೋಧ ಮಾಡಿ ಮಾನವನು ಪುರುಷ ಪ್ರಯತ್ನಗಳಲ್ಲಿ ಪ್ರವೃತ್ತನಾಗಿ ಉದ್ಯೋಗಿ ಯಾಗುವಂತೆ ಮಾಡುವ ರಜೋಗುಣವೊಂದು; ಮತ್ತತೆಯಿಂದಲೂ ಮದಾಂಧತೆಯಿಂದಲೂ ಮಾನವನು ತನ್ನ ಪಶುತ್ವವನ್ನು ಪ್ರಕಾಶ ಮಾಡಲು ಸಹಾಯವಾಗುವ ತಮೋಗುಣವೊಂದು. ಈ ಗುಣತ್ರಯ ಗಳ ಸ್ವಾಭಾವಿಕ ಪ್ರವೃತ್ತಿಯೇ ಮಾನವನ ಜೀವನವೆನಿಸುವುದು. ದೇಹ ಸಂಪರ್ಕದಿಂದ ಆತ್ಮನ ಜ್ಞಾನಾರ್ಜನೆಗೆ ಅಡಚಣೆಯುಂಟಾದರೂ ನಿತ್ಯನಿರುತ್ಪನ್ನಗಳಾದ ಶುದ್ಧ ಸಾಮಾನ್ಯಗಳನ್ನೀಕ್ಷಿಸಿ ಚಿಂತಿಸುವ ಆತ್ಮನು ಆ ಸಾಮಾನ್ಯಗಳಂತೆ ಶುದ್ಧ ಸತ್ವನಾಗಿರಬೇಕು. ಈ ಕಾರಣ ದಿಂದ ಜೀವನಿಗೆ ಜನ್ಮಾಂತರಗಳುಂಟೆಂದೂ, ಆತ್ಮನು ಅಮರನೆಂದೂ ಹೇಳಿದ ಹಾಗಾಯಿತು. ಆತ್ಮನ ಅಮರತ್ವವನ್ನು ಪ್ಲೇಟೊ ಇತರ ತಾತ್ವಿಕರು ಸಮರ್ಥಿಸುವ ರೀತಿಯಲ್ಲಿಯೇ ತೋರಿಕೊಡುತ್ತಾನೆ. ಶುದ್ಧಸತ್ವವೂ ಚಿದ್ವಿಶೇಷವೂ ಆದ ಆತ್ಮನಿಗೆ ಸ್ಥೂಲಶರೀರದ ಸಂಪರ್ಕ ಹೇಗುಂಟಾಯಿತೆಂದರೆ, ಪ್ಲೇಟೊ ಪುನಃ ಪೈಥಗೋರಿಯನರ ಪುರಾಣ ರಹಸ್ಯಗಳನ್ನೇ ಕಾರಣ ಹೇಳುತ್ತಾನೆ. ಈಶ್ವರನಿಂದ ಸೃಜಿಸ ಲ್ಪಟ್ಟ ಶುದ್ಧ ಜ್ಞಾನಸ್ವರೂಪನಾದ ಆತ್ಮನಿಗೆ ಆದಿಯಲ್ಲಿ ನಕ್ಷತ್ರಲೋಕವೇ ಆವಾಸಸ್ಥಾನವಾಗಿತ್ತು. ಆದರೆ ಇಂದ್ರಿಯಪ್ರಪಂಚವನ್ನನುಭವಿಸ ಬೇಕೆಂಬ ಆಕಾಂಕ್ಷೆ ಆತ್ಮನಲ್ಲಿ ತಲೆದೋರಲು ತಕ್ಷಣವೇ ಕಾರಾಗೃಹ ದಲ್ಲಿ ಹಾಕಿದಂತೆ ಭೌತ ಶರೀರ ದೊರೆಯಿತು. ಆದುದರಿಂದ ದೇಹವಾಸವೆಂಬುದು ಆತ್ಮನಿಗೆ "ಪುಟ" ಹಾಕತಕ್ಕ ಪ್ರಸಂಗ ವೆಂದು ಹೇಳಬೇಕು. ತತ್ಸಂಬಂಧವಾದ ಪಶುವೃತ್ತಿಗಳನ್ನು ಜಯಿಸಿದರೆ ಆತ್ಮನಿಗೆ ಮರಳಿ ನಕ್ಷತ್ರ ಲೋಕ ದೊರಕುವುದು. ಇಲ್ಲವಾದರೆ

ಅಧೋಗತಿಯನ್ನು ಹೊಂದಿ ವಿಧವಿಧವಾದ ಪ್ರಾಣಿಗಳ ಶರೀರಗಳಲ್ಲಿ ಜನ್ಮಾಂತರವುಂಟಾಗುವುದು.

## ಅಧ್ಯಾಯ ೧೪

## ಪ್ಲೇಟೋವಿನ ನೀತಿಶಾಸ್ತ್ರ

ಮಾನವನ ಪರಮಶ್ರೇಯ ನಿರ್ಣಯವೇ ಸಾಕ್ರಟೀಸನ ತತ್ವ ಬೋಧಾಮೃತವಾಗಿತ್ತು. ಆತನು ಕ್ರಮವಾದ ನೀತಿ ಸಿದ್ಧಾಂತ ಯಾವುದನ್ನೂ ಏರ್ಪಡಿಸದಿದ್ದರೂ ಇಂತಹ ದರ್ಶನದ ತಳಹದಿಯನ್ನು ಹಾಕಿ ಹೋಗಿದ್ದನು. ಪ್ಲೇಟೊ ಪ್ರತಿಯೊಂದು ವಿಚಾರದಲ್ಲಿಯೂ ಸಂಪೂರ್ಣ ವಿಮರ್ಶೆಯನ್ನು ಕೈಗೊಂಡು ಸಿದ್ಧಾಂತಗಳನ್ನು ಸ್ಥಾಪಿಸುವವನಾದುದರಿಂದ ನೀತಿವಿಚಾರದಲ್ಲಿಯೂ ಸಹ ಸಕಲ ಮತಗಳನ್ನೂ ಸೂಚನೆಗಳನ್ನೂ ವಿಮರ್ಶಿಸಿ ಒಂದು ವ್ಯವಸ್ಥೆಗೆ ತಂದನು. ತನ್ನ ಜ್ಞಾನಸಿದ್ಧಾಂತದಂತೆಯೇ ಪ್ಲೇಟೋವಿನ ನೀತಿವ್ಯವಸ್ಥೆಯೂ ಆತನ ಪ್ರಪಂಚ ಸತ್ವಸಿದ್ಧಾಂತಕ್ಕನುಸಾರವಾಗಿರುವುದು.

ಪ್ರಪಂಚ ಸತ್ವದಲ್ಲಿ ಚಿನ್ಮಯವಾಗಿಯೂ ಅಧ್ಯಾತ್ಮಸ್ವರೂಪವಾಗಿಯೂ ಇರುವುದು. ಇಂದ್ರಿಯ ದೃಶ್ಯವಾದ ಭವ ಪ್ರಪಂಚದ ವಸ್ತುಗಳು ಕ್ಷಣಿಕವಾದುವೂ ಸದಾ ಪರಿಣಾಮ ಹೊಂದುವುವೂ ಆದುದರಿಂದ ಅವುಗಳು ನಿಸ್ಸಾರವಾದುವು. ಅವುಗಳ ಅನುಸರಣೆಯಿಂದ ಮನುಷ್ಯನ ಜೀವನ ಸಾರ್ಥಕವಾಗುವುದಿಲ್ಲ. ಯಾವುದು ನಿತ್ಯವೂ ಪರಿಣಾಮ ರಹಿತವೂ ಚೈತನ್ಯಮಯವೂ ಆದುದೋ ಅಂತಹ ಸಾಮಾನ್ಯಗಳೇ ನಿರ್ವಿಶೇಷವಾದ ಶ್ರೇಯವನ್ನು ಕೊಡಬಲ್ಲವು. ಇವುಗಳನ್ನು ಗೋಚರಪಡಿಸುವ ಮನುಷ್ಯನ ಜ್ಞಾನವೇ ಅತ್ಯಂತ ಶ್ರೇಷ್ಠವಾದುದು. ಇಂತಹ ಬುದ್ಧಿಯನ್ನು ವಿಕಾಸಗೊಳಿಸುವ ಮಾರ್ಗವೇ ಮನುಷ್ಯನ ಮುಖ್ಯ ಆಶಯವಾಗಿರಬೇಕು. ದೇಹವೂ ಇಂದ್ರಿಯಗಳೂ ಆತ್ಮಪ್ರಕಾಶಕ್ಕೆ ಮೋಡಗಳಾಗಿ ಜ್ಞಾನವಿಕಾಸಕ್ಕೆ ಪ್ರತಿಬಂಧಕಗಳೆಂದೆನಿಸಿದಮೇಲೆ ಆತ್ಮ ಶ್ರೇಯುವನ್ನು ಸಂಪಾದಿಸುವ ಬಗೆ ಹೇಗೆ? ನಿತ್ಯಗಳಾದ ಸಾಮಾನ್ಯಗಳ ಚಿಂತನೆಯೇ ಜೀವನದ ಧ್ಯೇಯವೆಂದು ಒಪ್ಪೋಣ. ಆದರೂ ಈ ಧ್ಯೇಯಸಾಧನೆಯಿಂದ ಮನುಷ್ಯನು ಸದ್ಗುಣಿಯಾಗುವ ಪಕ್ಷದಲ್ಲಿ

ಅಂತಹ ಸದ್ಗುಣದ ಸ್ವರೂಪವಾದರೂ ಯಾವುದು? ಹ್ರಸ್ವದಲ್ಲಿ, ಮಾನವ ಶೀಲ ಅಥವಾ ಮಾನವಸದ್ಗುಣವೆಂದರೇನು ? ಮೊದಲಲ್ಲಿ ಇದಕ್ಕಿಂತಲೂ ಮುಖ್ಯವಾಗಿ, ಸದ್ಗುಣಭಾವದ ಸರ್ವಸಾಧಾರಣವಾದ ಅರ್ಥವೇನು ?

ಥ್ರಾಸಿಮಾಕಸ್ಸನನ್ನು ಸಾಕ್ರಟೀಸನು ಪ್ರಶ್ನಿಸುತ್ತಾನೆ ; [೧]

"ಹೇಳು, ಥ್ರಾಸಿಮಾಕಸ್, ಅಶ್ವಕ್ಕೆ ಒಂದು ಕರ್ತವ್ಯ ಅಥವಾ ಜೀವನದ ಗುರಿ ಎಂಬುದಿದೆಯೋ ಇಲ್ಲವೋ ?"

"ಇದೆ."

"ಕುದುರೆಯು—ಅಥವಾ ಮತ್ತಾವುದೇ ಆಗಲಿ, ಅದರ—ಆ ಗುರಿ ಅಥವಾ ಪ್ರಯೋಜನ ಯಾವುದು ? ಮತ್ತೆ ಯಾವ ವಸ್ತುವಿನಿಂದಲೇ ಆಗಲಿ ಪೂರೈಸಲಾಗದ—ಅಥವಾ ಅಷ್ಟು ಚೆನ್ನಾಗಿ ಪೂರೈಸಲಾಗದ—ಕಾರ್ಯ ಯಾವುದುಂಟೋ ಅದೇ ಅಲ್ಲವೆ ?"

"ನೀನು ಹೇಳುವುದು ನನಗೆ ಗೊತ್ತಾಗುವುದಿಲ್ಲ" ಅವನೆಂದನು.

"ಹಾಗಾದರೆ ವಿವರಿಸುತ್ತೇನೆ, ಕೇಳು. ಕಣ್ಣಿನಿಂದಲ್ಲದೆ ನೀನು ನೋಡಬಲ್ಲೆಯಾ ?"

"ಸಾಧ್ಯವಿಲ್ಲ."

"ಅಥವಾ, ಕಿವಿಯಿಂದಲ್ಲದೆ ಕೇಳಬಲ್ಲೆಯಾ ?"

"ಆಗದು."

"ಹಾಗಾದರೆ ಈ ಕರ್ಮಗಳೇ ಈ ಜ್ಞಾನೇಂದ್ರಿಯಗಳ ಗುರಿ ಅಥವಾ ಉದ್ದೇಶ ಎಂದು ಧಾರಾಳವಾಗಿ ಹೇಳಬಹುದಲ್ಲವೆ ?"

"ಹೇಳಬಹುದು."

"ಆದರೆ ದ್ರಾಕ್ಷೀ ಬಳ್ಳಿಯೊಂದನ್ನು ಕಠಾರಿಯಿಂದಲಾಗಲಿ, ಉಳಿ ಅಥವಾ ಚೀರಣದಿಂದಲಾಗಲಿ, ಮತ್ತು ಇನ್ನು ಅನೇಕ ವಿಧಗಳಲ್ಲಿ, ಕತ್ತರಿಸಬಹುದಲ್ಲವೇ ?"

"ಅದಕ್ಕೇನು ?"

"ಆದರೂ ಅದೇ ಕೆಲಸಕ್ಕಾಗಿ ಮಾಡಿರುವ ಕಸಿಗತ್ತಿಯಿಂದ ಆಗುವಷ್ಟು ನಾಜೂಕಾಗಿ ಆಗಲಾರದು ?"

---

೧. "ಆದರ್ಶ ರಾಜ್ಯ" ೩೫೨, ೩ (ಡೇವೀಸ್ ಮತ್ತು ವಾಘನ್).

"ನಿಜ."

"ಕಸಿಗತ್ತಿಯು ಉದ್ದೇಶವಿದೇ ಎಂದು ನಾವು ಹೇಳಬಹುದಲ್ಲವೆ?"

"ಹೇಳಬಹುದು."

"ಹಾಗಾದರೆ, ಮತ್ತೆ ಯಾವ ವಸ್ತುವಿನಿಂದಲೂ ನೆರವೇರಿಸಲಾಗದ, ಇಲ್ಲವೆ ಅಷ್ಟು ಚೆನ್ನಾಗಿ ನೆರವೇರಿಸಲಾಗದ—ಕೆಲಸ ಯಾವುದುಂಟೋ ಅದೇ ಅಲ್ಲವೆ ಒಂದು ವಸ್ತುವಿನ ಗುರಿ ಅಥವಾ ಉದ್ದೇಶ, ಎಂದು ನಾನು ಆಗ ಕೇಳಿದ ಪ್ರಶ್ನೆ ಈಗ ನಿನಗೆ ಅರ್ಥವಾಗಿರಬಹುದಲ್ಲವೆ?"

"ನಿನ್ನ ಅರ್ಥ ನನಗೆ ತಿಳಿಯಿತು, ಮತ್ತು ನಾನದನ್ನು ಅನುಮೋದಿಸುತ್ತೇನೆ."

"ಯಾವುದಕ್ಕೆ ಒಂದು ಉದ್ದೇಶವೇರ್ಪಟ್ಟಿರುವುದೋ ಅದನ್ನು ಸಾಧಿಸಲು ಅದಕ್ಕೆ ತಕ್ಕ ಒಂದು ಬಲ, ವೀರ್ಯ, ಅಥವಾ ಸುಗುಣ ಉಂಟಲ್ಲವೆ? ಹಿಂದಿನ ದೃಷ್ಟಾಂತಗಳನ್ನೇ ತೆಗೆದುಕೊಳ್ಳೋಣ. ಕಣ್ಣಿಗೆ ಒಂದು ಉದ್ದೇಶವುಂಟಲ್ಲವೆ?"

"ಉಂಟು."

"ಮತ್ತು ಅದಕ್ಕೆ ತಕ್ಕ ಒಂದು ಶಕ್ತಿ ಅಥವಾ ಸದ್ಗುಣವೂ ಉಂಟು?"

"ಹೌದು."

"ಮತ್ತು ಕಿವಿಗೂ ಒಂದು ಉದ್ದೇಶ, ಅದಕ್ಕೆತಕ್ಕ ಒಂದು ಸದ್ಗುಣ ಇರುವುವಲ್ಲವೆ?"

"ನಿಜ."

"ಇದೇ ಪ್ರಕಾರವಾಗಿಯೇ ಇತರ ಎಲ್ಲಾ ವಸ್ತುಗಳ ವಿಷಯದಲ್ಲಿಯೂ, ಪ್ರತಿ ಒಂದಕ್ಕೂ ಒಂದು ಗುರಿ, ಮತ್ತು ಅದಕ್ಕೆ ಯೋಗ್ಯವಾದ ಒಂದು ಸದ್ಗುಣ ಇರುವುವಲ್ಲವೆ?"

"ಅದೇನೋ ನಿಜವೆ."

"ಒಳ್ಳೆಯದು, ನೇತ್ರಗಳಿಗೆ ಅವುಗಳಿಗೆ ತಕ್ಕ ಬಲ ಅಥವಾ ಸದ್ಗುಣವಿಲ್ಲದೆ ಅದಕ್ಕೆ ಬದಲಾಗಿ ಒಂದು ದೋಷ ಅಥವಾ ಕುಂದು ಇತ್ತೆಂದು ಊಹಿಸು, ಆಗ ಅವು ತಮ್ಮ ಉದ್ದೇಶವನ್ನು ಕೊನೆಗಾಣಿಸಲಾಗುವುದೇ?"

"ಅವು ಕುರುಡಾಗಿ ನೋಡಲು ಆಗದಿದ್ದರೆ ಅದು ಹೇಗೆ ಸಾಧ್ಯ?"

"ತಮ್ಮ ನ್ಯಾಯವಾದ ಶಕ್ತಿಯಾಗಿರುವ ದೃಷ್ಟಿಯನ್ನು ಕಳೆದುಕೊಂಡು ಕುರುಡಾಗುವ ಮಾತು ಬೇರೆ, ಅದನ್ನು ಕುರಿತು ನಾನು ಈಗ ಪ್ರಸ್ತಾಪಿಸುತ್ತಿಲ್ಲ. ನಾನು ಕೇಳುತ್ತಿರುವುದು ಸಾಧಾರಣತರವಾದ ವಿಷಯ: ವಸ್ತುಗಳು ತಮಗೇರ್ಪಟ್ಟಿರುವ ಉದ್ದೇಶವನ್ನು ತಮಗೆ ತಕ್ಕುದಾದ ಗುಣವಿಶೇಷದಿಂದ ಸಫಲಗೊಳಿಸುತ್ತವೆಯೆ, ಮತ್ತು ತಮ್ಮಲ್ಲಿರಬಹುದಾದ ಕುಂದುಕೊರತೆಗಳಿಂದ ಆ ಉದ್ದೇಶವನ್ನು ಭಂಗಗೊಳಿಸುತ್ತವೆಯೆ?"

"ಗುಣವಿಶೇಷದಿಂದಲೇ ತಮ್ಮ ಉದ್ದೇಶವನ್ನು ಸಫಲಗೊಳಿಸುತ್ತವೆ, ಕುಂದಿನಿಂದಲೇ ಅದನ್ನು ಭಂಗಗೊಳಿಸುತ್ತವೆ."

"ಕಿವಿಗಳ ವಿಷಯವಾಗಿಯೂ ಹೀಗೆಯೇ ಹೇಳಬಹುದು; ಅವುಗಳಿಗೆ ಅನುಸಾರವಾದ ಗುಣವಿಶೇಷವಿಲ್ಲದೆ ಹೋದರೆ ಅವು ತಮ್ಮ ಉದ್ದೇಶವನ್ನು ನೆರವೇರಿಸಿರಲಾರವು?"

"ನಿಜ."

"ಇತರ ಎಲ್ಲಾ ವಸ್ತುಗಳ ವಿಷಯವಾಗಿಯೂ ಇದೇ ಮಾತು ಹೇಳಬಹುದಲ್ಲವೆ?"

"ನಾನು ಒಪ್ಪುತ್ತೇನೆ."

"ಒಳ್ಳೆಯದು, ಆ ಪಕ್ಷದಲ್ಲಿ ಮತ್ತೆ ಯಾವುದರಿಂದಲೂ ಈಡೇರಿಸಲಾಗದಂತಹ ಕೆಲಸವೊಂದು ಆತ್ಮನಿಗಿದೆಯಲ್ಲವೆ? ಅದೇನನ್ನುತ್ತೀಯೋ, ಮೇಲ್ವಿಚಾರಣೆ ನೋಡಿಕೊಳ್ಳುವುದು, ಆಜ್ಞಾಪಿಸುವುದು, ವಿಚಾರ ಮಾಡುವುದು—ಇವೇ ಮೊದಲಾದುವು. ಇವು ಆತ್ಮನಿಗೆ ತಕ್ಕ ಕೆಲಸಗಳಲ್ಲವೆ? ಇವುಗಳನ್ನು ನ್ಯಾಯವಾಗಿ ಮತ್ತೆ ಯಾವುದಕ್ಕಾದರೂ ಒಪ್ಪಿಸುವುದಕ್ಕಾದೀತೆ?"

"ಮತ್ತೆ ಯಾವುದಕ್ಕೂ ಒಪ್ಪಿಸಲಾಗುವುದಿಲ್ಲ."

"ಜೀವನವೂ ಕೂಡ ಆತ್ಮನಿಗೇರ್ಪಟ್ಟಿರುವ ಕರ್ತವ್ಯಗಳಲ್ಲೊಂದಲ್ಲವೆ?"

"ಧಾರಾಳವಾಗಿ."

" ಅದನ್ನು ಸುಗಮವಾಗಿ ನಡೆಸಲು ಅದಕ್ಕನುಗುಣವಾದ ಒಂದು ಸದ್ಗುಣವೂ ಆತ್ಮನಿಗಿರುವುದಲ್ಲವೇ ? "

" ಇರುವುದು."

" ಆ ಸದ್ಗುಣವಿಲ್ಲದೆ ಹೋದಪಕ್ಷದಲ್ಲಿ ಆತ್ಮನು ತನ್ನ ಉದ್ದೇಶವನ್ನು ಪೂರ್ತಿಗೊಳಿಸಲಾಗುವುದೇ ? "

" ಆಗದು."

" ಆ ಪಕ್ಷದಲ್ಲಿ ದುಷ್ಟಾತ್ಮನು ದುಷ್ಟಕಾರಭಾರಿಯಾಗಿಯೂ ಅಧಿಕಾರಿಯಾಗಿಯೂ ಇರುವುದೂ ಶ್ರೇಷ್ಠಾತ್ಮನು ಉತ್ತಮ ಆಣ್ಮನಾಗಿಯೂ ಕಾರಭಾರಿಯಾಗಿಯೂ ಇರುವುದೂ ಸಹಜವಲ್ಲವೆ ? "

ಸಾಧಾರಣಾರ್ಥದಲ್ಲಿ ಸದ್ಗುಣವೆಂದರೇನೆಂಬುದು ಈಗ ವ್ಯಕ್ತವಾಯಿತು. ಯಾವ ಮನುಷ್ಯನೇ, ಪ್ರಾಣಿಯೇ ಅಥವಾ ವಸ್ತುವೇ ಆಗಲಿ, ತನ್ನ ಜೀವನದ ಗುರಿಯಾದ ನಿಯಮಿತ ಕೆಲಸವನ್ನೆಸಗಲು ಪಡೆದಿರುವ ಅನುರೂಪವಾದ ಶಕ್ತಿಯೇ, ಬಲವೇ, ಸದ್ಗುಣವೆನಿಸುವುದು. ಇಂತಹ ಗುಣವಿಶೇಷದಿಂದ ಆ ಗುರಿಯನ್ನು ಸಾಧಿಸುವುದೇ ಆ ವಸ್ತುವಿನ ಅಥವಾ ಪ್ರಾಣಿಯ ಪರಮಶ್ರೇಯ. ಸದ್ಗುಣದ ಸಾಮಾನ್ಯಾರ್ಥವಿದಾದಮೇಲೆ, ಮಾನವನ ಪ್ರತ್ಯೇಕ ಸದ್ಗುಣ ಯಾವುದು ? ಆತನ ಸ್ವಭಾವದ ನಿಯತ ಪ್ರವೃತ್ತಿಗಳು ಯಾವುವು, ಮತ್ತು ಅವುಗಳ ಸಂಸಿದ್ಧಿಗೋಸ್ಕರ ಆತನಲ್ಲಿರತಕ್ಕ ಗುಣವಿಶೇಷಗಳು ಯಾವುವು ?

ಜ್ಞಾನಾಭಿಲಾಷೆ, ಉತ್ಕೃಷ್ಟ ಆಶಯಸಾಧನೆ, ಮತ್ತು ಪಶುವಾಸನಾಸಂತೃಪ್ತಿ— ಈ ರೀತಿಯಾಗಿ ಮಾನವಾತ್ಮದಲ್ಲಿ ಮೂರು ವಿಧವಾದ ಪ್ರವೃತ್ತಿಗಳುಂಟೆಂದು ಹಿಂದೆಯೇ ಹೇಳಿದೆ. ಇವುಗಳನ್ನೇ ಸತ್ವರಜಸ್ತಮೋಗುಣಗಳೆಂದು ಕರೆಯುಬಹುದು. ಸತ್ವಗುಣ ಬುದ್ಧಿಪೂರ್ವಕವಾದುದೂ ವಿವೇಚನಾಶಕ್ತಿಯುಳ್ಳುದೂ ಆದುದರಿಂದ ವಿವೇಕಮಾರ್ಗವನ್ನನುಸರಿಸುವುದು. ಇದರಿಂದ ಮನುಷ್ಯನ ಸಮಸ್ತ ವಿಧವಾದ ಪ್ರವೃತ್ತಿಗಳನ್ನು ಆಳತಕ್ಕುದಿದೇ. ಯಾವ ಮನುಷ್ಯನಲ್ಲಿ ಸತ್ವಗುಣ ಪ್ರಧಾನವಾಗಿದ್ದು ಇತರ ಆಶೆ–ಆಕಾಂಕ್ಷೆ–ಇಂಗಿತಗಳನ್ನೆಲ್ಲಾ ಕಟ್ಟಿಗೊಳಪಡಿಸಿ, ಸದ್ವ್ಯಾಪಾರಗಳಲ್ಲಿ ವರ್ತಿಸುವಂತೆ ಮಾಡಿ, ಸದುಪಯೋಗ,

ದುರುಪಯೋಗ; ಲಾಭ, ನಷ್ಟ; ಶ್ರೇಯ, ಪ್ರೇಯ; ಮೊದಲಾದ ತಾರತಮ್ಯ ಭಾವಗಳನ್ನು ಆತನಿಗರುಹಿ, ಆತನ ಸಮಗ್ರಜೀವನವನ್ನೂ ಸಮರಸವಾದ ರೀತಿಯಲ್ಲಿ ಆಳುವುದೋ, ಅಂತಹವನಲ್ಲಿ ವಿವೇಕವಿದೆ ಎಂದು ಹೇಳಬೇಕು, ಆತನು ವಿವೇಕಿ ಎಂದೆನಿಸಿಕೊಳ್ಳುವನು. ಯಾವ ಮನುಷ್ಯನಲ್ಲಿ ರಜೋಗುಣ ಸತ್ವಗುಣಕ್ಕಧೀನವಾಗಿ, ಅದರ ಸಹಕಾರಿಯಾಗಿ, ಅದು ಮನುಷ್ಯನಿಗೆ ತೋರಿಕೊಡುವ ಅಭ್ಯುದಯದ ದಾರಿಯನ್ನವಲಂಬಿಸಲು ಆತನಿಗೆ ಧೈರ್ಯಕೊಟ್ಟು, ಆತನ ಪಶುಪ್ರವೃತ್ತಿಗಳನ್ನೆಲ್ಲಾ ಸ್ವಾಧೀನಪಡಿಸಿಕೊಂಡು, ವಿವೇಕಕ್ಕೊದಗುವ ಎಡರುಗಳನ್ನೆಲ್ಲಾ ದೂರಮಾಡಿ, ಮನುಷ್ಯನ ಸತ್ಸಂಕಲ್ಪಗಳೆಲ್ಲಾ ಕಾರ್ಯತಃ ಫಲಹೊಂದುವಂತೆ ಮಾಡುವುದೋ, ಅಂತಹ ಸತ್ಸಂಕಲ್ಪಶಕ್ತಿಯುಳ್ಳ ಪುರುಷನು ಧೈರ್ಯಶಾಲಿಯೆಂದೆನಿಸುವನು. ಆತನಲ್ಲಿ ಧೈರ್ಯಶೌರ್ಯಔದಾರ್ಯಾದಿ ಘನಮಹಿಮೆಗಳಿವೆ. ಇಂತಹ ಶೌರ್ಯವಂತನು ಕಷ್ಟದಲ್ಲಿಯೂ, ಸಂಕಟದಲ್ಲಿಯೂ, ನೋವಿನಲ್ಲಿಯೂ ಸಹ ಯಾವುದನ್ನು ಕಂಡರೆ ಹೆದರಬೇಕು, ಯಾವುದಕ್ಕೆ ಹೆದರಕೂಡದು, ಎಂಬುದನ್ನು ತಿಳಿದು ಅದರಂತೆ ನಡೆಯುವನು. ಯಾವ ಮನುಷ್ಯನಲ್ಲಿ ತಮೋಗುಣ ಸತ್ವರಜಸ್ಸುಗಳ ಅನುಯಾಯಿಯಾಗಿರುವುದರಿಂದ ಆತನ ಆಶೆ—ಆಕಾಂಕ್ಷೆ, ಕ್ಷುಧೆ-ತೃಷ್ಣೆಗಳೆಲ್ಲಾ ಸತ್ವದಿಂದ ಸಂಯಮಮಾಡಲ್ಪಟ್ಟು ಮಿತರೀತಿಯಲ್ಲಿ— ಉಚಿತ ರೀತಿಯಲ್ಲಿ — ಅವಶ್ಯಕರೀತಿಯಲ್ಲಿ — ಆಪ್ಯಾಯನಗೊಳಿಸಲ್ಪಡುವುವೋ, ಅಂತಹ ಮನುಷ್ಯನಲ್ಲಿ ಮಿತವ್ಯವಹಾರವಿದೆ, ಆತನು ಮಿತಾಚಾರಿ ಎಂದೆನಿಸುವನು. ಯಾವನಲ್ಲಿ ವಿವೇಕ, ಧೈರ್ಯ, ಮಿತವ್ಯವಹಾರ ಅಥವಾ ಆತ್ಮಸಂಯಮ—ಇವು ಮೂರೂ ಸಮ್ಮೇಳನಗೊಂಡು, ಸಮತೋಲನ ಹೊಂದಿ, ಪ್ರತಿ ಒಂದೂ ತನ್ನ ವ್ಯಾಪಾರವನ್ನು, ತನ್ನ ಧರ್ಮವನ್ನು, ಸಮೀಚೀನವಾದ ರೀತಿಯಲ್ಲಿ ನಡಸುವುದೋ, ಯಾವನಲ್ಲಿ ಸತ್ವರಜಸ್ತಮೋಗುಣಗಳು ಪರಸ್ಪರ ಕಲಹಕರುಬುಗಳಿಲ್ಲದೆ ತಮ್ಮ ಧರ್ಮವನ್ನು ಪ್ರಕೃತಿಗನುಸಾರವಾಗಿ ನಡಸುತ್ತಾ, ದೇಹವನ್ನು ಸಮಧಾತುವಿನಲ್ಲಿಟ್ಟು, ಆತ್ಮನನ್ನು ಶಾಂತಿಸಮಾಧಾನಗಳಿಂದ ಆನಂದಪಡಿಸುವುವೋ, ಅಂತಹ ಪುಣ್ಯಪುರುಷನು ಧರ್ಮಿಷ್ಠನು, ನ್ಯಾಯಶೀಲನು, ಸತ್ಯವಂತನೆನಿಸುವನು.

ಈ ವಿಧವಾಗಿ ಗುಣತ್ರಯಗಳು ಸಾಮರಸ್ಯವಡೆದ ಚಿತ್ತಸ್ವಭಾವದಲ್ಲಿ ನಡೆವ ದಾರಿಯೇ—ಮಾಡುವ ಕರ್ಮವೇ—ಆಚರಿಸುವ ನಿಷ್ಠೆಯೇ—ಅನುಷ್ಠಿಸುವ ಧ್ಯೇಯವೇ—ನ್ಯಾಯಮಾರ್ಗ, ಸನ್ಮಾನಸೂತ್ರ, ಸತ್ಯವರ್ತನೆ. ಇದೇ ಪ್ಲೇಟೋವಿನ ಪ್ರಮುಖ ಗುಣಗಳಲ್ಲಿ (cardinal virtues) ಶ್ರೇಷ್ಠವೆನಿಸಿದ ನ್ಯಾಯ ಅಥವಾ ಧರ್ಮಸ್ವಭಾವ (Justice, Righteousness) ಎಂಬುದು. ಯಾವ ನರನು ತನ್ನ ಗುಣತ್ರಯಗಳನ್ನು ಏಕೀಭವಿಸಿ, ಚಿತ್ತಸ್ವಾಸ್ಥ್ಯವನ್ನು ಪಡೆದು, ವಿವೇಕಿಯೂ, ಧೈರ್ಯವಂತನೂ, ಶಾಂತನೂ, ಶ್ರೀಗಾರವಂತನೂ ಆಗುವನೋ, ಆ ಪುಣ್ಯಶ್ಲೋಕನು ಧರ್ಮನಿರತನು, ನೀತಿಶಾಸ್ತ್ರದ ಸಾರವನ್ನರಿತವನು, ಯೋಗಭೋಗಗಳೆರಡನ್ನೂ ಅನುಭವಿಸುವವನು. ಇಂತಹ ನಿಷ್ಠನು ಮೋಸಮಾಡಲಾರನು, ಅಸ್ತೇಯನು, ಮಿತ್ರದ್ರೋಹವರಿಯದವನು, ದೇಶವತ್ಸಲನು—ಒಟ್ಟೀನು, ನೀತಿಶಾಸ್ತ್ರದ ಸ್ತಂಭಗಳಂತಿರುವ ನಡೆವಳಿಗಳು ಯಾವುವೋ ಅವುಗಳನ್ನೆಲ್ಲಾ ಅನುಷ್ಠಿಸತಕ್ಕವನು.

ನ್ಯಾಯ ಅಥವಾ ಧರ್ಮಸ್ವಭಾವವೆಂದರೇನು ಎಂಬುದೇ ಸಾಕ್ರಟೀಸನ ಪ್ರಶ್ನೆ.೧

"ರಾಜ್ಯದ ತಳಹದಿಯೋಪಾದಿಯಂತಿರುವ, ನಾವು ಮೊದಲಿಂದಲೂ ಒತ್ತಿ ಹೇಳುತ್ತಿರುವ, ತತ್ವವನ್ನು ನೀನು ಮರೆತಿಲ್ಲವಷ್ಟೆ—ಪ್ರತಿ ಒಬ್ಬ ಮನುಷ್ಯನೂ ತನ್ನ ಶಕ್ತಿ ಸ್ವಭಾವಗಳಿಗನುಸಾರವಾದ ಯಾವುದಾದರೂ ಒಂದೇ ಕೆಲಸವನ್ನು ಮಾಡಬೇಕೆಂದು? ಈಗ ನ್ಯಾಯವೆಂಬುದು ಇದೇ ತತ್ವ, ಇಲ್ಲವೆ ಅದಕ್ಕೆ ಸಂಬಂಧಪಟ್ಟುದು."

"ಹೌದು, ಒಬ್ಬನು ಒಂದೇ ಕೆಲಸವನ್ನು ಮಾಡಬೇಕೆಂದು ನಾವು ಆಗಾಗ್ಗೆ ಹೇಳುತ್ತಿದ್ದೆವು."

"ಅಷ್ಟೇ ಅಲ್ಲ, ಪ್ರತಿ ಒಬ್ಬನೂ ತನ್ನ ಸ್ವಂತ ಕೆಲಸವನ್ನು ಮಾಡುತ್ತಾ, ಸಿಕ್ಕಿದವರ ಕೆಲಸಕ್ಕೆ ಕೈಹಾಕದಿರುವುದೇ ನ್ಯಾಯವೆಂದು ನಾವು ಪದೇ ಪದೇ ಸಾರಿದೆವು, ಇತರರು ಅನೇಕರೂ ಸಹ ಇದೇ ಮಾತನ್ನೇ ನಮಗೆ ಹೇಳಿದಾರೆ."

---

೧ "ಆದರ್ಶ ರಾಜ್ಯ" ೪೩೩ ಎ

"ಹೌದು, ನಾವು ಹಾಗೆ ಅಂದದ್ದುಂಟು."

"ಹಾಗಾದರೆ ಸ್ವಧರ್ಮಕ್ಕನುಸಾರವಾದ ಕೆಲಸವನ್ನು ನಿಯತವಾದ ರೀತಿಯಲ್ಲಿ ಮಾಡುವುದೇ ಧರ್ಮಸ್ವಭಾವವೆಂದು ನಂಬಬಹುದು. ಯಾವ ಆಧಾರದಿಂದ ನಾನು ಹೀಗೆ ಹೇಳುತ್ತೇನೆಂದು ಊಹಿಸಬಲ್ಲೆಯಾ?"

"ಊಹಿಸಲಾರೆ, ಆದರೆ ತಿಳಿದುಕೊಳ್ಳಬೇಕೆಂದು ನನಗೆ ಆಸೆ."

"ಹೇಗೆಂದರೆ, ರಾಜ್ಯದಲ್ಲಿನ ಮಿತಾಚಾರ, ಧೈರ್ಯ, ಮತ್ತು ವಿವೇಕ—ಈ ಮೂರು ಸದ್ಗುಣಗಳನ್ನೂ ಪ್ರತ್ಯೇಕಿಸಿದ ಮೇಲೆ ಉಳಿಯತಕ್ಕುದು ಇದೊಂದೇ; ಇದೇ ಅವುಗಳೆಲ್ಲದರ ಸ್ಥಿತಿಗೆ ಅಂತಿಮ ಕಾರಣ ಮತ್ತು ಉಪಾಧಿ, ಅವುಗಳಲ್ಲಿ ಅಂತರ್ಗತವಾಗಿದ್ದು ಅವುಗಳನ್ನು ಭದ್ರವಾಗಿ ರಕ್ಷಿಸತಕ್ಕಂತಹುದು. ಮೇಲಿನ ಮೂರು ಸದ್ಗುಣಗಳೂ ನಮಗೆ ಸಿಕ್ಕಿದರೆ, ನಾಲ್ಕನೆಯದೇ, ಅಥವಾ ಉಳಿದದ್ದೇ ನ್ಯಾಯವೆಂದು ನಾವು ಹೇಳಿದೆವು."

"ಅವಶ್ಯಕವಾಗಿ ಹಾಗೆಯೇ ಹೇಳಬೇಕು..............."

ವ್ಯಕ್ತಿ ಪುರುಷನಲ್ಲಿ ಮೂರು ವಿಧವಾದ ಗುಣಗಳಿರುವಂತೆಯೇ ರಾಜ್ಯದಲ್ಲಿಯೂ ಕ್ರಮವಾಗಿ ಈ ಮೂರು ಗುಣಗಳನ್ನು ಹೊಂದಿರತಕ್ಕ ವಿವೇಕಿಗಳು ಅಥವಾ ರಾಜ್ಯ ಪರಿಪಾಲಕರು, ಶೌರ್ಯವಂತರು ಅಥವಾ ಯೋಧರು, ಅರ್ಥಸಾಧಕರು ಅಥವಾ ವರ್ತಕರು, ಕಸಬುದಾರರು ಎಂಬ ಮೂರು ಪಂಗಡಗಳಿರುವುವು (ಈ ವಿಷಯವನ್ನು ಮುಂದೆ ವಿಶದಪಡಿಸಲಾಗುವುದು). ಈ ಸಾಮ್ಯವನ್ನು ತೆಗೆದುಕೊಂಡು ಸಾಕ್ರಟೀಸನು ಮುಂದುವರಿಸುತ್ತಾನೆ:

"ಈ ತೆರನಾದ ಮೂರು ಪ್ರತ್ಯೇಕ ಪಂಗಡಗಳಿರುವಲ್ಲಿ, ಒಂದು ಪಂಗಡದವರು ಮತ್ತೊಂದು ಪಂಗಡದವರ ಗೋಜಿಗೆ ಹೋಗುವುದು ಅಥವಾ ಒಂದು ತರಗತಿಯವರು ಮತ್ತೊಂದು ತರಗತಿಗೆ ಬದಲಾಯಿಸುವುದು—ಇದೇ ರಾಜ್ಯಕ್ಕೆ ಅತ್ಯಂತ ಕ್ಷೋಭೆಯನ್ನುಂಟುಮಾಡುವುದು; ಈ ಕಾರಣದಿಂದ ಇಂತಹ ವ್ಯವಹಾರವನ್ನು ನ್ಯಾಯವಾಗಿ ದುಷ್ಟವರ್ತನೆ ಎಂದು ಹೇಳಬೇಕಲ್ಲವೆ?"

" ಹಾಗೆಯೇ ಹೇಳಬೇಕು."

"ಮತ್ತು ಸ್ವದೇಶಕ್ಕೆ ಈ ರೀತಿಯಾಗಿ ಅತ್ಯಂತ ಕೇಡನ್ನುಂಟು ಮಾಡುವುದೇ ಅನ್ಯಾಯವೆಂದು ನೀನು ಹೇಳುವೆಯಲ್ಲವೇ ? "

"ನಿಸ್ಸಂದೇಹವಾಗಿ."

"ಆ ಪಕ್ಷದಲ್ಲಿ ಇದೇ ಅನ್ಯಾಯವೆಂಬುದು—ಒಂದು ಪಂಗಡ ದವರು ಮತ್ತೊಂದು ಪಂಗಡದವರ ಕೆಲಸಕ್ಕೆ ಕೈಹಾಕುವುದರ ಮೂಲಕ ದೇಶಕ್ಕೆ ಕೇಡನ್ನುಂಟುಮಾಡುವುದು. ಇದಕ್ಕೆ ಪ್ರತಿಯಾಗಿ, ವರ್ತಕನೂ, ಯೋಧನೂ, ಪರಿಪಾಲಕನೂ ತಮ್ಮ ತಮ್ಮ ಕೆಲಸವನ್ನು ಪ್ರತಿಬಂಧಕ ವಿಲ್ಲದೆ ನಡಸುತ್ತಾ ಬಂದರೆ ಅದೇ ರಾಜ್ಯದಲ್ಲಿ ಧರ್ಮ ಅಥವಾ ನ್ಯಾಯ — ಅದೇ ರಾಜ್ಯವನ್ನು ಧರ್ಮರಾಜ್ಯವನ್ನಾಗಿ ಮಾಡತಕ್ಕುದು. "

"ನಿನ್ನ ಮಾತಿಗೆ ನಾನು ಒಪ್ಪುತ್ತೇನೆ........"

"ಧರ್ಮಭಾವವನ್ನೇ ನಾವು ಪರಿಗಣಿಸಿದಲ್ಲಿ, ಧರ್ಮಪುರುಷನೆಂ ದೆನಿಸಿಕೊಂಡವನು ಧರ್ಮರಾಜ್ಯದಂತೆಯೇ ಇರುವನಲ್ಲವೆ ? "

"ಹಾಗೆಯೇ ಇರುವನು."

"ಮತ್ತು ರಾಜ್ಯ ಧಾರ್ಮಿಕವಾಗುವುದೆಂದರೆ ತ್ರಿವರ್ಗದವರಲ್ಲಿ ಪ್ರತಿ ಒಂದು ವರ್ಗದವರೂ ತಮ್ಮ ತಮ್ಮ ಸ್ವಭಾವಕ್ಕನುಸಾರವಾದ ಕೆಲಸವನ್ನು ಮಾಡುತ್ತಾ ಹೋಗುವುದು ; ಇದೇ ರೀತಿಯಲ್ಲಿಯೇ ಈ ತ್ರಿವರ್ಗದವರ ಇನ್ನೂ ಕೆಲವು ಇತರ ಹುಟ್ಟುಗುಣರಾಗಾದಿಗಳಿಂದ ರಾಜ್ಯವೂ ಸಹ ಮಿತವ್ಯವಹಾರವುಳ್ಳದ್ದು, ಧೈರ್ಯಯುಕ್ತವಾದುದು, ವಿವೇಕಪೂರ್ವಕವಾದುದು, ಎಂದೆನಿಸಿಕೊಳ್ಳುತ್ತದೆ."

"ನಿಜ" ಅವನೆಂದನು.

"ವ್ಯಕ್ತಿಯ ವಿಷಯದಲ್ಲಿಯೂ ಹಾಗೆಯೇ; ರಾಜ್ಯದಲ್ಲಿ ಕಂಡು ಬಂದ ತತ್ವತ್ರಯಗಳೇ ಆತನ ಆತ್ಮದಲ್ಲಿಯೂ ಇರುವುವೆಂದು ನಾವು ಭಾವಿಸಬಹುದು........"

"ಖಂಡಿತವಾಗಿ"........

"ಹಾಗಾದರೆ, ರಾಜ್ಯ ಯಾವುದರಿಂದ ವಿವೇಕಪೂರ್ವಕವಾಗು ವುದೋ, ಅದೇ ಗುಣದ ಮಹಿಮೆಯಿಂದ, ಮತ್ತು ಅದೇ ರೀತಿಯಲ್ಲಿಯೇ,

ವ್ಯಕ್ತಿಯೂ ವಿವೇಕಿಯಾಗುವನೆಂದು ನಾವು ಅನುಮಾನ ತೆಗೆಯ ಬೇಕಲ್ಲವೆ ? "

" ನಿಸ್ಸಂಶಯವಾಗಿ."

" ಮತ್ತು ರಾಜ್ಯದಲ್ಲಿ ಶೌರ್ಯವೆಂದೆನಿಸಿಕೊಂಡಿರುವ ಗುಣವೇ ವ್ಯಕ್ತಿಯಲ್ಲಿಯೂ ಶೌರ್ಯವಾಗಿ ಪರಿಣಮಿಸುವುದು, ಮತ್ತು ಇದರಂತೆಯೇ ಇತರ ಸದ್ಗುಣಗಳ ವಿಚಾರದಲ್ಲಿಯೂ ರಾಜ್ಯಕ್ಕೂ ವ್ಯಕ್ತಿಗೂ ಏಕತರ ವಾದ ಸಂಬಂಧವಿರುವುದು ? "

" ಧಾರಾಳವಾಗಿ."

" ಅಂದ ಮೇಲೆ, ರಾಜ್ಯ ಯಾವ ವಿಧದಲ್ಲಿ ನ್ಯಾಯವರ್ತನ ವುಳ್ಳುದಾಗುವುದೋ, ಅದೇ ರೀತಿಯಲ್ಲಿ ವ್ಯಕ್ತಿಯೂ ನ್ಯಾಯವಂತ ನಾಗುವನೆಂದು ನಾವು ಒಪ್ಪಬೇಕು ? "

" ಅದಕ್ಕೆ ಅಡ್ಡಿಯೇನು ? "

" ರಾಜ್ಯದ ಧರ್ಮವೆಂದರೆ ತ್ರಿವರ್ಗದವರಲ್ಲಿ ಪ್ರತಿ ಒಂದು ವರ್ಗ ದವರೂ ತಮ್ಮ ವರ್ಗದ ನಿಯತ ಕರ್ಮವನ್ನು ಮಾಡಿಕೊಂಡು ಬರುವು ದೆಂಬುದನ್ನು ಮರೆತಿಲ್ಲವಷ್ಟೆ ? "

" ಅದನ್ನು ಮರೆಯುವ ಸಂಭವ ಕಡಮೆ."

" ಮತ್ತು ಯಾವನಲ್ಲಿ ಅವನ ಸ್ವಾಭಾವಿಕ ಧರ್ಮಗಳೆಲ್ಲವೂ ತಮ್ಮ ತಮ್ಮ ಪ್ರವೃತ್ತಿಗಳೆಲ್ಲವನ್ನೂ ಸ್ವಾಭಾವಿಕ ರೀತಿಯಲ್ಲಿ ನಡಸುತ್ತ ವೆಯೋ ಅಂತಹ ಪುರುಷನು ಧರ್ಮಿಷ್ಠನೆನಿಸಿಕೊಂಡು ತನ್ನ ಕರ್ತವ್ಯ ವನ್ನು ತಾನು ಮಾಡುವವನೆಂಬುದನ್ನೂ ನಾವು ಜ್ಞಾಪಕದಲ್ಲಿಡ ಬೇಕು ? "

" ಹೌದು, ನಾವು ಅದನ್ನೂ ಜ್ಞಾಪಕದಲ್ಲಿಡಬೇಕು."

" ಈ ಸ್ವಾಭಾವಿಕ ಗುಣಗಳಲ್ಲಿ ವಿವೇಕಕ್ಕೆತವರುಮನೆಯಾಗಿರುವ, ಮತ್ತು ಆದ್ಯಂತ ಜೀವವನ್ನೂ ಸುರಕ್ಷಿತವಾಗಿ ಕಾಪಾಡಿಕೊಂಡು ಬರುವ, ಜ್ಞಾನಬಲವೆಂಬುದು ಆಳಬೇಕು, ಶೌರ್ಯಬಲವೆಂಬುದು ಅದಕ್ಕ ಧೀನವಾಗಿ ಸಹಕಾರಿಯಾಗಿರಬೇಕು, ಅಲ್ಲವೆ ? "

" ಸಂದೇಹವೇನು ? "

"ಮತ್ತು ನಾವು ಹಿಂದೆಯೇ ಹೇಳಿದಂತೆ, ಸಂಗೀತ[೧] ಮತ್ತು ಅಂಗಸಾಧನೆಗಳ ಸಂಯುಕ್ತ ಸಂಸ್ಕಾರದಿಂದ ಜ್ಞಾನವೂ ಶೌರ್ಯವೂ ಒಂದುಗೂಡಿ, ಘನವಾದ ಪಾಠ ಪ್ರವಚನಗಳಿಂದ ಬುದ್ಧಿ ಬಲಹೊಂದಿ ದೃಢವಾಗುವುದು, ಮತ್ತು ತಾಳಮೇಳ ಛಂದಸ್ಸುಗಳ ಮಾರ್ದವ ಮಹಿಮೆಯಿಂದ ರಾಗಭಾವಗಳ ಉದ್ವೇಗ ಮಟ್ಟಾಗಿ, ಉಗ್ರತೆ ಉಪ ಶಮನಪಡೆದು, ಅವು ಶುದ್ಧವೂ ಆಗುವುವು ?"

"ವಾಸ್ತವಿಕವಾಗಿಯೂ ಆಗುವುವು."

"ಬುದ್ಧಿಬಲವೂ ಎದೆಬಲವೂ ಈ ರೀತಿಯಾಗಿ ಪುಷ್ಟಿಹೊಂದಿ, ಸಂಸ್ಕೃತವಾಗಿ, ತಮ್ಮತಮ್ಮ ಉದ್ಯೋಗವನ್ನು ಸುಸೂತ್ರವಾಗಿ ನಡಸಲು ಅರಿತು, ಪ್ರತಿಪ್ರಾಣಿಯ ಜೀವನದಲ್ಲೂ ಅತ್ಯಧಿಕ ಭಾಗವನ್ನು ಆಕ್ರಮಿಸಿ ಕೊಂಡಿರುವ, ಮತ್ತು ಸ್ವಾಭಾವಿಕವಾಗಿ ಎಂದೂ ತೃಪ್ತಿಯೆಂಬುದನ್ನೇ ಅರಿಯದ, ವಿಷಯವಾಸನೆಯ ಮೇಲೆ ಅಧಿಕಾರ ನಡಸುವುವು ; ಅದರ ಮೇಲೆ ಪಹರೆ ಇಡುವುವೆಂದೇ ಹೇಳಬೇಕು ; ಇಲ್ಲದೆ ಹೋದ ಪಕ್ಷದಲ್ಲಿ ಈ ಕಾಮ ದೈಹಿಕ ಭೋಗೋಪಭೋಗಗಳ ಮಹತ್ತಿನಿಂದ ಉಬ್ಬಿ, ಕೊಬ್ಬಿ, ಉಲ್ಬಣಪಡೆದು, ತನ್ನ ನ್ಯಾಯವಾದ ಸ್ಥಾನದಲ್ಲಡಗಿರಲಾರದೆ, ಸ್ವಭಾವತಃ ತನ್ನಧೀನಕ್ಕೊಳಪಡದ ಜ್ಞಾನ ಶೌರ್ಯಗಳನ್ನು ವಶಪಡಿಸಿ ಕೊಂಡು ಅವುಗಳ ಮೇಲೆ ತನ್ನ ದರ್ಪತೋರಿಸಿ, ಮಾನವನ ಆದ್ಯಂತ ಜೀವನವನ್ನೇ ತಲೆಕೆಳಗಾಗಿ ಮಾಡಲು ಪ್ರಯತ್ನ ಪಡಬಹುದು ?"

"ಸತ್ಯ, ಸತ್ಯ."

"ಈ ಕಾರಣದಿಂದ ಇವೆರಡೂ ಜೊತೆಗೂಡಿದರೆ ಆದ್ಯಂತ ದೇಹಾ ತ್ಮವನ್ನು ಹೊರಗಿನವರ ಮುತ್ತಿಗೆಗಳಿಂದ ಸಂರಕ್ಷಿಸಬಹುದು ; ಬುದ್ಧಿ ಮಂತ್ರಾಲೋಚನೆ ಹೇಳುವುದು, ಗುಂಡಿಗೆ ತನ್ನ ಯಜಮಾನ ನಿಗೆ ಬೆಂಬಲವಾಗಿ ಕದನಮಾಡುತ್ತಾ ಆತನ ಅಪ್ಪಣೆಗಳನ್ನೂ ಉಪದೇಶ ಗಳನ್ನೂ ನಿರ್ಭಯವಾಗಿ ಪರಿಪಾಲಿಸುವುದು ?"

---

೧. ಪ್ಲೇಟೊ ದೇಶದ ಪರಿಪಾಲಕರಿಗೆ ವಿಧಿಸಿರುವ ವಿದ್ಯಾಭ್ಯಾಸ ರಚನೆಯಲ್ಲಿ ಸಂಗೀತ ಬಹು ಪ್ರಾಮುಖ್ಯವಾದ ಸ್ಥಾನವನ್ನು ಹೊಂದಿರುವುದು ; ಆದರೆ ಈ ಸಂಗೀತ ವೆಂಬುದು ಸಾಹಿತ್ಯ ಭಾಗಗಳೆಲ್ಲವನ್ನೂ ಒಳಗೊಂಡಿರುವುದೆಂದು ತಿಳಿಯಬೇಕು.

" ನಿಜ."

" ಸುಖದಲ್ಲಿಯೂ ದುಃಖದಲ್ಲಿಯೂ, ಭಯಪಡತಕ್ಕ ವಿಚಾರಗಳು ಯಾವುವು, ಭಯಪಡಕೂಡದ ವಿಚಾರಗಳು ಯಾವುವು, ಎಂಬುದನ್ನು ಕುರಿತು ಜ್ಞಾನ ಮಾಡತಕ್ಕ ತೀರ್ಪುಗಳನ್ನು ಯಾವನ ಗುಂಡಿಗೆ ಮನ್ನಿಸುವುದೋ, ಆ ಮನುಷ್ಯನನ್ನು ಧೈರ್ಯಶಾಲಿ ಎಂದು ಹೇಳಬೇಕು ?"

" ಸರಿ."

" ಇಂತಹ ಆಜ್ಞೆಗಳನ್ನು ಕೊಡುವ, ದೊರೆತನಮಾಡುವ, ಮತ್ತು ಮಾನವ ಸ್ವಭಾವದ ಪ್ರತಿ ಒಂದು ಭಾಗದ, ಹಾಗೂ ಸಮಗ್ರ ಆತ್ಮದ, ಹಿತ ಯಾವುದೆಂಬುದನ್ನು ತಿಳಿದಿರುವ, ಆ ಸಣ್ಣ ತತ್ವವಿದೆಯಲ್ಲಾ–ಅದು ಯಾವನಲ್ಲಿರುವುದೋ ಆತನನ್ನು ವಿವೇಕಿ ಎಂದೆನ್ನಬೇಕು ? "

" ಧಾರಾಳವಾಗಿ."

" ಯಾವನಲ್ಲಿ ಈ ಮೇಲಿನ ತತ್ವ ತ್ರಯಗಳೂ ಪರಸ್ಪರ ಮೈತ್ರಿಯಿಂದ ಮಿಳಿತವಾಗಿರುವುವೋ, ಯಾವನಲ್ಲಿ ಬುದ್ಧಿ ಆಳಬೇಕೆಂಬ ವಿಚಾರದಲ್ಲಿ ಅವೆಲ್ಲವೂ ಒಮ್ಮನಸ್ಸಿನಿಂದ ಒಪ್ಪಿ ಯಾವುದೂ ದಂಗೆ ಏಳದಿರುವುದೋ, ಅಂತಹವನನ್ನು ಮಿತವ್ಯವಹಾರಿಯೆಂದು ಹೇಳುವೆಯಲ್ಲವೇ ? "

"ಖಂಡಿತವಾಗಿ; ರಾಜ್ಯದಲ್ಲಾಗಲಿ, ವ್ಯಕ್ತಿಯಲ್ಲಾಗಲಿ, ಮಿತವ್ಯವಹಾರದ—ಆತ್ಮ ಸಂಯಮದ—ನಿಜವಾದ ಲಕ್ಷಣ ಅದೇ" ಅವನೆಂದನು.

" ಇನ್ನು ಧರ್ಮಸ್ವಭಾವವೋ ಅಂದರೆ, ನಿಶ್ಚಯವಾಗಿ, ಹೇಗೆ ಮತ್ತು ಯಾವ ಗುಣದ ಮಹಿಮೆಯಿಂದ ಒಬ್ಬ ಮನುಷ್ಯನು ಧರ್ಮಾತ್ಮನಾಗುವನು ಎಂಬುದನ್ನು ಎಷ್ಟೋ ಸಲ ನಾನು ವಿವರಿಸಿದೇನೆ."

" ನಿಜ, ವಿವರಿಸಿರುವೆ."

ಮಾನವನ ಪರಮ ಶ್ರೇಯ ಯಾವುದೆಂಬುದು ಈಗ ವ್ಯಕ್ತ ಪಡುವುದು: ವಿವೇಕ, ಧೈರ್ಯ, ಆತ್ಮಸಂಯಮ, ಇವುಗಳ ಸಮ್ಮೇಲನ ರೂಪವಾದ ಧರ್ಮಸ್ವಭಾವ ಅಥವಾ ಆಂತರಿಕ ಸುಸ್ಥಿತಿ (justice,

inward harmony)—ಈ ನಾಲ್ಕು ಸುಗುಣಮಣಿಗಳನ್ನು ಧರಿಸಿರುವುದೇ. ಒಟ್ಟಿನಲ್ಲಿ ಜ್ಞಾನವಿಮರ್ಶೆಯಿಂದ ಬಾಳುವುದೇ ಸದ್ಗುಣಸಂಪತ್ತನ್ನು ಪಡೆಯುವುದು; ಇದೇ ಮಾನವನ ಪರಮಶ್ರೇಯ; ಇದೇ ಆತನ ಸೌಜನ್ಯ ಸೌಶೀಲ್ಯದಿಂದೊಡಗೂಡಿದ ಸದಾಚಾರದ ಪರಮಾವಧಿ, ಇಂತಹ ಉತ್ತಮೋತ್ತಮವಾದ ಪುರುಷಾರ್ಥವನ್ನು ಸಾಧಿಸುವವನ ಜೀವನ ಸೌಖ್ಯದಿಂದಲೂ ಒಡಗೂಡಿರುವುದೇನೂ ಆಶ್ಚರ್ಯವಲ್ಲ. ಧರ್ಮನಿರತನೇ ಕಟ್ಟಕಡೆಯಲ್ಲಿ ಸೌಖ್ಯವಂತ. ಆದರೆ ಸುಖವೆಂದರೆ ಭೋಗ ಮಾತ್ರವಲ್ಲ. ಭೋಗ ನಮ್ಮ ಪುರುಷಾರ್ಥವೂ ಅಲ್ಲ, ಸಾಧನ ಚತುಷ್ಟಯ (ವಿವೇಕ, ಧೈರ್ಯ, ದಮ, ಧರ್ಮಸ್ವಭಾವ) ದಲ್ಲಿ ಸೇರಿಯೂ ಇಲ್ಲ. ಪ್ಲೇಟೋವಿನ ಮತದ ಪ್ರಕಾರವಾಗಿ ಜೀವನದ ಶುಭಸಾಮಗ್ರಿಗಳಲ್ಲಿ ಭೋಗವೆಂಬುದು ಕೀಳಾದ, ಕೊನೆಯ ದರ್ಜೆಯಲ್ಲಿರತಕ್ಕ ತತ್ವ. ಯುಕ್ತವಾದುದು, ಮಿತವುಳ್ಳದ್ದು, ಮಧ್ಯಮಾರ್ಗಕ್ಕನುಸಾರವಾದುದು ಮೊದಲನೆಯದು; ಸಮಗಟ್ಟುಳ್ಳದು, ಸುಂದರವಾದುದು, ಪರಿಪೂರ್ಣವಾದುದು ಅಥವಾ ಯೋಗ್ಯವಾದುದು ಎರಡನೆಯದು; ಮನಸ್ಸು ಅಥವಾ ವಿವೇಕ ಮೂರನೆಯದು; ಸಕಲವಿಧವಾದ ಶಾಸ್ತ್ರಕಲೆಗಳು, ಪರಿಪಕ್ವವಾದ ಅಭಿಮತಗಳು— ಇವು ನಾಲ್ಕನೆಯ ದರ್ಜೆಯಲ್ಲಿರುವುವು; ಕಡೆಯದಾಗಿ ಭೋಗಕ್ಕೂ — ಅದರಲ್ಲಿಯೂ, ನೋವುತರದಂತಹ, ಆತ್ಮನಿಗೆ ಸಂಬಂಧಿಸಿದ, ಕೆಲವುವೇಳೆ ಜ್ಞಾನಜನ್ಯವಾದ, ಕೆಲವುವೇಳೆ ಇಂದ್ರಿಯಜನ್ಯವಾದ, ಶುದ್ಧಸುಖಗಳಿಗೆ–ಕೊನೆಯ ಅಂದರೆ ಐದನೆಯ ಸ್ಥಾನವನ್ನು ಕೊಡಬಹುದು. ವಾಸ್ತವಿಕವಾಗಿ ಹೇಳುವುದಾದರೆ ಆತ್ಮಸಾಮರಸ್ಯವೇ ಅತಿಶಯವಾದ ಸುಖ.

ಸಾವಧಾನವಾಗಿ ಪರಿಶೀಲಿಸುವವರಿಗೆ ನಾವು ಹಿಂದೆಯೇ ಸೂಚಿಸಿದಂತೆ ಪ್ಲೇಟೋವಿನ ನೀತಿಬೋಧೆಯಲ್ಲಿ ಐಹಿಕ ಅಥವಾ ಪ್ರಾಪಂಚಿಕ ವ್ಯಾಪಾರವನ್ನು ತಿರಸ್ಕರಿಸುವ ಒಂದುಬಗೆಯ ಧ್ವನಿ ಕಂಡುಬರದಿರಲಾರದು. ಆತನು ಮಾನವನ ಜ್ಞಾನಾತ್ಮಕಕರ್ಮಗಳನ್ನು ಅತಿಶಯವಾಗಿ ಹೊಗಳುವುದಲ್ಲದೆ—ಸಾಮಾನ್ಯ ಪ್ರಪಂಚವನ್ನು ಈಕ್ಷಿಸಲು ಹವಣಿಸುವ ಆತ್ಮದ ಜ್ಞಾನಸ್ವರೂಪವನ್ನು ಶ್ರೇಷ್ಠವೆಂದೆಣಿಸುವುದಲ್ಲದೆ—ದೇಹವನ್ನೂ

ದೇಹಕ್ಕೆ ಸಂಬಂಧಪಟ್ಟ ತಮೋವ್ಯಾಪಾರಗಳನ್ನೂ ಪೂರ್ಣವಾಗಿ ಧ್ವಂಸ ಮಾಡಿಬಿಡಬೇಕೆಂದು ಕೆಲವು ಸಮಯಗಳಲ್ಲಿ ಅಭಿಪ್ರಾಯಪಡುತ್ತಾನೆ. ಪ್ಲೇಟೋವಿನ ಈ ವಿಧವಾದ ಸರಣಿಯನ್ನು ತಾಪಸಯೋಗ(asceticism) ಎಂದು ಹೇಳಬಹುದು. ಜನವಾಡಿಕೆಯ ಪ್ರಕಾರವಾಗಿ ವೈರಾಗ್ಯವೆಂದು ಹೇಳಿದರೂ ಹೇಳಬಹುದು. ನಾವು ನೋಡುವ ಭವಪ್ರಪಂಚ ಕ್ಷಣ ಭಂಗುರವಾದುದು, ತೋರಿಕೆಯ ಪ್ರಪಂಚಮಾತ್ರ. ನಮ್ಮ ಆಶೆ ಆಟೋಪಗಳು, ಕೀರ್ತಿಪ್ರತಾಪಗಳು—ಸಮಸ್ತವೂ ನಶ್ವರ. ಜ್ಞಾನ ಜ್ಯೋತಿಯೇ—ಸತ್ಯಸಂಪತ್ತೇ—ಪ್ಲೇಟೋವಿಗೆ ಶಾಶ್ವತವಾದ ಭಾಗ್ಯದ ನಿಧಿ. ಚಿತ್ತೇ ಸತ್ವ, ಪರಿಪೂರ್ಣತೆಯ ತತ್ತ್ವ, ಜ್ಞಾನದ ತತ್ತ್ವ. ಪ್ರಧಾನ —ಪ್ರತ್ಯೇಕಗಳಲ್ಲಿ ಅಂತರ್ಗತವಾಗಿರುವ ಪ್ರಕೃತಿವಿಶೇಷ — ಅಪರಿ ಪೂರ್ಣದ ನೆಲೆ, ಅಜ್ಞಾನದ ಖನಿ, ಆತ್ಮಕ್ಕೆ ಹೊರಲಸದಳವಾದ ಭಾರ. ಇಂತಹ ನಿಕೃಷ್ಟವಾದ ಬಂಧನದಿಂದ ಬಿಡಿಸಿಕೊಂಡು ಸೌಂದರ್ಯರಾಶಿ ಯಿಂದೊಪ್ಪುವ ಸಾಮಾನ್ಯಪ್ರಪಂಚದೊಂದಿಗೆ ಸಾಧ್ಯವಾದಷ್ಟುಮಟ್ಟಿಗೆ ನಾವುಬೆರೆತು ಒಂದಾಗುವುದೇ ನಮ್ಮ ಪರಮಪುರುಷಾರ್ಥ.

## ರಾಜನೀತಿಶಾಸ್ತ್ರ

ಪ್ಲೇಟೊ ಅದ್ವಿತೀಯ ತಾರ್ಕಿಕನೂ ಅನುಪಮ ಅಧ್ಯಾತ್ಮ ವಾದಿಯೂ ಅಸಾಧಾರಣನಾದ ನೀತಿಸಿದ್ಧಾಂತಿಯೂ ಆಗಿದ್ದುದಲ್ಲದೆ ಅಸದೃಶನಾದ ರಾಜನೀತಿಕುಶಲನೂ ಆಗಿದ್ದನು.[೧] ಈತನ ರಾಜ್ಯ ಸಿದ್ಧಾಂತ ನೀತಿಶಾಸ್ತ್ರವನ್ನು ಅವಲಂಬಿಸಿರುತ್ತದೆ. ಸದ್ಗುಣಸಂಪತ್ತೇ ಪರಮಶ್ರೇಯವಾದುದರಿಂದ ಪುರುಷನು ಏಕಾಕಿಯಾಗಿದ್ದುಕೊಂಡು ತನ್ನ ಅಭೀಷ್ಟವನ್ನು ಸಾಧಿಸಿಕೊಳ್ಳಲಾಗುವುದಿಲ್ಲ. ಸಂಘದಲ್ಲಿಯೇ ಸದ್ಗುಣವನ್ನು ಸಂಪಾದಿಸಬೇಕು. ಆದುದರಿಂದ ಶೀಲಾಚಾರವನ್ನು ವೃದ್ಧಿಗೊಳಿಸಿ ಪ್ರಜೆಗಳಲ್ಲಿ ಸೌಖ್ಯವನ್ನು ಹೆಚ್ಚಿಸಲು ಪ್ರಯತ್ನಪಡುವುದೇ,

೧. ಪ್ಲೇಟೋವಿನ ರಾಜ್ಯಸಿದ್ಧಾಂತವನ್ನು ಆತನ ಬರವಣಿಗೆಗಳಲ್ಲೆಲ್ಲಾ ಅತ್ಯಂತ ಪ್ರಸಿದ್ಧವಾದ "ಆದರ್ಶರಾಜ್ಯ" ಎಂಬ ಸಂವಾದದಲ್ಲಿಯೂ "ರಾಜನೀತಿಕುಶಲ" ಮತ್ತು "ಶಾಸನಗಳು" ಎಂಬ ಕೊನೆಯ ಸಂವಾದಗಳಲ್ಲಿಯೂ ಕಾಣಬಹುದು.

ದೇಶದಲ್ಲಿ ಹೆಚ್ಚುಹೆಚ್ಚು ಜನರು ನೀತಿಮಾರ್ಗವನ್ನವಲಂಬಿಸಲು ಅನುಕೂಲವಾಗುವಂತೆ ಕಾಯಿದೆ ಕಾನೂನುಗಳನ್ನೇರ್ಪಡಿಸುವುದೇ, ರಾಜ್ಯಾಡಳಿತದ ಮುಖ್ಯ ಗುರಿಯಾಗಿರಬೇಕು. ಸಂಘಜೀವನವೇ ಮಾನವನ ಮೋಕ್ಷಕ್ಕೆ ರಾಜಮಾರ್ಗ, ಏಕೆಂದರೆ ಸಂಘದಲ್ಲಿಯೇ ನಮ್ಮ ಸದ್ಗುಣಗಳು ಕಾಂತಿಹೊಂದುವುವು. ಆದರೂ ಸಮಾಜವೂ ಕಾಯಿದೆಕಟ್ಟುಗಳೆಲ್ಲವೂ ನಮ್ಮ ಧ್ಯೇಯಸಾಧನೆಗೆ ಸಹಕಾರಿಗಳೇ ವಿನಾ ಅದಕ್ಕಿಂತಲೂ ಹೆಚ್ಚಿನ ಬೆಲೆ ಅವುಗಳಲ್ಲೇನೂ ಇಲ್ಲ. ಪರಿಪೂರ್ಣನಾದ ಸುಗುಣಿಗೆ ಸಮಾಜವೂ ಅಗತ್ಯವಿಲ್ಲ, ಸಂಘದ ಕಾಯಿದೆಕಟ್ಟುಗಳು ಮೊದಲೇ ಅನವಶ್ಯಕ. ಇಂತಹ ಪುಣ್ಯಚರಿತನು ತನ್ನ ಜ್ಞಾನಾಜ್ಞೆಗೆ ಒಳಪಡುವನಲ್ಲದೆ ರಾಜಾಜ್ಞೆಗೆ ಬಾಗಲಾರನು. ಆದರೆ ಎಲ್ಲರೂ ಇಂಥ ಪೂರ್ಣಪುರುಷರಾಗುವುದು ಸಾಧ್ಯವಿಲ್ಲದುದರಿಂದ ಜನರನ್ನು ಸನ್ಮಾರ್ಗದಲ್ಲಿಡಲು ರಾಜ್ಯವೊಂದಿರಬೇಕು, ಅದರ ಕಾನೂನುಗಳು ಆಚರಣೆಯಲ್ಲಿರಬೇಕು.

ವ್ಯಷ್ಟಿಯೂ (ವ್ಯಕ್ತಿಮಾನವನು) ಸಮಷ್ಟಿಯೂ (ಜಗತ್ತು) ಹೇಗೆ ಚಿನ್ಮಯವಾಗಿ ಚಿತ್ತಿನ ಪ್ರಭೆಯಿಂದ ಆಳಲ್ಪಡುವುವೋ ರಾಜ್ಯದಲ್ಲಿಯೂ ಅದರಂತೆ ಚಿತ್ತೇ ಪ್ರಧಾನತತ್ತ್ವವಾಗಿರಬೇಕು. ಆತ್ಮನಲ್ಲಿರುವ ಗುಣತ್ರಯಗಳಂತೆ ರಾಜ್ಯದಲ್ಲಿಯೂ ವರ್ಗತ್ರಯಗಳಿರಬೇಕು; ಮತ್ತು ಈ ತ್ರಿವಿಧಪಂಗಡಗಳ ಪರಸ್ಪರ ಸಂಬಂಧ, ಸುಸ್ಥಿತಿಯಲ್ಲಿರುವ ಮಾನವನ ಆತ್ಮದಲ್ಲಿ ಗುಣತ್ರಯಗಳು ಸಮ್ಮೇಲನವನ್ನು ಹೊಂದಿ ಪರಸ್ಪರ ಹೇಗೆ ನಡೆದುಕೊಳ್ಳುವುವೋ, ಆ ರೀತಿಯಲ್ಲಿರಬೇಕು. ತತ್ತ್ವಶಾಸ್ತ್ರಸಂಪನ್ನರಾದವರು ಜ್ಞಾನಪ್ರಭೆಯ ಪರಮಾವಧಿಯನ್ನು ಹೊಂದಿದವರಾದುದರಿಂದ ಇಂಥವರು ರಾಜ್ಯದ ಪ್ರಭುಗಳಾಗಿರಬೇಕು. ಇವರಿಗೆ ರಾಜ್ಯಪರಿಪಾಲಕರೆಂದು ಹೆಸರು. ಯಾರು ಯುದ್ಧ ಕಲಾಕೋವಿದರೋ, ದೇಶವನ್ನು ಹಗೆಗಳಿಂದ ರಕ್ಷಿಸಲು ಶಕ್ತರೋ, ಅಂಥವರು ತಮ್ಮ ಕ್ಷಾತ್ರತೇಜದಿಂದ—ರಜೋಗುಣವಿಶೇಷದಿಂದ—ಕ್ಷತ್ರಿಯರು ಅಥವಾ ಸಹಾಯಕರೆಂದೆನಿಸಿಕೊಳ್ಳುವರು. ವ್ಯವಸಾಯಗಾರರು, ವ್ಯಾಪಾರಿಗಳು, ಕಲಾವಿಶಾರದರು—ಇವರು ತಮೋಗುಣಪ್ರವೃತ್ತರಾದುದರಿಂದ ಜೀವನಕ್ಕೆ ಬೇಕಾಗುವ ಸಾಮಗ್ರಿಗಳನ್ನು ಸಿದ್ಧಗೊಳಿಸುವುದೇ ಇವರ

ಕಸಬಾಗಿರಬೇಕು. ಯಾವ ರಾಜ್ಯದಲ್ಲಿ ಈ ವರ್ಗತ್ರಯದವರು—ಅರ್ಥಸಾಧಕರು, ಯೋಧರು, ದೇಶಪಾಲಕರು—ತಮ್ಮತಮ್ಮ ನ್ಯಾಯುವಾದ ಧರ್ಮಗಳನ್ನು ಬಿಡದೆ ನಡಸಿಕೊಂಡು ಬರುವರೋ, ಯಾವ ದೇಶದಲ್ಲಿ ಬುದ್ಧಿ (ಜ್ಞಾನ) ದೇಶವನ್ನು ಆಳುವುದೋ, ಧೈರ್ಯ ದೇಶವನ್ನು ರಕ್ಷಿಸುವುದೋ, ಐಹಿಕ ಪ್ರವೃತ್ತಿಗಳು ದೇಶವನ್ನು ಪೋಷಿಸುವುವೋ, ಅಂಥ ರಾಜ್ಯದಲ್ಲಿ ನ್ಯಾಯು — ಧರ್ಮ — ಸತ್ಯ — ತಲೆಯೆತ್ತುವುದು; ಅಂಥ ರಾಜ್ಯ ವಿವೇಕದಿಂದಲೂ ಧೈರ್ಯದಿಂದಲೂ ಶಮದಮಾದಿಗಳಿಂದಲೂ ತುಂಬಿರುವುದು. ಎಂದು ರಾಜ್ಯದಲ್ಲಿ ಸಹಸ್ರಾರು ಜನ ಅಸಂಸ್ಕೃತರ—ಅವಿವೇಕಿಗಳ—ಆಶಾಪಾಶಗಳು, ಯೋಗ್ಯರಾದ ವಿವೇಕಶಾಲಿಗಳಾದ ಕೊಂಚ ಜನರ ನೇಮುಕ್ಕೊಳಪಡುವುವೋ, ಅಂದು ರಾಜ್ಯದಲ್ಲಿ ಶಾಂತಿಯೂ ಸಂಪತ್ತೂ ಸೌಖ್ಯವೂ ಯಶಸ್ಸೂ ಆಚಂದ್ರಾರ್ಕವಾಗಿ ನೆಲೆಗೊಳ್ಳುವುವು. ರಾಜ್ಯದಲ್ಲಿ ಪ್ರತಿ ಒಬ್ಬ ಪುರುಷನೂ ತನ್ನ ಸ್ವಾಭಾವಿಕ ಗುಣಧರ್ಮವನ್ನನುಸರಿಸಿ ಯಾವುದಾದರೊಂದು ಕಸಬನ್ನಿಟ್ಟುಕೊಳ್ಳಲೇಬೇಕು. ವ್ಯವಸಾಯದಲ್ಲಿ ಪರಿಶ್ರಮವುಳ್ಳವನನ್ನು ರಾಜ್ಯದಾಡಳಿತವನ್ನು ನಡಸಲು ನೇಮುಕಮಾಡಿದರೆ ಅಂಗೈಯಿಂದ ಆಲೋಚನೆಮಾಡಲು ಅಥವಾ ಕಿವಿಯಿಂದ ನೋಡಲು ಪ್ರಯತ್ನಪಟ್ಟಂತಾಗುವುದು.

ಪ್ಲೇಟೋವಿನ ರಾಜ್ಯಸಿದ್ಧಾಂತವನ್ನು ಒಂದುಮಾತಿನಲ್ಲಿ ಹೇಳಬೇಕಾದರೆ, ಆತನು ಜ್ಞಾನಸಂಪನ್ನರಾದ ಆರಿಸಿದ ಕುಲೀನರ ದೊರೆತನವನ್ನು (intellectual aristocracy) ಮೆಚ್ಚುತ್ತಾನೆ, ವಾಡಿಕೆಯಲ್ಲಿರುವ ಪ್ರಜಾಪ್ರಭುತ್ವವನ್ನು ಕಂಡು ಹೇಸುತ್ತಾನೆ. ಸಾಕ್ರಟೀಸನಂತಹ ಮಹಾಪುರುಷನಿಗೆ ವಿಷ ಕುಡಿಸಿದಂತಹ ಅತ್ಯಾಚಾರ ಪ್ರಜಾಪ್ರಭುತ್ವದಿಂದಲ್ಲದೆ ಮತ್ತೆ ಯಾವ ಪ್ರಭುತ್ವದಿಂದ ಸಾಧ್ಯವಾದೀತು? ಹುಟ್ಟಿದ ಪ್ರತಿ ಒಬ್ಬ ಮನುಷ್ಯನಿಗೂ ರಾಜ್ಯಾಡಳಿತದಲ್ಲಿ ಸಮಾನವಾದ ಹಕ್ಕು ಬಾಧ್ಯತೆಗಳಿರುವುವೆಂದು ಪ್ರಜಾಪ್ರಭುತ್ವದ ನಂಬಿಕೆ: ಯೋಗ್ಯತೆ, ಶಕ್ತಿ, ಶಿಕ್ಷಣ—ಇವೊಂದೂ ಅದಕ್ಕೆ ಬೇಕಾಗಿಲ್ಲ. ಪ್ಲೇಟೋವಿಗೆ ಇದು ಸೋಜಿಗವೆನಿಸಿತು. ವೈದ್ಯನು ವೈದ್ಯಶಾಸ್ತ್ರದಲ್ಲಿ ಶಿಕ್ಷಣ ಹೊಂದಿರ

ಬೇಕೆನ್ನುತ್ತೇವೆ, ನೌಕಾಧಿಪತಿ ಹಡಗು ನಡಸುವುದರಲ್ಲಿ ನಿಪುಣನಾಗಿರ ಬೇಕೆಂದು ಕೋರುತ್ತೇವೆ; ಆದರೂ ಈ ಕೆಲಸಗಳಿಗಿಂತಲೂ ಸಾವಿರ ಪಾಲು ಹೆಚ್ಚು ಉತ್ತರವಾದಿತ್ವವನ್ನು ಒಳಗೊಂಡಿರುವ, ಮತ್ತು ಕಷ್ಟತರ ವಾಗಿರುವ, ರಾಜ್ಯಭಾರದ ವಿಷಯದಲ್ಲಿ ಮಾತ್ರ, ಯಾರು ಬೇಕಾದರೂ —ಯೋಗ್ಯತೆ ಇರಲಿ, ಇಲ್ಲದಿರಲಿ—ಕೈಹಾಕಬಹುದೆಂದು ಒಪ್ಪುತ್ತೇವೆ. ಇದು ಸೋಜಿಗಸಮಾಚಾರವಲ್ಲದೆ ಮತ್ತೇನು? ರಾಜ್ಯಭಾರದಲ್ಲಿ ಮಾತ್ರ ನಮಗೆ ಕೌಶಲ ನೈಪುಣ್ಯಗಳು ಬೇಡ! ಮನುಷ್ಯನ ಸಹಜಬುದ್ಧಿಯೇ ಸಾಕಾಗಿದೆ! ಈ ನಂಬಿಕೆ ನಮಗಿರುವುದರಿಂದ ಯಾರಾದರೂ ರಾಜ್ಯಕಾರ್ಯ ಗಳಲ್ಲಿ ಸ್ವಲ್ಪ ಹೆಚ್ಚು ಪರಿಶ್ರಮ ಯೋಗ್ಯತೆಗಳನ್ನು ತೋರಿಸಿ ಮುಖಂಡ ರಾದರೆಂದರೆ ಕೂಡಲೇ ಅಂತಹವರನ್ನು ಸಂಶಯಕ್ಕೊಳಪಡಿಸಿ ಯಾವು ದಾದರೂ ಒಂದು ನೆವದಮೇಲೆ ಅವರನ್ನು ತಮ್ಮ ಸ್ಥಾನದಿಂದ ಕಿತ್ತೆಳೆದು ಹಾಕುತ್ತೇವೆ! ಈ ಕಾರಣದಿಂದ ನಾಯಕತ್ವ (leadership) ಎಂಬುದೇ ಮಾಯವಾಗುತ್ತಾ ಬಂದಿದೆ—ಎಲ್ಲಿ ನೋಡಿದರೂ ಪ್ರಜಾಪ್ರಭುತ್ವಗ ಳಿರುವ ರಾಜ್ಯಗಳು ಅನಾಯಕವಾಗಿ ಪರಿಣಮಿಸಿವೆ. ಇದನ್ನೆಲ್ಲಾ ಪರ್ಯಾ ಲೋಚಿಸಿ ಪ್ಲೇಟೊ ಜ್ಞಾನಿಗಳಾದ, ಕಠಿಣವಾದ ಶಿಕ್ಷಣವನ್ನು ಪಡೆದ —ಅದರಲ್ಲಿಯೂ ತತ್ತ್ವಶಾಸ್ತ್ರದಲ್ಲಿ ತೇರ್ಗಡೆ ಹೊಂದಿದ—ಕೊಂಚ ಜನರೇ ರಾಜ್ಯಭಾರ ನಡಸಬೇಕೆಂದು ಸಾರುತ್ತಾನೆ. ತತ್ತ್ವವೇತ್ತು ಗಳೆಂದರೆ ಸಕಲವಿದ್ಯಾಪಾರಂಗತರು, ಮಾನವಜಾತಿಯ ಪರಮಶ್ರೇಯ ಯಾವುದೆಂಬುದನ್ನು ಚೆನ್ನಾಗಿ ಮನಗಂಡು ಆ ಶ್ರೇಯವನ್ನು ತಮ್ಮಲ್ಲಿಯೇ ಸಾಧಿಸಿದವರು. ಇಂತಹ ಪರಮೇಷ್ಠಿಗಳೇ ಪದವೀಧರರಾಗಬೇಕೆಂದು ಪ್ಲೇಟೋವಿನ ಮತ. "ಎಂದಿನವರೆಗೆ ತತ್ತ್ವವೇತ್ತುಗಳು (ಸಮ್ಯಗ್ ಜ್ಞಾನಿಗಳು) ರಾಜರಾಗುವುದಿಲ್ಲವೋ, ಅಥವಾ ಈಗ ಪ್ರಪಂಚದಲ್ಲಿ ದೊರೆಗಳು ಮತ್ತು ಪ್ರಭುಗಳೆಂದೆನಿಸಿಕೊಂಡಿರುವವರು ನಿಜವಾದ ತತ್ತ್ವ ಜ್ಞಾನದ ತಿರುಳನ್ನು ಪಡೆದು ಅದರ ಬಲದಿಂದ ಸಂಸ್ಕೃತರಾಗುವುದಿಲ್ಲವೋ, ಅಂದರೆ ಎಂದಿನವರೆಗೆ ರಾಜಕೀಯ ಮಹತ್ವವೂ ಸಮ್ಯಗ್‌ಜ್ಞಾನವೂ ಏಕೀಭವಿಸುವುದಿಲ್ಲವೋ, ಮತ್ತು ಇವೆರಡರಲ್ಲಿ ಒಂದನ್ನುಳಿದು ಮತ್ತೊಂ ದನ್ನು ಮಾತ್ರ ಅವಲಂಬಿಸುವ ಸಾಧಾರಣ ಜನರು ಪದವೀಧರರಾಗದೆ

ಪಕ್ಕಕ್ಕೆ ಸರಿದು ನಿಲ್ಲುವುದಿಲ್ಲವೋ—ಅಂದಿನವರೆಗೆ ರಾಜ್ಯಗಳಿಗೆ ಕ್ಷೋಭೆ ತಪ್ಪುವುದಿಲ್ಲ, ಇಷ್ಟೇ ಅಲ್ಲ, ಮಾನವ ಜಾತಿಗೇ ಕೇಡು ತಪ್ಪುವುದಿಲ್ಲ ವೆಂದು ನನ್ನ ನಂಬಿಕೆ; ಮತ್ತು ಆಗತಾನೇ ನಮ್ಮ ಆದರ್ಶರಾಜ್ಯ ಭೂಮಿಯಲ್ಲಿ ಸ್ಥಾಪಿತವಾಗಲು ಅವಕಾಶ ದೊರೆಯುವುದು."

ಈ ಆದರ್ಶರಾಜ್ಯದಲ್ಲಿ ಮೇಲೆ ಹೇಳಿದಂತೆ ತತ್ತ್ವಜ್ಞಾನಿಗಳು, ಯೋಧರು, ಮತ್ತು ಕಸಬುದಾರರು ಎಂಬ ಮೂರು ಪಂಗಡಗಳಿರುವುವು. ಕೆಲಸಮಾಡಲು ಹೊಂದಿರುವ ಅರ್ಹತೆ–ಯೋಗ್ಯತೆಯ ಮೇಲೆ ಜನರನ್ನು ಪ್ಲೇಟೊ ಈ ತೆರನಾಗಿ ವಿಂಗಡಿಸಿರುವನೇ ಹೊರತು, ಹಿಂದೂಸಮಾಜ ದಲ್ಲಿರುವಂತೆ ಹುಟ್ಟಿನ ಅಥವಾ ವಂಶಪಾರಂಪರ್ಯತತ್ತ್ವದ ಮೇಲಲ್ಲ. ತತ್ತ್ವ ಜ್ಞಾನಿಗಳು ಸ್ವರ್ಣವರ್ಗದವರು, ಯೋಧರು ರಜತವರ್ಗದವರು, ಕಸಬು ದಾರರು—ರೈತರು, ವರ್ತಕರು, ಬಡಗಿಗಳು ಮುಂತಾದವರು—ಲೋಹ (ಕಬ್ಬಿಣ)ವರ್ಗದವರು. ಕೆಳಗಿನ ವರ್ಗದವರು ಯಾರಾದರೂ ಸರಿಯಾದ ಅರ್ಹತೆಯನ್ನು ತೋರಿಸಿದರೆ, ಮೇಲಿನವರ್ಗಗಳಿಗೆ ಹೋಗಬಹುದು; ಆದರೂ ಸಾಮಾನ್ಯವಾಗಿ ಇಂತಹ ಪರಿವರ್ತನೆ ಸಾಧ್ಯವಿಲ್ಲವಾದುದ ರಿಂದ, ಒಂದು ಪಂಗಡದವರು ಮತ್ತೊಂದು ಪಂಗಡದವರೊಂದಿಗೆ ಮಿಶ್ರ ವಾಗದಂತೆ—ವರ್ಗಸಂಕರವಾಗದಂತೆ—ಜಾಗರೂಕತೆಯಿಂದ ವರ್ಗ ವೈಲಕ್ಷಣ್ಯಗಳನ್ನು ದೇಶಪರಿಪಾಲಕರು ಕಾಪಾಡಿಕೊಂಡು ಬರಬೇಕೆಂದು ಪ್ಲೇಟೊ ಒತ್ತಾಯಮಾಡುತ್ತಾನೆ. ತ್ರಿವರ್ಗದವರ ವರ್ಗೀಯ ಪಾರಿಶುದ್ಧ್ಯವೇ ದೇಶದ ಏಳಿಗೆಗೆ ಕಾರಣ. ಯಾರು ಯಾವ ಸ್ಥಾನದಲ್ಲಿದ್ದರೂ ಆ ಸ್ಥಾನಕ್ಕೆ ಸಂಬಂಧಿಸಿದ ಕರ್ತವ್ಯಗಳನ್ನು ಅಂತ ರಾತ್ಮಸಾಕ್ಷಿಯಾಗಿ ಉತ್ತಮರೀತಿಯಲ್ಲಿ ನೆರವೇರಿಸುವುದರಿಂದ ಆತ್ಮ ಸಂಸಿದ್ಧಿಯನ್ನೂ ಸೌಖ್ಯವನ್ನೂ ಪಡೆಯಬಹುದು. ಆದರೂ ಎಲ್ಲಾ ವರ್ಗದವರ — ಸಮಗ್ರರಾಜ್ಯದ — ಮೇಲ್ಮೆಗೂ ಕ್ಷೇಮಜೀವನಕ್ಕೂ ಆಳುವ ಸರ್ಕಾರ ಕಾರಣಭೂತವಾಗುವುದರಿಂದ ದೇಶಪರಿಪಾಲಕರ ಸ್ಥಿತಿಯನ್ನು ಉತ್ತಮಗೊಳಿಸಲು ಪ್ಲೇಟೊ ಅನೇಕ ಸಲಹೆಗಳನ್ನು ಕೊಡುತ್ತಾನೆ. ಪೂರ್ಣಸ್ವಾರ್ಥತ್ಯಾಗವೇ—ನಿರಂತರವೂ ಪ್ರಜೆಗಳ ಹಿತಚಿಂತನೆಯೇ — ಇವರ ಪರಮಧ್ಯೇಯವಾಗಿರಬೇಕಾದುದರಿಂದ

ಇವರಲ್ಲಿ ಯಾರಿಗೂ ಸ್ವಂತ ಆಸ್ತಿ ಎಂಬುದಾಗಲಿ, ಸ್ವಂತಸಂಸಾರ—ಹೆಂಡತಿ ಮಕ್ಕಳು—ಎಂಬುದಾಗಲಿ ಇರಕೂಡದು, ಏಕೆಂದರೆ ಇವೇ ನನ್ನದು ತನ್ನದು ಎಂಬ ಸ್ವಾರ್ಥಭಾವನೆಗೆ ಮೂಲಕಾರಣಗಳು. ಆದುದರಿಂದ ಪರಿಪಾಲಕರೆಲ್ಲಾ ಒಂದು ಸಂಸಾರದವರಂತೆ ಸಂಸೃಷ್ಟದಲ್ಲಿರಬೇಕು. ವರ್ಗೀಯ ಪಾರಿಶುದ್ಧ್ಯ ಸಮಗ್ರ ಜನಾಂಗದ ಏಳಿಗೆಗೆ ಪ್ರಾಮುಖ್ಯವಾದ ಕಾರಣವಾದುದರಿಂದ ಅದನ್ನು ರಕ್ಷಿಸಿಕೊಂಡುಬರುವ ಉದ್ದೇಶದಿಂದ ಸ್ತ್ರೀಪುರುಷರ ಸಂಪರ್ಕದ ವಿಚಾರಕ್ಕೂ ಶಿಶುಜನನದ ವಿಚಾರಕ್ಕೂ ಸರ್ಕಾರ ಹೆಚ್ಚು ಗಮನ ಕೊಡಬೇಕು. ಸ್ಫುರದ್ರೂಪಿಗಳಾದ, ಕಾಯಪುಷ್ಟಿಯುಳ್ಳ, ಧೀಮಂತರಾದ ಶಿಶುಗಳೇ ಹುಟ್ಟಬೇಕೆಂಬ ಉದ್ದೇಶದಿಂದ, ಉತ್ತಮ ಪುರುಷರು ಉತ್ತಮ ಸ್ತ್ರೀಯರೊಡನೆಯೇ, ಮಧ್ಯಮರು ಮಧ್ಯಮರೊಡನೆಯೇ, ಅಧಮರು ಅಧಮರೊಡನೆಯೇ, ಕ್ಲ್ಪಪ್ತವಾದ ಕಾಲಗಳಲ್ಲಿ ಮಾತ್ರ ಸೇರುವಂತೆ ಸರ್ಕಾರ ಏರ್ಪಾಡುಮಾಡಬೇಕೆಂದು ಪ್ಲೇಟೊ ಅಭಿಪ್ರಾಯಪಡುತ್ತಾನೆ. ಬಲಹೀನವಾದ ಕುರೂಪಿಗಳಾದ ಶಿಶುಗಳು ಹುಟ್ಟಿದರೆ ಅವುಗಳನ್ನು ಗಂಡಾಂತರಕ್ಕೆ ಗುರಿಮಾಡಬೇಕು. ಶಿಶುಗಳ ಪೋಷಣೆ ಸರ್ಕಾರಕ್ಕೇ ಸೇರಿದ್ದು. ದೇಶದಲ್ಲೆಲ್ಲಾ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ನಿರ್ಬಂಧಗೊಳಿಸಬೇಕು. ಸ್ತ್ರೀಯರಿಗೆ ಪುರುಷರೊಡನೆಯೇ ಯುದ್ಧಕೌಶಲದಲ್ಲಿಯೂ, ಅಂಗವ್ಯಾಯಾಮದಲ್ಲಿಯೂ, ವಿದ್ಯಾವ್ಯಾಸಂಗದಲ್ಲಿಯೂ, ಶಿಕ್ಷಣ ಕೊಟ್ಟು ಪುರುಷರಂತೆಯೇ ಅವರೂ ರಾಜ್ಯದಾಡಳಿತಗಳಲ್ಲಿ ಭಾಗ ವಹಿಸಲು ಅರ್ಹರಾಗಲು ಅವಕಾಶ ಕೊಡಬೇಕು. ಪರಿಪಾಲಕರ ಶಿಕ್ಷಣ ಅತ್ಯಂತ ಕಠಿಣವಾದುದು. ಬಾಲ್ಯದಲ್ಲಿ ಅಂಗಸಾಧನೆ, ನೈತಿಕಶಿಕ್ಷಣ, ಓದುಬರಹ, ಕಾವ್ಯ ಮತ್ತು ಸಂಗೀತ ಅಭ್ಯಾಸ, ಕಡೆಯಲ್ಲಿ ಯೋಧವಿದ್ಯೆ; ಇಪ್ಪತ್ತರಿಂದ ಮೂವತ್ತರವರೆಗೂ ಇದೇ ಭಾಗಗಳಲ್ಲಿ ಪ್ರೌಢ ವಿದ್ಯಾಭ್ಯಾಸ; ಮೂವತ್ತೈದರವರೆಗೆ ತರ್ಕ ಅಥವಾ ನ್ಯಾಯಶಾಸ್ತ್ರ (ಸಾಮಾನ್ಯಶಾಸ್ತ್ರ) ವ್ಯಾಸಂಗ, ಇದರಲ್ಲಿ ತೇರ್ಗಡೆಯಾದವರಿಗೆ ಐವತ್ತನೆಯ ವರುಷದವರೆಗೆ ಸೈನ್ಯಾಧಿಕಾರ. ಐವತ್ತನೆಯ ವಯಸ್ಸಿನಲ್ಲಿ ಪುನಃ ತತ್ವಶಾಸ್ತ್ರದಲ್ಲಿ ಪ್ರೌಢವ್ಯಾಸಂಗಮಾಡಿದವರಿಗೆ ಪರಿಪಾಲಕರ ಪದವಿ ದೊರೆಯುವುದು.

## ಅಧ್ಯಾಯ ೧೫

## ಪ್ಲೇಟೋವಿನ ಕಲಾವಿಮರ್ಶೆ

ಪ್ಲೇಟೋವಿನ ತತ್ತ್ವಶಾಸ್ತ್ರದಲ್ಲಿ ವಿಚಿತ್ರವಾದ ಒಂದು ಸಂಗತಿಯನ್ನು ನಾವು ಗಮನಿಸಬೇಕಾಗಿದೆ. ಸೌಂದರ್ಯವನ್ನೂ ಸಮಗಟ್ಟನ್ನೂ ಸಮತಾಳವನ್ನೂ ಇಷ್ಟು ಪ್ರಶಂಸೆಮಾಡಿ ತನ್ನ ತತ್ತ್ವಶಾಸ್ತ್ರದ ತಳಹದಿಯನ್ನಾಗಿ ಮಾಡಿದ ಪ್ಲೇಟೊ ಕಾವ್ಯ ಮತ್ತು ಕಲೆಗಳನ್ನು ಹೆಚ್ಚು ಪೂಜ್ಯಭಾವನೆಯಿಂದ ಆದರಿಸುವನೆಂದು ನಾವು ಎಣಿಸಬಹುದಲ್ಲವೆ? ಹಾಗಾದರೆ ನಮ್ಮ ಎಣಿಕೆ ತೀರಾ ತಪ್ಪಾಗುವುದು. ಪ್ಲೇಟೋವಿನ ಆದರ್ಶರಾಜ್ಯದಲ್ಲಿ ಕಾವ್ಯಕ್ಕೂ ಕಲೆಗಳಿಗೂ ಸ್ಥಾನವೇ ಇಲ್ಲ, ಇದ್ದರೂ ಅದು ಖಳನ ಪಾತ್ರವನ್ನು ವಹಿಸುವುದೇ. "ಆದರ್ಶರಾಜ್ಯ" ಎಂಬ ಸಂವಾದದಲ್ಲಿ ಕವಿಗಳನ್ನೂ ಕಲಾವಿದರನ್ನೂ — ಅವರ ಜಾಣ್ಮೆಗೂ ಅದ್ಭುತಶಕ್ತಿಗೂ ಮೆಚ್ಚಿ ಅವರಿಗೆ ತಲೆವಾಗಿ ಅವರ ಕೊರಳಿಗೆ ಹಾರಹಾಕಿ ಬಹುಮರ್ಯಾದೆಯಿಂದ ಕೈಹಿಡಿದು ಕರೆದುಕೊಂಡುಹೋಗಿ—ರಾಜ್ಯದ ಎಲ್ಲೆಯಿಂದಾಚೆಗೆ ಸಾಗಿಸಿಬರಬೇಕೆಂದು ಹೇಳುತ್ತಾನೆ. ಪ್ರಪಂಚದ ಅತ್ಯುತ್ತಮ ಕಲಾವಿದರಲ್ಲಿ ತಾನೇ ಒಬ್ಬನಾಗಿದ್ದು, ಪ್ಲೇಟೊ ಕಲಾವಿದರನ್ನು ಕಿವಿ ಹಿಂಡಬೇಕೆಂದು ಹೇಳಿದರೆ ಇದು ಸೋಜಿಗವಾದ ಸಂಗತಿಯೇ, ಮತ್ತು ಇದಕ್ಕೆ ಅವನ ಕಾರಣವೇನಿರಬಹುದೆಂದು ತಿಳಿಯುವುದು ಅವಶ್ಯಕವಾಗಿರುವುದು.

ಪ್ಲೇಟೊ ಬಹುವಿಧವಾಗಿ ತನ್ನ ಕಾಲದ ಗ್ರೀಸ್‌ದೇಶದ ಕಲಾಪ್ರಪಂಚದಲ್ಲಿ ಕಂಡುಬಂದ ಸ್ಥಿತಿಗತಿಗಳನ್ನು ಕುರಿತೇ ಉದ್ಗಾರ ತೆಗೆಯುವುದು. ಆತನ ಕಾಲದ ಕಲಾಕೋವಿದರು—ಅದರಲ್ಲಿಯೂ ನಾಟಕಕರ್ತೃಗಳು—ಜೀವನದ ಗಂಭೀರವಾದ ವಾಣಿಯನ್ನು ತ್ಯಜಿಸಿ, ಗುರುತರವಾದ ಗುರಿಗಳನ್ನು ತೊರೆದು, ಕೇವಲ ಅಲ್ಪವಿನೋದಗಳಿಗೂ ಹುರುಳಿಲ್ಲದ ಹಾಸ್ಯಕ್ಕೂ ಇಳಿದಿದ್ದರು. ರುದ್ರನಾಟಕಗಳೂ ಕೂಡ ತಮ್ಮ ಗೌರವಗುಣಗಳನ್ನು ಮರೆತು ಪೈತ್ಯಪ್ರಸಂಗಗಳಾಗಿ ಪರಿಣಮಿಸಿದ್ದುವು. ಇಂತಹ ಕಲೆಗಳಿಂದ ಜನತೆಯಮೇಲೆ ಆಗುವ ಪರಿಣಾಮ ಶೋಚನೀಯವಾದುದೇ ಹೊರತು ಶುಭವಾದುದಲ್ಲವೆಂದು ಪ್ಲೇಟೊ ತೀರ್ಮಾನಿಸಿದನು. ಇದರಿಂದ ಕಲೆಯ ಶ್ರೇಷ್ಠತೆಯನ್ನು ಅದರಿಂದುಂಟಾಗುವ

ಪರಿಣಾಮಫಲದಿಂದ ನಿರ್ಧರಿಸಬೇಕೆಂದು ಹೇಳಿದ ಹಾಗಾಯಿತು. ಪ್ಲೇಟೋವಿನ ಕಲಾಖಂಡನೆಗೆ ನೈತಿಕವಾದುದೊಂದು, ತಾತ್ವಿಕವಾದುದೊಂದು—ಈ ರೀತಿಯಾಗಿ ಎರಡು ಕಾರಣಗಳಿದ್ದುವು. "ಅಯಾ಼ೕ" ಎಂಬ ಸಂವಾದದಲ್ಲಿ ಸಾಕ್ರಟೀಸನು ಕಾವ್ಯದ ವಿಮರ್ಶೆಮಾಡುತ್ತಾ ಆವೇಶಬಲದಿಂದ ಕಾವ್ಯ ಹುಟ್ಟುತ್ತದೆಯೇ ವಿನಾ ಜ್ಞಾನಬಲದಿಂದ ಅಥವಾ ಬುದ್ಧಿಪೂರ್ವಕವಾಗಿ ಅಲ್ಲ ಎಂದು ತೀರ್ಮಾನಿಸಿದ್ದನು. ಕವಿ ತಾನು ಹೇಳುತ್ತಿರುವುದೇನೆಂಬುದು ತನಗೇ ಗೊತ್ತಿಲ್ಲದವನ ಸ್ಥಿತಿಯಲ್ಲಿರುವನು.[೧] ಈ ಕಾರಣದಿಂದ ಆತನು ಹೇಳುವುದು ಅಕಸ್ಮಾತ್ತಾಗಿ ಸತ್ಯವಾಗಿರಬಹುದು, ಮಿಥ್ಯವಾಗಿರಲಾರದೆನ್ನಲು ಆಧಾರ ಕಡಮೆ. ಹ್ರಸ್ವದಲ್ಲಿ, ಕವಿ ಜ್ಞಾನಿಯಲ್ಲ ಎಂದು ಸಾಕ್ರಟೀಸನ ನಂಬಿಕೆ. ಆದರೆ ಕಲಾವಿದನು ಅನೀತಿಯನ್ನು ಪ್ರತಿಪಾದಿಸುತ್ತಾನೆಂದು ಸಾಕ್ರಟೀಸನು ತಿಳಿದಿರಲಿಲ್ಲ. ಈಗ ಪ್ಲೇಟೊ ಕವಿಯಮೇಲೆ ತರುವ ಮೊದಲನೆಯ ಆಪಾದನೆಯೇ ಇದು. ''ಆದರ್ಶ ರಾಜ್ಯ'' ಎಂಬ ಸಂವಾದದ ಪೂರ್ವಾರ್ಧದಲ್ಲಿ ಈ ವಿಷಯ ಚರ್ಚಿಸಲ್ಪಟ್ಟಿರುವುದು. ಪುರಪಾಲಕರ ವಿದ್ಯಾಭ್ಯಾಸ ಅವರನ್ನು ಸಚ್ಛೀಲರನ್ನಾಗಿಮಾಡುವ ಘನೋದ್ದೇಶವನ್ನು ಹೊಂದಿರುವುದರಿಂದ ಸುಳ್ಳು, ಮೋಸ, ಕ್ರೂರತನ, ಕಾಮ, ಕ್ರೋಧ, ಮುಂತಾದ ದುರ್ಗುಣಗಳನ್ನು ವರ್ಣಿಸುವ ಹೋಮರ್, ಹೆಸಿಯಡ್, ಎಸ್ಕಿಲಸ್ ಆದಿಯಾದ ಕವಿಗಳ ಕಾವ್ಯಗಳು ವಿದ್ಯಾರ್ಥಿಗಳಿಗೆ ಬೋಧಿಸಲು ಯೋಗ್ಯವಾದುವಲ್ಲ. ಚಿಕ್ಕಂದಿನಲ್ಲಿ ಬಾಲಕರ ಮನಸ್ಸು ಹೇಳಿದ್ದನ್ನು ಹಿಡಿಯುವ ಮೃದುರೀತಿಯಲ್ಲಿರುವುದರಿಂದ ಆಗ ಕಲಿಸಿದ ಪಾಠಗಳು ಶಾಶ್ವತವಾಗಿ ನಿಂತುಹೋಗಿ ಜನ್ಮಾಂತ್ಯದವರೆಗೂ ಆತ್ಮದ ಮೇಲೆ ತಮ್ಮ ಸಂಸ್ಕಾರವನ್ನು ಬೀರುವುವು. ಇಂಥ ಸುಸಮಯದಲ್ಲಿ ದೇವತೆಗಳು ಪರಸ್ಪರ ಕಚ್ಚಾಡುವರೆಂದೂ ಪರದಾರ ಪರಧನಗಳಿಗೆ ಆಸೆಪಡುವರೆಂದೂ, ಜನರನ್ನು ಮೋಸಪಡಿಸುವರೆಂದೂ, ಇನ್ನೂ ನಾನಾ ವಿಧದ ಮಾನವ ದೌರ್ಬಲ್ಯ ದೌರ್ಜನ್ಯಗಳನ್ನು ಅವರಲ್ಲಿ ಆರೋಪಿಸಿ

೧. "ಸಮರ್ಥನೆ" ಎಂಬ ಸಂವಾದದಲ್ಲಿಯೂ ಸಾಕ್ರಟೀಸನು ಇದೇ ಅಭಿಪ್ರಾಯವನ್ನು ಸ್ಪಷ್ಟಪಡಿಸುವನು.

ಬಾಲಕರಿಗೆ ಕತೆ ಹೇಳಿದರೆ, ಬಾಲಕರು ಇಂಥ ಹೇಯ ಗುಣಗಳನ್ನು ತಾವು ಕಲಿತು ಅವುಗಳಿಗೆ ದೇವತೆಗಳ ಅನುಮತಿ ಇರುವುದೆಂದು ನಂಬುವುದೇನಾಶ್ಚರ್ಯ? ಇಂಥವರಿಗೆ ಗುರುಹಿರಿಯರಲ್ಲಿ ಭಕ್ತಿಭಾವವೂ ದೇಶಪಾಲಕರಲ್ಲಿ ಗೌರವವೂ ಹೇಗೆ ಬಂದೀತು? ಇಷ್ಟೇ ಅಲ್ಲ. ಕವಿ ಗಾರುಡವಾದಿಯಂತೆ ಅನುಕರಣಪ್ರಿಯನು, ಅವನಲ್ಲಿ ಸ್ವತಂತ್ರವಾದ ನಿರ್ಮಾಪಕ ಶಕ್ತಿ ಇಲ್ಲವೆಂದು ಪ್ಲೇಟೋವಿನ ಅಭಿಮತ. ಈ ಅನುಕರಣಭಾವ (mimetics) ಪ್ಲೇಟೋವಿನ ಹಿಂದೆಯೇ ಬಹು ಪುರಾತನಕಾಲದಿಂದಲೂ ಗ್ರೀಕರ ನಾಗರೀಕತೆಯಲ್ಲಿ ಬೇರಿಟ್ಟುಕೊಂಡಿದ್ದಂತೆ ಕಾಣುತ್ತದೆ. ನೃತ್ಯಗಳಲ್ಲಿ, ಆಟಪಾಟಗಳಲ್ಲಿ, ಕರಡಿ, ಕುದುರೆ, ತೋಳ ಮುಂತಾದ ಪ್ರಾಣಿಗಳಂತೆಯೋ ಅಥವಾ ಪಕ್ಷಿಗಳಂತೆಯೋ ವೇಷ ಧರಿಸಿ ಅವುಗಳ ಕಂಠವನ್ನು ಇಲ್ಲವೆ ನಡಗೆಯನ್ನು ಅನುಕರಿಸುವುದು ಎಲ್ಲಾ ಜನಾಂಗಗಳಲ್ಲಿಯೂ ಉಂಟು. ಶಿಲ್ಪ, ಚಿತ್ರಕಲೆ, ಇವುಗಳನ್ನು ಪ್ರಾಕೃತಿಕ ಪದಾರ್ಥಗಳ, ಅಥವಾ ಮಾನವಜೀವನದ, ಅನುಕರಣವೆನ್ನಬಹುದು. ಕವಿಯೂ ಹೀಗೆಯೇ ಮಾನವಜೀವನವನ್ನನುಕರಿಸುವ—ಛಂದೋಬದ್ಧವಾದ ಭಾಷೆಯಲ್ಲಿ ಕೆಲಸಮಾಡುವ—ಒಬ್ಬ ಕಸಬುದಾರ. ಆದರೆ ಇಲ್ಲಿ ಒಂದು ವಿಶೇಷವುಂಟು. ಪ್ರತಿಯೊಬ್ಬನೂ ತನಗನುಗುಣವಾದ ಒಂದೇ ಕೆಲಸವನ್ನು ಮಾಡಿದರೆ ಅದರಲ್ಲಿ ಹೆಚ್ಚು ಪರಿಶ್ರಮ ಪಡೆಯುವಂತೆ, ಕವಿಯೂ ಒಂದೇ ಗುಣ ಅಥವಾ ಭಾವವನ್ನು ಅನುಕರಿಸಿದರೆ ಅವನ ಕಾವ್ಯ ಉತ್ತಮವಾದುದಾಗುವುದು. ಅದುಬಿಟ್ಟು ಒಳ್ಳೆಯದು, ಕೆಟ್ಟುದೆಂಬ ಭೇದವಿಲ್ಲದೆ ಸಕಲವಿಧವಾದ ಪಾತ್ರಗಳನ್ನೂ ಕವಿ ನಾಟಕದಲ್ಲಿ ತರುವುದರಿಂದಲೂ, ಸರಳವಾದ, ಪುರಪಾಲಕರಿಗೆ ಬೇಕಾದ ಶಾಂತಿಶೌರ್ಯಗಳೆಂಬೆರಡು ಪ್ರಧಾನರಸಗಳನ್ನು ಮಾತ್ರ ಉದ್ಬೋಧಿಸುವ ಸಂಗೀತವನ್ನು ಬಿಟ್ಟು, ನಾನಾ ವಿಧದ ಭಾವರಾಗಗಳನ್ನುದ್ರೇಕಿಸುವ ಮಿಶ್ರಜಾತಿಯ ಸಂಗೀತವನ್ನೂ ಶೈಲಿಯನ್ನೂ ಉಪಯೋಗಿಸುವುದರಿಂದಲೂ, ಪ್ರೇಕ್ಷಕರ ಮನಸ್ಸು ಕಳವಳಗೊಂಡು, ಯಾವ ಗುಣವನ್ನು ಅನುಕರಿಸಬೇಕು, ಯಾವುದನ್ನು ಬಿಡಬೇಕು ಎಂಬ ಸಂದೇಹದಲ್ಲಿ ಅವರ ಆತ್ಮ ಸಿಲುಕಿಬೀಳುತ್ತದೆ. ಈ ಕಾರಣದಿಂದ ಪ್ರಹಸನ ರುದ್ರ

ನಾಟಕಗಳೆರಡನ್ನೂ ತ್ಯಜಿಸಿ ಸದ್ಗುಣಗಳನ್ನೇ ಬೋಧಿಸುವ ವೀರಕಾವ್ಯ ಗಳನ್ನುಮಾತ್ರ (epic) ಇಟ್ಟುಕೊಳ್ಳಬೇಕೆಂದು ಪ್ಲೇಟೊ ಅಭಿಪ್ರಾಯ ಪಡುತ್ತಾನೆ. ಇಲ್ಲಿಯವರೆಗೂ ಅನುಕರಣವೆಂದರೆ ನಾವು ಮೆಚ್ಚುವ ಭಾವಗುಣಶೈಲಿಯನ್ನೇ ನಮ್ಮ ಜೀವನದಲ್ಲಿಯೂ ಅನುಸರಿಸಿ ನಮ್ಮಾತ್ಮ ವನ್ನೂ—ಶೀಲವನ್ನೂ—ತದನುಗುಣವಾಗಿಯೇ ಸುಧಾರಿಸುವುದೆಂದು ಪ್ಲೇಟೊ ಅರ್ಥಮಾಡಿದನು. ಆಗಿನಕಾಲದಲ್ಲಿ ರೂಢಿಯಲ್ಲಿದ್ದ ಕಾವ್ಯ ಗಳು ಸಚ್ಛೀಲದ ಅನುಕರಣಕ್ಕೆ ಅನುಕೂಲವಾಗಿರಲಿಲ್ಲವಾದುದರಿಂದ ಪ್ಲೇಟೊ ಅವುಗಳನ್ನೆಲ್ಲಾ ದೂರಮಾಡಬೇಕೆಂದನು.

"ಆದರ್ಶರಾಜ್ಯ," ಎಂಬ ಸಂವಾದದ ಉತ್ತರಾರ್ಧದಲ್ಲಿ (ಹತ್ತ ನೆಯ ಪುಸ್ತಕದಲ್ಲಿ) ಅನುಕರಣದ ಅರ್ಥವೇ ವ್ಯತ್ಯಾಸವಾಗುವುದು. ಜನ ತೆಯಮೇಲೆ ಕಲೆಯಿಂದುಂಟಾಗುವ ನೈತಿಕಸಂಸ್ಕಾರದ ವಿಚಾರವೇ ಇಲ್ಲಿ ಬರುವುದಿಲ್ಲ—ಕಲೆಯ ಸ್ವಭಾವ, ಸ್ವರೂಪ, ಈ ವಿಚಾರವಾದ ತಾತ್ವಿಕ ಅಥವ ಆಧ್ಯಾತ್ಮಿಕಪ್ರಶ್ನೆಯೇ ಪ್ರಧಾನವಾಗುವುದು. ಪ್ಲೇಟೋವಿನ ಸ್ಥಿತಿತತ್ವಶಾಸ್ತ್ರದ (ontology, metaphysics) ಪ್ರಕಾರವಾಗಿ ಸಾರ್ವ ತ್ರಿಕಗಳಾದ ಸಾಮಾನ್ಯಗಳೇ ಸತ್ಯಸತ್ತನ್ನುಳ್ಳವು, ಪ್ರತ್ಯೇಕಗಳು ಪರಿಣಾಮಹೊಂದುವ, ದೋಷಭರಿತವಾದ ಮಾಯಾಸತ್ತನ್ನುಳ್ಳವು. ಸಾಮಾನ್ಯಚಿಂತನೆಯೇ ಮೋಕ್ಷಸಾಧನವೆಂದು ನಂಬಿದ್ದ ಪ್ಲೇಟೊ ಕಲೆಯನ್ನು ನಿರಾಕರಿಸಿದ್ದು ಆಶ್ಚರ್ಯವೇನೂ ಇಲ್ಲ. ಏಕೆಂದರೆ ಕಲೆ ಪ್ರತ್ಯೇಕವನ್ನು ಅವಲಂಬಿಸಿರತಕ್ಕುದು, ಪ್ರತ್ಯೇಕದ ಹೊಕ್ಕಳು ಹುರಿ ಯಿಂದ ಪೋಷಿಸಲ್ಪಡತಕ್ಕುದು. ಮೇಲಿನ ತುದಿಯಲ್ಲಿ—ಅಗ್ರಸ್ಥಾನ ದಲ್ಲಿ—ಸಾರ್ವತ್ರಿಕವಾದ ಹಾಸಿಗೆ ಅಥವಾ ಮಂಚವೆಂಬ ಸಾಮಾನ್ಯವಿದೆ ಯೆಂದಿಟ್ಟುಕೊಳ್ಳೋಣ. ಇದಕ್ಕಿಂತ ಕೆಳಗೆ ಆ ಸಾಮಾನ್ಯದ ಮಾದ ರಿಯಮೇಲೆ ಬಡಗಿ ತಯಾರುಮಾಡಿದ ಮರದ ಪ್ರತ್ಯೇಕ ಮಂಚವಿದೆ; ಎಲ್ಲಕ್ಕಿಂತಲೂ ಕೆಳಗೆ ಈ ಪ್ರತ್ಯೇಕದ ಮಾದರಿಯನ್ನನುಸರಿಸಿ ಚಿತ್ರ ಗಾರನು ಬರೆದಿರುವ ಚಿತ್ರದ ಮಂಚವಿದೆ. (ಸಾಮಾನ್ಯಗಳು ಹೀಗೆ ಪ್ರತ್ಯೇಕಗಳಿಂದ ಬೇರೆಯಾಗಿರುವುವೆಂದು ಪ್ಲೇಟೋವಿನ ಅರ್ಥವಲ್ಲ, ಭಾವವಿವರಣೆಯ ಸಲುವಾಗಿ ಹೀಗೆ ಹೇಳಬಹುದಷ್ಟೆ). ಪ್ರತ್ಯೇಕವೇ

ಸಾಮಾನ್ಯದ ಅನುಕರಣ (ಇಲ್ಲಿ ಅನುಕರಣವೆಂದರೆ ಇದ್ದುದನ್ನು ಇದ್ದ ಹಾಗೆ 'ನಕಲು' ಮಾಡುವುದೆಂದು ತಿಳಿಯಬೇಕು), ಇನ್ನು ಕಲೆ ಇಂತಹ ನಕಲಿನ ನಕಲು, ಅನುಕರಣದ ಅನುಕರಣ. ಅಂದಮೇಲೆ ಕಲೆ ಸತ್ಯ ಸತ್ವಕ್ಕಿಂತಲೂ ಮೂರು ಮೆಟ್ಟಲು ಕೀಳಾದ ಸತ್ವವನ್ನುಳ್ಳದು, ಎಂದು ಹೇಳಿದಹಾಗಾಯಿತು. ಪ್ರತ್ಯೇಕವೇ ಸಾಮಾನ್ಯವನ್ನು ವಿಕ್ಷೇಪಗೊಳಿಸುತ್ತದೆ, ಇನ್ನು ಕಲೆ ಇಂಥ ವಿಕ್ಷೇಪದ ಪ್ರತಿವಿಕ್ಷೇಪ ; ಏಕೆಂದರೆ ಚಿತ್ರಗಾರನು ಪದಾರ್ಥವನ್ನು ಇರುವಹಾಗೆ ಚಿತ್ರಿಸುವುದಿಲ್ಲ, ತನ್ನ ಮನಸ್ಸಿಗೆ—ಯಾವುದೋ ಒಂದು ವಿಶೇಷವಾದ ದೃಷ್ಟಿಗೆ—ಅದು ಕಂಡು ಬರುವಂತೆ ಚಿತ್ರಿಸುತ್ತಾನೆ. ಅಲ್ಲದೆ ಕಾವ್ಯ ಮನುಷ್ಯನ ಜ್ಞಾನವನ್ನು ವೃದ್ಧಿಗೊಳಿಸುವುದಿಲ್ಲ, ಐಂದ್ರಿಯಕಸತ್ತ್ವನ್ನುಳ್ಳ ಕಲ್ಪನಾಶಕ್ತಿಯನ್ನೂ ಕಾಮವಾಸನೆಗಳನ್ನೂ ಪ್ರಕೋಪಗೊಳಿಸಿ ಆತ್ಮಕ್ಕೆ ಅಶಾಂತಿಯನ್ನು ತರುತ್ತದೆ. ಆದುದರಿಂದ ದೇವತೆಗಳನ್ನೂ ಸತ್ಪುರುಷರನ್ನೂ ಹೊಗಳುವ ಸ್ತೋತ್ರಗಳನ್ನುಳಿದು ಮತ್ತೆ ಯಾವ ವಿಧವಾದ ಕಾವ್ಯಕಲೆಗಳೂ ಆದರ್ಶ ರಾಜ್ಯದಲ್ಲಿ ತಲೆಯೆತ್ತಕೂಡದು.

ಕಾವ್ಯವೇ ಅನುಕರಣವೆಂದು ಹೇಳಿದಮೇಲೆ ಸ್ತೋತ್ರರೂಪವಾದ ಕಾವ್ಯವೂ ಅನುಕರಣವಾಯಿತಲ್ಲವೆ? ಅದನ್ನುಮಾತ್ರ ಪ್ಲೇಟೊ ಹೇಗೆ ಒಪ್ಪಿದನು? ಇದನ್ನು ಪರಿಶೀಲಿಸಿದರೆ ಪ್ಲೇಟೋವಿನಲ್ಲಿ ಮೊದಲಿಂದ ಕೊನೆಯವರೆಗೂ ಒಂದೇ ವಿಧವಾದ ಅಭಿಪ್ರಾಯವನ್ನು ಹುಡುಕುವ ಪ್ರಯತ್ನಮಾಡುವುದು ಹುಚ್ಚುತನವೆಂದು ಕಾಣುತ್ತದೆ. ಪ್ರಾಯಶಃ ಆತನು ಅನುಕರಣದಲ್ಲಿ ಯಥಾರ್ಥ ಅನುಕರಣ, ಅಯಥಾರ್ಥ ಅನುಕರಣವೆಂದು ಭೇದಮಾಡಿರಬೇಕು. ಯಾವ ಕವಿ ಸಾಮಾನ್ಯಗಳ ಪ್ರಭೆಯನ್ನು ಕಣ್ಣಾರೆ ಕಂಡು, ಸತ್ಯಸ್ವರೂಪವನ್ನು ತಾನೇ ಮನಗಂಡು, ಸೌಜನ್ಯದ ಗುಣಕರ್ಮಗಳನ್ನೆಲ್ಲಾ ತನ್ನ ಕಾವ್ಯದಲ್ಲಿ ಅನುಕರಣ ಮಾಡುವುದರ ಜೊತೆಗೆ, ಅವುಗಳನ್ನು ತನ್ನ ದಿನಜೀವನದಲ್ಲಿಯೇ ಅಭ್ಯಾಸಮಾಡಿ ಅನುಕರಿಸುತ್ತಾನೋ, ಆ ಕವಿಯ ಅನುಕರಣವನ್ನು ಯಥಾರ್ಥ ಅನುಕರಣವೆಂದು ಹೇಳಬಹುದು. ಸ್ಪಾಬ್ರೊ, ಮಿಲ್ಟನ್ ಇಂಥ ಉದ್ದಾಮಕವಿಗಳೂ ಕೂಡ ಈ ಅರ್ಥವನ್ನೇ ಅನುಮೋದಿಸಿರುವರು:

ಸದ್ಗುಣಿಯೇ ಸತ್ಕಾವ್ಯವನ್ನು ಬರೆಯುಬಲ್ಲನು. ಇಂಥ ಸತ್ಯದ ಅರಿವಿಲ್ಲದೆ, ಸ್ವಂತಜೀವನದಲ್ಲಿ ಸತ್ಯದ ಅನುಭವವಿಲ್ಲದೆ, ಕೇವಲ ಅಭಿಮತ – ಅಜ್ಞಾನ —ಪೂರ್ವಕವಾಗಿ ಬರೆದ ಕಾವ್ಯ ಅಯಥಾರ್ಥ ಅನುಕರಣವೆನಿಸುವುದು. ಹೋಮರ್ ಮುಂತಾದ ಕವಿಗಳನ್ನೆಲ್ಲಾ ಪ್ಲೇಟೊ ಅಯಥಾರ್ಥ ಅನುಕರಣದಲ್ಲಿ ಸೇರಿಸಿದನು. ಈ ದೃಷ್ಟಿಯಿಂದ ನಾವು ನೋಡಿದರೆ, ಪ್ಲೇಟೋವಿನಲ್ಲಿ ಅಸಮಂಜಸತೆ ಇಲ್ಲವೆಂದು ಕಾಣುವುದಲ್ಲದೆ ಆತನು ಶುದ್ಧ ಖಂಡನಾಪ್ರಿಯನಲ್ಲ, ರಚನಾತ್ಮಕವಿಮರ್ಶಕನೆಂದು ತೋರುವುದು. ಕವಿಯೆನಿಸಿದವನು ತಾತ್ವಿಕನಂತೆಯೇ ಅವಿಚ್ಛಿನ್ನವಾಗಿ ಸುಧಾರಣೆ ಹೊಂದುತ್ತಿರುವ ತನ್ನ ಶೀಲಯುತವ್ಯಕ್ತಿತ್ವವನ್ನೇ—ಆತ್ಮೀಯತೆಯನ್ನೇ —ಪ್ರದರ್ಶಿಸಲು ಶಕ್ತನಾಗಿರಬೇಕು. ಸತ್ಯವನ್ನೂ ಸೌಂದರ್ಯವನ್ನೂ ಒಂದುಗೂಡಿಸುವ ಇಂಥ ದಿವ್ಯ ಕಾವ್ಯವನ್ನು ಆದರ್ಶರಾಜ್ಯದ ಕವಿಗಳು ಬರೆಯಲು ಶಕ್ತರಾಗಿರುವರು.

ಪರಂತು ಆದರ್ಶರಾಜ್ಯದಲ್ಲಿ ಕವಿಗಳು—ಕಲಾವಿದರು—ಸರ್ವಥಾ ಇರಲಾಗದೆಂದು ಪ್ಲೇಟೊ ಹೇಳಲಿಲ್ಲ. ಅವರ ಕಲಾಕೃತಿಗಳು ಸಚ್ಛೀಲವನ್ನು ಬೋಧಿಸುವಹಾಗಿದ್ದರೆ ಅವರು ನಿಲ್ಲಬಹುದು. "ದಿ ಲಾಸ್" ಅಥವಾ "ಶಾಸನಗಳು" ಎಂಬ ನಾಮಾಂಕಿತದಿಂದ ಬರೆದ ಕಡೆಯ ಸಂವಾದದಲ್ಲಿಯೂ ಪ್ಲೇಟೊ ಸಾಧುತ್ವಸಮಿತಿಯ( Censorship ) ನಿಬಂಧನೆಗಳಿಗೆ ಒಪ್ಪುವಹಾಗಿದ್ದರೆ ಕವಿಗಳು (ರುದ್ರನಾಟಕದವರೇ ಆಗಲಿ, ಪ್ರಹಸನದವರಾಗಲಿ) ರಾಜ್ಯದಲ್ಲಿರಬಹುದೆಂದು ಹೇಳುತ್ತಾನೆ. ಒಟ್ಟಿನಲ್ಲಿ ಪ್ಲೇಟೊ ಕಲೆಗೆ ಸ್ವತಂತ್ರಸ್ಥಾನವನ್ನು ಕೊಡದಿದ್ದರೂ ಅದಕ್ಕೆ ಬಲು ಘನವಾದ ಉದ್ಯೋಗವನ್ನೇ ನಿಯಮಿಸುತ್ತಾನೆ. ಪ್ಲೇಟೊ ಕಲೆಯನ್ನು ನಿಕೃಷ್ಟವಾಗಿ ಕಾಣುತ್ತಾನೆಂಬ ಭಾವ ಶುದ್ಧ ತಪ್ಪು; ಆಧ್ಯಾತ್ಮಿಕ ದೃಷ್ಟಿಯಲ್ಲಿ ಅದು ತತ್ವಜ್ಞಾನದ ಮೆಟ್ಟಲಿಗೆ ಹತ್ತಲಾರದಾದರೂ ಜನಜೀವನದಲ್ಲಿ — ಸಮಾಜಜೀವನದಲ್ಲಿ — ವಿದ್ಯಾಭ್ಯಾಸಕ್ರಮದಲ್ಲಿ —ಅದು ಹೊಂದಿರುವ ಪ್ರಾಮುಖ್ಯತೆಯನ್ನು ಮತ್ತೆ ಯಾವ ಶಿಕ್ಷಣ ಭಾಗವೂ ಹೊಂದಿರುವುದಿಲ್ಲ. ಕಲೆಯಿಂದಲೇ ಆತ್ಮಪ್ರಕರ್ಷವುಂಟಾಗಬೇಕೆಂದು ಆತನ ನಂಬಿಕೆ: ದೇಹಿಯಾದ ಆತ್ಮನ ಶಿಕ್ಷಣದಲ್ಲಿ ಪ್ರಥಮ

ಮತ್ತು ಪ್ರಧಾನ ಭಾಗ ಸಂಗೀತದ್ದು (ಸಂಗೀತದಲ್ಲಿ ಸಾಹಿತ್ಯವೂ ಸೇರಿರುವುದು), ಎರಡನೆಯ ಭಾಗ ಅಂಗಸಾಧನೆಗೆ ಸೇರಿದುದು. ಲಾವಣ್ಯ ಸೌಂದರ್ಯಗಳನ್ನು ಬೀರುವ ಕಲಾಪ್ರದರ್ಶನಗಳಿಂದೊಪ್ಪುವ ಸನ್ನಿವೇಶದಲ್ಲಿ ಯುವಕರು ವಾಸಮಾಡಿದ್ದೇ ಆದರೆ, ಅವರು ಆರೋಗ್ಯಕರವಾದ ಪ್ರದೇಶದಲ್ಲಿ ವಾಸಮಾಡುವರು; ಪ್ರತಿಯೊಂದು ದಿಕ್ಕಿನಿಂದಲೂ ಹರಿದು ಬರುವ ಶುಭ್ರವಾದ ಶುಭವಾದ ಜಲವನ್ನು ಪಾನಮಾಡುವರು; ಹಿತಕರವಾದ ಪ್ರದೇಶಗಳಿಂದ ಆರೋಗ್ಯವನ್ನು ಬೀಸುವ ಶೀತಲಮಾರುತನಂತೆ ಉತ್ತಮಕಲಾಕೃತಿಗಳಿಂದ ಹೊರಸೂಸಿ ಪಸರಿಸುವ ಸೌಜನ್ಯತರಂಗಗಳು ಅವರ ಕರ್ಣನಯನಗಳನ್ನು ಚುಂಬಿಸುವುವು; ಇದರಿಂದ ಅವರು ತಮಗೆ ಗೋಚರವಿಲ್ಲದಂತೆಯೇ ಕ್ರಮೇಣ ಸಮತಾಳ, ಸಮಗಟ್ಟು, ಕ್ರಮ, ಸಮೀಚೀನತೆ ಮೊದಲಾದ ಭಾವಗಳನ್ನು ತಮ್ಮ ಆತ್ಮನಲ್ಲೇ ಆವಾಹನೆ ಮಾಡಿಕೊಂಡು ಅವುಗಳಲ್ಲಿರುವ ಚಿತ್ಪ್ರಕಾಶದ ನಿಜವಾದ ಸೌಂದರ್ಯವನ್ನು ಪ್ರೀತಿಸಿ ತಾವದನ್ನು ಹೋಲಲು, ಅದರೊಡನೆ ಏಕೀಭವಿಸಲು, ಪ್ರಯತ್ನಪಡುವರು. ಜನತೆಯಮೇಲೆ ಕಲೆಯಿಂದ ಇಷ್ಟು ಘನತರವಾದ ಸಂಸ್ಕಾರವುಂಟಾಗಬಹುದು, ಎಂದು ಪ್ಲೇಟೊ ನಂಬಿರುವಲ್ಲಿ ಕಲೆಯನ್ನೇಕೆ ಆತನು ಶತ್ರುವನ್ನಾಗಿ ಭಾವಿಸುತ್ತಾನೆ? ಕಲೆಯನ್ನೇ ಅಲ್ಲ— ಸಾಮಾಜಿಕ ಸುಧಾರಣೆಗೆ ನೆರವಾಗದ, ನೀತಿನಿಯಮಗಳಿಗೆ ನಿಲುಕದ, ಕಟ್ಟಿಲ್ಲದ ಕಲೆಯನ್ನು ಆತನು ಕಂಡು ಹೆದರುತ್ತಾನೆ, ಅಷ್ಟೆ.

ಸ್ವಭಾವತಃ ತಾನೇ ಕವಿ. ಹೇರಳವಾಗಿ ಪದ್ಯಗಳನ್ನು ಬರೆದಿದ್ದನೆಂದು ಡಯೋಜನೀಸ್ ಲಾರ್ಷಿಯಸ್ ಎಂಬ ಗ್ರಂಥಕರ್ತನು ನಮಗೆ ತಿಳಿಸುತ್ತಾನೆ. ಇದರ ನಿಜಾಂಶ ಹೇಗಿದ್ದರೂ ಕಾವ್ಯವನ್ನು ತಾನು ಬಹುವಾಗಿ ಪ್ರೀತಿಸುತ್ತೇನೆಂದು ತಾನೇ ಹೇಳಿಕೊಂಡಿರುತ್ತಾನೆ[೧], ಮತ್ತು ನಾಟಕರೂಪದ ಹಾಗೂ ಪುರಾಣಕಥಾರೂಪದ ಸಾಹಿತ್ಯವನ್ನು ಇವನಷ್ಟು ಅಂದವಾದ ಶೈಲಿಯಲ್ಲಿ ಬರೆದವರು ಮತ್ತೆ ಯಾರೂ ಇಲ್ಲವೆಂದೇ ಹೇಳಬಹುದು. ಇಷ್ಟಾದರೂ ಕಾವ್ಯಕಲೆಗಳ ವಿಷಯದಲ್ಲಿ ಪ್ಲೇಟೊ

೧. "ಆದರ್ಶ ರಾಜ್ಯ:" ೬೦೭ ಬಿ (ಡೇವೀಸ್ ಮತ್ತು ವಾಘನ್)

ಭ್ರಾಂತಿಮೋಹಿತನೆಂದೂ ಪೈತ್ಯಹಿಡಿದವನೆಂದೂ ಕೆಲವರು ವಿಮರ್ಶಕರು ಹೇಳಿರುವರು. ಬುದ್ಧಿಬಲವನ್ನೂ ಭಾವಬಲವನ್ನೂ ತ್ರಾಸಿನಲ್ಲಿ ತೂಗಿ ಬುದ್ಧಿಬಲವೇ ಹೆಚ್ಚೆಂದು ತೀರ್ಮಾನಮಾಡಿದ ಬುದ್ಧಿಪ್ರಮಾಣವಾದಿಯನ್ನು (Rationalist) ಭ್ರಾಂತಿಮೋಹಿತನೆಂದು ಕರೆಯುವುದು ಎಷ್ಟು ಮಟ್ಟಿಗೆ ಸಮಂಜಸವೋ ನಾವು ಕಾಣೆವು. ಕಲೆಯೇ ಆದ್ಯಂತಜ್ಞಾನವೆಂದು ಘೋಷಿಸುವವರ ಗುಂಪಿನಲ್ಲಿ ಪ್ಲೇಟೊ ಸೇರಿಲ್ಲ, ನಿಜ; ಆದರೂ ಜ್ಞಾನದ ಆದಿ ಅದಾಗಬಹುದೆಂದು ಅವನು ಒಪ್ಪುತ್ತಾನೆ. "ಶಾಸನಗಳು" ಎಂಬ ಸಂವಾದದಲ್ಲಿ ರುದ್ರನಾಟಕಕವಿಗಳಿಗೆ ಶಾಸನಕರ್ತರು ಈ ಭರವಸೆಯನ್ನು ಕೊಡುತ್ತಾರೆ: "ನಾವೇ ಪ್ರಪಂಚದಲ್ಲಿ ಅತ್ಯಂತ ಸುಂದರವಾದ ನಾಟಕದ ಕವಿಗಳು, ಏಕೆಂದರೆ ನಮ್ಮ ರಾಜ್ಯ ಅತ್ಯಂತ ಸುಂದರವಾದ ಜೀವನದ ಅನುಕರಣ. ನಿಮ್ಮ ಕವಿತೆಗಳು ನಮ್ಮ ಕಾವ್ಯದಷ್ಟು ಚೆನ್ನಾಗಿವೆ, ಅಥವಾ ಇನ್ನೂ ಉತ್ತಮವಾಗಿವೆ, ಎಂದು ನೀವು ತೋರಿಸಬಲ್ಲವರಾದರೆ, ನಿಮಗೆ ಒಂದು ಹಿಮ್ಮೇಳವನ್ನು ಕೊಡುತ್ತೇವೆ."

ಅನುಕರಣವೆಂದರೆ ವಸ್ತುವಿನ 'ನಕಲು' ಅಥವಾ 'ಪ್ರತಿಕೃತಿ' ಮಾಡುವುದು, ಎಂದು ಪ್ಲೇಟೊ ಭಾವಿಸಿದುದು ತಪ್ಪು. ಹಾಗಿಟ್ಟುಕೊಂಡರೂ ಕಲೆ ಕನಿಷ್ಠವೆಂದೇಕೆ ಹೇಳಬೇಕು? ಚಿತ್ರದಲ್ಲಿದ್ದ ದ್ರಾಕ್ಷಿಗೊಂಚಲನ್ನು ಕಂಡು ಹಕ್ಕಿಗಳು ಭ್ರಮಿಸಿ ಬಂದು ಕುಟುಕಿದುವಂತೆ! ಆದರೆ ರಸಿಕರು—ವಿದ್ಯಾವಂತರು—ಯಾವಾಗಲೂ ಅನುಕರಣವೆಂದರೆ ಪ್ರಕೃತಿಯಲ್ಲಿ ಅಂತರ್ಭೂತವಾಗಿರುವ ಧ್ಯೇಯವನ್ನು—ರೂಪ ಪೂರ್ಣವನ್ನು—ಪ್ರದರ್ಶಿಸುವುದೆಂದೇ ತಿಳಿದುಕೊಂಡಿರುತ್ತಾರೆ. ಕಲೆಯನ್ನೂ ನೀತಿಯನ್ನೂ ಕಲಸುಮೇಲೋಗರಮಾಡಿ ನೀತಿಪ್ರತಿಪಾದನ ಮಾಡುವ ಕಲೆಯೇ ಕಲೆಯೆಂದು ಹೇಳಿದುದು ಪ್ಲೇಟೊ ಮಾಡಿದ ಎರಡನೆಯ ತಪ್ಪು. ಈ ವಿಷಯದಲ್ಲಿ ಆಧುನಿಕಜ್ಞಾನಿಯಾದ ಟಾಲ್‌ಸ್ಟಾಯ್ ಎಂಬವನು ಪ್ಲೇಟೋವಿಗಿಂತ ಹೆಚ್ಚು ದೋಷಿ. ವಿಜ್ಞಾನದಂತೆಯೇ ಕಲೆಯೂ ಮಾನವನ ಜೀವನಕ್ಕೂ ಪ್ರಗತಿಗೂ ಪ್ರಾಮುಖ್ಯವಾದುದೆಂದು ತಿಳಿದಿದ್ದರೂ ಕೂಡ ಈತನು ಸಾಹಿತ್ಯವನ್ನು ನೀತಿಯ ಮಾನದಂಡದಿಂದ ಅಳೆಯಬೇಕೆನ್ನುವ ವಿಪರೀತವನ್ನು ಮಾತ್ರ ಬಿಡಲಿಲ್ಲ. ಕಲೆ

ಮಾನವನ ಧರ್ಮಕ್ಕೆ ಅನುಕೂಲವಾಗಿರಬೇಕೆಂದು ಈತನು ಬಗೆದು ತನ್ನ ಕಾಲದ ಕಲಾಕೃತಿಗಳೊಂದೂ ಈ ಧ್ಯೇಯವನ್ನು ಸಾಧಿಸುವುದಿಲ್ಲವೆಂದು ಸಾರಿದನು. ಕಲೆಯಿಂದ ನಾವು ಪಡೆಯುವ ಆನಂದವನ್ನು ಲೆಕ್ಕಿಸದೆ ಅದನ್ನು ಹೀಯಾಳಿಸಿದುದು ಪ್ಲೇಟೋವಿನ ಮೂರನೆಯ ತಪ್ಪು. ಸುಖದ ವಿಷಯದಲ್ಲಿ ಪ್ಲೇಟೋವಿನ ಅಭಿಪ್ರಾಯವನ್ನು ನಾವು ಪರಿಶೀಲಿಸಿದ್ದೇವೆ—ಅದನ್ನು ಸಹಿಸುವುದೇ ಕಷ್ಟ ಅವನಿಗೆ: ಅನೇಕವೇಳೆ ಅದನ್ನು ತಿರಸ್ಕರಿಸಿ ದೂಷಿಸುತ್ತಾನೆ. ಆದರೆ ರಸಾನುಭವದ ಶುದ್ಧ ಆನಂದ ಸುಖಕ್ಕಿಂತಲೂ ಬೇರೆಯಾಗಿರಬಹುದೆಂದು ಆತನ ಮನಸ್ಸಿಗೇ ಹೊಳೆಯುವುದಿಲ್ಲ. ಅರಿಸ್ಟಾಟಲನು ಈ ಆನಂದವನ್ನೇ ತನ್ನ ಕಲಾವಿಮರ್ಶೆಯ ತಳಹದಿಯನ್ನಾಗಿ ಮಾಡಿದನು.

ಪ್ಲೇಟೋವಿನಲ್ಲಿ ಈ ಕೊರತೆಗಳನ್ನೆಲ್ಲಾ ನಾವು ಧಾರಾಳವಾಗಿ ಒಪ್ಪಬಹುದು. ಆದರೂ ಇಷ್ಟು ಹೇಳಿದಮೇಲೆಯೂ ಕಾವ್ಯಪ್ರಿಯರಾಗಲಿ ಕಲಾವಿಮರ್ಶಕರಾಗಲಿ ಪ್ಲೇಟೋವಿನ ತತ್ವಶಾಸ್ತ್ರವನ್ನಾಗಲಿ ಕಲಾವಿಮರ್ಶೆಯನ್ನಾಗಲಿ ಅಲ್ಲಗಳೆಯುವಹಾಗಿಲ್ಲ. ಕಲೆಯನ್ನು ಸಂಪೂರ್ಣವಾಗಿ ನೀತಿಗೆ ಅಧೀನವನ್ನಾಗಿ ಮಾಡಿದುದರಲ್ಲಿ ಪ್ಲೇಟೊ ಪಕ್ಷಪಾತಿಯಾಗಿ ಕಾಣಬಹುದು. ಆದರೂ ಕಲೆಗೂ ನೀತಿಗೂ ಸಂಬಂಧವೇ ಇಲ್ಲವೆಂದು ನಂಬುವ ನಮ್ಮ ಕಾಲದವರೆಲ್ಲರೂ ಪ್ಲೇಟೋವಿನ ಮಾತನ್ನು ಸ್ಮರಣೆಗೆ ತಂದುಕೊಳ್ಳಬೇಕು: "ಜೀವನವೇ ಅತ್ಯುತ್ತಮವಾದ ಮತ್ತು ಸುಂದರತಮವಾದ ನಾಟಕ. ಅದರ ಕವಿಗಳಾದ ಅಥವಾ ಪಾತ್ರಧಾರಿಗಳಾದ ನಾವು ಅಯೋಗ್ಯವಾದ ಅನುಕರಣಕ್ಕೆ ಅಥವಾ ಪ್ರದರ್ಶನಕ್ಕೆ ಸಮ್ಮತಿಪಡಕೂಡದು." "ಯಾರೇ ಆಗಲಿ ಅತಿಶಯವಾದ ರೀತಿಯಲ್ಲಿ ಸುಜನನಾಗಿರದಿದ್ದರೆ ಅತಿಶಯವಾದ ರೀತಿಯಲ್ಲಿ ಸುಕವಿಯಾಗಿರಲಾರ" ಎಂಬ ಷೆಲ್ಲಿಯ (ಪ್ಲೇಟೋವಿನ ಕಲಾವಿಮರ್ಶೆಯನ್ನು ಖಂಡಿಸುವ ಸಂದರ್ಭದಲ್ಲಿಯೇ ಆಡಿದ) ಮಹಾವಾಕ್ಯವನ್ನೂ ಅವರು ಮರೆಯಕೂಡದು. ಈ ಮಾತಿನ ಅರ್ಥವನ್ನು ಹೇಳಬೇಕಾದರೆ, ಸೌಜನ್ಯತೆಯೇ ಶ್ರೇಷ್ಠ ಕಲೆಯ ಆಧಾರ, ಎಂದು ಹೇಳಬೇಕಲ್ಲದೆ, ಆಧುನಿಕರಲ್ಲಿ ಕೆಲವರು ಹೇಳುವಂತೆ ಕೇವಲ ಕಲಾದೃಷ್ಟಿಯಲ್ಲಿ ಅಗ್ಗಳಿಕೆ

ಪಡೆದ ಕಲೆಯೆಲ್ಲವೂ ಸ್ವತಏವ ಒಳ್ಳೆಯದೆಂದು ಹೇಳಲಾಗದು. ಕಲೆಗೂ ನೀತಿಗೂ ಸಾಮಾನ್ಯನೀತಿಬೋಧಕರೂ ಸಾಧಾರಣಕಲೋಪಾಸಿಗಳೂ ಅರಿಯಲಾಗದ ಮೇಲ್ಮಟ್ಟದಲ್ಲಿ ನಿಕಟಸಂಬಂಧ ಇದ್ದೇ ಇರುವುದು. ಇದನ್ನು ಮರೆತು ಕಲೆಗೂ ನೀತಿಗೂ ಸಂಬಂಧವೇ ಇಲ್ಲವೆಂದು, ಅಥವಾ ಅತಿಶಯದ ಕಲೆ ಎನಿಸಿಕೊಂಡದ್ದೆಲ್ಲಾ ಧರ್ಮಸಾರಭೂತವಾದ ಕಲೆ ಎಂದು, ಹೇಳಿದರೆ ಅದು ತಪ್ಪಾಗುವುದು. ಕಲಾದೃಷ್ಟಿಯಲ್ಲಿ ಉತ್ತಮ ಸಂಗೀತಗಾರನೆನಿಸಿಕೊಂಡವನೊಬ್ಬನು ಹೇಯವಾದ ಜೀವನವನ್ನು ನಡಸುತ್ತಿರುವನೆಂದೂಹಿಸೋಣ. ಇಲ್ಲಿ ಅವನ ಕಲೆ ನಿಜವಾಗಿಯೂ ಶ್ರೇಷ್ಠವಾದ ಕಲೆಯಲ್ಲ ಎಂದು ಹೇಳೋಣವೇ, ಅಥವಾ ನಮ್ಮ ಧರ್ಮಜೀವನದ ದೃಷ್ಟಿ ಸಂಕುಚಿತವಾದದ್ದು ಎಂದು ತಿಳಿಯೋಣವೆ? ಇಂತಹ ಸಂದರ್ಭಗಳಲ್ಲಿ ನಾವು ಸಾಕ್ರಟೀಸನಲ್ಲಿ ಕಂಡ ಸೌಂದರ್ಯಜಿಜ್ಞಾಸೆಯನ್ನು ಮನನಮಾಡುವುದು ಒಳ್ಳೆಯದು. ಇದೂ ಹೋಗಲಿ, ಉಳಿದ ಮಾತೆಲ್ಲವೂ ಹೋಗಲಿ; ಯಾವ ಶ್ರೇಷ್ಠ ಕವಿತಾನೆ ಪ್ಲೇಟೋವಿನ ಚಿತ್ರ್ರಧಾನವಾದವನ್ನು — ಸಾಮಾನ್ಯವಾದವನ್ನು — ಸತ್ಯಸೌಂದರ್ಯಸೌಜನ್ಯ ಮೊದಲಾದ ಪರಮಧ್ಯೇಯಗಳ ಆರಾಧನೆಯನ್ನು—ನಿರಾಕರಿಸಲಾಗುವುದು? ಧ್ಯೇಯಧರ್ಮಗಳ ಪ್ರೇರಣೆಯಿಲ್ಲದ ಯಾವ ವಿಮರ್ಶಕನು ತಾನೇ ತನ್ನ ಕೆಲಸವನ್ನು ತೃಪ್ತಿಕರವಾಗಿ ನಡಸಬಲ್ಲನು? "ಯಾರೇ ಆಗಲಿ ತಕ್ಕಮಟ್ಟಿಗೆ ಪ್ಲೇಟೋವಿನ ಅನುಯಾಯಿಯಾಗಿಲ್ಲದಿದ್ದರೆ ಸಾಹಿತ್ಯದ ಸೌಂದರ್ಯ ಅವನಿಗೆ ಗೋಚರವಾಗುವುದಿಲ್ಲ" ಹೀಗೆಂದು ಪ್ರಖ್ಯಾತಕಾವ್ಯವಿಮರ್ಶಕರಾದ ಪ್ರೊ. ಸೆಯಿಂಟ್ಸ್‌ಬರಿಯವರು ಹೇಳಿರುವರು.

ಪ್ರತ್ಯೇಕದ ಮುಖಾಂತರವಾಗಿಯೇ ನಮಗೆ ಸಾಮಾನ್ಯದ ಸ್ಮೃತಿ ಬರುವುದೆಂದು ಹೇಳಿದ ಪ್ಲೇಟೊ ಕಲೆಯೆಂಬುದು ಪ್ರತ್ಯೇಕದ ಮೂಲಕ ಪುರುಷನನ್ನು ಸಾಮಾನ್ಯಕ್ಕೊಯ್ಯುವ ಆರೋಹಣಪಥವೆಂದು ಏಕೆ ತಿಳಿಯಲಿಲ್ಲ? ಕಲೆಯ ವೈಯಕ್ತಿಕ ವೈಲಕ್ಷಣ್ಯವೇ ಇದಕ್ಕೆ ಕಾರಣ. ಪ್ಲೇಟೋವಿನ ಮತದಂತೆ, ಕಲೆಗೆ ಪ್ರತ್ಯೇಕವೇ ಪ್ರಾಮುಖ್ಯವಾದದು, ಸಾಮಾನ್ಯದ ಜೀವವೇ ಪ್ರತ್ಯೇಕವೆಂದು ಅದು ತಿಳಿಯುತ್ತದೆ. ಪ್ರತ್ಯೇಕ

ವಿರುವುದರಿಂದ ಸಾಮಾನ್ಯವಿದೆಯೆಂದು ಅದರ ಭಾವನೆ. ಕಲಾವಿದನ ನೆಲೆಯೇ ಪ್ರತ್ಯೇಕ, ಅದು ಅದೃಶ್ಯವಾಯಿತೆಂದರೆ ಅವನಿಗೆ ನಿಲ್ಲಲು ನೆಲವಿಲ್ಲ. ಯಾವ ವಸ್ತು, ಭಾವ, ರಾಗ, ಸಂಭವಗಳನ್ನು ಪ್ರದರ್ಶಿಸಬೇಕಾದರೂ ಆತನು ಪ್ರತ್ಯೇಕದ ಪಡಿಯಚ್ಚಿನಮೇಲೆಯೇ ಕೆಲಸ ಮಾಡಬೇಕು. ಆದುದರಿಂದ ಪ್ರತ್ಯೇಕ ಆತನ ದೃಷ್ಟಿಯಲ್ಲಿ ಒಂದು ಅಪೂರ್ವವಾದ ಸತ್ತನ್ನೂ ಶ್ರೇಷ್ಠತೆಯನ್ನೂ ಹೊಂದಿರುವುದು. ಪ್ರತ್ಯೇಕದ ಸತ್ವ ಬಹುಕೀಳಾದುದೆಂದು ಭಾವಿಸಿದ ಪ್ಲೇಟೊ ಕಲೆಯನ್ನು ನೆರಳಿನ ನೆರಳು, ವಿಕ್ಷೇಪದ ವಿಕ್ಷೇಪ, ಎಂದು ಕರೆದುದು ಅತಿಶಯವೇನೂ ಅಲ್ಲ.

ಅರಿಸ್ಟಾಟಲನು ಪ್ಲೇಟೋವಿನ ಕಲಾ ವಿಮರ್ಶೆಯನ್ನು ಖಂಡಿಸಿ, ಕಲೆ ಪ್ರತ್ಯೇಕದ ಪೂಜೆಯಲ್ಲ, ವಿಜ್ಞಾನದಂತೆ, ತತ್ವದಂತೆ, ಶಾಶ್ವತವಾದ ಸಾರ್ವತ್ರಿಕವಾದ ಭಾವಗಳನ್ನು, ಮಾದರಿಗಳನ್ನು, ನಿರೂಪಿಸುವುದೇ ಕಲೆಯ ನಿಜವಾದ ಗುರಿ, ಎಂದು ನಾವು ಹಿಂದೆಯೇ ಸೂಚಿಸಿದಂತೆ ನಿರ್ಧರಿಸಿ ಕಲೆಯನ್ನು ಪ್ಲೇಟೋವಿನ ಸಾಮಾನ್ಯವಾದಕ್ಕೆ ಅನುಗೊಳಿಸಿದನು.

## ಪ್ಲೇಟೋವಿನ ತತ್ವಶಾಸ್ತ್ರದ ಉಪಸಂಹಾರ

ಇಂಥ ಅದ್ಭುತವಾದ ದರ್ಶನ ಗ್ರೀಕ್ ದೇಶದಲ್ಲಿ ನಿರಾಧಾರವಾಗಿ ಜನಿಸಿತೆಂದರೆ ಅತಿಶಯೋಕ್ತಿಯಾಗದಿರಲಾರದು. ಹಿಂದೆ ಪ್ರಸಿದ್ಧರಾದ ಗ್ರೀಕ್ ತತ್ವಜ್ಞಾನಿಗಳೆಲ್ಲರ ಸಾರಭೂತವಾದ ತತ್ವಗಳೆಲ್ಲವೂ ಪ್ಲೇಟೋವಿನ ದರ್ಶನದಲ್ಲಿ ಸಮ್ಮೇಳನ ಹೊಂದಿವೆ. ಆದರೂ ಅವು ರೂಪಾಂತರವನ್ನು ಹೊಂದಿ ಪ್ಲೇಟೋವಿನ ಸಿದ್ಧಾಂತದ ಮೂಲಸ್ತಂಭಗಳಾಗಿ ಪರಿಣಮಿಸಿರುವುದನ್ನು ನೋಡಿದರೆ ಯಾರೂ ಆಶ್ಚರ್ಯಪಡದಿರಲಾರರು. ಸೋಫಿಸ್ಟರೊಡನೆ (ತೋರಿಕೆ ಪ್ರಪಂಚದ) ಜ್ಞಾನ ದುಸ್ಸಾಧ್ಯವೆಂದೂ, ಸಾಕ್ರಟೀಸನೊಡನೆ ಯಥಾರ್ಥ ಜ್ಞಾನ ವರ್ಗೀಯ ಭಾವಜ್ಞಾನವೇ ಎಂದೂ ಪ್ಲೇಟೊ ಸಾರಿದನು. ಇಂದ್ರಿಯಗೋಚರವಾದ ಪ್ರಪಂಚವೆಲ್ಲವೂ ಕ್ಷಣಿಕವೆಂದೂ ಸದಾ ಪರಿಣಾಮ ಹೊಂದುತ್ತಿ

ರುವುದೆಂದೂ ಹಿರಾಕ್ಲಿಟಸನೇ ಹೇಳಿದ್ದನು. ಶುದ್ಧತತ್ವ ವಿಕಾರ ಹೊಂದುವುದಿಲ್ಲವೆಂದೂ ನಿಶ್ಚಲವಾಗಿಯೂ ನಿತ್ಯವಾಗಿಯೂ ಇರತಕ್ಕುದೆಂದೂ ಪಾರ್ಮಿನೈಡೀಸನು ಬೋಧಿಸಿದ್ದನು. ಸತ್ಯಸತ್ವ ಬಹುವೆಂದು ಪರಮಾಣುವಾದಿಗಳು ವಾದಿಸಿದ್ದರು; ಅದು ಏಕವೆಂದೂ ಅದ್ವಿತೀಯವೆಂದೂ ಇಲಿಯಾಟಿಕರು ಘೋಷಿಸಿದ್ದರು; ಈಗ ಬಹುವೆಲ್ಲವೂ (ಸಾಮಾನ್ಯಗಳು)ಅನುಕ್ರಮಮಾಡಲ್ಪಟ್ಟು ಏಕರೂಪವಾದ ಶ್ರೇಯದಿಂದ ಪ್ರಭೆಯನ್ನು .ಹೊಂದಿ ಆಳಲ್ಪಡುವುವೆಂದು ಪ್ಲೇಟೊ ತೀರ್ಮಾನಿಸಿದನು. ಸಾಧಾರಣವಾಗಿ ಗ್ರೀಸ್‌ದೇಶದ ತತ್ವಜ್ಞಾನಿಗಳೆಲ್ಲರೂ ಸತ್ಯಸತ್ವ ಚೈತನ್ಯಮಯವಾದುದೆಂದೂ ಜ್ಞಾನಪೂರಿತವಾದುದೆಂದೂ ಅಭಿಪ್ರಾಯಪಟ್ಟಿದ್ದರು. ಅನಾಕ್ಸಗೋರಸನು ಚಿಚ್ಛಕ್ತಿಯೇ ಸಮಸ್ತ ಸತ್ವಕ್ಕೂ ಚೈತನ್ಯಪ್ರದವೆಂದೂ ಸರ್ವವನ್ನೂ ಸ್ವಾಧೀನಪಡಿಸಿಕೊಂಡಿರುವುದೆಂದೂ ಸೂಚಿಸಿದ್ದನು. ಈ ವಿಧವಿಧವಾದ ಭಿನ್ನಾಭಿಪ್ರಾಯಗಳನ್ನೆಲ್ಲಾ ಸಮಂಜಸಗೊಳಿಸಿ, ಸಮೀಕರಿಸಿ, ಸರ್ವತೋಮುಖವಾಗಿ ಜ್ಞಾನಿಗಳೆಲ್ಲರೂ ಒಪ್ಪುವಂತೆ ನೂತನವಾದ ಸಿದ್ಧಾಂತವೊಂದನ್ನೇರ್ಪಡಿಸಿದುದೇ ಪ್ಲೇಟೋವಿನ ದಿಗಂತವಿಖ್ಯಾತವಾದ ಕೀರ್ತಿಗೆ ಕಾರಣ.

ಪರ್ಯಾಲೋಚಿಸಿ ನೋಡಿದಲ್ಲಿ ಪ್ಲೇಟೋವಿನ ಸಿದ್ಧಾಂತ ಹಲವು ಬಗೆಗಳಲ್ಲಿ ಕಪಿಲಮಹರ್ಷಿಗಳ ಸಾಂಖ್ಯ ದರ್ಶನವನ್ನೂ ಶ್ರೀಮಚ್ಛಂಕರಾಚಾರ್ಯರವರ ಅದ್ವೈತ ಸಿದ್ಧಾಂತವನ್ನೂ ಹೋಲುವುದು. ಪ್ರಪಂಚ ಸೃಷ್ಟಿಗೆ ಕಾರಣಗಳಾದ ತತ್ವದ್ವಯಗಳನ್ನು ಹೇಳುವುದರಲ್ಲಿಯೂ ಅವುಗಳ ಗುಣವಿಶೇಷಗಳನ್ನೂ ಪರಸ್ಪರ ಸಂಬಂಧವನ್ನೂ ನಿರೂಪಿಸುವುದರಲ್ಲಿಯೂ ಪ್ಲೇಟೋವಿನ ಸಿದ್ಧಾಂತ ಸಾಂಖ್ಯಮತಕ್ಕನುಸಾರವಾಗಿರುವುದು. ಸಾಂಖ್ಯ ಮತದಲ್ಲಿಯೂ ಪುರುಷನು ಸ್ವಯಂ ಪ್ರಭೆಯುಳ್ಳವನು, ಜ್ಞಾನಮಯಿ, ಚೈತನ್ಯರೂಪನು; ಪ್ರಕೃತಿ ಜಡ, ಅಚೈತನ್ಯಮಯ. ಆದರೆ ಪ್ಲೇಟೋವಿನಲ್ಲಿ ಪುರುಷನೇ ಪ್ರಧಾನ ಕಾರಣನು, ಪ್ರಕೃತಿ ಉಪಾದಾನ ಕಾರಣ ಮಾತ್ರ; ಪುರುಷನೇ ಕರ್ತೃತ್ವವುಳ್ಳವನು, ಪ್ರಕೃತಿ ಪುರುಷನ ಕರ್ತೃತ್ವಕ್ಕೆ ಅವಶ್ಯಕವಾದ ವಸ್ತುವನ್ನೊದಗಿಸುವ ಕರ್ಮಣೀರೂಪದ ಭಾರವನ್ನು ಮಾತ್ರ ಧರಿಸುವುದು. ಸಾಂಖ್ಯದಲ್ಲಿಯೋ ಅಂದರೆ ಪುರುಷನು

ಚೈತನ್ಯರೂಪನಾದರೂ ಕರ್ತೃತ್ವವಿಹೀನನು – ಅಬಲನು – ನಿತ್ರಾಣನು; ಪ್ರಕೃತಿ ಜಡವಾದರೂ ಶಕ್ತಿಯುತವಾದುದು. ಪುರುಷನು ಕುಂಟನು, ಪ್ರಕೃತಿ ಕುರುಡಿ: ಇವೆರಡರ ಸಹಕಾರಬಲದಿಂದ ಜಗತ್ತು ಸೃಷ್ಟಿಯಾಗುವುದು. ಇನ್ನು ಶಂಕರಮತವನ್ನೂ ಪ್ಲೇಟೊ ದರ್ಶನವನ್ನೂ ಸಮಾವಲೋಕನಮಾಡಿದರೆ ತ್ರೈವಿಧ್ಯಸತ್ವವಾದದಲ್ಲಿ ಹೋಲಿಕೆ ಕಂಡುಬರುವುದು. ಪ್ರತ್ಯೇಕವಸ್ತುಮಯವಾದ ಭವಪ್ರಪಂಚ ಪಾರಮಾರ್ಥಿಕ ಸತ್ತನ್ನುಳ್ಳ ಸಾಮಾನ್ಯಗಳಿಗೆ ಒಂದು ಅಂತಸ್ತು ಕೀಳಾಗಿಯೂ, ಸಂಪೂರ್ಣವಾದ ಅಸತ್ತಿಗೆ ಒಂದು ಅಂತಸ್ತು ಮೇಲಾಗಿಯೂ ಇರುವ ವ್ಯಾವಹಾರಿಕ ಸತ್ತನ್ನುಳ್ಳುದೆಂದು ಹೇಳಬೇಕು. ಈ ಕಾರಣದಿಂದ ಭವಪ್ರಪಂಚಕ್ಕೆ ಆಧಾರಭೂತವಾದ ಪ್ರಧಾನವನ್ನು ಪ್ಲೇಟೊ ಎಷ್ಟೇ ವಿಧವಾಗಿ ಅಸದ್ವಿಶೇಷವೆಂದೂ ಅಚಿಂತ್ಯವೆಂದೂ ಹೇಳಿದರೂ ನಾವು ಮಾತ್ರ ವ್ಯಾವಹಾರಿಕ ಸತ್ತನುಳ್ಳುದೆಂದು ಹೇಳದೆ ವಿಧಿಯಿಲ್ಲ. ಶಂಕರಮತದಲ್ಲಿಯೂ ಕೂಡ ಉಪಾದಾನ ಕಾರಣವಾದ, ಬ್ರಹ್ಮಬಿಂಬ ಪ್ರತಿಬಿಂಬಿಸಲು ಸಹಾಯರೂಪವಾದ, ಮಾಯೆ ಅಸತ್ತೆಂದೂ ಅವಿದ್ಯೆಯೆಂದೂ ಶಂಕರವಾದಿಗಳು ಎಷ್ಟೇ ವಿಧವಾಗಿ ಸಾರಿದರೂ, ಅನಾದಿಯಾಗಿ, ಸಮಷ್ಟಿರೂಪದಲ್ಲಿ ಅನಂತವಾಗಿ, ನಿತ್ಯವಾಗಿ, ಭವಪ್ರಪಂಚಕ್ಕೆ ಕಾರಣಭೂತವಾಗಿ, ಮಾಯೆ ಮಾಯವಾಗದೆ ಬಹುವಿಧದಲ್ಲಿ ಸಿದ್ಧತತ್ವವಾಗಿ ಇದ್ದೇ ಇರುವುದು. ಇದರಿಂದಲೇ ಈ ತತ್ವವನ್ನು ಸದಸದ್ವಿಲಕ್ಷಣವೆಂದು ಹೇಳುವರು. ಆದುದರಿಂದ ಪ್ಲೇಟೋವಿನ ಪ್ರಧಾನವನ್ನು ನಾವು ನಿರ್ಭಯವಾಗಿ ಮಾಯೆಯೆಂದೂ ಅದಕ್ಕೆ ಸಂಬಂಧಿಸಿದ ಸಿದ್ಧಾಂತವನ್ನು ಮಾಯಾವಾದವೆಂದೂ ಹೇಳಬಹುದು[೧].

---

೧. ಪ್ರೊ. ಆರ್ಸ್ವಿಕ್ ಎಂಬ ವಿದ್ವಾಂಸರು "ಆದರ್ಶರಾಜ್ಯದ ಸಂದೇಶ" (The Message of the Republic) ಎಂಬ ತಮ್ಮ ಗ್ರಂಥದಲ್ಲಿ ಈ ಸಂವಾದದಲ್ಲಿ ಪ್ರತಿಪಾದಿಸಲ್ಪಟ್ಟಿರುವ ತತ್ವ — ಒಟ್ಟಿನಲ್ಲಿ ಪ್ಲೇಟೋವಿನ ಮತದ ಸಾರ — ಹಿಂದೂಗಳ ವೇದಾಂತದರ್ಶನವನ್ನವಲಂಬಿಸಿರುವುದೆಂದು ಬಹು ಮನೋರಂಜಕವಾದ ರೀತಿಯಲ್ಲಿ ವಿವರಿಸಿರುವರು. ಪ್ಲೇಟೋಪ್ರಿಯರೆಲ್ಲಾ ಈ ಗ್ರಂಥವನ್ನು ಓದಲೇಬೇಕು.

ಪ್ರಪಂಚವಿಷಯದಲ್ಲಿ ಕಾರಣಬದ್ಧವಾದ ಜ್ಞಾನ ಸಾಧ್ಯವೆಂದೂ, ನಮ್ಮ ಜ್ಞಾನದ ಮೂಲವೆಲ್ಲಾ ಚಿತ್ತಿನಲ್ಲಿ—ವಿವೇಚನಾಶಕ್ತಿಯಲ್ಲಿ—ಮಾತ್ರವೇ ವಿನಾ ಇಂದ್ರಿಯಾವಲೋಕನದಲ್ಲಿ ಇಲ್ಲವೆಂದೂ ಪ್ಲೇಟೊ ಸಾರಿದುದರಿಂದ ಆತನ ತತ್ವಶಾಸ್ತ್ರವನ್ನು ಬುದ್ಧಿಪ್ರಮಾಣವಾದ ಅಥವಾ ಹೈತುಕವಾದ(Rationalism)ಎಂದು ಹೇಳಬಹುದು. ಆದರೂ ಆತ್ಮನಲ್ಲಿ ಆರೂಢವಾಗಿರುವ ಸಾಮಾನ್ಯವಿಷಯಕಜ್ಞಾನ ಅಂಕುರಿಸ ಬೇಕಾದರೆ ಅನುಭವ ಅವಶ್ಯಕ. ಸತ್ಯಪ್ರಪಂಚವೊಂದುಂಟೆಂದು ಹೇಳು ವುದರಿಂದ ಈ ದರ್ಶನವನ್ನು ವಸ್ತುಸತ್ಯವಾದ(Realism)ಎನ್ನಬಹುದು ; ಈ ಸತ್ಯಪ್ರಪಂಚ ಚಿನ್ಮಯವಾದುದೆಂದು ನಂಬುವುದರಿಂದ ಚಿತ್ಪ್ರಧಾನ ವಾದ ಅಥವಾ ವಸ್ತುಚಿನ್ಮಯವಾದ(Idealism)ಎನ್ನಬಹುದು ; ದೃಶ್ಯ ಪ್ರಪಂಚ ತೋರಿಕೆಯ ಪ್ರಪಂಚ ಮಾತ್ರ, ಅಥವಾ ಸತ್ಯಪ್ರಪಂಚದ ರೂಪಾಂತರ ಮಾತ್ರವೆಂದು ಬೋಧಿಸುವುದರಿಂದ ಭವಾತ್ಮಕವಾದ (phenomenalism)ಎಂದು ಹೇಳಬಹುದು. ಈ ಅರ್ಥದಲ್ಲಿಯೇ ಅದು ಚಾರ್ವಾಕಖಂಡನಮತ(anti-materialistic)ಎಂದು ತಿಳಿಯಬಹುದು. ಭವವ್ಯಾಪಾರಗಳೆಲ್ಲಾ ಚಿತ್ತಿನ ಮೂರ್ತೀಕಾರವೆಂದು ಈ ತತ್ವಶಾಸ್ತ್ರ ಬೋಧಿಸುವುದರಿಂದಲೂ, ಸರ್ವವನ್ನು ಒಟ್ಟುಗೂಡಿಸುವ ಲೋಕಾತ್ಮ ವೊಂದನ್ನಂಗೀಕರಿಸುವುದರಿಂದಲೂ ಒಂದು ಪರ್ಯಾಯದಲ್ಲಿ ಈ ಸಿದ್ಧಾಂತವನ್ನು ವಿಶ್ವಬ್ರಹ್ಮವಾದ(Pantheism)ಎನ್ನಬಹುದು ; ಸೃಷ್ಟಿ ಕರ್ತನಾದ ಈಶ್ವರನನ್ನು ಕೋರುವುದರಿಂದ ಸೇಶ್ವರಮತ (Theism) ಎಂದೂ ಹೇಳಬಹುದು. ಸತ್ಯ (ಸಾಮಾನ್ಯ) ಲೋಕ ಅನುಭವಸಿದ್ಧ ವಾದ ವಸ್ತುಪ್ರಪಂಚವನ್ನು ಮೀರಿರುವುದರಿಂದ, ಶುದ್ಧ ಸಾಮಾನ್ಯಗಳು ಪ್ರಾಕೃತಿಕ ಸಂಬಂಧವನ್ನು ನಿರಾಕರಿಸುವುದರಿಂದ, ಈ ಮತ ಲೋಕಾ ತೀತ ಅಥವಾ ಲೋಕೋತ್ತರವಾದ(transcendentalism)ಎನ್ನಬಹುದು. ಆದರೆ ಈಶ್ವರಾಂಶ ಜಗದ್ವ್ಯಾಪಕವಾದುದರಿಂದ ಅದು ಅಂತರ್ಯಾಮಿತ್ವ ವನ್ನೂ(immanence) ಸೂಚಿಸುವುದು. ಪ್ರಪಂಚದ ಮೂಲವಿವರಣೆಯಲ್ಲಿ ಪ್ರಯೋಜನಾತ್ಮಕವಾದ, ಉದ್ದೇಶಪೂರ್ವಕವಾದ, ಅಂಶಗಳನ್ನು ಉಪ ಯೋಗಿಸುವುದರಿಂದಲೂ, ಇವುಗಳನ್ನೆಲ್ಲಾ ಅಖಿಲಜಗತ್ತಿನ ಅಂತಿಮ

ಪ್ರಯೋಜನವಾದ 'ಶ್ರೇಯ'ವೆಂಬ ಸಾಮಾನ್ಯದಲ್ಲಿ ಒಟ್ಟುಗೂಡಿಸುವುದರಿಂದಲೂ, ಪ್ಲೇಟೋವಿನ ದರ್ಶನವನ್ನು ಪ್ರಯೋಜನಕಾರಣಗಳನ್ನು (final cause) ನಿರಾಕರಿಸುವ ಜಡಸೃಷ್ಟಿವಾದ (mechanism) ಅಥವಾ ಪ್ರಾಕೃತಿಕವಾದ (naturalism)ಎನ್ನದೆ ಫಲಪ್ರತಿಪಾದನವಾದ ಅಥವಾ ಪ್ರಯೋಜನಾತ್ಮಕವಾದ(teleology)ಎಂದು ಹೇಳಬೇಕು. ಪ್ರಪಂಚದ ಈ ಅಂತಿಮಪ್ರಯೋಜನಕಾರಣವಾದ ಸಾಮಾನ್ಯ"ಶ್ರೇಯ" ಅಥವಾ "ಧರ್ಮ"ವಾದುದರಿಂದ ಈ ದರ್ಶನ ವಾಸ್ತವಿಕವಾಗಿಯೂ ಧರ್ಮಮೂಲವೆಂದೆನಿಸಿಕೊಳ್ಳುವುದು. ಇದರ ನೀತಿಸಿದ್ಧಾಂತ ವಿಷಯಭೋಗವಿರೋಧವಾದುದು, (anti-hedonistic) ಆತ್ಮಸಿದ್ಧಿರೂಪವಾದುದು; (self realisation) ; ಇದರ ರಾಜ್ಯಸಿದ್ಧಾಂತವಾದರೋ ಜ್ಞಾನಕುಲೀನರ ಪ್ರಭುತ್ವ (aristocracy of the intellect)ಎಂದು ಹೇಳಬಹುದು.

ಪ್ಲೇಟೋವಿನ ಕಾಲಾನಂತರ ಗ್ರೀಸ್‌ದೇಶದ ತತ್ವಶಾಸ್ತ್ರದ ಮೇಲೂ ಕಡೆಯಲ್ಲಿ ಕ್ರೈಸ್ತಮತ ತತ್ವಶಾಸ್ತ್ರಗಳ ಮೇಲೂ ಪ್ಲೇಟೋವಿನ ಸಿದ್ಧಾಂತದಿಂದುಂಟಾದ ಪರಿಣಾಮ ಎಷ್ಟು ಮಹತ್ತರವಾದುದೆಂಬುದನ್ನು ವಿಶೇಷವಾಗಿ ವಿವರಿಸಬೇಕಾದುದೇನೂ ಇಲ್ಲ. ಮಾನವನ ಅಭಿರುಚಿ, ಪ್ರಯತ್ನಗಳಿಗೆ ಸಂಬಂಧಿಸಿದ ಪ್ರತಿಯೊಂದು ಮಾರ್ಗವನ್ನೂ ಜ್ಞಾನಪೂರ್ವಕವಾಗಿ ಸುಧಾರಿಸಲೆಳಸಿದ ಮಹಾ ಮೂಲಮಂತ್ರವದು. ಪ್ರೌಢಜ್ಞಾನಿಗಳಾದ ರೋಮ್ ಜನರಿಗೆ ತನ್ನ ವಾಕ್ಕನ್ನು ಬೋಧಿಸಲು ತೊಡಗಿದ, ಕ್ರೈಸ್ತಮತಕ್ಕೆ ರತ್ನಪ್ರಾಯಗಳಾದ ತತ್ವಾಂಶಗಳನ್ನು ತೋರಿಕೊಟ್ಟ, ಅಗಾಧ ಖನಿಯದು. ಅದರ ಅತೀಂದ್ರಿಯತ್ವ, ಚಿತ್ಪ್ರಧಾನತ್ವ, ಫಲಪ್ರತಿಪಾದನತ್ವ ; ಪ್ರಪಂಚಕ್ಕೆಲ್ಲಾ ಸಾಮಾನ್ಯ ಸಮುಚ್ಚಯವೇ ಮೂಲರೂಪವೆನ್ನುವ ಅದರ ಭಾವಪ್ರಾಧಾನ್ಯವಾದ; ಸಾಮಾನ್ಯ ಪ್ರಾಧಾನ್ಯರೂಪಕವಾದ ಅದರ ದ್ವೈತವಾದ; ಸಾಮಾನ್ಯಗಳ ಧ್ಯಾನವೇ ಪರಮ ಧ್ಯೇಯವೆಂದು ಬೋಧಿಸುವ ಅದರ ಪಾರಮಾರ್ಥಿಕ ರಹಸ್ಯ ; ಇಂದ್ರಿಯಲೋಕ ಮಿಥ್ಯವಾದುದೆಂದೂ ವಿಷಯಭೋಗ ಹೇಯವಾದುದೆಂದೂ ಅದಕ್ಕೆ ತೋರಿದ ಇಹಲೋಕತಿರಸ್ಕಾರ ; ಆತ್ಮ

ನಿತ್ಯವೆಂಬ ಮತ್ತು ಮಾನವನು ಪಾಪಪತನನಾದವನೆನ್ನುವ ಅದರ ದೈವಜ್ಞಾನಸಿದ್ಧಾಂತ; ಅದರ ಧರ್ಮರಾಜ್ಯ — ಇವೇ ಮುಂತಾದ ಅನೇಕ ಭಾವಗಳು ಕ್ರೈಸ್ತಮತದ ತಳಹದಿಗಳಾಗಿ ಪರಿಣಮಿಸಿದುವು. ಪ್ಲೇಟೋವನ್ನು ಓದುವಾಗ ಅಸಾಧಾರಣನಾದ ಒಬ್ಬ ವ್ಯಕ್ತಿಯನ್ನೇ ಅಲ್ಲ —ಅಭೂತಪೂರ್ವವಾದ ಒಂದು ನಾಗರೀಕತೆಯನ್ನೇ — "ಹೆಲನಿಸಂ" ಎಂದೆನಿಸಿಕೊಂಡಿರುವ ಸಮಗ್ರ ಗ್ರೀಕ್ ಪ್ರಪಂಚದ ಸಂಸ್ಕೃತಿಯ ಮುಖಮುದ್ರೆಯನ್ನೇ — ನಾವು ಸಾಕ್ಷಾತ್ಕರಿಸುತ್ತೇವೆ. ಮಹಾಪುರುಷನು ತನ್ನ ಯುಗನಿರ್ಮಾಪಕನೇ, ಅಥವಾ ತನ್ನ ಯುಗಸಂಸ್ಕಾರಬಲದಿಂದ ಜನಿಸುವವನೇ, ಎಂಬ ಸಮಸ್ಯೆಯನ್ನು ಬಿಡಿಸಬೇಕಾದರೆ ಪ್ಲೇಟೋ ದರ್ಶನವನ್ನು ಸಮಾವಲೋಕಿಸಬೇಕು.

## ಅಧ್ಯಾಯ ೧೬.

## ಅರಿಸ್ಟಾಟಲ್

ಚಿತ್ಪ್ರಧಾನಾತ್ಮಕವಾದ ತತ್ವಶಾಸ್ತ್ರವನ್ನು ರಚಿಸಿ ಅದನ್ನು ಸರ್ವ ವ್ಯಾಪಕವಾಗುವಂತೆ ಪ್ರಯೋಗಿಸಲು ಪ್ರಯತ್ನಪಟ್ಟ ಗ್ರೀಸ್‌ದೇಶದ ಜ್ಞಾನಿಗಳಲ್ಲಿ ಪ್ಲೇಟೋವೆ ಮೊದಲನೆಯವನು. ಈತನೇರ್ಪಡಿಸಿದ ದರ್ಶನದಲ್ಲಿ ನ್ಯೂನಾತಿರೇಕಗಳು ಹೇರಳವಾಗಿದ್ದುದರಿಂದ ಇವುಗಳನ್ನೆಲ್ಲಾ ಸರಿಪಡಿಸಿ ಅದನ್ನು ದೋಷರಹಿತವಾದುದನ್ನಾಗಿ ಮಾಡುವ ಕಾರ್ಯಭಾರ ಅರಿಸ್ಟಾಟಲನ ಮೇಲೆ ಬಿತ್ತು. ಪ್ಲೇಟೋವಿನ ಕಾಲಾನಂತರ ಅವನ ಬೋಧನೆ ಎರಡು ಶಾಖೆಗಳಾಗಿ ಪರಿಣಮಿಸಿತು. ಪ್ರಥಮ ಅಥವಾ ಪೂರ್ವ ಶಾಖೆಯುವರು ಗುರುವಿನ ಬೋಧನೆಯನ್ನು ತದ್ರೂಪದಲ್ಲಿಯೇ ಪ್ರಚುರಪಡಿಸಿದುದೆಷ್ಟೋ ಅಷ್ಟಲ್ಲದೆ ಅದರ ಏರುಕೋರುಗಳನ್ನು ಸರಿಪಡಿಸಲು ಉದ್ಯಮಿಸಲಿಲ್ಲ. ದ್ವಿತೀಯ ಅಥವಾ ಉತ್ತರ ಶಾಖೆಯವರ ಮುಖಂಡನಾದ ಅರಿಸ್ಟಾಟಲನು ಸ್ವತಂತ್ರಚಿತ್ತನಾಗಿ ಪ್ಲೇಟೋವಿನ ಮತವನ್ನು ಕುಂದುಕೊರತೆಗಳಿಂದ ತಪ್ಪಿಸಲು ಯತ್ನಿಸಿದುದಲ್ಲದೆ ಅದನ್ನು ಮೂಲತತ್ವಗಳಿಗನುಗುಣವಾಗಿಯೂ ಶಾಸ್ತ್ರೀಯತರವಾದ ರೀತಿಯಲ್ಲಿಯೂ ಅಭಿವೃದ್ಧಿಪಡಿಸಿದನು. ಮೊಟ್ಟಮೊದಲು ಅತೀಂದ್ರಿಯಗಳಾದ ಸಾಮಾನ್ಯಗಳ ವಿಮರ್ಶೆಯಾಗಬೇಕಾಯಿತು : ಪ್ಲೇಟೊ ಈ ಸ್ಥಿರರೂಪಗಳನ್ನು ಅನುಭವಪ್ರಪಂಚದಿಂದ ಪ್ರತ್ಯೇಕಿಸಿ ಎಲ್ಲಿಯೋ ಗಗನಮಂಡಲದಲ್ಲಿ ಅವುಗಳಿಗೆ ಮನೆಮಾಡಿಕೊಟ್ಟಂತೆಯೂ, ಇಂಥ ಸಾಮಾನ್ಯಗಳೇ ಸತ್ಯಸತ್ವಗಳಾದುದರಿಂದ ಅನುಭವಪ್ರಪಂಚವನ್ನು ತೋರಿಕೆಯ ಪ್ರಪಂಚಮಾತ್ರವೆಂದೆಣಿಸಿದಂತೆಯೂ ಅರಿಸ್ಟಾಟಲನಿಗೆ ತೋರಿತು. ಇದಾದಮೇಲೆ ಪ್ಲೇಟೋವಿನ ಪ್ರಧಾನವೆಂಬ ತತ್ವಕ್ಕೆ ವಿಶದವಾದ ಲಕ್ಷಣವನ್ನು ಹೇಳಿದಹೊರತು ಪ್ರಪಂಚ ವಿವರಣೆಗೆ ಅದರಿಂದೇನೂ ಉಪಯೋಗವಾಗುವಂತಿರಲಿಲ್ಲ. ಸಾಮಾನ್ಯಗಳಿಗೂ ಪ್ರಧಾನಕ್ಕೂ, ರೂಪಕ್ಕೂ ಜಡಕ್ಕೂ, ಮಧ್ಯೆಯಿರುವ ಕಂದರವನ್ನು ಸರ್ವಪ್ರಯತ್ನದಿಂದಲಾದರೂ ಮುಚ್ಚಿದಹೊರತು ದೃಶ್ಯಪ್ರಪಂಚ ಹುಟ್ಟುವ ಹಾಗಿಲ್ಲ; ಅತಿ ದೂರದಲ್ಲಿರುವ, ವಿಕಾರರಹಿತಗಳಾದ ಸಾಮಾನ್ಯಗಳು, ಅವಿದ್ಯಾಸ್ವರೂಪವಾದ

ಪ್ರಧಾನವೆಂಬ ದ್ರವ್ಯದ ಮೇಲೆ ಹೇಗೆತಾನೆ ತಮ್ಮ ಆಕಾರವನ್ನು ಮುದ್ರಿಸಲು ಸಾಧ್ಯ? ಇಷ್ಟೇ ಅಲ್ಲ. ಕಾಲಕ್ರಮದಲ್ಲಿ ಪರಿಣಾಮವನ್ನು ಹೊಂದುತ್ತ ಅಭಿವೃದ್ಧಿಯಾಗುವ ವಸ್ತುರೂಪಗಳಿಗೆ ನಾವೇನು ಹೇಳೋಣ? ಪ್ರತ್ಯೇಕವಾದ ನಿತ್ಯಾತ್ಮಗಳು ಹೇಗುಂಟಾದುವು ಮತ್ತು ಇವು ಮಾನವ ಶರೀರದಲ್ಲಿರುವ ಬಗೆ ಹೇಗೆ? ಸೃಷ್ಟಿಕರ್ತನೂ ಹಿರಣ್ಯ ಗರ್ಭನೂ ಪ್ಲೇಟೋವಿನ ದರ್ಶನದಲ್ಲಿ ಬರಬೇಕಾದ ಅಗತ್ಯವೇ ಇಲ್ಲ; ಪುರಾಣಪ್ರಸಂಗಗಳೂ ಸಾಂಪ್ರದಾಯಿಕ ಮತಬೋಧನೆಯೂ ಪ್ಲೇಟೋವಿನಲ್ಲಿ ಸಕಾರಣ ವಿವರಣೆಯ ಅಭಾವವನ್ನು ತೋರಿಸುತ್ತ ವೆಯೇ ಹೊರತು ಮತ್ತೇನೂ ಇಲ್ಲ; ದ್ವೈತ ನಿಂತು ಸಿದ್ಧಾಂತದ ಪ್ರತಿ ಒಂದು ಭಾಗಕ್ಕೂ ಹರಡುತ್ತದೆಯೆ ಹೊರತು ಸಮಸ್ಯೆಗಳು ವಿಮರ್ಶೆ ಯಾಗಲಿಲ್ಲ. ಹೀಗೆಂದು ಅರಿಸ್ಟಾಟಲನು ಯೋಚಿಸಿದನು.

ಅರಿಸ್ಟಾಟಲನು ತನ್ನ ಗುರುವಿನ ನಿತ್ಯ ನಿರ್ವಿಕಾರರೂಪಗಳನ್ನು, ಚಿನ್ಮಯ ತತ್ವವಿಶೇಷಗಳನ್ನು, ಉಳಿಸಿಕೊಂಡು ಅವುಗಳ ಅತೀಂದ್ರಿಯತ್ವ ಅಥವಾ ಲೋಕಾತೀತ್ವವನ್ನು ಮಾತ್ರ ದೂರಮಾಡುತ್ತಾನೆ: ಅವುಗಳನ್ನು ಗಗನಮಂಡಲದಿಂದ ವಾಸಮಾಡಲು ಪೃಥ್ವಿಗೆ ತರುತ್ತಾನೆನ್ನಬಹುದು. ರೂಪಗಳು ವಸ್ತುಗಳಿಂದ ಪ್ರತ್ಯೇಕಿಸಲ್ಪಟ್ಟಿರುವುದಿಲ್ಲ; ವಸ್ತುಗಳಲ್ಲಿಯೇ ಇದ್ದು ಪ್ರಕಾಶಿಸುತ್ತವೆ: ಅವು ಲೋಕಾತೀತಗಳಲ್ಲ, ಅಂತರ್ಗತವಾದುವು ಗಳು. ಪ್ರಧಾನ ಅಸತ್ತಲ್ಲ, ಚೈತನ್ಯಯುಕ್ತವಾದುದು; ರೂಪವೂ ದ್ರವ್ಯವೂ (ಪ್ರಧಾನವೂ) ಭಿನ್ನವಾಗಿಲ್ಲದೆ ಸದಾ ಒಂದುಗೂಡಿರುವುವು. ದ್ರವ್ಯ ವಸ್ತುವಿನ ಪರ್ಯಾಯವನ್ನು ಪ್ರಕಾಶಪಡಿಸುವುದರ ಮೂಲಕ ಪರಿಣಾಮ ಹೊಂದುತ್ತದೆ, ಬೆಳೆಯುತ್ತದೆ, ವಿಕಸಿತವಾಗುತ್ತದೆ, ರೂಪಮಾರ್ಗದಲ್ಲಿ ಅಭಿವೃದ್ಧಿ ಹೊಂದುತ್ತದೆ. ಇಂದ್ರಿಯಲೋಕ—ಭವಪ್ರಪಂಚ—ಸತ್ಯ ಲೋಕದ 'ನಕಲು' ಅಥವಾ ಛಾಯಾಮಾತ್ರವಲ್ಲ; ಅದೇ ಸತ್ಯಪ್ರಪಂಚ, ರೂಪಪ್ರಧಾನಗಳ ಐಕ್ಯವಿಶೇಷ, ಸಮ್ಯಗ್‌ಜ್ಞಾನದ ಯಥಾರ್ಥಜ್ಞೇಯ. ಭವಪ್ರಪಂಚವನ್ನು ಈರೀತಿಯಾಗೆಣಿಸುವುದರಿಂದಲೇ ಅರಿಸ್ಟಾಟಲನು ಅದನ್ನು ಶಾಸ್ತ್ರೀಯಮಾರ್ಗದಿಂದ ತಿಳಿದುಕೊಳ್ಳಲು ಪ್ರಯತ್ನಪಡುವನು, ಮತ್ತು ವಿಜ್ಞಾನಶಾಸ್ತ್ರಗಳ ಅಭ್ಯಾಸವನ್ನು ಉತ್ತೇಜನಪಡಿಸುವನು.

ಕ್ರಿ. ಪೂ. ೩೮೪ರಲ್ಲಿ ಸ್ಟಾಗಿರ ಎಂಬ ಗ್ರೀಕ್ ಪಟ್ಟಣದಲ್ಲಿ ಮ್ಯಾಸಿಡನ್ ದೇಶದ ದೊರೆಯಾದ ಫಿಲಿಪ್ ಎಂಬವನ ಆಸ್ಥಾನ ವೈದ್ಯನಾದ ನೈಕೊಮಾಕಸ್ ಎಂಬವನ ಮಗನಾಗಿ ಅರಿಸ್ಟಾಟಲನು ಜನಿಸಿದನು. ಹದಿನೇಳು ವಯಸ್ಸಾಗುತ್ತಲೇ ಈತನು ಪ್ಲೇಟೋವಿನ ಪಾಠಶಾಲೆಯನ್ನು ಸೇರಿದವನಾಗಿ ಇಪ್ಪತ್ತು ವರುಷಗಳಕಾಲ ವಿದ್ಯಾರ್ಥಿಯಾಗಿಯೂ ಬೋಧಕನಾಗಿಯೂ ಇದ್ದನು. ಕ್ರಿ.ಪೂ. ೩೪೭ರಲ್ಲಿ ಪ್ಲೇಟೊ ಮೃತನಾಗಲು ಫಿಲಿಪ್ ದೊರೆಯಿಂದ ಈತನ ಮಗನಾದ ಅಲೆಕ್ಸಾಂಡರ್ (ಕಡೆಯಲ್ಲಿ ಈತನು ಮಹಾಶಯನೆಂದು ಹೆಸರುವಾಸಿಯಾದನು) ಎಂಬವನಿಗೆ ವಿದ್ಯಾಭ್ಯಾಸಮಾಡಿಸುವುದಕ್ಕೋಸ್ಕರ ಕರಸಲ್ಪಟ್ಟವನಾಗಿ ಏಳು ವರುಷಗಳ ಕಾಲ ಆತನ ವಿದ್ಯಾಗುರುವಾಗಿದ್ದನು. ತದನಂತರದಲ್ಲಿ ಅರಿಸ್ಟಾಟಲನು ಅಥೆನ್ಸ್ ನಗರಕ್ಕೆ ಹಿಂದಿರುಗಿ ಬಂದು ಅಲ್ಲಿ "ದಿ ಲಿಷಿಯಮ್" ಎಂಬ ಪಾಠಶಾಲೆಯೊಂದನ್ನೇರ್ಪಡಿಸಿದನು. ಈತನು ಪಾಠ ಹೇಳುವಾಗಶತಪಥತಿರುಗುವವಾಡಿಕೆಯನ್ನಿಟ್ಟುಕೊಂಡಿದ್ದನು.ಇದರಿಂದ ಈತನ ಪಾಠಶಾಲೆಗೆ "ಶತಪಥಶಾಲೆ"ಯೆಂದೂ, ಈತನ ಶಿಷ್ಯರಿಗೆ "ಶತಪಥಿಕ"ರೆಂದೂ ಸಂಕೇತವುಂಟು. ಕ್ರಿ.ಪೂ. ೩೨೩ರಲ್ಲಿ ಹಠಾತ್ತಾಗಿ ಅಲೆಕ್ಸಾಂಡರನು ಮೃತಿಹೊಂದಲು ಅಥೆನ್ಸ್ ನಗರದಲ್ಲಿದ್ದ ಮ್ಯಾಸಿಡ್ಡ ದೇಶದವಿರೋಧಪಕ್ಷದವರು ಈತನುದೈವದ್ರೋಹಿಯೆಂದುಅರಿಸ್ಟಾಟಲಿನ ಮೇಲೆ ದೋಷಾರೋಪಣೆ ಮಾಡಿದರು. ಅಥೆನ್ಸ್‌ನಗರದವರಿಗೆ ತತ್ವಜ್ಞನನ್ನು ಕೊಲ್ಲಿಸುವ ಎರಡನೆ ಸುಯೋಗವನ್ನು ಕೊಡಕೂಡದೆಂಬ ಕಾರಣದ ಮೇಲೆ ತಾನು ಯೂಬಿಯ ದೇಶಕ್ಕೆ ಓಡಿಹೋದೆನೆಂದು ಅರಿಸ್ಟಾಟಲನು ಹೇಳಿರುವನು! ಇಲ್ಲಿ ಕ್ರಿ.ಪೂ. ೩೨೨ರಲ್ಲಿ ಈ ತತ್ವಜ್ಞನು ಕಾಲವಾದನು.

ಅರಿಸ್ಟಾಟಲನು ಸದ್ಗುಣಸಂಪನ್ನನಾಗಿ, ತನ್ನ ನೀತಿಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟ ಸಮುಗಟ್ಟು, ಸಮತೋಲನ, ಸಮೀಚೀನತೆ ಎಂಬ ಗ್ರೀಕರ ಧ್ಯೇಯವನ್ನು ತನ್ನ ಜೀವಿತದಲ್ಲಿ ಪರಿಪೂರ್ಣವಾಗಿ ಪ್ರಕಾಶಿಸಿದನು. ಈತನ ಸತ್ಯಾಕಾಂಕ್ಷೆ ಅತಿಶಯವಾದುದು; ಈತನ ಅಭಿಪ್ರಾಯ, ತೀರ್ಮಾನಗಳು ನಿಷ್ಪಕ್ಷಪಾತವಾದುವುಗಳಾಗಿಯೂ ವಿಚಾರಪೂರ್ವಕವಾದುವುಗಳಾಗಿಯೂ ಇದ್ದುವು. ಈತನು ತರ್ಕದಲ್ಲಿ ಅಗ್ರ

ಗಣ್ಯನು ; ಓದುವುದರಲ್ಲಿ ಬಹು ಆಸಕ್ತಿಯುಳ್ಳವನು ; ಬಹುಸೂಕ್ಷ್ಮವಾಗಿ ವಸ್ತುಗಳನ್ನು ಪರೀಕ್ಷಿಸತಕ್ಕವನು ; ಅನೇಕ ವಿದ್ಯೆಗಳಲ್ಲಿಯೂ ಕಲೆಗಳಲ್ಲಿಯೂ ಕುಶಲನು. ಈತನ ಭಾಷಾಶೈಲಿಯಾದರೋ ಈತನ ಮನೋವ್ಯಾಪಾರದಂತೆ ಗಂಭೀರವೂ, ಶಾಸ್ತ್ರೀಯವೂ, ರೂಢಿಯಲ್ಲಿರತಕ್ಕುದೂ ಆಗಿ ಸರ್ವವಿಧವಾದ ಅಲಂಕಾರಗಳಿಂದಲೂ ನಿವೃತ್ತಿಯಾದುದೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. ಪ್ರಪಂಚಚರಿತ್ರೆಯಲ್ಲಿ ಅತ್ಯಂತ ಶ್ರೇಷ್ಠರೆನಿಸಿಕೊಂಡ ಜ್ಞಾನಿಗಳಲ್ಲಿ ಈತನೊಬ್ಬನೇ ಸಮಸ್ತ ಶಾಸ್ತ್ರವಿಶಾರದನಾದ ಪಂಡಿತೋತ್ತಮನು. ಈತನು ಅನೇಕ ವಿಷಯಗಳನ್ನು ಕುರಿತು ಶಾಸ್ತ್ರಗಳನ್ನು ಬರೆದು ದಿಗಂತವಿಖ್ಯಾತನಾದನು : ನ್ಯಾಯ, ಅಲಂಕಾರ, ಸಾಹಿತ್ಯ, ಶಕ್ತಿಶಾಸ್ತ್ರ, ಸಸ್ಯಶಾಸ್ತ್ರ, ಪಶ್ವಾದಿಪ್ರಾಣಿಶಾಸ್ತ್ರ, ಮನಶ್ಶಾಸ್ತ್ರ, ಅಧ್ಯಾತ್ಮಶಾಸ್ತ್ರ—ಒಟ್ಟೇನು, ಆಗಿನ ಕಾಲದಲ್ಲಿ ಮಾನವಲೋಕದಲ್ಲಿ ಪರಿಚಿತಗಳಾಗಿದ್ದ ವಿದ್ಯೆ, ಕಲೆಗಳೆಷ್ಟಿದ್ದುವೋ ಅವುಗಳನ್ನೆಲ್ಲಾ ಅರಿತವನಾಗಿ ಅವುಗಳ ವಿಷಯವಾಗಿ ರಸವತ್ತಾದ ಶಾಸ್ತ್ರಗಳನ್ನು ರಚಿಸಿ ಪಂಡಿತಶಿಖಾಮಣಿಯೆಂದೆನಿಸಿ ಆಚಂದ್ರಾರ್ಕವಾಗಿ ಕೀರ್ತಿ ಪಡೆದು ಅಖಿಲ ಪ್ರಪಂಚದ ಗೌರವಕ್ಕೂ, ಆಶ್ಚರ್ಯಕ್ಕೂ, ಪ್ರೀತಿಗೂ ಪಾತ್ರನಾಗಿರುವನು.

ಪ್ಲೇಟೊ ತೋರಿಕೊಟ್ಟಂತೆ ಪ್ರಪಂಚ ಚಿತ್ರಧಾನಾತ್ಮಕವೆಂದೂ, ಅಂತಿಮ ಫಲಪ್ರದವಾದುದೆಂದೂ ಅರಿಸ್ಟಾಟಲನು ಒಪ್ಪುತ್ತಾನೆ. ಪ್ರಪಂಚ ಆಧ್ಯಾತ್ಮಿಕವಾದುದು ; ಪರಸ್ಪರ ಸಂಬಂಧವುಳ್ಳ, ನಿತ್ಯನಿರ್ವಿಕಾರಗಳಾದ ಸಾಮಾನ್ಯ ಅಥವಾ ರೂಪಗಳ ಸಮ್ಮೇಲನಹೊಂದಿದ ಸಮುಚ್ಚಯ. ಈ ರೂಪಗಳೇ ಪ್ರಪಂಚದ ಮೂಲಕಾರಣತತ್ವಗಳು, ಇವುಗಳ ವಾಸನಾಬಲದಿಂದಲೇ ಪ್ರಪಂಚದಲ್ಲಿರತಕ್ಕ ವಸ್ತುಗಳು ತಮ್ಮತಮ್ಮ ವರ್ತಮಾನಸ್ಥಿತಿಯನ್ನುಹೊಂದಿರತಕ್ಕುವು. ಆದರೆ ಈ ರೂಪಗಳು ದೃಶ್ಯಪ್ರಪಂಚದಿಂದ ಪ್ರತ್ಯೇಕಿಸಲ್ಪಟ್ಟು ದೂರದಲ್ಲೆಲ್ಲಿಯೂ ಇಲ್ಲ; ಈ ಪ್ರಪಂಚವಸ್ತುಗಳಲ್ಲಿಯೇ ಇದ್ದು ಅವುಗಳಿಗೆ ಅಂದವನ್ನೂ, ಆಕಾರವನ್ನೂ, ಪ್ರಾಣವನ್ನೂ ಕೊಡುತ್ತವೆ. ಆದುದರಿಂದ ದೃಶ್ಯಪ್ರಪಂಚ ಮತ್ತೆ ಯಾವುದೋ ಬೇರೆಯಾಗಿರುವ ಸತ್ಯಲೋಕದ ಛಾಯಾಮಾತ್ರವಲ್ಲ ; ನಮ್ಮ ಅನುಭವ

ಪ್ರಪಂಚವೇ ನಿಜವಾದ ಲೋಕ; ಇದನ್ನು ಕುರಿತೇ ನಾವು ಯಥಾರ್ಥ ಜ್ಞಾನವನ್ನು ಪಡೆಯಬೇಕಾಗಿರುವುದು; ಸಮ್ಯಗ್ ಜ್ಞಾನ ದೊರೆಯ ಬೇಕಾದರೆ ನಮ್ಮ ಅನುಭವವನ್ನೇ ಆಧಾರವನ್ನಾಗಿಟ್ಟುಕೊಂಡು ಅದರಿಂದ ಮೂಲತತ್ವಗಳ ಶೋಧನೆಗೆ ಪ್ರಯತ್ನಪಡಬೇಕು. ಸತ್ಯಸತ್ವದ ವಿಷಯ ವಾಗಿ ಈ ವಿಧವಾದ ಭಾವನೆ ಇದ್ದುದರಿಂದಲೇ ಅರಿಸ್ಟಾಟಲನಿಗೆ ಪ್ರತ್ಯೇಕ ಗಳಲ್ಲಿಯೂ, ವ್ಯಕ್ತ ವಸ್ತುಗಳಲ್ಲಿಯೂ ಹೆಚ್ಚು ಅಭಿರುಚಿ; ಪ್ರಕೃತಿಶಾಸ್ತ್ರ ಗಳಲ್ಲಿ ಅಧಿಕವಿಶ್ವಾಸ; ವಿಜ್ಞಾನಶಾಸ್ತ್ರದ ಪದ್ಧತಿ—ಕ್ರಮವನ್ನು ಅನು ಸರಿಸಬೇಕೆಂಬ ಅಪೇಕ್ಷೆ. ಆದರೂ ಸಮ್ಯಗ್ ಜ್ಞಾನವೆಂದರೆ ಪ್ರತ್ಯೇಕ ಸಂಗತಿಗಳನ್ನೂ (facts) ಪ್ರಕೃತಿಕಾರ್ಯಗಳನ್ನೂ ತಿಳಿದುಕೊಳ್ಳುವುದು ಮಾತ್ರವಲ್ಲ: ಈ ಕಾರ್ಯಗಳ ಘಟನೆಗೆ ಕಾರಣಗಳೇನು, ಸಂಭವಗಳುಂ ಟಾಗುವಂತೆ ಮಾಡಿದ ಮೂಲತತ್ವಗಳಾವುವು, ಎಂಬ ಈ ರೀತಿಯಾದ ಕಾರ್ಯಕಾರಣಜ್ಞಾನವನ್ನು ಪಡೆಯುವುದೇ ನಮ್ಮ ಗುರಿಯಾಗಿರಬೇಕು. ಈ ವಿಧವಾದ ಕಾರ್ಯಕಾರಣಜ್ಞಾನಕ್ಕೆಲ್ಲಾ ವ್ಯಾಪಕಾರ್ಥದಲ್ಲಿ ತತ್ವಶಾಸ್ತ್ರ ವೆನ್ನಬಹುದು: ಗಣಿತಶಾಸ್ತ್ರವೂ, ಇತರ ಪ್ರತ್ಯೇಕ ಭೌತಶಾಸ್ತ್ರ ಗಳೂ ಈ ಅರ್ಥದಲ್ಲಿ ತತ್ವಶಾಸ್ತ್ರಗಳೆನಿಸುವುವು. ಸಕಲ ವಸ್ತುಗಳ ಮೂಲ ಕಾರಣಗಳನ್ನು ತಿಳಿಸುವುದಕ್ಕೆ ಪ್ರಯತ್ನಪಡುವ ಶಾಸ್ತ್ರವನ್ನೇ ಅರಿಸ್ಟಾಟಲನು ಪ್ರಥಮ ತತ್ವಶಾಸ್ತ್ರವೆನ್ನುವನು (First Philosophy), ನಾವಿದನ್ನು ಅಧ್ಯಾತ್ಮಶಾಸ್ತ್ರವೆನ್ನಬಹುದು. ಪ್ರಪಂಚದ ಸತ್ತನ್ನೂ ಅದರ ಸ್ವರೂಪವನ್ನೂ ತಿಳಿಯಲೆಳಸುವ ಶಾಸ್ತ್ರವೇ ಅಧ್ಯಾತ್ಮಶಾಸ್ತ್ರ; ಇತರ ಶಾಸ್ತ್ರಗಳೆಲ್ಲಾ ಸತ್ತಿನ ಅನೇಕ ರೂಪಗಳನ್ನು ಅಭ್ಯಾಸಮಾಡು ತ್ತವೆ. ಉದಾಹರಣೆಗೆ, ಶಕ್ತಿಶಾಸ್ತ್ರವೆಂದರೆ, ದ್ರವ್ಯರೂಪವನ್ನೂ ಚಲನೆ ಯನ್ನೂ ಹೊಂದಿದ ಸತ್ತನ್ನು ಶೋಧಿಸುವ ಶಾಸ್ತ್ರವೆಂದರ್ಥ. ಈ ರೀತಿ ಯಾದ ಪ್ರತ್ಯೇಕ ವ್ಯಕ್ತ ಶಾಸ್ತ್ರಗಳನ್ನೆಲ್ಲಾ ಅರಿಸ್ಟಾಟಲನು ದ್ವಿತೀಯ ತತ್ವಶಾಸ್ತ್ರಗಳೆಂದು ಕರೆಯುವನು.

ಇದಲ್ಲದೆ ಅರಿಸ್ಟಾಟಲನು ಸಿದ್ಧಾಂತಗಳೇ ಪ್ರಧಾನವಾಗಿರುವ ಗಣಿತಶಾಸ್ತ್ರ, ಶಕ್ತಿಶಾಸ್ತ್ರ, ಅಧ್ಯಾತ್ಮಶಾಸ್ತ್ರ, ಮುಂತಾದ ಜ್ಞಾನಶಾಸ್ತ್ರ ಗಳೆಂದೂ, ಕಾರ್ಯವೇ ಪ್ರಧಾನವಾಗಿರುವ ಧರ್ಮಶಾಸ್ತ್ರ, ರಾಜನೀತಿ

ಶಾಸ್ತ್ರ ಮೊದಲಾದ ಕರ್ಮಶಾಸ್ತ್ರಗಳೆಂದೂ, ಮತ್ತೂ ಚಿತ್ರಕಲೆ, ಯಂತ್ರಶಾಸ್ತ್ರ ಮೊದಲಾದ ಫಲೋತ್ಪತ್ತಿ ಪ್ರಧಾನವಾದ ನಿರ್ಮಾಣಶಾಸ್ತ್ರ ಗಳೆಂದೂ ಶಾಸ್ತ್ರಗಳನ್ನು ಮೂರು ವಿಧಗಳಾಗಿ ವಿಂಗಡಿಸಿದನು.

## ಅರಿಸ್ಟಾಟಲನ ನ್ಯಾಯಶಾಸ್ತ್ರ (Logic or Theory of Knowledge)

ಜ್ಞಾನವನ್ನು ಪಡೆಯುವ ಮಾರ್ಗವನ್ನು ವಿವರಿಸುವುದೇ ನ್ಯಾಯದ ಗುರಿ. ಸಾಕ್ರಟೀಸನೂ ಪ್ಲೇಟೋವೂ ನ್ಯಾಯುವನ್ನು ಕುರಿತು ವಿಚಾರ ಮಾಡಿದ್ದರೂ ಅದನ್ನು ಕೂಲಂಕಷವಾಗಿ ಶೋಧಿಸಿ ವಿವರಿಸಲು ಅರಿಸ್ಟಾಟಲನೇ ಮೊದಲನೆಯವನು. ಈತನು ಶಾಸ್ತ್ರೀಯವಾದ ನ್ಯಾಯ ದರ್ಶನವನ್ನು ಸ್ಥಾಪಿಸಿದನೆಂದು ಹೇಳಬಹುದು ; ಸಮ್ಯಗ್‌ಜ್ಞಾನವನ್ನು ಸಂಪಾದಿಸಲು ನ್ಯಾಯ ಅತಿ ಮುಖ್ಯವಾದ ಸಾಧನವಾದುದರಿಂದ ಅದನ್ನು ವಿವರವಾಗಿ ವಿಮರ್ಶೆಮಾಡಿದ ಹೊರತು ವಸ್ತುತತ್ವಶಾಸ್ತ್ರ ಅಥವಾ ಅಧ್ಯಾತ್ಮಶಾಸ್ತ್ರವನ್ನು ನಿರ್ಣಯಿಸಲು ಅಸಾಧ್ಯವೆಂದು ಈತನ ಅಭಿಪ್ರಾಯ. ಆದುದರಿಂದ ನ್ಯಾಯುವನ್ನು ತತ್ವಶಾಸ್ತ್ರದ ಪೀಠಿಕೆಯೆಂದು ಹೇಳಬಹುದು.

ನಮ್ಮ ಭಾವಗಳ ರೂಪ ಮತ್ತು ವಿಷಯ, ನಾವು ಜ್ಞಾನವನ್ನು ಪಡೆಯುವ ಮಾನಸಿಕ ಕ್ರಮಗಳು—ಇವುಗಳ ಶೋಧನೆಯೇ ನ್ಯಾಯದ ಮುಖ್ಯ ಕರ್ತವ್ಯ. ವಿಷಯುವನ್ನು ಪರಿಶೀಲಿಸಿ ಶಾಸ್ತ್ರೀಯವಾಗಿ ಸಾಧಿಸಿ ಕೊಡುವುದೇ, ಜಾತಿಯಿಂದ ಪ್ರತ್ಯೇಕವನ್ನು ನಿರ್ಧರಿಸುವುದೇ, ಉಪಾಧಿ ಯುಕ್ತವಾದುವುಗಳನ್ನು—"ಕಾರ್ಯ"ಗಳನ್ನು—ತತ್ಕಾರಣಗಳಿಂದ ದೊರ ಕಿಸಿಕೊಳ್ಳುವುದೇ, ಚಿಂತನೆಯೆನಿಸುವುದು. ಪ್ರಮೇಯಗಳನ್ನು (Judgment) ಒಳಗೊಂಡಿರುವ ಚಿಂತಾಕ್ರಮವೇ ಅನುಮಾನ ಅಥವಾ ನ್ಯಾಯ (Inference); ಈ ಪ್ರಮೇಯಗಳನ್ನು ಭಾಷೆಯ ಮೂಲಕ ವ್ಯಕ್ತಪಡಿಸಲು ವಾಕ್ಯಗಳಾಗುವುವು (Propositions); ಭಾವಗಳ (Concepts) ಸಮು ದಾಯವೇ ಪ್ರಮೇಯ, ಅಥವಾ ಪ್ರತಿಜ್ಞೆ ; ಈ ಭಾವಗಳನ್ನು ಶಬ್ದಗಳ ಮುಖೇನ ಸೂಚಿಸಲು ಪದಗಳಾಗುವುವು (Terms). ಪ್ರಮೇಯಗಳ ಸ್ವರೂಪ ಮತ್ತು ವಿವಿಧ ಜಾತಿಗಳು, ಪರಸ್ಪರ ಅವುಗಳು ಹೊಂದಿರುವ

ಸಂಬಂಧಗಳು, ಬಗೆಬಗೆಯ ಪರೀಕ್ಷಾಕ್ರಮಗಳು,(Demonstrations)— ಇವೇ ಮೊದಲಾದ ವಿಷಯಗಳನ್ನು ಹೆಚ್ಚು ಕಡಮೆ ಈಗಿನ ಕಾಲದ ತರ್ಕ ಶಾಸ್ತ್ರಗಳಲ್ಲಿ ವಿವರಿಸುವಂತೆಯೇ ಅರಿಸ್ಟಾಟಲನು ತನ್ನ ನ್ಯಾಯಶಾಸ್ತ್ರದಲ್ಲಿ ಚರ್ಚಿಸುತ್ತಾನೆ. ಲಕ್ಷಣಸ್ವರೂಪ (Definition), ಲಕ್ಷಣನಿರೂಪಣ ವಿಧಿಗಳು ಮತ್ತು ಸರ್ವಭಾವಮೂಲಗಳಾದ "ಪದಾರ್ಥ"ಗಳು(Categories) —ಇವೂ ಸಹ ಅರಿಸ್ಟಾಟಲನ ನ್ಯಾಯದಲ್ಲಿ ಕಂಡುಬರುವುವು.

ಪ್ಲೇಟೊ ಮರೆತುಹೋಗಿದ್ದ "ತರ್ಕವ್ಯಕ್ತವಾದ ಪರೀಕ್ಷಾಕ್ರಮ" ವನ್ನು(Syllogism) ಅರಿಸ್ಟಾಟಲನು ವಿವರವಾಗಿ ಹೇಳುತ್ತಾನೆ. ನ್ಯಾಯ ರೂಪವಾದ ತರ್ಕವನ್ನು ಕಂಡುಹಿಡಿದು ಅದಕ್ಕೆ ತರ್ಕವೆಂದು ಹೆಸರಿಟ್ಟವನು ಈತನೇ. ನಿಶ್ಚಿತಗಳಾದ ಕೆಲವು ಹೇತುವಾಕ್ಯ(ಅವಯವ)ಗಳ ಸಹಾಯ ದಿಂದ ಹೊಸದಾದ ಸಿದ್ಧಾಂತ (conclusion, ಅನುಮಿತಿ, ನಿಗಮನ) ವೊಂದನ್ನು ಸಾಧಿಸಿಕೊಡುವ ನ್ಯಾಯಕ್ಕೆ ತರ್ಕವೆಂದು (Syllogism) ಹೆಸರು. ನಿಗಮನ ಪೂರ್ವವಾಕ್ಯಗಳಿಂದ ನಿಯತವಾದ ರೀತಿಯಲ್ಲಿ ಸಾಧ್ಯ ವಾಗಬೇಕು. ತರ್ಕದಲ್ಲಿ ಸಾಮಾನ್ಯವಿಧಿಗಳಿಂದ ಪ್ರತ್ಯೇಕಾಂಶಗಳನ್ನು ಸಾಧಿಸುವುದರಿಂದ ಈ ವಿಧವಾದ ನ್ಯಾಯಕ್ಕೆ ಅನುಮಾನ (Deductive Inference) ಎಂದು ಹೆಸರು. ನಮ್ಮ ಅನುಭವದಲ್ಲಿ ಕಂಡುಬಂದ ಅನೇಕ ಪ್ರತ್ಯೇಕವಿಷಯಗಳ ಆಧಾರದ ಮೇಲೆ ನಾವು ಹೊಸದಾದೊಂದು ಸಾಮಾನ್ಯವಿಧಿಯನ್ನು ಸಾಧಿಸಿದರೆ ಈ ತೆರನಾದ ನ್ಯಾಯಕ್ಕೆ ವ್ಯಾಪ್ತಿ ಮಾರ್ಗ(Induction)ಎಂದು ಹೆಸರು. ವ್ಯಾಪ್ತಿ ನಿಶ್ಚಯಜ್ಞಾನವನ್ನು ಕೊಡ ಬೇಕಾದರೆ ಸಿದ್ಧಾಂತಕ್ಕೆ(conclusion)ಸಂಬಂಧಪಟ್ಟ ಪ್ರತ್ಯೇಕ ಸಂಗತಿ ಗಳೆಲ್ಲವನ್ನೂ (individual facts) ಆಮೂಲಾಗ್ರವಾಗಿ ಪರೀಕ್ಷಿಸಬೇಕು.

ಇದು ಅನೇಕವೇಳೆ ದುಸ್ಸಾಧ್ಯವಾದುದರಿಂದ ಶಾಸ್ತ್ರೀಯವಾದ ಪ್ರಮಾಣ ಅಥವಾ ಪರಿಕ್ಷಾಕ್ರಮ ತರ್ಕರೂಪವಾದುದೇ ಸರಿ (Syllogism). ಮೇಲೆ ಹೇಳಿದಂತೆ ನಿಗಮನ ನಿಜವಾಗಿರಬೇಕಾದರೆ ಅದು ಅವಯುವಗಳಿಂದ (members) ಅವಶ್ಯಕವಾಗಿ ಹೊರಬೀಳಬೇಕು. ಈ ಅವಯುವಗಳೂ ಸಹ ಇತರ ಪೂರ್ವಪಕ್ಷಗಳಿಂಡ ಅವಶ್ಯಕವಾಗಿ ಹೊರಬೀಳುವಂತೆ ಸಾಧಿಸಲ್ಪಡಬೇಕು, ಮತ್ತು ಸ್ವರೂಪೇಣ ಸಾರ್ವತ್ರಿಕ

ಗಳಾಗಿರಬೇಕು(universals). ಅಂದರೆ ಒಂದು ಜಾತಿಯಲ್ಲಿರುವ ಪ್ರತ್ಯೇಕ ಸಂಗತಿಗಳಿಗೆಲ್ಲಾ ಅನ್ವಯಿಸುವಂತಿರಬೇಕು. ಹೇಗೆಂದರೆ ಉಷ್ಣ ಪದಾರ್ಥ ಗಳನ್ನು ಹಿಗ್ಗಿಸುವುದು ಎಂಬ ಸಿದ್ಧಾಂತವನ್ನು ತೆಗೆದುಕೊಳ್ಳೋಣ. ಈ ಪ್ರಕೃತಿಕಾರ್ಯ ನಾವು ಕಾಣಬಹುದಾದ ಪ್ರತಿ ಒಂದು ಪದಾರ್ಥದ ವಿಷಯದಲ್ಲಿಯೂ ನಿಜವಾಗಿ ಕಂಡುಬರಬೇಕು. ಈ ವಿಧಿ ವಸ್ತುಜಾತಿ ಯಲ್ಲಿರುವ ಪ್ರತಿಯೊಂದು ಪ್ರತ್ಯೇಕಕ್ಕೂ ಅನ್ವಯಿಸುವಂತಿರಬೇಕು. ಇಂಥ ಸಾಮಾನ್ಯತತ್ವಗಳಿಗೆ ಸಾರ್ವತ್ರಿಕಗಳೆಂದು (universals) ಹೆಸರು. ಯಾವ ವಿಷಯದಲ್ಲಿಯೇ ಆಗಲಿ ಪೂರ್ಣಪರೀಕ್ಷೆಯನ್ನು ಪಡೆಯಬೇಕಾ ದರೆ ನ್ಯಾಯರೂಪವಾದ ತರ್ಕವನ್ನೇ ಪ್ರಯೋಗಿಸಬೇಕು. ಏಕೆಂದರೆ ನ್ಯಾಯದಲ್ಲಿ ದೊರಕುವ ನಿಗಮನಗಳೆಲ್ಲವೂ ಪೂರ್ವಪಕ್ಷಗಳಿಂದ ಅವಶ್ಯಕ ವಾಗಿ ಹೊರಬೀಳುತ್ತವೆ. ಈ ಪೂರ್ವಪಕ್ಷಗಳೂ ಕೂಡ ತಮ್ಮ ನಿಜತ್ವಕ್ಕೆ ಪ್ರತ್ಯೇಕವಾದ ಇತರ ಪೂರ್ವಪಕ್ಷಗಳನ್ನು ಅವಲಂಬಿಸಿರುತ್ತವೆ. ಆದರೆ ಈ ವಿಧವಾದ ಅನ್ಯೋನ್ಯಾಶ್ರಯ ಅನವಸ್ಥೆಯಾಗಿ ಅಂದರೆ ಕೊನೆಗಾಣದೆ ಹೋಗಲಾರದು; ಆದುದರಿಂದ ಕಟ್ಟಕಡೆಯಲ್ಲಿ ನಾವು ಅನುಮಾನದಿಂದ ಸಾಧಿಸಲಶಕ್ಯವಾಗಿರುವ ಕೆಲವು ಪರತತ್ವಗಳನ್ನು ಸೇರಲೇಬೇಕು. ಇಂಥ ಅಂತ್ಯತತ್ವಗಳು ಇವುಗಳಿಂದ ಲಬ್ಧವಾಗಬಹುದಾದ ಸಾಮಾನ್ಯತತ್ವ ಗಳಿಗಿಂತಲೂ ಅಧಿಕ ನಿಶ್ಚಯಗಳಾಗಿರುವುವು. ಈ ತೆರನಾದ ಪರೀಕ್ಷಾ ತೀತಗಳಾದ, ಹೇತುವಿನ ಆಧಾರವನ್ನು ಬಯಸದಿರುವ, ಅಪರೋಕ್ಷ ಅಥವಾ ವೀತ(direct)ತತ್ವಗಳು ನಮ್ಮ ಅನುಭವದಲ್ಲುಂಟು; ಉದಾ ಹರಣೆಗೆ—ಗಣಿತಶಾಸ್ತ್ರದ ಸೂತ್ರಗಳು,ಸ್ವಭಾಧಾ—ಅಥವಾ ಸ್ವವಿರೋಧ ನಿಷೇಧವೆಂಬ(Law of Non-contradiction: ಎಂದರೆ ಒಂದೇ ವಸ್ತುವಿನ ವಿಚಾರವಾಗಿ ಏಕಕಾಲದಲ್ಲಿಯೇ ಪರಸ್ಪರ ವಿರೋಧಾರ್ಥಗಳನ್ನು ಹೇಳ ಕೂಡದೆನ್ನುವ) ಚಿಂತನೆಯ ಮೂಲತತ್ವ. ಪ್ರತಿ ಒಂದು ಶಾಸ್ತ್ರದಲ್ಲಿಯೂ ಆ ಶಾಸ್ತ್ರಕ್ಕೆ ಸಂಬಂಧಪಟ್ಟಂಥ ಇಂತಹ ಸ್ವತಃಪ್ರಾಮಾಣ್ಯಗಳಾದ ವೀತತತ್ವಗಳನೇಕವುಂಟು. ಅಲ್ಲದೆ ಎಲ್ಲಾ ಶಾಸ್ತ್ರಗಳಿಗೂ ಸರ್ವಸಾಮಾನ್ಯ ವಾದ, ಅಧ್ಯಾತ್ಮ ಅಥವಾ ಪ್ರಥಮತತ್ವಶಾಸ್ತ್ರದ ಸಾರ್ವತ್ರಿಕ ತತ್ವಗಳೂ ಸಹ ಇಂತಹ ಅಪರೋಕ್ಷ (intuitive) ತತ್ವಗಳೆಂದೇ ಹೇಳಬೇಕು.

ಮೇಲೆ ವಿವರಿಸಿದಂತಹ ಪರತತ್ವಗಳೆಲ್ಲ ಚಿತ್ಪ್ರಪಂಚದಲ್ಲಿಯೇ ಅಡಕವಾಗಿರುವುವು; ಅವುಗಳನ್ನು ನಮ್ಮ ಜ್ಞಾನಶಕ್ತಿಯ ವೀತದರ್ಶನ ಗಳೆಂದು (direct perception) ಹೇಳಬಹುದು. ಇಂದ್ರಿಯಾವಲೋಕನ ಅಥವಾ ಪ್ರತ್ಯೇಕಗಳ ಪ್ರತ್ಯಕ್ಷದಿಂದ (ದರ್ಶನ, sense-perception) ಜನಿಸಿ ಸಾಮಾನ್ಯ ಭಾವಗಳನ್ನು ಹೊಂದತಕ್ಕ ವ್ಯಾಪ್ತಿಜ್ಞಾನದಿಂದಲೂ (Induction) ಪರತತ್ವಗಳನ್ನು ಸಿದ್ಧಮಾಡಿಕೊಳ್ಳಬಹುದು. ಜ್ಞಾನಶಕ್ತಿ ಅನೇಕ ಪ್ರತ್ಯೇಕಗಳಲ್ಲಿರುವ ಸಾಮಾನ್ಯಗುಣವನ್ನು—ಅವುಗಳ ರೂಪ ವನ್ನು—ಪ್ರತ್ಯೇಕಿಸಿ ಅದನ್ನೇ ಪರಾಮರ್ಶಿಸಬಲ್ಲುದು. ಇಂಥ ರೂಪಗಳೇ ವಸ್ತುವಿನ ನಿಜವಾದ ಸತ್ವ; ಅವುಗಳೇ ಸತ್ಯ. ಆದರೆ ವಸ್ತುಸತ್ವ ಮಾತ್ರವಾಗಿರದೆ ಅವು ಮಾನವನ ಜ್ಞಾನ ಶಕ್ತಿಯ ಮೂಲತತ್ವಗಳೂ ಹೌದು; ಅನುಭವದಿಂದ (experience) ಉತ್ಪತ್ತಿಯಾಗದ, ಮಾನವನ ಚಿತ್ಪ್ರಪಂಚದಲ್ಲಿ ರೂಢಮೂಲವಾಗಿರುವ, ಬುದ್ಧ್ಯಾರೂಢ(a priori) ತತ್ವ ಗಳೆಂದು ಹೇಳಬಹುದು. ಆದರೂ ಇವು ನಮ್ಮ ಮನಸ್ಸಿನಲ್ಲಿ ಪ್ರಕಾಶಿಸ ಬೇಕಾದರೆ — ಅವುಗಳ ಸ್ಥಿತಿತ್ವ ನಮ್ಮ ಮನಸ್ಸಿನಲ್ಲಿ ಹೊಳೆಯ ಬೇಕಾದರೆ—ಅನುಭವ ಅವಶ್ಯಕ. ಅಂದರೆ ಅವ್ಯಕ್ತವಾಗಿ ಮನಸ್ಸಿನಲ್ಲಡ ಗಿರುವ ಜ್ಞಾನತತ್ವಗಳನ್ನು (Principles of Reason) ಅನುಭವ ವ್ಯಕ್ತಿ ಗೊಳಿಸುವುದೆಂದು ತಾತ್ಪರ್ಯ. ಈ ಕಾರಣದಿಂದ ಈ ಪರತತ್ವಗಳು ಸತ್ಯಸತ್ವದ ರೂಪಗಳೆಂತೋ ಹಾಗೆಯೇ ನಮ್ಮ ಚಿಂತನೆಯ ರೂಪ ಗಳೆಂದೂ ಹೇಳಬಹುದು. ಚಿಂತನೆಯೂ(Thought) ಸತ್ತೂ ಸಮ್ಮಿಳಿತ ವಾಗುವುವು; ಚಿಂತನೆ ಸತ್ತಿನೊಡನೆ ಸರಿಹೋಗುವುದಾದರೆ ಸತ್ಯ ವೆಂದೆನಿಸುವುದು.

ಈ ರೀತಿಯಾಗಿ ನಮ್ಮ ಜ್ಞಾನ ಪ್ರತ್ಯೇಕದರ್ಶನವಾದ ಪ್ರತ್ಯಕ್ಷ ದಿಂದ ಪ್ರಾರಂಭಿಸಿ ಸಾರ್ವತ್ರಿಕ ತತ್ವಗಳನ್ನು ಅಥವಾ ಸಾಮಾನ್ಯಗಳನ್ನು ಸೇರುವುದು. ಸಾರ್ವತ್ರಿಕಗಳು ನಮ್ಮ ಚಿಂತನೆಯ ಅಂತ್ಯಸ್ಥಾನವಾದರೂ ಪ್ರಕೃತಿಯ ಮೂಲ ತತ್ವಗಳಾಗಿರುವುವು.

ಆದುದರಿಂದ ವ್ಯಾಪ್ತಿ ಮಾರ್ಗ (Induction) ಅನುಮಾನಕ್ಕೆ (ಪರಾಮರ್ಶ, ನ್ಯಾಯ = deduction) ದಾರಿ ತೋರಿಸುವುದು. ಸಾರ್ವತ್ರಿಕ

ಗಳಿಂದ ಪ್ರತ್ಯೇಕಗಳನ್ನು ಪರಾಮರ್ಶಿಸುವುದೇ, ನಿಗಮನಕ್ಕೂ ಸಕಾರಣ ವಾದ ನಿದರ್ಶನವನ್ನು (demonstration) ತೋರಿಕೊಡುವುದೇ, ಶಾಸ್ತ್ರದ ಮುಖ್ಯೋದ್ದೇಶವಾಗಿರಬೇಕು. ಆದರೆ ಈ ವಿಧವಾದ ಪರೀಕ್ಷೆ ತೋರ್ಪಡಬೇಕಾದರೆ ಮೊದಲು ವ್ಯಾಪ್ತಿ ಮಾರ್ಗ ತನ್ನ ಕೆಲಸವನ್ನು ಪೂರೈಸಿರಬೇಕು: ನಮ್ಮ ಚಿತ್ತಪ್ರಪಂಚದಲ್ಲಡಗಿರುವ ಸಾಮಾನ್ಯತತ್ವ ಗಳು ಅನುಭವದಿಂದ ಪ್ರಕಾಶವಾಗಬೇಕು. ಅನುಭವದಿಂದ ಪ್ರೇರಿತ ವಾದ ಜ್ಞಾನ ಚಿತ್ತಪ್ರಪಂಚದಲ್ಲಿ ಪೂರ್ವದಲ್ಲಿಯೇ ಅವ್ಯಕ್ತರೂಪದಲ್ಲಿಲ್ಲ ದಿದ್ದರೆ, ಬುದ್ಧ್ಯಾರೂಢವಾಗಿಲ್ಲದಿದ್ದರೆ, ಅದು ಸತ್ಯಜ್ಞಾನವೆಂದು ನಿರ್ಧರಿ ಸುವುದೇ ಕಷ್ಟವಾಗುವುದು. ಆದುದರಿಂದ ವ್ಯಾಪ್ತಿಮಾರ್ಗವೂ ನ್ಯಾಯ (ಪರಾಮರ್ಶ) ಮಾರ್ಗವೂ ಪರಸ್ಪರ ಸಹಾಯಕಾರಿಗಳಾಗಿರಬೇಕು; ಅನುಭವವಾದವೂ (Empiricism) ಸಾಂಖ್ಯ (ಬುದ್ಧಿಪ್ರಾಮಾಣ್ಯ) ವಾದವೂ (Rationalism) ಅವಿರುದ್ಧವಾದುವು;—ಇದೇ ಅರಿಸ್ಟಾಟಲನ ತತ್ವಶಾಸ್ತ್ರದ ಪ್ರಧಾನ ಸೂತ್ರ.

ಅರಿಸ್ಟಾಟಲನು ತನ್ನ ನ್ಯಾಯಶಾಸ್ತ್ರದಲ್ಲಿ "ಪದಾರ್ಥ"ಗಳ ವಿಷಯವಾಗಿಯೂ ಬರೆದಿರುತ್ತಾನೆ. ಹಿಂದೂ ವೈಶೇಷಿಕ ಸಿದ್ಧಾಂತದಲ್ಲಿ ಉಪಯೋಗಿಸಿರುವ ಪದಾರ್ಥವೆಂಬ ತತ್ವಕ್ಕೂ ಅರಿಸ್ಟಾಟಲನ ಪದಾ ರ್ಥಕ್ಕೂ ಇರುವ ವ್ಯತ್ಯಾಸವನ್ನು ಮುಂದೆ ತೋರಿಕೊಡುವೆವು. ಅರಿ ಸ್ಟಾಟಲನ ನ್ಯಾಯದಲ್ಲಿ ಯಾವ ಪಕ್ಷದ ವಿಷಯವಾಗಿಯೇ ಆಗಲಿ, ಎಷ್ಟು ವಿಧದಲ್ಲಿ ಸರ್ವಸಾಮಾನ್ಯಗಳಾದ ಆಖ್ಯಾತರೂಪಗಳನ್ನು ನಾವು ಸ್ಥಾಪಿಸಬಹುದೋ, ಹೇಳಬಹುದೋ, ಅಂಥಾ ವಿಶೇಷಣರೂಪಗಳಿಗೆ ಪದಾರ್ಥಗಳೆಂದು ಹೆಸರು. ದೇವದತ್ತ ಎಂಬ ಕರ್ತೃವೊಂದನ್ನು (ಪಕ್ಷ ವನ್ನು) ತೆಗೆದುಕೊಂಡರೆ ಅವನ ವಿಷಯವಾಗಿ ನಾವು ಕೆಲವು ವಿಶೇಷಣ ಗಳನ್ನು ಹೇಳಬಹುದು. ದೇವದತ್ತ ಎಂದರೇನು ಎಂದು ಕೇಳಿದರೆ ಅವನು ಮನುಷ್ಯನೆಂದು ಉತ್ತರವೀಯಬಹುದು. ಇದು ದೇವದತ್ತನ ವಸ್ತುತ್ವವನ್ನು ಸೂಚಿಸುತ್ತದೆ. ಆತನು ಯಾವರೀತಿಯಲ್ಲಿದಾನೆಂದು ಪ್ರಶ್ನಿಸಿದರೆ ಬೆಳ್ಳಗಿದಾನೆನ್ನಬಹುದು. ಇದು ಆತನು ಯಾವರೀತಿಯಲ್ಲಿ ಸೃಜಿಸಲ್ಪಟ್ಟಿದಾನೆಂಬುದನ್ನು ತೋರ್ಪಡಿಸುವುದು (ಗುಣ). ಅವನು

ಮೇಲೆ ವಿವರಿಸಿದಂತಹ ಪರತತ್ವಗಳೆಲ್ಲ ಚಿತ್ರಪಂಚದಲ್ಲಿಯೇ ಅಡಕವಾಗಿರುವುವು; ಅವುಗಳನ್ನು ನಮ್ಮ ಜ್ಞಾನಶಕ್ತಿಯ ವೀತದರ್ಶನ ಗಳೆಂದು (direct perception) ಹೇಳಬಹುದು. ಇಂದ್ರಿಯಾವಲೋಕನ ಅಥವಾ ಪ್ರತ್ಯೇಕಗಳ ಪ್ರತ್ಯಕ್ಷದಿಂದ (ದರ್ಶನ, sense-perception) ಜನಿಸಿ ಸಾಮಾನ್ಯ ಭಾವಗಳನ್ನು ಹೊಂದತಕ್ಕ ವ್ಯಾಪ್ತಿಜ್ಞಾನದಿಂದಲೂ (Induction) ಪರತತ್ವಗಳನ್ನು ಸಿದ್ಧಮಾಡಿಕೊಳ್ಳಬಹುದು. ಜ್ಞಾನಶಕ್ತಿ ಅನೇಕ ಪ್ರತ್ಯೇಕಗಳಲ್ಲಿರುವ ಸಾಮಾನ್ಯಗುಣವನ್ನು—ಅವುಗಳ ರೂಪ ವನ್ನು—ಪ್ರತ್ಯೇಕಿಸಿ ಅದನ್ನೇ ಪರಾಮರ್ಶಿಸಬಲ್ಲುದು. ಇಂಥ ರೂಪಗಳೇ ವಸ್ತುವಿನ ನಿಜವಾದ ಸತ್ವ; ಅವುಗಳೇ ಸತ್ಯ. ಆದರೆ ವಸ್ತುಸತ್ವ ಮಾತ್ರವಾಗಿರದೆ ಅವು ಮಾನವನ ಜ್ಞಾನ ಶಕ್ತಿಯ ಮೂಲತತ್ವಗಳೂ ಹೌದು; ಅನುಭವದಿಂದ (experience) ಉತ್ಪತ್ತಿಯಾಗದ, ಮಾನವನ ಚಿತ್ರಪಂಚದಲ್ಲಿ ರೂಢಮೂಲವಾಗಿರುವ, ಬುದ್ಧ್ಯಾರೂಢ(a priori)ತತ್ವ ಗಳೆಂದು ಹೇಳಬಹುದು. ಆದರೂ ಇವು ನಮ್ಮ ಮನಸ್ಸಿನಲ್ಲಿ ಪ್ರಕಾಶಿಸ ಬೇಕಾದರೆ — ಅವುಗಳ ಸ್ಥಿತಿತ್ವ ನಮ್ಮ ಮನಸ್ಸಿನಲ್ಲಿ ಹೊಳೆಯ ಬೇಕಾದರೆ—ಅನುಭವ ಅವಶ್ಯಕ. ಅಂದರೆ ಅವ್ಯಕ್ತವಾಗಿ ಮನಸ್ಸಿನಲ್ಲಡ ಗಿರುವ ಜ್ಞಾನತತ್ವಗಳನ್ನು (Principles of Reason)ಅನುಭವ ವ್ಯಕ್ತ ಗೊಳಿಸುವುದೆಂದು ತಾತ್ಪರ್ಯ. ಈ ಕಾರಣದಿಂದ ಈ ಪರತತ್ವಗಳು ಸತ್ಯಸತ್ವದ ರೂಪಗಳೆಂತೋ ಹಾಗೆಯೇ ನಮ್ಮ ಚಿಂತನೆಯ ರೂಪ ಗಳೆಂದೂ ಹೇಳಬಹುದು. ಚಿಂತನೆಯೂ(Thought) ಸತ್ತೂ ಸಮ್ಮಿಳಿತ ವಾಗುವುವು; ಚಿಂತನೆ ಸತ್ತಿನೊಡನೆ ಸರಿಹೋಗುವುದಾದರೆ ಸತ್ಯ ವೆಂದೆನಿಸುವುದು.

ಈ ರೀತಿಯಾಗಿ ನಮ್ಮ ಜ್ಞಾನ ಪ್ರತ್ಯೇಕದರ್ಶನವಾದ ಪ್ರತ್ಯಕ್ಷ ದಿಂದ ಪ್ರಾರಂಭಿಸಿ ಸಾರ್ವತ್ರಿಕ ತತ್ವಗಳನ್ನು ಅಥವಾ ಸಾಮಾನ್ಯಗಳನ್ನು ಸೇರುವುದು. ಸಾರ್ವತ್ರಿಕಗಳು ನಮ್ಮ ಚಿಂತನೆಯ ಅಂತ್ಯಸ್ಥಾನವಾದರೂ ಪ್ರಕೃತಿಯ ಮೂಲ ತತ್ವಗಳಾಗಿರುವುವು.

ಆದುದರಿಂದ ವ್ಯಾಪ್ತಿ ಮಾರ್ಗ (Induction) ಅನುಮಾನಕ್ಕೆ (ಪರಾಮರ್ಶ, ನ್ಯಾಯ = deduction)ದಾರಿ ತೋರಿಸುವುದು. ಸಾರ್ವತ್ರಿಕ

ಗಳಿಂದ ಪ್ರತ್ಯೇಕಗಳನ್ನು ಪರಾಮರ್ಶಿಸುವುದೇ, ನಿಗಮನಕ್ಕೂ ಸಕಾರಣ ವಾದ ನಿದರ್ಶನವನ್ನು (demonstration) ತೋರಿಕೊಡುವುದೇ, ಶಾಸ್ತ್ರದ ಮುಖ್ಯೋದ್ದೇಶವಾಗಿರಬೇಕು. ಆದರೆ ಈ ವಿಧವಾದ ಪರೀಕ್ಷೆ ತೋರ್ಪಡಬೇಕಾದರೆ ಮೊದಲು ವ್ಯಾಪ್ತಿ ಮಾರ್ಗ ತನ್ನ ಕೆಲಸವನ್ನು ಪೂರೈಸಿರಬೇಕು: ನಮ್ಮ ಚಿತ್ತಪ್ರಪಂಚದಲ್ಲಡಗಿರುವ ಸಾಮಾನ್ಯತತ್ವ ಗಳು ಅನುಭವದಿಂದ ಪ್ರಕಾಶವಾಗಬೇಕು. ಅನುಭವದಿಂದ ಪ್ರೇರಿತ ವಾದ ಜ್ಞಾನ ಚಿತ್ತಪ್ರಪಂಚದಲ್ಲಿ ಪೂರ್ವದಲ್ಲಿಯೇ ಅವ್ಯಕ್ತರೂಪದಲ್ಲಿಲ್ಲ ದಿದ್ದರೆ, ಬುದ್ಧ್ಯಾರೂಢವಾಗಿಲ್ಲದಿದ್ದರೆ, ಅದು ಸತ್ಯಜ್ಞಾನವೆಂದು ನಿರ್ಧರಿ ಸುವುದೇ ಕಷ್ಟವಾಗುವುದು. ಆದುದರಿಂದ ವ್ಯಾಪ್ತಿಮಾರ್ಗವೂ ನ್ಯಾಯ (ಪರಾಮರ್ಶ) ಮಾರ್ಗವೂ ಪರಸ್ಪರ ಸಹಾಯಕಾರಿಗಳಾಗಿರಬೇಕು; ಅನುಭವವಾದವೂ (Empiricism) ಸಾಂಖ್ಯ (ಬುದ್ಧಿಪ್ರಾಮಾಣ್ಯ) ವಾದವೂ (Rationalism) ಅವಿರುದ್ಧವಾದುವು;—ಇದೇ ಅರಿಸ್ಟಾಟಲನ ತತ್ವಶಾಸ್ತ್ರದ ಪ್ರಧಾನ ಸೂತ್ರ.

ಅರಿಸ್ಟಾಟಲನು ತನ್ನ ನ್ಯಾಯಶಾಸ್ತ್ರದಲ್ಲಿ "ಪದಾರ್ಥ"ಗಳ ವಿಷಯವಾಗಿಯೂ ಬರೆದಿರುತ್ತಾನೆ. ಹಿಂದೂ ವೈಶೇಷಿಕ ಸಿದ್ಧಾಂತದಲ್ಲಿ ಉಪಯೋಗಿಸಿರುವ ಪದಾರ್ಥವೆಂಬ ತತ್ವಕ್ಕೂ ಅರಿಸ್ಟಾಟಲನ ಪದಾ ರ್ಥಕ್ಕೂ ಇರುವ ವ್ಯತ್ಯಾಸವನ್ನು ಮುಂದೆ ತೋರಿಕೊಡುವೆವು. ಅರಿ ಸ್ಟಾಟಲನ ನ್ಯಾಯದಲ್ಲಿ ಯಾವ ಪಕ್ಷದ ವಿಷಯವಾಗಿಯೇ ಆಗಲಿ, ಎಷ್ಟು ವಿಧದಲ್ಲಿ ಸರ್ವಸಾಮಾನ್ಯಗಳಾದ ಆಖ್ಯಾತರೂಪಗಳನ್ನು ನಾವು ಸ್ಥಾಪಿಸಬಹುದೋ, ಹೇಳಬಹುದೋ, ಅಂಥಾ ವಿಶೇಷಣರೂಪಗಳಿಗೆ ಪದಾರ್ಥಗಳೆಂದು ಹೆಸರು. ದೇವದತ್ತ ಎಂಬ ಕರ್ತೃವೊಂದನ್ನು (ಪಕ್ಷ ವನ್ನು) ತೆಗೆದುಕೊಂಡರೆ ಅವನ ವಿಷಯವಾಗಿ ನಾವು ಕೆಲವು ವಿಶೇಷಣ ಗಳನ್ನು ಹೇಳಬಹುದು. ದೇವದತ್ತ ಎಂದರೇನು ಎಂದು ಕೇಳಿದರೆ ಅವನು ಮನುಷ್ಯನೆಂದು ಉತ್ತರವೀಯಬಹುದು. ಇದು ದೇವದತ್ತನ ವಸ್ತುತ್ವವನ್ನು ಸೂಚಿಸುತ್ತದೆ. ಆತನು ಯಾವರೀತಿಯಲ್ಲಿದಾನೆಂದು ಪ್ರಶ್ನಿಸಿದರೆ ಬೆಳ್ಳಗಿದಾನೆನ್ನಬಹುದು. ಇದು ಆತನು ಯಾವರೀತಿಯಲ್ಲಿ ಸೃಜಿಸಲ್ಪಟ್ಟಿದಾನೆಂಬುದನ್ನು ತೋರ್ಪಡಿಸುವುದು (ಗುಣ). ಅವನು

ಎಷ್ಟು ಎತ್ತರವಾಗಿದಾನೆ? ಐದಡಿ ಎತ್ತರವಿದಾನೆ ಎಂದರೆ ಆತನ ಪರಿಮಾಣವನ್ನು ಹೇಳಿದಂತಾಯಿತು. ಆತನ ಸಂಬಂಧವೇನೆಂದರೆ ಸೋಮಸೇನನಿಗಿಂತಲೂ ದೊಡ್ಡವನು, ಅಥವಾ ಅವನ ಭ್ರಾತೃ ಎಂದು ಕೊಡಬಹುದಾದ ಉತ್ತರ ಆತನ ಸಂಬಂಧವನ್ನು ತೋರಿಸಿಕೊಡುವುದು. ಆತನು ಎಲ್ಲಿದಾನೆ (ಶಾಲೆಯಲ್ಲಿ) ಎಂದರೆ ಆತನಿರುವ ಸ್ಥಳವನ್ನು (ದಿಕ್) ಕೇಳಿದಂತಾಯಿತು.ಆತನು ಊರಿಗೆ ಯಾವಾಗ ಬಂದನೆಂದರೆ ಕಾಲವನ್ನು ಸೂಚಿಸಿದಂತಾಯಿತು. ಆತನೀಗ ಯಾವ ಆಸನವನ್ನು ವಹಿಸಿದ್ದಾನೆ ಎಂದರೆ(ಮಲಗಿದ್ದಾನೆ, ಕುಳಿತಿದ್ದಾನೆ)ಆತನಿರುವ ಮುದ್ರೆಯನ್ನು(ಆಸನ) ಕೇಳಿದಂತಾಯಿತು. ಬಟ್ಟೆ ಹಾಕಿಕೊಂಡಿದಾನೆಯೇ, ಆಯುಧಗಳನ್ನು ಧರಿಸಿಕೊಂಡಿರುವನೇ, ಎಂದರೆ ಆತನು ಈಗಿರತಕ್ಕ ಸ್ಥಿತಿಯನ್ನು ಸೂಚಿಸಿದಂತಾಯಿತು. ಆತನು ಏನು ಮಾಡುತ್ತಾನೆ (ವ್ಯಾಸಂಗಮಾಡುತ್ತಾನೆ, ವ್ಯವಸಾಯಮಾಡುತ್ತಾನೆ) ಎಂಬ ಪ್ರಶ್ನೆ ಆತನು ಮಾಡುವ ಕರ್ಮವನ್ನು ಪ್ರಕಾಶಪಡಿಸುವುದು. ಆತನು ಬಹು ಕಷ್ಟವನ್ನು ಸಹಿಸುತ್ತಿದಾನೆ, ಅಥವಾ ಸುಖಪಡುತ್ತಿದಾನೆ ಎಂಬ ವಾಕ್ಯಗಳು ಆತನ ಅನುಭವ ಅಥವಾ ಕರ್ಮಣಿತ್ವವನ್ನು ವ್ಯಕ್ತಗೊಳಿಸುವುವು. ಈ ಹತ್ತು ಪದಾರ್ಥಗಳ ಮುಖ್ಯ ತತ್ವವೇನೆಂದರೆ, ನಮ್ಮ ಅನುಭವಪ್ರಪಂಚದಲ್ಲಿರುವ ವಸ್ತುಗಳು ದೇಶ ಕಾಲಗಳಲ್ಲಿರುವುವೆಂದೂ, ಅವುಗಳನ್ನು ಎಣಿಸಬಹುದು ಎಂದೂ, ಅವು ಇತರ ವಸ್ತುಗಳೊಡನೆ ಸಂಬಂಧಿಸಿರುವುವೆಂದೂ, ಕರ್ತೃತ್ವದಲ್ಲಿ ಕೆಲಸ ಮಾಡುವುವಲ್ಲದೆ ಕರ್ಮಣಿತ್ವದಲ್ಲಿ ಅನುಭವಗಳನ್ನೂ ಹೊಂದುವುವೆಂದೂ, ಕೆಲವು ಪ್ರಾಮುಖ್ಯವಾದ ಗುಣಗಳನ್ನು, ಹಾಗೆಯೇ ಔಪಾಧಿಕವಾದ ಅಥವಾ ಪ್ರಾಮುಖ್ಯವಲ್ಲದ ಕೆಲವು ಉಪಲಕ್ಷಣಗಳನ್ನೂ, ತಾಳಿರುವುವೆಂದೂ ಹೇಳಿದಹಾಗಾಯಿತು.[೧] ಆದರೆ ಆರಿಸ್ಟಾಟಲನಲ್ಲಿ ಪದಾರ್ಥ

೧. ಆರ್ಯರ ನ್ಯಾಯಸಿದ್ಧಾಂತದ ಪ್ರಕಾರವಾಗಿ ಪದಾರ್ಥವೆಂದರೆ ತರ್ಕಪ್ರಸಂಗಗಳು ಅಥವಾ ತರ್ಕಪ್ರಕರಣಗಳೆಂದು ಹೇಳಬಹುದು: ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ ಮುಂತಾದುವುಗಳೇ ನ್ಯಾಯದ ಪದಾರ್ಥಗಳು. ಆದರೂ ಪ್ರಮೇಯವೆಂಬ ಎರಡನೆಯ ಪದಾರ್ಥದಲ್ಲಿ ತತ್ವಪ್ರಸಂಗಗಳೂ ಸೇರಿರುವುದರಿಂದ ಈ ಪದಾರ್ಥ ವೈಶೇಷಿಕರ ಪದಾರ್ಥಗಳನ್ನು ಹೋಲುವುದೆನ್ನಬಹುದು. ವೈಶೇಷಿಕರ

ವೆನ್ನುವುದು ನಮ್ಮ ಚಿಂತನೆಯ ರೂಪವನ್ನು ಸೂಚಿಸುವುದುಮಾತ್ರವಲ್ಲದೆ ಸತ್ಯಸತ್ವದ ವಿಶೇಷಣಗಳನ್ನೂ ಹೊರಪಡಿಸುತ್ತದೆ. ಮೇಲೆ ಹೇಳಿರುವ ದಶವಿಧರೂಪಗಳು ಸತ್ಯಸತ್ವದಪರವಾಗಿ ನಾವು ಸ್ಥಾಪಿಸಬಹುದಾದ ದಶ ಭಂಗಗಳೆಂದು ಹೇಳಬಹುದು. ಇವುಗಳಲ್ಲೆಲ್ಲಾ ದ್ರವ್ಯವೆಂಬ ಪದಾರ್ಥವೇ ಅತಿ ಮುಖ್ಯವಾದುದರಿಂದ ಉಳಿದವುಗಳೆಲ್ಲವನ್ನೂ ದ್ರವ್ಯದ ವಿಶೇಷಣ ಗಳೆಂದೇ ನಾವೆಣಿಸಬಹುದು. ದ್ರವ್ಯವೆಂದರೆ ವಸ್ತುವಿನ ಸತ್ವವೆಂದರ್ಥ. ಈ ಸತ್ವನ್ನು, ಇಲ್ಲವೆ ಭಾವವನ್ನು, ಕುರಿತು ಹೇಳುವ ಶಾಸ್ತ್ರವೇ ಅಧ್ಯಾತ್ಮಶಾಸ್ತ್ರವೆಂದೆನಿಸುವುದು.

ಮತಾನುಸಾರವಾಗಿ, ಪದಾರ್ಥವೆಂದರೆ ನಾಮರೂಪವುಳ್ಳ ಮತ್ತು ಜ್ಞೇಯವಾದ (ತಿಳಿಯಬಹುದಾದ) ಸಮಸ್ತ ವಸ್ತುಗಳ ವರ್ಗೀಕರಣವೆಂದರ್ಥ. ಈ ಸಾಮಾನ್ಯಾರ್ಥ ದಲ್ಲಿ ವೈಶೇಷಿಕರ ಪದಾರ್ಥಗಳೂ ಅರಿಸ್ಟಾಟಲನ ಪದಾರ್ಥಗಳೂ ಸ್ವಲ್ಪ ಹೆಚ್ಚು ಕಡಮೆ ಒಂದೇ ಎನ್ನಬಹುದು. ಆದರೂ ಎರಡು ಸಿದ್ಧಾಂತಗಳಿಗೂ ಬಹುಮುಖ್ಯವಾದ ವ್ಯತ್ಯಾಸಗಳಿವೆ. ಅರಿಸ್ಟಾಟಲನು ಹಿಂದೆ ವಿವರಿಸಿರುವ ಹತ್ತು ಪದಾರ್ಥಗಳನ್ನು ಲೆಕ್ಕಿಸುವನು; ವೈಶೇಷಿಕರಿಗೆ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳೆಂಬ ಏಳೇ ಪದಾರ್ಥಗಳುಂಟು. ವೈಶೇಷಿಕರ ಪದಾರ್ಥಗಳು ಅರಿಸ್ಟಾಟಲನ ಪದಾರ್ಥಗಳಿಗಿಂತಲೂ ತಾತ್ವಿಕದೃಷ್ಟಿಯಲ್ಲಿ ಮೂಲತರವಾದುವುಗಳಾ ದುದರಿಂದ ಅಧಿಕ ಪ್ರಾಧಾನ್ಯವಾದುವುಗಳು. ಅರಿಸ್ಟಾಟಲನ ಸಿದ್ಧಾಂತ ವಸ್ತು ವೊಂದು ಯಾವಯಾವ ಸ್ಥಿತಿಯಲ್ಲಿರಬಹುದೆಂಬ ವಸ್ತುಸ್ಥಿತಿರೂಪಗಳನ್ನು (modes of being) ಸೂಚಿಸುತ್ತದೆ (ಅವನ ಪದಾರ್ಥಗಳಲ್ಲನೇಕ ಔಪಾಧಿಕವಾದುವುಗಳು); ವೈಶೇಷಿಕರ ಮತ ಪ್ರಪಂಚಪದಾರ್ಥಗಳನ್ನು — ಭವರೂಪಗಳನ್ನು — ಸರ್ವ ಸಾಧಾರಣವಾಗಿ, ಸಾರ್ವತ್ರಿಕರೀತಿಯಲ್ಲಿ, ಯಾವಯಾವ ಪ್ರಕಾರವಾಗಿ ವರ್ಣಿಸ ಬಹುದೆಂಬ ಪ್ರಶ್ನೆಯನ್ನು ಚರ್ಚಿಸುತ್ತದೆ. ಅರಿಸ್ಟಾಟಲನ ಸಿದ್ಧಾಂತ ನ್ಯಾಯಪರ ವಾದುದು (logical); ವೈಶೇಷಿಕರ ಮತ ತಾತ್ವಿಕವಾದುದು (philosophical, metaphysical). ಹೆಸರಿಗೆ ಏಳೇ ಆದರೂ, ಭಾಗವಿಭಾಗಗಳಲ್ಲಿ ವೈಶೇಷಿಕರ ಪದಾರ್ಥ ಗಳು ಅನೇಕವಾಗಿ ಅರಿಸ್ಟಾಟಲನ ಉಳಿದ ಪದಾರ್ಥಗಳನ್ನೆಲ್ಲಾ ಒಳಗೊಂಡಿರುವುವು. ಅಲ್ಲದೆ ಇವರ ಸಮವಾಯ ಮತ್ತು ಅಭಾವವೆಂಬ ಪದಾರ್ಥಗಳು ಅರ್ಥದಲ್ಲಿ ಬಹು ಗಹನವಾಗಿದ್ದು ಪಾಶ್ಚಾತ್ಯರ ತತ್ವಶಾಸ್ತ್ರದಲ್ಲಿ ಯಾವ ಭಾವಗಳೊಡನೆಯೂ ಹೋಲಿಸ ಲಾಗುವುದಿಲ್ಲ. ವೈಶೇಷಿಕರ ವಿಶೇಷವನ್ನು ಪಾಶ್ಚಾತ್ಯರ "Differentia" ಎಂದು ಕರೆಯಬಹುದು.

## ಅಧ್ಯಾಯ ೧೭
## ಅರಿಸ್ಟಾಟಲನ ಅಧ್ಯಾತ್ಮಶಾಸ್ತ್ರ

ನ್ಯಾಯದಲ್ಲಿ ಅರಿಸ್ಟಾಟಲನು ಸತ್ತನ್ನೇ ಪ್ರಧಾನವಾಗೆಣಿಸಿದ ನೆಂದು ಹೇಳಿದೇವೆಯಷ್ಟೆ. ಸತ್ತೆಂಬುದು ಸರ್ವವಸ್ತುಗಳ ಮೂಲತತ್ತ್ವ ವೆಂಬುದನ್ನು ಒತ್ತಿ ಹೇಳಬೇಕಾದುದಿಲ್ಲ. ಇಂಥ ಮೂಲತತ್ತ್ವಗಳನ್ನು ಕುರಿತು ಅರಿಸ್ಟಾಟಲನು ತನ್ನ ಅಧ್ಯಾತ್ಮಶಾಸ್ತ್ರದಲ್ಲಿ ವಿಚಾರಮಾಡಿರು ತ್ತಾನೆ. ನಮ್ಮ ಅನುಭವಹೇತುವಾಗಿರುವ ಈ ದೃಶ್ಯಪ್ರಪಂಚವೆಂಬು ದೇನು? ಇದರ ಅಂತರಾತ್ಮ ಯಾವುದು, ಇದು ಯಾವ ತತ್ತ್ವ ಅಥವಾ ತತ್ತ್ವ ಗಳಿಂದ ಸೃಷ್ಟಿಸಲ್ಪಟ್ಟಿದೆ? ಅಧ್ಯಾತ್ಮಶಾಸ್ತ್ರದ ಪ್ರಥಮ ಪ್ರಶ್ನೆಯೇ ಇದೆಂಬುದನ್ನು ಎಲ್ಲರೂ ಒಪ್ಪಿಕೊಳ್ಳುವರು. ನಾವು ಹಿಂದೆ ಕಂಡಂತೆ ಡೆಮಾಕ್ರಿಟಸನು ಚಲನಶಕ್ತಿಯಿಂದ ಪರಸ್ಪರ ಸಮ್ಮಿಳಿತವಾಗುವ ಸ್ವಭಾವವುಳ್ಳ ಪ್ರಾಕೃತಿಕ ಪರಮಾಣುಗಳೇ ಈ ಪ್ರಪಂಚದ ಮೂಲ ವೆಂದು ಸಾರಿದನು; ಪ್ಲೇಟೊ ಸ್ವಯಂಜ್ಯೋತಿಗಳಾಗಿರುವ ಮತ್ತು ಅಲೌಕಿಕಗಳಾದ ಸಾಮಾನ್ಯಗಳು ರೂಪರಹಿತವಾಗಿರುವ ಮಾಯೆಯ (ಪ್ರಧಾನದ) ಸಂಗಡ ಬೆರೆಯುವುದರಿಂದ ಪ್ರತ್ಯೇಕಮಯವಾದ ಈ ಪ್ರಪಂಚ ಉದ್ಭವಿಸುವುದೆಂದು ಸಿದ್ಧಾಂತಮಾಡಿದ್ದನು. ಅರಿಸ್ಟಾಟ ಲನು ಈ ಎರಡು ಸಿದ್ಧಾಂತಗಳ ವೈಪರೀತ್ಯವನ್ನಳಿದು ಇವೆರಡನ್ನೂ ಸಮರಸಗೊಳಿಸುವ ಸಲುವಾಗಿ ನೂತನಭಾವವೊಂದನ್ನು ಕಲ್ಪಿಸಿ ದನು. ಪ್ಲೇಟೋವಿನ ಸಾಮಾನ್ಯರೂಪಗಳು ವಸ್ತುಮೂಲಗಳೆಂಬು ದೇನೋ ಸರಿ; ಆದರೆ ಈ ರೂಪಗಳು ಪ್ರತ್ಯೇಕವಸ್ತುಗಳನ್ನು—ಮತ್ತು ಇವುಗಳ ಸಮ್ಮೇಳನರೂಪವಾದ ಈ ದೃಶ್ಯಪ್ರಪಂಚವನ್ನು—ತ್ಯಜಿಸಿ ಬೇರೆ ಎಲ್ಲಿಯೋ ಒಂದುಕಡೆ ಸ್ವಯಂಜ್ಯೋತಿಗಳಾಗಿ ಬೆಳಗುತ್ತಿರುವುವೆಂಬ ಭಾವನೆ ಕೇವಲ ಅಸಂಭವ ಮತ್ತು ಅಸಿದ್ಧವೆಂದು ಅರಿಸ್ಟಾಟಲನು ಅಭಿಪ್ರಾಯಪಟ್ಟನು. ವಸ್ತುವಿಲ್ಲದೆ ರೂಪ ಮಾತ್ರ ಇರಲು ಹೇಗೆ ಸಾಧ್ಯ? ಇದರಂತೆಯೇ ರೂಪವೆಂಬುದೇ ಇಲ್ಲದೆ ಈ ಪ್ರಪಂಚವೆಲ್ಲಾ ಪ್ರಕೃತಿಯ ಅನುಕ್ರಮವಾದ ವಿಕೃತಿಫಲವೆಂದು ವೈಶೇಷಿಕರು ಹೇಳು ವುದೂ ಅಸಿದ್ಧ. ನಮ್ಮ ಅನುಭವದ ಪ್ರತ್ಯೇಕ ವಸ್ತುಗಳೆಲ್ಲವೂ ಸತ್ವ

ಸ್ವರೂಪದ—ಸಾಮಾನ್ಯರೂಪಗಳ—ವಿವರ್ತ ಅಥವಾ ಅಧ್ಯಾಸರೂಪ ವಾದ ಕಲ್ಪನೆ ಮಾತ್ರವೇ ಎಂದು ನಂಬಿ ಸಾಮಾನ್ಯಗಳೇ ಪಾರಮಾರ್ಥಿಕ ಸತ್ತೆಂದು ಪ್ಲೇಟೊ ಸಿದ್ಧಾಂತಮಾಡಿದ್ದನಷ್ಟೆ. ಈಗ ಅರಿಸ್ಟಾಟಲ ನಾದರೋ ನಮ್ಮನುಭವದ ಪ್ರತ್ಯೇಕವಸ್ತುಗಳೇ ನಿಜವಾದ ದ್ರವ್ಯಗ ಳೆಂದು ತೀರ್ಮಾನಮಾಡಿದನು. ಅಲ್ಲಿಗೂ ಪ್ಲೇಟೋವಿನ ತತ್ವಶಾಸ್ತ್ರದ ಸಂಸ್ಕಾರಬಲವನ್ನೆಷ್ಟೆಂದು ಹೇಳೋಣ! ಈ ವ್ಯಕ್ತವಸ್ತುಗಳೇ ನಿಜವಾದ ದ್ರವ್ಯಗಳಾದರೂ ಅವುಗಳ ಸಾಮಾನ್ಯರೂಪವೇ (Form)—ಅವುಗಳೆಲ್ಲವು ಗಳಲ್ಲಿಯೂ ಕಂಡುಬರುವ ಸರ್ವಸಾಮಾನ್ಯವಾದ ಗುಣವಿಶೇಷವೇ— ಅವುಗಳ ಯಥಾರ್ಥಸತ್ತೆಂದು ಅರಿಸ್ಟಾಟಲನು ವಾದಿಸಿದನು.

ಅಂದರೆ ನಾವು ನೋಡುವ ಪ್ರತ್ಯೇಕವಸ್ತುಗಳೊಂದೂ ನಿತ್ಯವಾದು ದಲ್ಲ; ಪ್ರತ್ಯೇಕಗಳೆಲ್ಲವೂ ಪ್ರತಿಕ್ಷಣದಲ್ಲಿಯೂ ವಿಕಾರಹೊಂದುತ್ತಿರುತ್ತವೆ. ಬೀಜ ಇಂದು ಮೊಳಕೆಯಾಗುವುದು; ಮೊಳಕೆ ನಾಳೆ ಮರವಾಗಿ ಕಡೆಯಲ್ಲಿ ಹಣ್ಣಾಗುವುದು. ಈ ನಿರರ್ಗಳವಾದ ಪರಿಣಾಮ ಹೇಗೆ ಸಾಧ್ಯವಾಗುವುದು? ಈ ಅನಂತವಾದ ಪರಿಣಾಮಸೂತ್ರದಲ್ಲಿ ಪರಿಣಮಿ ಸುವ—ವಿಕಾರಹೊಂದುವ—ತತ್ವವೊಂದಿರಲೇಬೇಕು. ಪರಿಣಮಿಸುವ ವಸ್ತುವೊಂದಿಲ್ಲದೆ ಪರಿಣಾಮವೆಂದರೆ ಅರ್ಥವಾಗಲಾರದು. ಈ ವಸ್ತು ವಿಶೇಷವೇ ಪ್ರಧಾನವೆಂಬುದು. ಪ್ರಧಾನವೆಂಬುದು ಪ್ರತಿಕ್ಷಣದಲ್ಲಿಯೂ ಪರಿಣಾಮಹೊಂದುತ್ತಿದ್ದರೂ ಎಂದಿಗೂ ನಾಶಹೊಂದುವುದಿಲ್ಲ. ಆದರೆ ಈ ಪ್ರಧಾನ ಕೆಲವು ಗುಣವಿಶೇಷಗಳನ್ನು ಹೊಂದಿರುವುದು; ಈ ಗುಣವಿಶೇಷಗಳೇ ವಸ್ತುವಿನ ಸಾಮಾನ್ಯರೂಪಗಳು. ಪ್ರಧಾನವೂ ರೂಪವೂ,(Matter and Form) ದ್ರವ್ಯವೂ ಗುಣವೂ (Substance and Quality) ಎಂದಿಗೂ ಭಿನ್ನವಾಗಿರದೆ ಸದಾ ಪರಸ್ಪರಾಧೀನದಲ್ಲಿರುವುವು. ಹಾಗಾದರೆ ಪ್ರಧಾನ ಹೊಂದುವ ಅನಂತವಾದ ಪರಿಣಾಮಗಳಿಗೆಲ್ಲಾ ಈ ಸಾಮಾನ್ಯರೂಪಗಳೇ ಕಾರಣಭೂತವಾದುವೇ ಎಂದರೆ ಅರಿಸ್ಟಾಟ ಲನು ಈ ಪ್ರಶ್ನೆಗೆ ಚಮತ್ಕಾರವಾದ ಉತ್ತರವನ್ನೀಯುವನು. ರೂಪ ವೇನೋ ಪರಿಣಾಮಕ್ಕೆ ಕಾರಣ ಸಹಜ; ಆದರೆ ರೂಪವೇ ಪರಿ ಣಾಮವನ್ನು ಹೊಂದುವುದಿಲ್ಲ; ರೂಪ ನಿತ್ಯವಾದುದು, ನಿರ್ವಿಕಾರ.

ಈ ಕಾರಣದಿಂದ ಪ್ರಧಾನ ಪರಿಣಾಮವನ್ನು ಹೊಂದುವುದೆಂದರೆ ಪ್ರಧಾನ ವಿಧವಿಧವಾದ ರೂಪಗಳನ್ನೇ ಧರಿಸುವುದೆಂದಭಿಪ್ರಾಯ. ಒಂದೇ ರೂಪ ಅನೇಕವಾಗುವುದಿಲ್ಲ. ಆದರೆ ಪ್ರಧಾನ ಈಗೊಂದು ರೂಪ, ಈಗ ಮತ್ತೊಂದು ರೂಪ—ಈ ತೆರನಾಗಿ ಅಸಂಖ್ಯಾತವಾದ ಬೇರೆಬೇರೆ ರೂಪಗಳನ್ನು ಹೊಂದಿ ನಮ್ಮ ಅನುಭವಪ್ರಪಂಚದಲ್ಲಿ ಕಂಡುಬರುವ ಚಿತ್ರ ವಿಚಿತ್ರವಾದ ವೈವಿಧ್ಯಕ್ಕೆಲ್ಲಾ ಕಾರಣವಾಗುವುದು. ಈ ವಿಧವಿಧವಾದ ರೂಪಗಳೆಲ್ಲವೂ ನಿತ್ಯ; ಪ್ರಧಾನವೂ ನಿತ್ಯ; ಇವೆರಡರ ಪರಸ್ಪರ ಸಂಬಂಧ ವ್ಯತ್ಯಾಸಗಳಿಂದ ಪರಿಣಾಮವೂ ಪರಿಣಾಮದಿಂದ ಪ್ರತ್ಯೇಕಗಳೂ ಫಲಿಸುತ್ತವೆ.

ವಸ್ತುವೊಂದು ತನ್ನ ಬೆಳವಣಿಗೆಯ ಪರಮಾವಧಿಯನ್ನು ಹೊಂದಿದರೆ ಅದು ತನ್ನ ಪೂರ್ಣರೂಪವನ್ನು ಧರಿಸಿತೆಂದು ಹೇಳಬಹುದು. ಮಗು ಬೆಳೆದು ಪ್ರಾಯದ ಮನುಷ್ಯನಾದರೆ ಮಗು ತನ್ನ ಪರಿಪೂರ್ಣಾಕಾರವನ್ನು ಅನುಭವಮಾಡಿಕೊಂಡಿತೆಂದರ್ಥ. ರೂಪವೇ ವಸ್ತುವಿನ ಸತ್ವ, ಅದರ ಪರಿಪೂರ್ಣತೆಯೇ ಅದರ ಸ್ವಾನುಭವ. ವಸ್ತುವಿನಲ್ಲಿರುವ ಶಕ್ತಿವಿಶೇಷಗಳೆಲ್ಲಾ ಅದರ ಪರಿಪೂರ್ಣರೂಪದಲ್ಲಿ ವಿಕಸಿತವಾಗಿ ಪ್ರಕಾಶಿಸುವುವು. ಪ್ರಧಾನ ನೂತನರೂಪಗಳನ್ನು ಧರಿಸಿದಹಾಗೆಲ್ಲಾ ಹೊಸಹೊಸ ಶಕ್ತಿವಿಶೇಷಗಳು ಪ್ರಕಾಶಪಡುವುವು: ಪ್ರಧಾನದಲ್ಲಿರತಕ್ಕ ಸಂಭಾವ್ಯಗುಣಗಳೆಲ್ಲಾ ರೂಪಸಂಸ್ಕಾರದಿಂದ ಸಿದ್ಧಿ ಹೊಂದುವುವು. ಈ ಕಾರಣದಿಂದ ಅರಿಸ್ಟಾಟಲನು ಪ್ರಧಾನವನ್ನು ಆಗಾಮಿ ಅಥವಾ ಸಾಧ್ಯ ತತ್ತ್ವವೆಂದೂ (principle of possibility or potentiality), ರೂಪವನ್ನು ಸಿದ್ಧಿತತ್ತ್ವವೆಂದೂ (principle of actuality) ಕರೆದನು. ಆದರೆ ರೂಪವನ್ನಿನ್ನೂ ತಾಳದ ಮೂಲಪ್ರಧಾನವನ್ನು ಮಾತ್ರ ಆಗಾಮಿತತ್ತ್ವವೆಂದು ನಾವು ಹೇಳಬಹುದೇ ವಿನಾ ರೂಪವನ್ನು ಪಡೆದಿರುವ ಯಾವ ಪ್ರತ್ಯೇಕ ವಸ್ತುವನ್ನೂ ಆಗಾಮಿಯೆಂದು ಹೇಳಲಾಗದು. ಹೀಗಿದ್ದರೂ ಒಂದು ಪ್ರತ್ಯೇಕ ಮತ್ತೊಂದು ಪ್ರತ್ಯೇಕದ ರೂಪವನ್ನು ಧರಿಸುವವರೆಗೂ ಅದರ (ಅಂದರೆ ಆ ಮತ್ತೊಂದರ) ಆಗಾಮಿಯೆಂದು ಹೇಳಬಹುದು.

ರೂಪ ಮತ್ತು ಪ್ರಧಾನ—ಇವೆರಡೂ ಇದ್ದಹೊರತು ನಮ್ಮ ದೃಶ್ಯಪ್ರಪಂಚ ಲಭಿಸುವಹಾಗಿಲ್ಲವೆಂದು ಸಿದ್ಧವಾಯಿತು. ಪ್ರತಿ ಒಂದು ರೂಪವೂ ಪ್ಲೇಟೋವಿನ ಸಾಮಾನ್ಯಗಳಂತೆ ನಿತ್ಯವಾದುದು, ಪರಿಣಾಮರಹಿತವಾದುದು. ಆದರೆ ಸಾಮಾನ್ಯಗಳಂತೆ ಪ್ರತ್ಯೇಕಗಳಿಂದ ಬೇರೆಯಾಗಿರದೆ ರೂಪಗಳು ಪ್ರತ್ಯೇಕಗಳಲ್ಲಿಯೇ ಇದ್ದುಕೊಂಡು ವಸ್ತುಗಳು ಪೂರ್ಣಫಲವನ್ನು ಹೊಂದಲು ಸಹಕಾರಿಗಳಾಗಿರುವುವು. ಪ್ರಪಂಚ ಕೇವಲ ಜಡರೂಪವಾದ, ನಿರ್ಜೀವಗಳಾದ ಪರಮಾಣುಗಳ ಸ್ಕಂಧರೂಪವಾಗಿ ಮಾತ್ರ ಇರದೆ ಅರ್ಥಭರಿತವಾದುದು, ಪ್ರಯೋಜನ ಸಹಿತವಾದುದು, ಅಂತಿಮ ಫಲಪೂರ್ವಕವಾದುದು. ಈ ವಿಧವಾದ ಪ್ರಯೋಜನಪೂರ್ವಕವಾದ ಪ್ರಪಂಚಕ್ಕೆ ನೈಗಮಪ್ರಪಂಚ (Teleological Universe) ಎಂದು ಹೇಳುತ್ತಾರೆ. ಈ ನೈಗಮಲೋಕದಲ್ಲಿ ಪ್ರತಿ ಒಂದು ವಸ್ತುವೂ ತದನುಗುಣವಾದ ಫಲ, ಪ್ರಯೋಜನ, ಉದ್ದೇಶವನ್ನು ನೆರವೇರಿಸಿಕೊಳ್ಳುವುದಕ್ಕಾಗಿಯೇ ಜನ್ಮವೆತ್ತುವುದು. ಪರಿಪೂರ್ಣರೂಪವನ್ನು ಪಡೆಯುವುದೇ ಪ್ರತಿ ಒಂದು ವಸ್ತುವಿನ ಫಲ ಅಥವಾ ಪ್ರಯೋಜನ. ರೂಪವೇ ವಸ್ತುವಿನ ಜೀವ; ವಿಧವಿಧವಾದ ರೂಪಗಳನ್ನು ಧರಿಸುವುದೇ ವಸ್ತುವಿನ ಜೀವನ. ಈ ಕಾರಣದಿಂದ ರೂಪ ಪ್ರಧಾನದೊಂದಿಗೆ ಬೆರೆತು ಸ್ವಾನುಭವಮಾಡಿಕೊಳ್ಳುವುದೆಂದು ಹೇಳಬಹುದು. ವಸ್ತುವಿನ ಜನ್ಮ ಸಾರ್ಥಕ್ಯವೇ—ಪರಿಪೂರ್ಣರೂಪವನ್ನು ಧರಿಸುವುದೇ—ರೂಪದ ಸ್ವಾನುಭವ. ಶಿಲ್ಪಿಯೊಬ್ಬ ಸಂಗಮೀರಕಲ್ಲಿನಿಂದ (marble) ಪ್ರತಿಮೆಯೊಂದನ್ನು ಕೆತ್ತುವನೆಂದಿಟ್ಟುಕೊಳ್ಳುವ. ಈ ಕಾರ್ಯಕ್ರಮದಲ್ಲಿ ನಾವು ನಾಲ್ಕುವಿಧವಾದ ಕಾರಣಗಳ ಪ್ರಭಾವವನ್ನು ಕಾಣಬಹುದು. ಶಿಲ್ಪಿಯ ಚಿತ್ತ ಪ್ರಪಂಚದಲ್ಲಿರುವ ಪ್ರತಿಮೆಯ ರೂಪ—ಭಾವ—ಅಥವಾ ಸಾಮಾನ್ಯ ಕಾರಣ (formal cause); ಪ್ರತಿಮೆಯನ್ನು ಕೆತ್ತಲು ಸಿದ್ಧವಾಗಿರುವ ವಸ್ತುವಿಶೇಷ — ಉಪಾದಾನಕಾರಣ (material cause); ಯಾವ ಶಕ್ತಿ ವಿಶೇಷದ ಸಹಾಯದಿಂದ ಶಿಲ್ಪಿ ಪ್ರತಿಮೆಯನ್ನು ಕೆತ್ತುವನೋ ಅಂಥ ಅವನ ಹಸ್ತಗಳ ಚಲನೆ— ನಿಮಿತ್ತಕಾರಣ (instrumental cause); ಮತ್ತು ಪ್ರತಿಮೆಯನ್ನು ಕೆತ್ತಿ ಪ್ರಯೋಜನ ಪಡೆಯಬೇಕೆಂಬ ಶಿಲ್ಪಿಯ

ಉದ್ದೇಶ—ನೈಗಮಕಾರಣ (teleological cause). ಈ ಕಾರಣಚತುಷ್ಟಯದಲ್ಲಿಯೂ ವಿಮರ್ಶಾಬುದ್ಧಿಯಿಂದ ನೋಡುವವರಿಗೆ ಎರಡೇ ಅತಿಮುಖ್ಯವಾದುವುಗಳೆಂದು ತೋರಿಬರುವುದು. ಕಾರ್ಯೋದ್ದೇಶವನ್ನು ನೆರವೇರಿಸುವುದೇ ರೂಪದ ಕರ್ತವ್ಯವಾದುದರಿಂದ ರೂಪವೂ ನೈಗಮವೂ ಒಂದೇ ಆಗುವುದು. ಹಾಗೆಯೇ ಶಿಲ್ಪಿಯ ಹಸ್ತಚಲನೆಗೆ ಆತನ ಚಿತ್ತದಲ್ಲಿರುವ ಪ್ರತಿಮೆಯ ನಕ್ಷೆಯೇ, ರೂಪವೇ, ಕಾರಣವಾದುದರಿಂದ ರೂಪವೂ ನಿಮಿತ್ತವೂ ಏಕವಾಗುವುದು. ಕಡೆಯಲ್ಲಿ ರೂಪ ಮತ್ತು ಉಪಾದಾನಕಾರಣಗಳೇ ಪ್ರಧಾನಕಾರಣಗಳಾದುವು. ಈ ಕಾರಣದ್ವಯಗಳ ಪ್ರಭಾವದಿಂದಲೇ ಸಮಸ್ತ ಪ್ರಪಂಚವೂ—ವಸ್ತುವೈವಿಧ್ಯವೂ, ರೂಪವರ್ಣವೈಖರಿಯೂ—ಉತ್ಪನ್ನವಾಗಿರುವುವು.

ಆದುದರಿಂದ ರೂಪಗಳನ್ನು ಪ್ರಧಾನಪ್ರಪಂಚದಲ್ಲಿ ತಮ್ಮ ಸ್ವಾನುಭವವನ್ನು ಪಡೆಯಲು ಪ್ರಯತ್ನಿಸುವ ನೈಗಮಶಕ್ತಿವಿಶೇಷಗಳೆಂದು ಹೇಳಬಹುದು. ಪ್ರತಿಯೊಂದು ವಸ್ತುವಿನಲ್ಲಿಯೂ ಒಂದು ವಿಧವಾದ ಪ್ರಭೆ ಇದೆ. ಈ ಪ್ರಭಾವ ಬಲದಿಂದ ನೆಟ್ಟ ಬೀಜ ಮರವಾಗುವುದೇ ಹೊರತು, ಬಿತ್ತಿದ ಧಾನ್ಯ ಪೈರಾಗುವುದೇ ಹೊರತು, ಅನ್ಯಥಾ ಆಗಲಾರದು. ರೂಪಗಳು ನಿತ್ಯನಿರ್ವಿಕಾರಗಳಾದುದರಿಂದ ರೂಪಸೂಚಕಗಳಾದ ವಸ್ತುಜಾತಿಗಳು ನಾಶವಾಗಲಾರವು. ವ್ಯಕ್ತಿಗಳು ನಷ್ಟವಾದರೂ ಜಾತಿ ಎಂದಿಗೂ ನಿರ್ನಾಮವಾಗಲಾರದು.

ಆದರೆ ಪ್ರಪಂಚದಲ್ಲಿ ಒಂದೇ ಜಾತಿಯಲ್ಲಿ ಕಂಡುಬರುವ ಅನಂತಾನಂತ ವ್ಯತ್ಯಾಸಗಳಿಗೂ, ರೂಪಬಾಧಿತಗಳಾದ ಅದ್ಭುತಾಕಾರಗಳಿಗೂ, ವಿಲಕ್ಷಣರೂಪಗಳಿಗೂ, ವಿಕಾರಗಳಿಗೂ ಕಾರಣವೇನಿರಬಹುದು ? ರೂಪಪ್ರಭೆ ಪ್ರಧಾನದಲ್ಲಿ ಸೇರಿ ಸೌಂದರ್ಯಾತಿಶಯವನ್ನು ಹೊರಸೂಸುವಾಗ ಅದೇಕೆ ಪ್ರಕೃತಿಯಲ್ಲಿ ಇಷ್ಟು ವಿಲಕ್ಷಣಗಳೂ ವಿಕಾರಗಳೂ ಪ್ರಾಪ್ತವಾಗುವುವು ? ಇದುವರೆಗೂ ಪ್ರಧಾನ ಶಕ್ತಿರಹಿತವಾದುದೆಂದೂ ರೂಪದ ಶಕ್ತಿಪ್ರಯೋಗಕ್ಕೆ ಆಸ್ಪದವಾದ ಉಪಾದಾನಕಾರಣ ಮಾತ್ರವೆಂದೂ ಅರಿಸ್ಟಾಟಲನು ಹೇಳಿರುವನಷ್ಟೆ ; ಈಗ ಪ್ರತ್ಯೇಕಗಳ ವಿಕಾರಗಳನ್ನೂ ಜಾತಿವ್ಯತ್ಯಾಸಗಳನ್ನೂ ಸಕಾರಣದಿಂದ ಸಾಧಿಸುವುದಕ್ಕೋಸ್ಕರ

ಅರಿಸ್ಟಾಟಲನು ಪ್ರಧಾನಕ್ಕೆ ಒಂದುವಿಧವಾದ ನಿರೋಧಶಕ್ತಿಯುಂಟೆಂದು ಹೇಳುವನು. ಇದರ ಬಲದಿಂದ ಪ್ರಧಾನ ರೂಪದ ಹಾದಿಯನ್ನು ತಡೆದು ಅದು ತನ್ನ ಪ್ರಭಾವವನ್ನು ಪೂರ್ಣವಾಗಿ ಬೆಳಗುಮಾಡುವುದಕ್ಕೆ ವಿರೋಧ ವಾಗಿ ಪ್ರವರ್ತಿಸುವುದೆಂದು ಅರಿಸ್ಟಾಟಲನ ಅಭಿಪ್ರಾಯ. ಈ ವಿಧವಾದ ಪ್ರಧಾನದ ಹಠಮಾರಿತನದಿಂದ, ವಿರೋಧಭಾವದಿಂದ, ಅನೇಕವೇಳೆ ರೂಪ ತನ್ನ ಪರಾಕಾಷ್ಠದಶೆಯನ್ನು ಪಡೆಯದೆ ವಿರೂಪವಾಗಿ, ವಿಕಾರ ವಾಗಿ ಪರಿಣಮಿಸುವುದು. ಪ್ರಧಾನದ ಈ ವಿರೋಧಪ್ರವರ್ತನೆಗೆ ಅದರ ಸಹಜದೋಷವೇ, ಸ್ವಾಭಾವಿಕವಾದ ಅಪರಿಪೂರ್ಣತೆಯೇ, ಕಾರಣ. ಇದರಿಂದಲೇ ಪ್ರಪಂಚದಲ್ಲಿ ಹೆಣ್ಣು ಗಂಡು ಆದಿಯಾಗಿ ಜಾತಿವ್ಯತ್ಯಾಸ ಗಳೂ ಪ್ರತ್ಯೇಕಬಹುತ್ವವೂ ವೈವಿಧ್ಯವೂ ಫಲಿಸುವುವು.

ಚಲನೆ, ಪರಿಣಾಮ ಮತ್ತು ಜೈನಸಿದ್ಧಾಂತದಲ್ಲಿ ಹೇಳುವ ಧರ್ಮವೆಂಬ ಅಸ್ತಿಕಾಯ, ಇವು ಮೂರೂ ಒಂದೇ ಅಭಿಪ್ರಾಯವುಳ್ಳುವು. ರೂಪ ಮತ್ತು ಪ್ರಧಾನಗಳ ಸಂಯೋಗಫಲವೇ ದೃಶ್ಯಪ್ರಪಂಚದಲ್ಲಿ ಕಾಣುವ ಚಲನೆಯೆನಿಸುವುದು. ರೂಪವೇ ಚಲನ ಶಕ್ತಿ, ಪ್ರಧಾನವೇ ಚಲಿಸಲ್ಪಡುವ ವಸ್ತು. ಪ್ರಧಾನದಲ್ಲಿರುವ ಆಗಾಮಿ ಸಂಸ್ಕಾರಗಳ—ಸಂಭಾವ್ಯಗುಣಗಳ—ಸಂಸಿದ್ಧಿಯೇ ಚಲನೆ. ಇದು ಉಂಟಾಗುವ ಬಗೆ ಹೇಗೆ? ರೂಪಸಾನ್ನಿಧ್ಯದ ಆಕರ್ಷಣಶಕ್ತಿ ಚಲನೆಯನ್ನುಂಟುಮಾಡು ವುದು. ರೂಪಸಾನ್ನಿಧ್ಯ ಪ್ರಧಾನವನ್ನು ಕೆಣಕಿ ಉನ್ಮಾದಗೊಳಿಸು ವುದರಿಂದ ಪ್ರಧಾನ ರೂಪವನ್ನು ಧರಿಸಬೇಕೆಂಬ ಆಕಾಂಕ್ಷೆಯುಳ್ಳುದಾಗಿ ರೂಪದ ಕಡೆಗೆ ಮುಂದುವರಿಯುತ್ತದೆ: ಇದರಿಂದಲೇ ಚಲನೆಯೂ ಪರಿಣಾಮವೂ ಕಾಣಿಸಿಕೊಳ್ಳುವುವು. ಇಲ್ಲಿ ಮೊದಲು ಪ್ರಧಾನದಲ್ಲಿ ನಾವು ಕಂಡ ನಿರೋಧದ(ಪ್ರತಿಷೇಧ) ವಿರುದ್ಧಭಾವವನ್ನು ಕಾಣಬಹುದು. ರೂಪದ ಸಾಮೀಪ್ಯಮಾತ್ರದಿಂದ ಪ್ರಧಾನ ರೂಪವನ್ನು ತಳೆದು ಬೆಳಗಲು ವಿಶೇಷ ಕುತೂಹಲವನ್ನು ತೋರಿಸುವುದೆಂದು ಅರಿಸ್ಟಾಟಲನು ಬೋಧಿಸುವನು.

ರೂಪವೂ ಪ್ರಧಾನವೂ ಅವಿನಶ್ವರಗಳಾದುದರಿಂದ ಇವುಗಳ ಸಂಯೋಗದಿಂದ ಜನಿಸುವ ಚಲನೆಯೂ ನಿತ್ಯವಾದುದು. ಇಂಥ

ನಿತ್ಯವಾದ ಚಲನೆಯನ್ನು ನಾವು ಗ್ರಹಿಸಬೇಕಾದರೆ ಕಟ್ಟಕಡೆಯಲ್ಲಿ ನಿತ್ಯವೂ ನಿರ್ವಿಕಾರವೂ ಆಗಿರುವ ಮತ್ತು ಸಮಸ್ತಚಲನೆಗೂ ಮೂಲ ಸೂತ್ರವಾಗಿದ್ದರೂ ಸ್ವಯಂ ಅಚಲವಾಗಿರುವ ತತ್ವವಿಶೇಷವೊಂದನ್ನು ನಾವು ನಂಬಲೇಬೇಕೆಂದು ಅರಿಸ್ಟಾಟಲನು ಅಭಿಪ್ರಾಯಪಡುವನು. ಈ ತತ್ವ ಸ್ವತಃ ನಿಶ್ಚಲವಾಗಿರಬೇಕು. ಏಕೆಂದರೆ ಇದು ಚಲಿಸುವುದಾದರೆ ಇದರ ಚಲನೆಗೆ ಕಾರಣಭೂತವಾದ ಬೇರೊಂದನ್ನು ನಾವು ಹುಡುಕಿ ಕೊಂಡು ಹೋಗಬೇಕಾಗುವುದು ; ಹೀಗೆಯೇ ಒಂದು ಕಾರಣಕ್ಕೆ ಮತ್ತೊಂದು ಕಾರಣವನ್ನು ಹುಡುಕುತ್ತಾ ಅನವಸ್ಥೆಗೆ ಬರಬೇಕಾದುದ ರಿಂದ ಕಟ್ಟಕಡೆಯಲ್ಲಿ ಸಮಸ್ತಚಲನೆಗೆ ಮೂಲಕಾರಣವಾದರೂ ಸ್ವತಃ ನಿಶ್ಚಲವಾಗಿರುವ ತತ್ವವೊಂದನ್ನು ನಾವು ನಿರ್ಧರಿಸಲೇಬೇಕು. ಈ ತತ್ವದಲ್ಲಿ ಪ್ರಧಾನದ ಸಂಪರ್ಕ ಲೇಶಾಂಶವಾದರೂ ಇರಲಾಗದು ; ಏಕೆಂದರೆ ಎಲ್ಲಿ ರೂಪದೊಂದಿಗೆ ಪ್ರಧಾನ ಸೇರುವುದೋ ಅಲ್ಲಿ ಚಲನೆ ಉತ್ಪತ್ತಿಯಾಯಿತೆಂದೇ ನಿಶ್ಚಯವಾಗುವುದು. ಆದುದರಿಂದ ಈ ಅಂತ್ಯತತ್ವ ಶುದ್ಧರೂಪ (Pure Form)—ವಿಶುದ್ಧಾತ್ಮಸ್ವರೂಪ—ವಾಗಿ ಪ್ರಕೃತಿಯ ಯಾವತ್ತೂ ಜೀವಚೇತನಪ್ರಕಾಶಕ್ಕೂ, ಸರ್ವಪರಿಣಾಮ ವ್ಯತ್ಯಾಸಗಳಿಗೂ ಆದಿಕಾರಣವಾಗಿರುವುದು.

ಈ ಮೂಲಕಾರಣ ಪರಿಪೂರ್ಣಸ್ವರೂಪವಾದುದು, ಪ್ರಪಂಚದ ಪರಮೋತ್ಕೃಷ್ಟವಾದ ನಿಶ್ರೇಯಸ್ಸು, ಸರ್ವಭೂತಗಳ ಕಲ್ಯಾಣ. ಈಶ್ವರನು ಪ್ರಪಂಚದ ಸರ್ವಪರಿಣಾಮಚಲನೆಗೂ ಮೂಲಕಾರಣನಾ ದರೂ ತನ್ನ ಶಕ್ತಿಯನ್ನು ಬೀರುವ ವಿಧಾನ ವಿಚಿತ್ರವಾದುದು ; ಸುಂದರವಾದೊಂದು ಚಿತ್ರ ನಮ್ಮ ಹೃದಯವನ್ನು ಹೇಗೆ ಸೆಳೆಯು ವುದೋ, ಉತ್ಕೃಷ್ಟವಾದೊಂದು ಧ್ಯೇಯ ನಮ್ಮ ಆತ್ಮನನ್ನು ಹೇಗೆ ಆಕರ್ಷಿಸುವುದೋ, ಹಾಗೆಯೇ ಪರಮಸೌಂದರ್ಯ—ಶ್ರೇಯ—ಧ್ಯೇಯ ಗಳ ತವರುಮನೆಯಾದ ಪರಮಾತ್ಮನು ತನ್ನ ಆಕರ್ಷಣಶಕ್ತಿಯಿಂದಲೇ ಸಮಸ್ತಭೂತಗಳೂ ತಮ್ಮತಮ್ಮ ಪರಮಶ್ರೇಯಸ್ಸನ್ನು ಪಡೆಯಲು ಪ್ರಯ ತ್ನಿಸುವಂತೆ ಮಾಡುವನು : ಪ್ರಾಣಿಗಳ ಜೀವದಾಶೆಗೆ ಪರಮಾತ್ಮನ ಸ್ಥಿತಿ ತ್ವವೇ ಕಾರಣ. ಈ ಕಾರಣದಿಂದ ಈಶ್ವರನನ್ನು ಸಮಸ್ತಭೂತಗಳ ಆಧಾರ,

ಕೇಂದ್ರಸ್ಥಾನ, ಮತ್ತು ಏಕೀಕರಣತತ್ವ(unifying principle) ಎಂದು ಹೇಳಬಹುದು. ಪ್ರಪಂಚದಲ್ಲಿರತಕ್ಕ ಸರ್ವವಿಧವಾದ ಕ್ರಮ, ಕಾಂತಿ ಚೈತನ್ಯಗಳಿಗೂ ಆತನೇ ಮೂಲಕಾರಣನು. ಆತನು ಸಂಪೂರ್ಣವಾಗಿ ಚೈತನ್ಯಸ್ವರೂಪನು : ವಸ್ತುಗಳ ಮುಖ್ಯತತ್ವಗಳಾದ ಸೌಂದರ್ಯರೂಪಗಳನ್ನು ಚಿಂತಿಸುತ್ತ ಅನುಭವಪಡೆಯುವುದೇ ಆತನ ಕಾರ್ಯ. ಆತನು ಪೂರ್ಣ ಸಿದ್ಧಿಸ್ವರೂಪನು ; ಸಮಸ್ತವಿಧವಾದ ಶಕ್ಯಸ್ಥಿತಿಗಳೆಲ್ಲವೂ ಆತನಲ್ಲಿ ಸಿದ್ಧಿ ಹೊಂದಿವೆ. ಆತನಲ್ಲಿ ಇಂದ್ರಿಯ ವ್ಯಾಪಾರವೆಂಬುದೂ, ಅವಗ್ರಹವೆಂಬುದೂ (sensation: ಪ್ರತ್ಯಕ್ಷದಲ್ಲಿ ಪ್ರಥಮದಲ್ಲುಂಟಾಗುವ ಇಂದ್ರಿಯ ಮತ್ತು ವಸ್ತು, ಇವುಗಳ ಸಂಯೋಗದಿಂದ ಫಲಿಸುವ ಚಿತ್ತವೃತ್ತಿ) ಇಲ್ಲ; ಆಶಾರೂಪದಲ್ಲಿ ಪರಿಣಮಿಸುವ ಚಿತ್ತಸಂಕಲ್ಪವಿಲ್ಲ, ಕಾಮರೂಪದ ಭಾವನೆಗಳೂ ಇಲ್ಲ. ಆತನು ಶುದ್ಧಚಿದ್ರೂಪನು. ಮಾನವನ ಬುದ್ಧಿ ವಿಜ್ಞಾನರೂಪವಾದುದು(discursive) ; ಆದುದರಿಂದ ನಮ್ಮ ಜ್ಞಾನವೆಲ್ಲಾ ಭಿನ್ನಮಯವಾದುದು. ಪರಮಾತ್ಮನ ಚಿತ್ತವೋ ಜ್ಞಾನರೂಪವಾದುದು (intuitive): ಸಮಸ್ತವಸ್ತುಗಳನ್ನೂ ಆತನು ಏಕಕಾಲದಲ್ಲಿ ಗ್ರಹಿಸಬಲ್ಲನು. ಸರ್ವಕಾಮಬಾಧಾರಹಿತನಾಗಿ ಪರಮಾತ್ಮನು ಸರ್ವದಾ ಆನಂದಮಯನು. ವೇದಾಂತದಲ್ಲಿ ಹೇಳುವಂತೆ ಪರಮಾತ್ಮನು ಸಚ್ಚಿದಾನಂದಸ್ವರೂಪನೆನ್ನಬಹುದು.

## ಶಕ್ತಿಶಾಸ್ತ್ರ

ಡೆಮಾಕ್ರಿಟಸ್ಸನು ಸಾರಿದ್ದ ಸ್ವಭಾವ—ಪರಮಾಣುವಾದಗಳನ್ನು ಅರಿಸ್ಟಾಟಲನು ತನ್ನ ಶಕ್ತಿಶಾಸ್ತ್ರದಲ್ಲಿ ತ್ಯಜಿಸುತ್ತಾನೆ. ಸರ್ವವಿಧವಾದ ಪರಿಣಾಮವೂ ಪರಮಾಣುಗಳ ಪರಸ್ಪರ ಸಂಬಂಧವ್ಯತ್ಯಾಸಫಲಮಾತ್ರವೆಂಬುದನ್ನು ನಿರಾಕರಿಸಿ, ಪ್ರಧಾನ ಜಡವೆಂದೂ ಆದ್ದರಿಂದ ಸ್ವತಃ ಚಲಿಸಲು ಅಥವಾ ಪರಿಣಾಮಹೊಂದಲು ಅದಕ್ಕೆ ಶಕ್ತಿಯಿಲ್ಲವೆಂದೂ ತೀರ್ಮಾನಿಸಿದನು. ಪರಮಾಣುಗಳೊಂದಿಗೆ ಶೂನ್ಯಸ್ಥಾನವೂ (empty space) ಅದೃಶ್ಯವಾದಮೇಲೆ ಆಕಾಶವೆಂದರೆ ಏನೆಂಬುದನ್ನು ನಿರ್ಣಯಿಸಲು ತೊಡಗಿ ಅರಿಸ್ಟಾಟಲನು ಪರಿವರ್ತಿತ(ಸುತ್ತುಗಟ್ಟಲ್ಪಟ್ಟ) ಪದಾರ್ಥಕ್ಕೂ

ಪರಿವರಿಸುವ ಪದಾರ್ಥಕ್ಕೂ ಮಧ್ಯೆ ಇರುವ ಎಲ್ಲೆಯೇ—ಅವಕಾಶವೇ—ಆಕಾಶವೆಂದು ನಿರ್ಧರಿಸಿದನು. ಯಾವ ಪದಾರ್ಥ ಮತ್ತೊಂದು ವಸ್ತುವಿನಿಂದ ಮೇರೆಕಟ್ಟಲ್ಪಟ್ಟಿಲ್ಲವೋ ಆ ಪದಾರ್ಥ ಆಕಾಶದಲ್ಲಿಲ್ಲ; ಈ ಕಾರಣದಿಂದ ನಕ್ಷತ್ರಮಂಡಲಕ್ಕಾಚೆ ಆಕಾಶವಿಲ್ಲ. ಏಕೆಂದರೆ ನಕ್ಷತ್ರಗಳಿಗಾಚೆ ಅವುಗಳನ್ನು ಪರಿವರಿಸುವ ಪದಾರ್ಥಗಳಾವುವೂ ಇರುವುದಿಲ್ಲ. ಇದರಿಂದ ಅನಂತಾಕಾಶವೆಂಬುದು ಸುಳ್ಳು. ಪ್ರಪಂಚಕ್ಕೆ ಪಾರವುಂಟು. ಅಲ್ಲದೆ ಚಲನೆಯಿಲ್ಲದೆ ಆಕಾಶವೆಂಬುದು ಇಲ್ಲವಾದುದರಿಂದ ನಿಶ್ಚಲನಾದ ಈಶ್ವರನು ದೇಶಕಾಲಾತೀತನು.

ಸರ್ವವಿಧವಾದ ಪರಿಣಾಮಸಂಭವಗಳು ಚಲನೆಯನ್ನುಂಟುಮಾಡುತ್ತವೆ ಎಂದು ಹಿಂದೆ ಹೇಳಿದಂತೆ ಅರಿಸ್ಟಾಟಲನು ತನ್ನ ನೈಗಮ ಸಿದ್ಧಾಂತಕ್ಕನುಸಾರವಾಗಿ ಆಗಮದ ಅಂದರೆ ಸಂಭಾವ್ಯಬೀಜಗಳ (future-possibilities) ಸಂಸಿದ್ಧಿಯೇ ಚಲನೆ ಎಂದು ಅಭಿಪ್ರಾಯಪಡುತ್ತಾನೆ. ದ್ರವ್ಯದ ಉತ್ಪತ್ತಿ ಮತ್ತು ನಾಶವನ್ನುಂಟುಮಾಡುವ ಚಲನೆ; ವಸ್ತುವಿನ ಆಕಾರವನ್ನು ಸೂಚಿಸುವ ಚಲನೆ; ವಸ್ತುಗಳು ಪರಸ್ಪರ ರೂಪಾಂತರ ಹೊಂದುವುದನ್ನು ಕಾಣಿಸುವ ಚಲನೆ; ಸ್ಥಳವ್ಯತ್ಯಾಸವನ್ನು ತೋರಿಸುವ ಚಲನೆ; — ಈ ರೀತಿಯಾಗಿ ಚಲನೆಯಲ್ಲಿ ನಾಲ್ಕು ಬಗೆಯುಂಟು. ಮೂಲಭೂತಗಳು ಪರಸ್ಪರ ರೂಪಾಂತರ ಹೊಂದಬಲ್ಲವು; ವಸ್ತುಗಳ ಪರಸ್ಪರಮಿಶ್ರಣ ಹೊಸ ದ್ರವ್ಯವನ್ನುಂಟುಮಾಡುತ್ತದೆ. ವೈಶೇಷಿಕರು ಹೇಳಿದಂತೆ ಗುಣವೆಂಬುದು ವಸ್ತುಗಳ ಪರಿಣಾಮ ವ್ಯತ್ಯಾಸ ಫಲಗಳಾದ ಮಾನಸಿಕ ಕಲ್ಪನೆಗಳಲ್ಲ, ದ್ರವ್ಯಗಳ ಸಹಜಗುಣಗಳೇ ನಮಗೆ ತೋರುವ ವಸ್ತುರೂಪಗಳು. ಆದುದರಿಂದ ವಸ್ತು ರೂಪಾಂತರ ಹೊಂದಿತೆಂದರೆ ನಿಜವಾಗಿಯೂ ವಸ್ತುವಿನ ಗುಣ ವ್ಯತ್ಯಾಸವಾಯಿತೆಂದು ಹೇಳಬೇಕು.

ಈ ಭಾವಗಳೆಲ್ಲ ವೈಶೇಷಿಕರು ಬೋಧಿಸಿದ ಪ್ರಾಕೃತಿಕ—ವೈಜ್ಞಾನಿಕ ಸಿದ್ಧಾಂತಗಳಿಗೆ ವಿರೋಧಗಳಾಗಿಯೇ ಇವೆ. ವೈಶೇಷಿಕರಿಗೂ, ಅರಿಸ್ಟಾಟಲನಿಗೂ ಇರುವ ವ್ಯತ್ಯಾಸ ಅತಿಮುಖ್ಯವಾದುದು. ವೈಶೇಷಿಕರು ಪ್ರಕೃತಿಯ ಸಮಸ್ತ ವ್ಯಾಪಾರಗಳೂ ಯಂತ್ರದೋಪಾದಿಯಲ್ಲಿ ಸ್ವಭಾವತಃ ನಡೆಯತಕ್ಕುವೆಂದೂ ಅರ್ಥರಹಿತವೆಂದೂ ನಂಬಿದ್ದರು;

ಅರಿಸ್ಟಾಟಲನಾದರೋ ಪ್ರಪಂಚವ್ಯಾಪಾರಗಳು ಚೈತನ್ಯಯುತವಾದು ವೆಂದೂ ಫಲಪೂರ್ವಕವಾದುವೆಂದೂ ಪ್ರತಿಯೊಂದು ಸಂಗತಿಯೂ—ಸಂಭವವೂ—ಅರ್ಥಗರ್ಭಿತವಾದುದೆಂದೂ ಘೋಷಿಸಿ ಹೇಳಿದನು. ಪ್ರಪಂಚದಲ್ಲಿ ಉದ್ದೇಶವಿಲ್ಲದೆ ಯಾವುದೂ ಸಂಭವಿಸುವುದಿಲ್ಲ; ನಿರರ್ಥಕ ವಾದ ವಸ್ತು ಯಾವುದೂ ಇಲ್ಲ. ಆದುದರಿಂದ ಈ ತತ್ವಶಾಸ್ತ್ರವನ್ನು ನೈಗಮಸಿದ್ಧಾಂತವೆಂದು ಧಾರಾಳವಾಗಿ ಹೇಳಬಹುದು.

## ಮನಶ್ಶಾಸ್ತ್ರ

ಪ್ರಕೃತಿಯೆಲ್ಲಾ (ಜಡಪ್ರಕೃತಿಯೂ ಸೇರಿ) ಪ್ರಾಣಭರಿತವಾ ದುದು. ಎಲ್ಲೆಲ್ಲಿ ಪ್ರಾಣವುಂಟೋ ಅಲ್ಲೆಲ್ಲಾ ಆತ್ಮನಿದಾನೆ. ವಿಧವಿಧ ಅಂತಸ್ತಿನ ಪ್ರಾಣಕ್ಕನುಸಾರವಾಗಿ ವಿಧವಿಧಸ್ಥಾನದ ಆತ್ಮರುಂಟು. ದೇಹವಿಲ್ಲದೆ ಆತ್ಮನಿರಲಾರನು; ಆತ್ಮನಿಲ್ಲದೆ ದೇಹ ಸೃಷ್ಟಿಯಾಗುವುದೇ ಅಸಾಧ್ಯ. ಇಷ್ಟೇ ಅಲ್ಲ. ಆಯಾಯಾ ಆತ್ಮನಿಗನುಗುಣವಾದ ದೇಹ ಆಯಾಯಾ ಆತ್ಮನಿಗೆ ದೊರೆಯುವುದೇ ಹೊರತು ಅಶ್ವದ ದೇಹದಲ್ಲಿ ಮಾನವನ ಆತ್ಮನು ಇರಲಾರನು. ಈ ಕಾರಣದಿಂದ ಚೈತನ್ಯಪ್ರಪಂಚ ದಲ್ಲಿ ಅಣು ಆದಿಯಾಗಿ ಮಾನವಶರೀರದವರೆಗೂ ಅನುಕ್ರಮವಾದ ವಿಧ ವಿಧ ಶರೀರಗಳುಂಟು. ಇವುಗಳಿಗೆ ಸರಿಯಾಗಿ ಪೋಷಣೆ, ಬೆಳವಣಿಗೆ, ಬೀಜೋತ್ಪತ್ತಿ—ಈ ಕರ್ಮತ್ರಯಗಳನ್ನು ನಡಸುವ 'ಏಕೇಂದ್ರಿಯ' (ಸಸ್ಯವರ್ಗಕ್ಕೆ ಸಂಬಂಧಿಸಿದ) ಆತ್ಮರಾದಿಯಾಗಿ ಉಚ್ಚಸ್ಥಾನವನ್ನು ಹೊಂದಿ ಶ್ರೇಷ್ಠಕಾರ್ಯಗಳನ್ನು ನಡಸುವ ಮಾನವಾತ್ಮನವರೆಗೂ ಅನೇಕ ಬಗೆಯ ಆತ್ಮರುಂಟು.

ಮಾನವನು ವ್ಯಷ್ಟಿರೂಪನು; ಸೃಷ್ಟಿಕಾರ್ಯದ ಅಂತ್ಯಫಲರೂಪನು. ಚೈತನ್ಯವಸ್ತುಗಳಲ್ಲಿ ಪ್ರಥಮಸ್ಥಾನವನ್ನು ಹೊಂದಿ ಇತರ ಪ್ರಾಣಿ ಗಳಲ್ಲಿರುವ ಇಂದ್ರಿಯಗಳ ಜೊತೆಗೆ ಶ್ರೇಷ್ಠವಾದ ಜ್ಞಾನೋಪಕರಣ ಗಳನ್ನು ಹೊಂದಿರುವನು. ಜ್ಞಾನೇಂದ್ರಿಯಗಳು, (organs of sense-perception); ನೈಜಬುದ್ಧಿ (common sense); ಕಲ್ಪನ (imagination); ಸ್ಮೃತಿ; ಸುಖದುಃಖ; ಇಚ್ಛೆ, ದ್ವೇಷ (desire, aversion)

ಇವೆಲ್ಲಾ ಮನುಷ್ಯನಿಗೂ ಇತರ ಪ್ರಾಣಿಗಳಿಗೂ ಸಾಮಾನ್ಯವಾದುವು. ಬಾಹ್ಯವಸ್ತುಗಳು ಜ್ಞಾನೇಂದ್ರಿಯಗಳ ಮೂಲಕ ಆತ್ಮನಲ್ಲುಂಟು ಮಾಡುವ ಪರಿಣಾಮ ವ್ಯತ್ಯಾಸವೇ ಇಂದ್ರಿಯಾವಲೋಕನ ಅಥವಾ ಇಂದ್ರಿಯ ದರ್ಶನ (sense-perception) ಎನಿಸುವುದು. ಪ್ರಾಣಿಸಮ ಸ್ತಕ್ಕೂ ನೈಜಬುದ್ಧಿಯೆಂಬ ಸ್ವಭಾವಜನ್ಯವಾದ ತಿಳಿವಳಿಕೆಯೊಂದುಂಟು (commonsense)—ಹೃದಯವೇ ಇದರ ಆವಾಸಸ್ಥಾನ. ಇತರ ಇಂದ್ರಿಯ ಗಳ ದ್ವಾರದಿಂದ ಪ್ರಾಣಿಗಳು ಪಡೆಯುವ ವಸ್ತುಸಂಸ್ಕಾರಗಳೆಲ್ಲಾ (ಪ್ರತ್ಯಕ್ಷದಲ್ಲಿ ಪ್ರಥಮದಲ್ಲುಂಟಾಗುವ ಅವಗ್ರಹ ಅಥವಾ ಗ್ರಾಹ್ಯ ಅಥವಾ ವೇದನೆಗಳು ಚಿತ್ತಕ್ಕೆ ಬೋಧೆಯಾಗಿ ಅದರಿಂದ ಫಲಿಸುವ ವಸ್ತುಜ್ಞಾನಕ್ಕೆ ಅವಾಯ ಅಥವಾ ನಿಶ್ಚಯ (percept) ಎಂದು ಹೇಳುತ್ತಾರೆ) ಇಲ್ಲಿ ಸೇರಿ ನೈಜಬುದ್ಧಿಯಿಂದ ಪರಸ್ಪರ ಮಿಳಿತವಾಗಿ ಕಡೆಯಲ್ಲಿ ವಸ್ತುವಿನ ಪೂರ್ಣ ಚಿತ್ರವನ್ನು(ಅವಾಯ ಅಥವಾ ನಿಶ್ಚಯ) ಉಂಟುಮಾಡುತ್ತವೆ. ಈ ನೈಜ ಬುದ್ಧಿಗೆ ಸ್ಮೃತಿಶಕ್ತಿಯೂ ಉಂಟು. ಸುಖದುಃಖಭಾವಗಳೂ ಪ್ರತ್ಯಕ್ಷ ದಿಂದಲೇ ಜನಿಸುವುವು. ಪ್ರಾಣದ ಸ್ವಾಭಾವಿಕ ವ್ಯಾಪಾರಗಳನ್ನು ಸುಸೂತ್ರ ವಾಗಿ ನಡಸತಕ್ಕುದು ಯಾವುದೋ ಅದೇ ಸುಖಭಾವ ; ಅವುಗಳಿಗೆ ಅಡ್ಡಿ ಯುಂಟುಮಾಡಿ ಪ್ರಾಣಕ್ಕೆ ನೋವನ್ನು ತರತಕ್ಕುದು ಯಾವುದೋ ಅದೇ ದುಃಖಭಾವ. ಸುಖ ಇಚ್ಛೆಯನ್ನೂ ದುಃಖ ದ್ವೇಷವನ್ನೂ ಹುಟ್ಟಿಸು ವುವು. ಇದರಿಂದ ದೇಹಚಲನೆ ಉಂಟಾಗುವುದು. ಇಚ್ಛೆಯುಂಟಾಗ ಬೇಕಾದರೆ ಇಚ್ಛಾಯೋಗ್ಯವಾದ ವಸ್ತುವೊಂದಿರಬೇಕು. ಇಚ್ಛೆಯ ಜೊತೆಗೆ ಅದರ ಸುಗುಣ ದುರ್ಗುಣಗಳನ್ನು ವಿಮರ್ಶೆಮಾಡುವ ವಿಚಾರ ಸೇರಿದರೆ ಆಗ ವಿಚಾರಪೂರ್ವಕವಾದ ಸಂಕಲ್ಪಶಕ್ತಿ ಜನಿಸುವುದು.

ಮೇಲೆ ವಿವರಿಸಿದ ಕಾರ್ಯಗಳ ಜೊತೆಗೆ ಮಾನವಾತ್ಮನಿಗೆ ವಸ್ತುಗಳ ಸಾರ್ವತ್ರಿಕ ಮತ್ತು ಆಧಾರಭೂತಗಳಾದ(universal and necessary) ಸತ್ವಗಳನ್ನು ಕುರಿತು ಯೋಚಿಸುವ ಭಾವಚಿಂತನಾಶಕ್ತಿಯೂ ಉಂಟು. ಅಂತಃಕರಣರೂಪದಲ್ಲಿ ಮಾನವಾತ್ಮನು ಇಂದ್ರಿಯಾವಲೋಕನವನ್ನು ಪಡೆಯುವಂತೆ ಚಿದ್ರೂಪದಲ್ಲಿ ವಸ್ತುಸತ್ವಗಳಾದ ಭಾವಗಳನ್ನು (concepts : ಇದಕ್ಕೆ ಸಂತಾನವೆನ್ನುತ್ತಾರೆ) ಈಕ್ಷಿಸಬಲ್ಲನು. ಆತ್ಮನು ಯಾವ

ವಿಷಯವನ್ನೇ ಆಗಲಿ ಕುರಿತು ಚಿಂತಿಸುವ, ಭಾವಿಸುವ ಶಕ್ತಿಯೇ ಚಿತ್ತೆನಿಸುವುದು (Reason). ಚಿತ್ತಿನ ವ್ಯಾಪಾರಫಲವೇ ಭಾವಗಳು. ಆದರೆ ಚಿತ್ತು ಭಾವಗಳನ್ನು ಚಿಂತನೆಮಾಡುವ ಕ್ರಮ ಹೇಗೆ? ಅರಿಸ್ಟಾಟಲನ ಬೋಧನೆಯ ಪ್ರಕಾರವಾಗಿ ರೂಪಮೂಲವಾದ — ಸಿದ್ಧವಾದ —ಕಾರಣವೊಂದಿಲ್ಲದೆ ಯಾವುದೂ ಸಿದ್ಧಿಯಾಗಲಾರದೆಂಬುದನ್ನು ಹಿಂದೆಯೇ ತಿಳಿಸಿದ್ದೇವೆಯಷ್ಟೆ. ಪ್ರಧಾನದಲ್ಲಿರುವ ಸಂಭಾವ್ಯಬೀಜಗಳು ಸಂಸಿದ್ಧಿಯಾಗಬೇಕಾದರೆ ಪೂರ್ಣಾಕಾರವನ್ನು ಹೊಂದಿದ ಕಾರಣಗಳು (ರೂಪಗಳು, ಸಾಮಾನ್ಯಗಳು) ಸಿದ್ಧವಾಗಿರಬೇಕು. ಇದರಂತೆಯೇ ಅರಿಸ್ಟಾಟಲನು ಚಿತ್ತನ್ನು ಪ್ರಧಾನಾತ್ಮಕವಾದ ಕರ್ಮಣೀಚಿತ್ತೆಂದೂ ರೂಪಾತ್ಮಕವಾದ ಕರ್ತೃಚಿತ್ತೆಂದೂ ಎರಡುವಿಧ ಮಾಡಿ ಕರ್ಮಣೀಚಿತ್ತು ಆಗಾಮಿತತ್ವವಾಗಿರುವುದೆಂದೂ ಕರ್ತೃಚಿತ್ತು ಸಿದ್ಧಿತತ್ವವಾಗಿರುವುದೆಂದೂ ಹೇಳುವನು. ಕರ್ಮಣೀಚಿತ್ತಿನಲ್ಲಿ ಭಾವಗಳೆಲ್ಲಾ ಸಂಭಾವ್ಯರೂಪದಲ್ಲಿ ಅಡಕವಾಗಿರುವುವು; ಕರ್ತೃಚಿತ್ತು ಅವುಗಳಿಗೆ ಪೂರ್ಣರೂಪಗಳನ್ನಿತ್ತು ಅವುಗಳನ್ನೀಚೆಗೆಳೆದು ಸಂಸಿದ್ಧಿಯಾಗುವಂತೆ ಮಾಡುವುದು. ಇದೇ ಚಿತ್ತಿನ ಭಾವಸಮೀಕ್ಷಣ; ಭಾವಗಳನ್ನು ಕುರಿತು ಚಿಂತಿಸುವುದರಿಂದ ಆತ್ಮನು ಪಡೆಯುವ ಭಾವಾನಂದ.

ಪ್ರತ್ಯಕ್ಷ, ಕಲ್ಪನ, ಸ್ಮೃತಿ—ಇವೆಲ್ಲವೂ ಶರೀರಸಂಬಂಧಗಳಾಗಿರುವುದರಿಂದ ಶರೀರದ ಸಂಗಡಲೇ ನಾಶವಾಗತಕ್ಕುವು. ಕರ್ಮಣೀಚಿತ್ತೂ ಸಹ ಇಂದ್ರಿಯವ್ಯಾಪಾರದಿಂದುಂಟಾಗುವ ಅವಾಯಸಂಬಂಧವುಳ್ಳುದಾಗಿರುವುದರಿಂದ ನಶ್ವರವಾದುದು. ಇಂಥ ಅವಾಯಗಳು (percepts) ಭಾವಗಳ (concepts) ಜನನಕ್ಕೆ ಅನುಕೂಲವಾದ ಪ್ರಸಂಗಗಳಾಗಿದ್ದರೂ ಕರ್ತೃಚಿತ್ತಿನ ಸಹಾಯವಿಲ್ಲದೆ ಭಾವಗಳು ಉದಯಿಸಲಾರವು. ಶರೀರ ಮತ್ತು ಆತ್ಮಗಳ ಉತ್ಪತ್ತಿಗೆ ಪೂರ್ವದಲ್ಲಿಯೇ ಕರ್ತೃಚಿತ್ತು ಸ್ಥಿತಿರೂಪದಲ್ಲಿತ್ತು. ಕರ್ತೃಚಿತ್ತು ಅನಾದಿ, ಅಮೂರ್ತ (non-corporeal or immaterial) ಅವ್ಯಯ, ನಿತ್ಯ; ಜೀವಾತ್ಮನ ಸಹಾಯಕ್ಕೆ ಈಶ್ವರನು ದಯೆಪಾಲಿಸಿದ ಈಶ್ವರಾಂಶವೆಂದು ಅರಿಸ್ಟಾಟಲನು ಹೇಳುತ್ತಾನೆ. ಇದು ಪರವಸ್ತುವಿನ ಅಂಶವಾದುದರಿಂದ ಜೀವಾತ್ಮನ ಬೆಳವಣಿಗೆಯ

ಕ್ರಮದಲ್ಲಿ ಜನಿಸುವ ಮನಶ್ಶಕ್ತಿಯಲ್ಲ. ಪೃಥಕ್ ಪೃಥಕ್ಕಾಗಿರುವ ಕರ್ಮಣೀ ಚಿತ್ತಿಗೂ ಇದಕ್ಕೂ ಸ್ವಭಾವವ್ಯತ್ಯಾಸವಿರುವುದರಿಂದ ಇದನ್ನು ಚಿತ್ತೆನ್ನದೆ ಸಾಂಖ್ಯಶಾಸ್ತ್ರದಲ್ಲಿ ಹೇಳುವ ಮಹತ್ತೆನ್ನಬೇಕು. ಮಹತ್ತಿನಂತೆ ಇದೂ ವ್ಯಷ್ಟಿರೂಪವಲ್ಲ; ಸಮಷ್ಟಿಗೆ ಸೇರಿದ ತತ್ವವಾಗಿರುವುದು. ಸಾಂಖ್ಯ ದಲ್ಲಿ ಹೇಳುವಂತೆ ಮಹತ್ತು ವಿಕೃತಿಯನ್ನು ಹೊಂದಿ ವ್ಯಷ್ಟಿಯಲ್ಲಿ ಚಿತ್ತಾಗುವುದೆಂದು ಹೇಳದೆ ಅರಿಸ್ಟಾಟಲನು ಈಶ್ವರಾನುಗ್ರಹದಿಂದ ಮಹತ್ತಿನ ಒಂದಂಶ ವ್ಯಷ್ಟಿರೂಪವಾದ ಮಾನವಾತ್ಮನಲ್ಲಿ ಬಂದು ಸೇರಿ ಚಿತ್ತಾಗುವುದೆಂದು ಬೋಧಿಸುವನು. ಈ ಕಾರಣದಿಂದ ಅರಿಸ್ಟಾಟಲನ ತತ್ವಶಾಸ್ತ್ರದಲ್ಲಿ ಆತ್ಮನು ನಿತ್ಯನೆಂದು ಹೇಳಿದರೆ ಪೃಥಕ್ಕಾಗಿರುವ ಜೀವಾತ್ಮನೆಂದಲ್ಲ; ಸಮಷ್ಟಿರೂಪವಾದ ಲೋಕಾತ್ಮವಾದ ಈಶ್ವರನ ಚಿತ್ತಾಂಶ ನಿತ್ಯವೆಂದು ಅರ್ಥಮಾಡಿಕೊಳ್ಳಬೇಕು.

## ಅಧ್ಯಾಯ ೧೮

## ಅರಿಸ್ಟಾಟಲನ ನೀತಿಶಾಸ್ತ್ರ

ಪಾಶ್ಚಾತ್ಯರ ಚರಿತ್ರೆಯಲ್ಲಿ ಶಾಸ್ತ್ರೀಯವಾದ ಮತ್ತು ಪ್ರತ್ಯೇಕ ವಾದ ನೀತಿಸಿದ್ಧಾಂತವನ್ನು ರಚಿಸಲು ಅರಿಸ್ಟಾಟಲನೇ ಮೊದಲನೆಯ ವನು. ಈತನ ಅಧ್ಯಾತ್ಮಶಾಸ್ತ್ರದ ಮತ್ತು ಮನಶ್ಶಾಸ್ತ್ರದ ಸಂಸ್ಕಾರ ವನ್ನು ಈತನ ನೀತಿಶಾಸ್ತ್ರದಲ್ಲಿ ಚೆನ್ನಾಗಿ ಕಾಣಬಹುದು. ಸಾಕ್ರಟೀ ಸನು ಕೇಳಿದಂತೆ 'ಮಾನವನ ಪರಮಶ್ರೇಯ ಯಾವುದು' ಎಂಬುದೇ ಅರಿಸ್ಟಾಟಲನ ನೀತಿಸಿದ್ಧಾಂತದ ಮೂಲಪ್ರಶ್ನೆ. ಪ್ರಪಂಚದಲ್ಲಿ ಸಮಸ್ತ ಜೀವಗಳೂ ಯಾವುದೋ ಒಂದು ಉದ್ದೇಶಪೂರ್ತಿಗೋಸ್ಕರ ದುಡಿಯುತ್ತವೆ. ಮಾನವನ ಕಾರ್ಯಗಳೆಲ್ಲವೂ ಸಹ ಹಲವಿಧವಾದ ಪ್ರಯೋಜನಗಳನ್ನು ಪಡೆಯತಕ್ಕವುಗಳಾಗಿವೆ. ಆದರೆ ಈ ಪ್ರಯೋ ಜನಗಳೆಲ್ಲವೂ ಅತಿಶಯತರವಾದ ಮತ್ತೆ ಯಾವುದೋ ಒಂದು ಪ್ರಯೋ ಜನವನ್ನೇ ಮೂಲವನ್ನಾಗಿಟ್ಟುಕೊಂಡಿರಬೇಕು. ಇದೇ ರೀತಿಯಲ್ಲಿ ಪರಿ ಶೀಲಿಸುತ್ತಾ ಹೋದರೆ ಕಟ್ಟಕಡೆಯಲ್ಲಿ ಅತ್ಯಂತ ಶ್ರೇಷ್ಠವಾದ ಪರಮ ಪ್ರಯೋಜನ ಯಾವುದೋ ಒಂದಿರಬೇಕು ಎಂದು ಒಪ್ಪಬೇಕು. ಇದನ್ನು

ಪಡೆಯುವ ಉದ್ದೇಶದಿಂದಲೇ ಉಳಿದ ಪ್ರವೃತ್ತಿಗಳೆಲ್ಲವೂ ಜರುಗುವುವು. ನಾವು ಹಿಂದೆಯೇ ಕಂಡಿರುವಂತೆ ಪ್ರತಿ ಒಂದು ಪ್ರಾಣಿಯೂ ತನ್ನ ಪೂರ್ಣರೂಪವನ್ನು ಧರಿಸುವುದೇ, ತನ್ನ ಪ್ರಾಣದ ಮುಖ್ಯ ಸತ್ವ ಯಾವುದೋ, ಇತರ ಜೀವಗಳಿಂದ ತನ್ನನ್ನು ಭಿನ್ನಪಡಿಸುವ ಸ್ವಭಾವ, ಸ್ವರೂಪ, ಸ್ವಲಕ್ಷಣ ಯಾವುದೋ, ಅದನ್ನು ಅನುಭವ ಮಾಡಿಕೊಳ್ಳು ವುದೇ, ಅದರ ಪರಮ ಪ್ರಯೋಜನ. ಇದರಂತೆ ಮಾನವನ ಸ್ವಭಾವ, ಸ್ವರೂಪ, ಸ್ವಲಕ್ಷಣ ಯಾವುದು ? ಶರೀರ ಪೋಷಣೆಯಲ್ಲ ; ಇಂದ್ರಿಯ ಕಾಮ ಸಂತೃಪ್ತಿಯೂ ಅಲ್ಲ.

ಆಹಾರ ನಿದ್ರಾ ಭಯ ಮೈಥುನಾನಿ ಸಾಮಾನ್ಯಮೇತತ್ಪಶುಭಿರ್ನ ರಾಣಾಂ | ಜ್ಞಾನೇಹಿ ತೇಷಾಮಧಿಕೋ ವಿಶೇಷೋ ಜ್ಞಾನೇನ ಹೀನಃ ಪಶುಭಿಸ್ಸಮಾನಃ || ಎಂಬ ಆರ್ಯೋಕ್ತಿಯಂತೆ ಇಂದ್ರಿಯ ವ್ಯಾಪಾರ ಗಳೆಲ್ಲವೂ ಪಶುಗಳಿಗೂ ಮನುಷ್ಯರಿಗೂ ಸಾಮಾನ್ಯವಾಗಿರುವುವು ; ಜ್ಞಾನವೆಂಬುದೇ ಮಾನವನ ವಿಶೇಷಣ: ಜ್ಞಾನಪೂರ್ವಕವಾದ ಜೀವನವೇ ಮಾನವಜೀವನವೆನಿಸುವುದು. ಆದುದರಿಂದ ಯಾವುದರ ಬಲದಿಂದ ಮಾನವನು ಇತರ ಪ್ರಾಣಿವರ್ಗಗಳಿಗಿಂತಲೂ ಶ್ರೇಷ್ಠನಾಗಿರು ವನೋ, ಯಾವುದು ತನ್ನ ಜೀವನದ ಹೆಗ್ಗುರುತೋ, ಅಂಥ ಜ್ಞಾನಸಂಪಾ ದನೆಗೆ ಅನುಕೂಲವಾದ ಕಾರ್ಯಕ್ರಮವೇ ಮಾನವನ ಜೀವನದ ಸುಸೂತ್ರ; ಅಂಥ ಜೀವನವನ್ನು ಸಾಧ್ಯಮಾಡಿಕೊಳ್ಳುವುದೇ ಮಾನವನ ಪರಮ ಶ್ರೇಯ, ನಿತ್ಯಕಲ್ಯಾಣ. ಇಂಥ ಜೀವನವನ್ನು ಅರಿಸ್ಟಾಟಲನು ಆನಂದ ವೆಂದು ಕರೆಯುವನು. ಈ ಆನಂದ ಜೀವನವೇ ಮಾನವನ ಜನ್ಮಸಾರ್ಥ ಕ್ಯದ ಪರಮಾವಧಿ. ಆನಂದವೆಂದರೆ ಸುಖಮಾತ್ರವೆಂದು ಬಗೆಯು ಕೂಡದು. ಧರ್ಮವೇ ಸೂತ್ರವಾಗಿರುವ ಪುಣ್ಯಜೀವನದಲ್ಲಿ ಸುಖವೂ ಲಭಿಸುವುದರಿಂದ ಆನಂದವೆಂಬ ಪರಮಶ್ರೇಯದಲ್ಲಿ ಸುಖವೂ ಸೇರಿರು ವುದು. ಆದರೆ ಅದು ಔಪಾಧಿಕಫಲಮಾತ್ರವೇ ಹೊರತು ಅದೇ ನಿಶ್ರೇಯಸವಲ್ಲ.

ಮಾನವಾತ್ಮ ಸಂಪೂರ್ಣವಾಗಿ ಜ್ಞಾನಮಯವೇ ಆಗಿರದೆ ಅಜ್ಞಾನಭರಿತವಾಗಿಯೂ ಇರುವುದರಿಂದ ಈ ಸಂದುಕಟ್ಟಿನಲ್ಲಿ ನಾವು

ಹೇಗೆ ಆಚರಿಸಬೇಕು ? ನಮ್ಮನಮ್ಮ ವಿಧವಿಧವಾದ ಕಾಮ, ಇಚ್ಛೆ, ಆಕಾಂಕ್ಷೆಗಳೇ ಈ ಅಜ್ಞಾನಹೇತುಗಳು. ಹೀಗಿರುವಾಗ ಜ್ಞಾನ ಇವುಗಳೊಂದಿಗೆ ಸೇರಿ ಇವುಗಳನ್ನು ಸರಿಯಾದ ದಾರಿಯಲ್ಲಿ ತರುವಂತೆ ಮಾಡುವುದೇ ನಮ್ಮ ಜಾಣತನ. ಆತ್ಮ ಅಭಿವೃದ್ಧಿಯನ್ನು ಹೊಂದಬೇಕಾದರೆ ಅದರ ಪ್ರತ್ಯೇಕತತ್ವಗಳೆಲ್ಲಾ ಒಟ್ಟುಗೂಡಿ ಕೆಲಸಮಾಡಬೇಕು ; ಶರೀರ ಆರೋಗ್ಯಸ್ಥಿತಿಯಲ್ಲಿರಬೇಕು ; ಮಾನವನಿಗೆ ಸಾಕಾದಷ್ಟು ಅರ್ಥಸಂಪತ್ತಿಯೂ ಇರಬೇಕು. (ಮಕ್ಕಳೂ, ಗುಲಾಮರೂ ಹಿಂದೆ ವಿವರಿಸಲ್ಪಟ್ಟ ಜೀವನದ ಪರಮಶ್ರೇಯವನ್ನು ಪಡೆಯಲಾರರು ; ಬಡತನವೂ, ರೋಗವೂ, ದುರದೃಷ್ಟವೂ ಅದಕ್ಕೆ ಕಂಟಕಗಳು). ಯಾವನಲ್ಲಿ ಜ್ಞಾನಚೇತನ (cognition, reason), ಭಾವಚೇತನ (feeling), ಕರ್ಮಚೇತನ(conation, desire), ಇವು ಮೂರೂ ಪರಸ್ಪರ ಸತ್ಸಂಬಂಧವನ್ನು ಹೊಂದಿರುವುವೋ ಅಂಥವನ ಆತ್ಮನೇ ಧರ್ಮಾತ್ಮನು. ಜ್ಞಾನ ಪರಿಪೂರ್ಣತೆಯನ್ನು ಪಡೆದರೆ ವಿವೇಕ, ದೂರಾಲೋಚನೆ ಎಂದೆನಿಸುವುದು. ಇದು ಜ್ಞಾನಬಲ. ಭಾವಕರ್ಮಚೇತನಗಳು ಸನ್ಮಾರ್ಗ ಪ್ರವರ್ತನೆಗೆ ಅನುಕೂಲವಾಗಿ ಪರಿಪಕ್ವವಾದರೆ ಮಿತವ್ಯವಹಾರ, ಧೈರ್ಯ, ಶೌರ್ಯೌದಾರ್ಯಾದಿ ಶೀಲಸದ್ಗುಣಗಳಾಗಿ ಪರಿಣಮಿಸುವುವು. ಈ ಕಾರಣದಿಂದ ನಮ್ಮ ದೈಹಿಕಕಾಮಗಳ ವಿಷಯವಾಗಿಯೂ, ಭಯ, ಆಪತ್ತು, ಕ್ರೋಧ, ಅರ್ಥಾಕಾಂಕ್ಷೆ—ಮೊದಲಾದುವುಗಳ ವಿಷಯವಾಗಿಯೂ ನಾವು ಸಮೀಚೀನವಾದ ಚಿತ್ತವೃತ್ತಿಯುಳ್ಳವರಾಗಿರಬೇಕು.

ಇಂಥ ಸಮೀಚೀನ ಚಿತ್ತವೃತ್ತಿ ಯಾವುದು ? ಯಾವ ವಿಷಯದಲ್ಲಿಯೇ ಆಗಲಿ ಎರಡು ವೈಪರೀತ್ಯಗಳ (extremes) ಮಧ್ಯಮಾರ್ಗವನ್ನನುಸರಿಸುವುದೇ ಸಮೀಚೀನವೃತ್ತಿ ಅಥವಾ ಸ್ವರ್ಣಮಧ್ಯಮವೆಂದೆನಿಸುವುದು (ಅನೇಕ ಸಂದರ್ಭಗಳಲ್ಲಿ ಅನ್ವಯಿಸಲಶಕ್ಯವೆಂದು ಅರಿಸ್ಟಾಟಲನು ಈ ಸ್ವರ್ಣಮಧ್ಯಮಸಿದ್ಧಾಂತವನ್ನು (The Doctrine of the Golden Mean) ಆಗಾಗ್ಗೆ ಬಿಟ್ಟುಬಿಡುವನು). ಉದಾಹರಣೆಗೆ:—ಹುಚ್ಚುಸಾಹಸಕ್ಕೂ, ಹೇಡಿತನಕ್ಕೂ ಮಧ್ಯಮಾರ್ಗ ಯಾವುದೆಂದರೆ ನಿಜವಾದ ಧೈರ್ಯ. ಔದಾರ್ಯ ದುಂದುಗಾರಿಕೆಗೂ ಲೋಭಿ

ತನಕ್ಕೂ ಮಧ್ಯ; ಮರ್ಯಾದೆ ಅತಿಯಾದ ನಾಚಿಕೆಗೂ, ನಿರ್ಲಜ್ಜೆಗೂ ಮಧ್ಯ. ಆದರೆ ಈ ಮಧ್ಯಮಾರ್ಗ ಎಲ್ಲರಿಗೂ ಎಲ್ಲಾ ಕಾಲಗಳಲ್ಲಿಯೂ ಒಂದೇ ಆಗಿರುತ್ತದೆಂದು ಹೇಳಲಾಗದು; ಪ್ರತಿ ಒಬ್ಬನೂ ಆಯಾ ಕಾಲಾನುಗುಣವಾಗಿ ತನ್ನ ಯೋಗ್ಯತೆಗನುಸಾರವಾಗಿರುವ ಮಧ್ಯ ಮಾರ್ಗವನ್ನವಲಂಬಿಸಬೇಕು. ಹೀಗೆಂದರೆ ಅವನ ಸ್ವಂತ ಅಭಿಪ್ರಾಯವೇ, ಅವನ ಇಷ್ಟದಂತೆ ನಡೆಯುವುದೇ, ಪ್ರತಿ ಒಬ್ಬನಿಗೂ ಆದರ್ಶ ಪ್ರಾಯವೇ ಎಂದು ಕೇಳಿದರೆ ಹಾಗೂ ಅಲ್ಲ ; ಸನ್ಮಾರ್ಗಪ್ರವರ್ತಕನೂ, ಬುದ್ಧಿವಂತನೂ ವಿವೇಕಿಯೂ ಆದ ಮನುಷ್ಯನ ಪ್ರವರ್ತನೆಯೇ ಉಳಿದವರೆಲ್ಲರಿಗೂ ಧರ್ಮಸೂತ್ರ: ವಿವೇಕವುಳ್ಳ ಸುಗುಣಿಗೆ ಸಮಸ್ತ ಸಂದರ್ಭಗಳಲ್ಲಿಯೂ ಹೇಗೆ ನಡೆಯಬೇಕೆಂಬುದು ಗೋಚರವಾಗುತ್ತದೆ. ಮುಖ್ಯವಾಗಿ ನೀತಿಮಾರ್ಗವೆಂಬುದು ಒಂದು ದಿನದಲ್ಲಿ ಅಥವಾ ಒಂದು ಕಾರ್ಯದಲ್ಲಿ ಕಾಣಬಹುದಾದ ಗುಣವಿಶೇಷವಲ್ಲ; ಅದು ಮಾನವನ ಸ್ವಾಭಾವಿಕ ಚಿತ್ತವೃತ್ತಿಯಾಗಿರಬೇಕು ; ಆತನ ಜೀವನದ ಬೀಜಮಂತ್ರವಾಗಿದ್ದು ಸುಚರಿತ್ರ (conduct) ರೂಪವಾಗಿ ಸೌಶೀಲ್ಯ ಸೌಜನ್ಯಾದಿಗಳ ಪ್ರಕಾಶರೂಪವಾಗಿರಬೇಕು. ಅಲ್ಲದೆ ಸದ್ವರ್ತನೆ, ದುರ್ವರ್ತನೆಯೆಂಬ ಶೀಲಭೇದಗಳು ಬುದ್ಧಿಪೂರ್ವಕವಾಗಿ ನಾವು ತಿಳಿದು, ಬಯಸಿ, ಮಾಡಿದ ಕರ್ಮಗಳಿಗೆ ಅನ್ವಯಿಸಬಲ್ಲವೇ ಹೊರತು ಅಜ್ಞಾನವಶಾತ್ ಮಾಡಲ್ಪಟ್ಟ ಕಾರ್ಯಗಳಿಗೆ ಅನ್ವಯಿಸಲಾರವು. "ಸಚ್ಛೀಲ ದುಶ್ಶೀಲವೆರಡೂ ನಮ್ಮ ಕೈಯಲ್ಲಿಯೇ ಇವೆ."

ಆತ್ಮಾಭಿವೃದ್ಧಿಯೇ ಮಾನವನ ಪರಮ ಕಲ್ಯಾಣ. ಅಂದರೆ ಸ್ವಾರ್ಥವನ್ನೇ ಮುಂದಿಟ್ಟುಕೊಂಡು ನಡೆಯುವ ವ್ಯಕ್ತಿದೃಷ್ಟಿಯೇ ಶ್ರೇಯಸ್ಕರವೆಂದು ತಿಳಿಯಕೂಡದು. ಮಾನವನ ಪ್ರಧಾನಧನ ಜ್ಞಾನವಾದುದರಿಂದ ಯಾರು ಜ್ಞಾನವನ್ನು ಅದರ ಸಲುವಾಗಿಯೇ ಪ್ರೀತಿಸಿ ಜ್ಞಾನಬದ್ಧವಾದ ಕರ್ಮಗಳನ್ನೆಸಗುವರೋ, ಯಾರು ಘನೋದ್ದೇಶಗಳಿಂದ ಕೂಡಿದವರಾಗಿ ಘನಕಾರ್ಯಗಳಲ್ಲಿ ಪ್ರವರ್ತಿಸುವರೋ, ಯಾರು ಪರೋಪಕಾರ, ಜನತೆಯ ಸೇವೆ, ದೇಶಸೇವೆ, ಇವುಗಳಲ್ಲಿ ನಿರತರಾಗಿರುವರೋ, ಅಂಥವರು ತಮ್ಮ ಆತ್ಮಾಭಿವೃದ್ಧಿಯ ಪರಾಕಾಷ್ಠದಶೆಯನ್ನು ಬಹು ಜಾಗ್ರತೆಯಾಗಿ

ಹೊಂದುವರು. ಸ್ನೇಹ ಮತ್ತು ನ್ಯಾಯ (ಧರ್ಮ)—ಇವುಗಳ ವಿಷಯ ವಾಗಿ ಅರಿಸ್ಟಾಟಲನು ಬರೆದಿರುವ ವಚನಗಳನ್ನೋದುವವರು ಅವನು ಎಷ್ಟುಮಟ್ಟಿಗೆ ಸ್ವಾರ್ಥತ್ಯಾಗವನ್ನೂ ಪರೋಪಕಾರ ದೇಶಸೇವೆಗಳನ್ನೂ ಹೊಗಳಿರುವನೆಂಬುದನ್ನು ತಿಳಿಯಬಲ್ಲರು. "ಧರ್ಮ ಪುರುಷನು ಅನೇಕ ವೇಳೆ ತನ್ನ ಸ್ನೇಹಿತರ ಮತ್ತು ಸ್ವದೇಶದ ಸಲುವಾಗಿ ಪ್ರವರ್ತಿಸು ವನು; ಕೆಲ ಸಮಯಗಳಲ್ಲಿ ಅವಶ್ಯಕವಿದ್ದಲ್ಲಿ ಅವರಿಗೋಸ್ಕರ ತನ್ನ ಪ್ರಾಣ ವನ್ನೂ ಸಹ ಒಪ್ಪಿಸಲು ಸಿದ್ಧನಾಗಿರುವನು. ಧನ, ಗೌರವ, ಮುಂತಾದ ಯಾವ ಐಹಿಕ ಸೊಬಗು ಸಂಪತ್ತುಗಳಿಗೋಸ್ಕರ ಪ್ರಪಂಚದ ಜನರು ಬಡಿ ದಾಡುತ್ತಾರೆಯೋ ಅವೆಲ್ಲವನ್ನೂ ಆತನು ಒಪ್ಪಿಸಿಬಿಟ್ಟು ಸೌಜನ್ಯ ಅಥವಾ ಘನತೆಯೊಂದನ್ನೇ ತನ್ನ ಆಸ್ತಿಯಾಗಿಟ್ಟುಕೊಳ್ಳುವನು. ದೀರ್ಘಕಾಲ ಸಾಧಾರಣವಾದ ಸುಖವನ್ನನುಭವಿಸುವುದಕ್ಕಿಂತ, ಸ್ವಲ್ಪ ಕಾಲದಲ್ಲಿಯೇ ಕಡುತರವಾದ ಸುಖವನ್ನನುಭವಿಸುವುದಕ್ಕೆ ಮನುಷ್ಯನು ಒಪ್ಪುವನಲ್ಲವೆ? ಅದರಂತೆಯೇ ಪುಣ್ಯಪುರುಷನು ಒಂದು ಶತಮಾನಕಾಲ ನಿಸ್ಸಾರವಾದ ಜೀವನವನ್ನು ನೂಕುವುದಕ್ಕಿಂತ ಯಶೋಭರಿತವಾದ ಒಂದು ವರುಷ ಕಾಲ ಬದುಕಲು ಅಪೇಕ್ಷಿಸುವನು; ಉಪಯೋಗವಿಲ್ಲದ ಸಾವಿರ ಕೆಲಸ ಗಳನ್ನು ಮಾಡುವುದಕ್ಕಿಂತಲೂ ಘನವಾದ, ಪೂಜ್ಯವಾದ ಒಂದೇಕಾರ್ಯ ವನ್ನೆಸಗಲು ಬಯಸುವನು. ಇತರರಿಗೋಸ್ಕರ ತನ್ನ ಪ್ರಾಣವನ್ನೊಪ್ಪಿ ಸುವ ಮಹಾತ್ಮನ ವಿಷಯವೂ ಹೀಗೆಯೇ; ಇದರಿಂದ ಆತನು ವಿಶೇಷ ಸೌಜನ್ಯವನ್ನು ಸಂಪಾದಿಸಿಕೊಳ್ಳುವನು. ಸದಾಚಾರ ಸೌಶೀಲ್ಯಗಳಲ್ಲಿ ಅತ್ಯಧಿಕ ಭಾಗವನ್ನು ತನಗಿಟ್ಟುಕೊಳ್ಳುವುದೇ ಈತನ ಸ್ವಾರ್ಥತೆ." ಮನುಷ್ಯನು ಸಂಘಜೀವಿ, ಸಮಾಜಪ್ರಿಯನು; ಉಪಕಾರವನ್ನೆಸಗಲು ಮತ್ತೊಬ್ಬರನ್ನು ಬಯಸುತ್ತಾನೆ. ಶ್ರೇಯವನ್ನು ಅದರ ಸಲುವಾಗಿಯೇ ಈತನು ಪ್ರೀತಿಸುವುದರಿಂದ ಮತ್ತೊಬ್ಬರಿಂದ ಉಪಕಾರ ಪಡೆಯುವ ಅಪೇಕ್ಷೆಯಿಲ್ಲದೆಯೇ ಸುಗುಣಿಯಾದ ಸ್ನೇಹಿತನನ್ನು ಪ್ರೀತಿಸುವನು.

ನ್ಯಾಯವೆಂದರೇನು? ನ್ಯಾಯ ಅಥವಾ ಧರ್ಮವೆಂಬುದು ಪರ ರೊಡನೆ ನಮ್ಮ ಸಂಬಂಧವನ್ನು ಸೂಚಿಸುವ ಸುಗುಣವಾಗಿರುವುದು. ದೇಶದ ಕಾನೂನುಗಳು ನ್ಯಾಯವಾದುವುಗಳೆನ್ನಬಹುದು; ಅಥವಾ

ನಾವು ಅನುಸರಿಸುವ ನಡತೆ ನ್ಯಾಯವಾಗಿದೆ ಎನ್ನಬಹುದು. ಸಮಾಜದ ಪೋಷಣೆಗೋಸ್ಕರ ವಿಧಿಸಲ್ಪಟ್ಟಿರುವ ನಿಯಮಗಳೇ ರಾಜ್ಯದ ಕಾನೂನುಗಳು. ಈ ಕಾನೂನುಗಳು ನ್ಯಾಯವಾಗಿವೆ ಎಂದರೆ ಕಾನೂನುಗಳು ಕಾಣಿಸುವ ಪ್ರತಿ ಒಂದು ಪ್ರತ್ಯೇಕ ಸುಗುಣಕ್ಕೂ ನ್ಯಾಯವೆಂಬ ಹೆಸರನ್ನು ಹೇಳಬಹುದೆಂತಾಯಿತು. ಅಲ್ಲಿಗೆ ನ್ಯಾಯವೆಂಬ ಅರ್ಥದಲ್ಲಿ ಸಮಸ್ತ ಸದ್ಗುಣಗಳೂ ಸೇರಿವೆಯೆಂದೂ, ಈ ಸದ್ಗುಣಸಂಪತ್ತಿಗೆ ಜನಸಾಮಾನ್ಯದ ಏಳಿಗೆಯ ಪರವಾಗಿ ನ್ಯಾಯವೆಂಬ ಹೆಸರು ಸಲ್ಲುವುದೆಂದೂ ಹೇಳಿದಂತಾಯಿತು. ಅಲ್ಲದೆ ಪ್ರತಿ ಒಬ್ಬನೂ ತನಗೆ ಸಲ್ಲಬೇಕಾಗಿರುವ ವಸ್ತುಗಳನ್ನು ಪಡೆಯುವ ವಿಷಯದಲ್ಲಿಯೂ, ಹಾಗೆಯೇ ಅವರವರ ಯೋಗ್ಯತಾನುಸಾರ ನಾವು ಇತರರಿಗೆ ಕೊಡಬೇಕಾದ ವಿಷಯದಲ್ಲಿಯೂ, ನ್ಯಾಯವೆಂಬ ಶಬ್ದವನ್ನು ಉಪಯೋಗಿಸಬಹುದು.

ಆನಂದವೇ ಅರಿಸ್ಟಾಟಲನ ಗುರಿಯೆಂದು ಹೇಳಿದೇವೆಯಷ್ಟೆ. ಆನಂದಕ್ಕೂ ಸುಖಕ್ಕೂ ಇರುವ ಸಂಬಂಧವನ್ನು ಸ್ವಲ್ಪಮಟ್ಟಿಗೆ ಸೂಚಿಸುವುದು ಅವಶ್ಯಕವಾಗಿರುವುದು. ನೀತಿಮಾರ್ಗದಲ್ಲಿ ನಡೆಯುವ ಪುರುಷನಿಗೆ ತನ್ನ ಧರ್ಮಜೀವನದ ತಕ್ಷಣಫಲರೂಪವಾಗಿ ಸುಖ ಅವಶ್ಯಕವಾಗಿ ದೊರೆಯುವುದು. ಮನುಷ್ಯನು ಸುಖವನ್ನು ಕೋರುವುದರಲ್ಲಿ ಯಾವ ತಪ್ಪೂ ಇರಲಾರದು. ಸುಜೀವನಕ್ಕೆ ಸುಖ ಅವಶ್ಯಕ; ಜೀವಮಾನ ಪರ್ಯಂತರವೂ ಕಷ್ಟದಲ್ಲಿಯೇ ನರಳಿ ಯಾವನೂ ಧರ್ಮಾತ್ಮನಾಗಲಾರನು. ಸುಖ ನಮ್ಮ ಪ್ರವೃತ್ತಿಮಾರ್ಗವನ್ನು ಪರಿಪೂರ್ಣಮಾಡುತ್ತದೆ. ಪುಣ್ಯಜೀವಿಯಾಗಬೇಕಾದರೆ ಅನವರತವೂ ಕರ್ಮವನ್ನೆಸಗುತ್ತಿರಬೇಕು. ಕರ್ಮಮಾಡದೆಯೇ ಯಾವನೂ ಧರ್ಮಪುರುಷನಾಗಲಾರನು. ಆದರೆ ಸುಖ ಫಲಿತವಾಗದಿದ್ದರೆ ಕರ್ಮ ಬಹುಕಾಲ ನಿಲ್ಲಲಾರದು. ಆದುದರಿಂದ ಧರ್ಮಜೀವನದ ಮೂಲಾಧಾರವಾದ ಕರ್ಮ ಪರಿಪೂರ್ಣವಾಗಬೇಕಾದರೆ ನಮ್ಮ ಪ್ರತಿ ಒಂದು ಕರ್ಮದ ತಕ್ಷಣಫಲರೂಪವಾಗಿ ಸುಖ ಲಭಿಸಲೇಬೇಕು. ಧರ್ಮವೂ ಕರ್ಮವೂ ಹೇಗೆ ಅನ್ಯೋನ್ಯಾಶ್ರಯವನ್ನು ಹೊಂದಿರುವುವೋ ಹಾಗೆಯೇ ಕರ್ಮವೂ (ಸತ್ಕರ್ಮವೂ) ಸುಖವೂ ನಿಷಿಕ್ತವಾಗಿರುವುವು. ಹೀಗಿದ್ದರೂ ಸುಖ ನಮ್ಮ ಪುಣ್ಯಕರ್ಮದ

ಫಲರೂಪವೆಂದೆಣಿಸಬೇಕೇ ಹೊರತು ನಮ್ಮ ಜೀವನದ ಧ್ಯೇಯವೆಂದಾಗಲಿ ಅಥವಾ ನಾವೆಸಗುವ ಕರ್ಮದ ಅಂತ್ಯಗುರಿಯೆಂದಾಗಲಿ ಭಾವಿಸಕೂಡದು. ಅಲ್ಲದೆ ಸುಖಕರವಸ್ತುಗಳು ಯಾವುವು ಎಂದು ನಿರ್ಣಯಿಸಬೇಕಾದರೆ ಧರ್ಮಾತ್ಮನೂ, ಗುಣಸಂಪನ್ನನೂ ಆಗಿರುವ ಪುರುಷನು ಸುಖಕರಗಳೆಂದೂ ಮಾನ್ಯಗಳೆಂದೂ ತಿಳಿಯುವ ವಸ್ತುಗಳು ನಿಜವಾಗಿಯೂ ಸುಖದಾಯಕವಾದುವುಗಳೇ ಹೊರತು, ಮೂಢಾತ್ಮರೂ, ಶುದ್ಧ ಶುಭಭಾವವನ್ನು ಅನುಭವಿಸದವರೂ ಆದ ನರಪಶುಗಳು ಶರೀರ ಸುಖಗಳಲ್ಲಿಯೆ ಲೋಲುಪರಾಗಿದ್ದ ಮಾತ್ರಕ್ಕೆ ಅವೇ ಸುಖಕರಗಳೆಂದು ಭಾವಿಸಕೂಡದು.

ಒಂದು ಮಾತಿನಲ್ಲಿ—ನಮ್ಮ ಸ್ವಭಾವದ ಸರ್ವೋತ್ತಮಭಾಗವಾಗಿರುವ ಜ್ಞಾನತತ್ವವನ್ನು ಪರಿಪಾಕಗೊಳಿಸುವುದೇ, ಸೌಂದರ್ಯ, ಸೌಜನ್ಯ ಮುಂತಾದ ಸುಗುಣ ಸದ್ರೂಪಗಳನ್ನು ಚಿಂತನೆಮಾಡುವ ಧ್ಯಾನಾಸಕ್ತಿಯೇ, ನಿತ್ಯಾನಿತ್ಯಗಳನ್ನು ತಿಳಿಯಲೆಳಸುವ ವಿವೇಕಪೂರ್ವಕ ಚಿತ್ತಪ್ರವೃತ್ತಿಯೇ, ನಮ್ಮ ಪೂರ್ಣಾನಂದ. ಇದೇ ನಮ್ಮ ಪರಮ ಶ್ರೇಯ, ಇದೇ ಕಿಂಚಿತ್ತಾದರೂ ಭಿನ್ನವಾಗದಿರುವ, ಅತ್ಯಂತ ಪ್ರಿಯವಾದ, ಸ್ವಲ್ಪವಾದರೂ ಇತರ ವಿಧವಾದ ಚಾಪಲ್ಯಗಳಿಗೆಡೆಗೊಡದಿರುವ, ಪರಿಪೂರ್ಣ ಸುಖ. ಇಂಥ ಜೀವನ ಕೇವಲ ಮನುಷ್ಯಮಾತ್ರದವನಿಗೆ ಸಲ್ಲತಕ್ಕುದೇ ಎಂದು ಸಂದೇಹ ಬಂದರೂ ಬರಬಹುದು. ಇದರಿಂದಲೇ ಮಾನವನು ದೇವಾಂಶಸಂಭೂತನೆಂದು ಗೊತ್ತುಮಾಡಿಕೊಳ್ಳಬಹುದು. ಕೆಲವರು ನಮ್ಮ ಮಾನವ ಜಾತಿಗೆ ಮೀರಿದ ಪ್ರವೃತ್ತಿಗಳನ್ನಾಗಲಿ ಯೋಚನೆಗಳನ್ನಾಗಲಿ ಮಾಡಕೂಡದೆಂದೂ, ಜರಾಮರಣಗಳಿಗೊಳಪಟ್ಟ ಮನುಷ್ಯಮಾತ್ರದವನು ತನ್ನ ಯೋಗ್ಯತೆಗೆ ತಕ್ಕ ಪ್ರವೃತ್ತಿಯುಳ್ಳವನಾಗಿರಬೇಕೆಂದೂ ಬೋಧಿಸುವರು. ಮನುಷ್ಯನಾದ ಮಾತ್ರಕ್ಕೆ ದೇವಾಂಶಪುರುಷನಾಗಲು ಪ್ರಯತ್ನಮಾಡಕೂಡದೆಂದೇನಿವರ ಅಭಿಪ್ರಾಯವೋ? ಜರಾಮರಣಗಳಿಗೊಳಪಟ್ಟಿದ್ದ ಮಾತ್ರಕ್ಕೆ ಅಜರಾಮರನಾಗಲು ಯೋಚನೆಯೇ ಮಾಡಕೂಡದೆಂದೋ? ಬೋನಿನಲ್ಲಿ ಸಿಕ್ಕಿಕೊಂಡಿರುವ ಹುಲಿ ತಪ್ಪಿಸಿಕೊಳ್ಳಲು ಪ್ರಯತ್ನವೇ ಮಾಡಕೂಡದೇನು? ಹಾಗೂ, ನಮ್ಮ ಜ್ಞಾನ ದೈವತತ್ವವಲ್ಲವೇ?

ಸಚ್ಛೀಲದ ಸ್ವಭಾವವನ್ನು ತಿಳಿದುಕೊಂಡ ಮಾತ್ರಕ್ಕೆ ಜನರು ಶೀಲವಂತರಾಗುವುದು ಅಪೂರ್ವ. ಸ್ವಭಾವತಃ ಸುಗುಣಿಗಳಾಗಿರುವ ಅದೃಷ್ಟಶಾಲಿಗಳಿಗೆ ಕೇವಲ ನೀತಿ ಸಿದ್ಧಾಂತಗಳು ಸಾಕಾಗಬಹುದು; ಜನಸಾಮಾನ್ಯ ಈ ಸಿದ್ಧಾಂತಗಳ ನಿಜತ್ವವನ್ನೂ ಅರ್ಹತೆಯನ್ನು ತಿಳಿದುಕೊಂಡು ಧರ್ಮಮಾರ್ಗದಲ್ಲಿ ನಡೆಯಲು ಬರಬೇಕಾದರೆ ಚಿಕ್ಕಂದಿನಿಂದಲೂ ನೀತಿಮಾರ್ಗವನ್ನು ಅನುಷ್ಠಾನದಲ್ಲಿ ತರಬೇಕು. "ಸಾವಿರ ಸಲ ಗೋವಿಂದ ಎನ್ನಬಹುದು. ಒಬ್ಬ ದಾಸಯ್ಯನಿಗೆ ಭಿಕ್ಷೆ ಕೊಡುವುದು ಕಷ್ಟ" ಎಂಬ ನಾಣ್ನುಡಿಗನುಸಾರವಾಗಿ ಧರ್ಮಮಾರ್ಗವನ್ನು ಅನುಷ್ಠಿಸುವುದು ಬಹು ಕಷ್ಟವಾಗಿರುವುದು. ಇದಕ್ಕೆ ಬದಲಾಗಿ, ನಾವು ದೊಡ್ಡವರಾಗಿ ಸ್ವಬುದ್ಧಿ ಬಂದು ಕರ್ಮಗಳನ್ನೆಸಗಲು ತೊಡಗಿದಾಗ ನೀತಿಮಾರ್ಗ ನಮಗೆ ಸುಲಭವಾಗಿ ತೋರಬೇಕಾದರೆ, 'ಅಭ್ಯಾಸಾನುಸಾರಿಣೀ ವಿದ್ಯಾ' ಎಂಬಂತೆ ಬಾಲ್ಯದಿಂದಲೂ ಅದನ್ನು ಅಭ್ಯಾಸಮಾಡುತ್ತಾ ಅದೇ ಚಿತ್ತವೃತ್ತಿಯುಳ್ಳವರಾಗಿರಬೇಕು. ಆದರೆ ಈ ವಿಧವಾದ ಪ್ರವೃತ್ತಿ ಬಾಲ್ಯದಿಂದಲೂ ನಮ್ಮಲ್ಲಿ ದೃಢತರವಾಗಿ ನಿಲ್ಲಬೇಕಾದರೆ ದೇಶದ ಕಾಯಿದೆ, ಕಾನೂನುಗಳು ಇದಕ್ಕೆ ಸಹಾಯಕರಗಳಾಗಿರಬೇಕು. ಜನಸಾಮಾನ್ಯ ಶಿಕ್ಷೆಯ ಭಯದಿಂದಲೂ, ರಕ್ಷಣೆಯ ಸಂತೃಪ್ತಿಯಿಂದಲೂ ಪಾಪ ಕಾರ್ಯವನ್ನೆಸಗದೆ ಸಾಧ್ಯವಾದಷ್ಟು ಧರ್ಮಮಾರ್ಗದಲ್ಲಿ ನಡೆಯುವುದೇ ಹೊರತು, ಪ್ರಕೃತಿಜನ್ಯವಾಗಿ ನೀತಿಯುತವಾಗಿರುವುದು ಅಪೂರ್ವವೇ ಸರಿ. ಹಾಗೆಂದ ಮೇಲೆ, ಧರ್ಮವನ್ನು ಉದ್ಧರಿಸುವ ಕಾನೂನುಗಳು ಯಾವುವು, ಅವುಗಳ ಸ್ವಭಾವವೇನು, ರಾಜ್ಯವೆಂದರೇನು, ಇವೇ ಮೊದಲಾದ ರಾಜನೀತಿಶಾಸ್ತ್ರದ ಪ್ರಶ್ನೆಗಳನ್ನು ಕೇಳಲೇಬೇಕಾಗುವುದು. ನೀತಿಶಾಸ್ತ್ರದ ಪರಿಪೂರ್ಣತೆಯೇ ರಾಜನೀತಿಶಾಸ್ತ್ರ (Politics).

## ರಾಜ್ಯಸಿದ್ಧಾಂತ

ಮನುಷ್ಯನು ಸಂಘಜೀವಿ, ಸಮಾಜಪ್ರಿಯನು; ಸಮಾಜದಲ್ಲಿಯೇ, ಸಂಸ್ಥಾನದಲ್ಲಿಯೇ (State), ತನ್ನ ನಿಜವಾದ ಆತ್ಮಶ್ರೇಯವನ್ನು

ಪಡೆಯಬಲ್ಲನೇ ಹೊರತು ಒಂಟಿಯಾಗಿದ್ದುಕೊಂಡು ಯಾವ ಧರ್ಮ ವನ್ನೂ ಆಚರಿಸಲಾರನು. ಪ್ರತ್ಯೇಕ ಸಂಸಾರಗಳೂ, ಗ್ರಾಮ ಸಂಘಗಳೂ ಕಾಲ ಕ್ರಮದಲ್ಲಿ ಸಂಸ್ಥಾನಗಳಿಗೆ ಪೂರ್ವವಾಗಿಯೇ ಬಂದಿರಬಹುದು ; ಆದರೆ ಸಂಸ್ಥಾನವಾಸವೆಂಬುದು ಮಾನವ ಜೀವನದ ಅಂತ್ಯ ಪರಿಣಾಮ. ಆದುದರಿಂದ ಸ್ವಭಾವತಃ ವ್ಯಕ್ತಿ, ಒಕ್ಕಲು, ಸಂಘ—ಇವುಗಳೆಲ್ಲಕ್ಕಿಂತಲೂ ಸಂಸ್ಥಾನ ಶ್ರೇಷ್ಠವಾದುದು. ಸಂಸ್ಥಾನದಲ್ಲಿಯೇ ಮಾನವನು ತನ್ನ ಜೀವನದ ಪರಮಶ್ರೇಯವನ್ನು ಅನುಭವಮಾಡಿಕೊಳ್ಳಬಲ್ಲನು. ಸಮಾಜ ವೆಂದರೆ ಕೇವಲ ಪ್ರತ್ಯೇಕ ಸಂಘಗಳೆನ್ನದೆ ಸಂಸ್ಥಾನದ ಎಲ್ಲ ಜನರ ಸಮೂಹವೆಂದು ಅರ್ಥಮಾಡುವುದಾದರೆ ಸಮಾಜವಾಸವೇ ಮಾನವನಿಗೆ ಅತ್ಯಂತ ಹಿತಕರವಾದುದು. ವ್ಯಕ್ತಿ ಪುರುಷರ ಸಮೂಹವೇ ಸಮಾಜ; ವ್ಯಕ್ತಿ ಪುರುಷರು ತಮ್ಮ ಸರ್ವೋತ್ತಮ ಪದವಿಯನ್ನು ಪಡೆಯುವಂತೆ ಅನುಕೂಲಮಾಡಿಕೊಡುವುದೇ ಸಮಾಜದ ಮುಖ್ಯೋದ್ದೇಶ. ಆದುದ ರಿಂದಲೇ ಅರಿಸ್ಟಾಟಲನು ಮಾನವನು ರಾಜಕೀಯ ಪ್ರಾಣಿಯೆಂದು ಹೇಳಿರುವನು (' Man is a Political Animal ').

ಒಂದು ದೇಶದ ಜನರ ಸ್ವಭಾವ, ಸ್ಥಿತಿ ಮತ್ತು ಆಶೋತ್ತರಗಳಿ ಗನುಸಾರವಾಗಿ ಆ ದೇಶದ ರಾಜ್ಯನಿಯಮಗಳೇರ್ಪಡಬೇಕು. ಜನ ರೆಲ್ಲರೂ ಸಮವಾದ ಹಕ್ಕುಬಾಧ್ಯತೆಗಳನ್ನು ಪಡೆಯಬೇಕೆನ್ನುವುದು ಒಣ ಸಿದ್ಧಾಂತ. ಸ್ವಭಾವತಃ ಯಾವ ವಿಷಯಗಳಲ್ಲಿ ಜನರೆಲ್ಲರೂ ಸಮವಾ ಗಿದ್ದಾರೆ? ಕಾಯಪುಷ್ಟಿ, ಮನೋಬಲ, ಸ್ವಭಾವಗುಣ,—ಯಾವುದನ್ನು ತೆಗೆದುಕೊಂಡರೂ ಜನರು ಪರಸ್ಪರ ಅಧಿಕ ವ್ಯತ್ಯಾಸಗಳನ್ನುಹೊಂದಿಯೇ ಇರುವರು. ಈ ವ್ಯತ್ಯಾಸಗಳಿಗನುಸಾರವಾಗಿ, ಅವರವರ ಯೋಗ್ಯತೆಗನು ಸಾರವಾಗಿ, ಜನರಿಗೆ ನ್ಯಾಯ ಸಲ್ಲಿಸಲ್ಪಡಬೇಕು. ಯಾವಯಾವ ಜನರು ಅನೇಕ ವಿಷಯಗಳಲ್ಲಿ ಸರಿಸಮವಾಗಿರುವರೋ, ಅವರಿಗೆ ರಾಜ್ಯ ನಿಯಮಗಳು ಸಮಭಾವವನ್ನೇ ತೋರಿಸಬೇಕು ; ಯಾರು ಸಮ ವಾಗಿಲ್ಲವೋ ಅಂಥವರಿಗೆ ಅವರ ಯೋಗ್ಯತೆ ಪ್ರಕಾರ ಮರ್ಯಾದೆ ಮಾಡಬೇಕು. ಯಾವ ರಾಜ್ಯದಲ್ಲಿ ಜನರಿಗೆ ಅವರವರ ಯೋಗ್ಯತೆ ಗನುಸಾರವಾಗಿ ಹಕ್ಕುಬಾಧ್ಯತೆಗಳು ದೊರೆಯುವುವೋ ಆ ಸಂಸ್ಥಾನ

ನ್ಯಾಯುವಾದುದೆಂದೂ, ಆ ರಾಜ್ಯದ ನಿಯಮಗಳು ನ್ಯಾಯುವಾದುವೆಂದೂ ಹೇಳಬೇಕು.

ಪ್ರಪಂಚದಲ್ಲಿ ಒಳ್ಳೆಯ ರಾಜ್ಯಗಳೂ ಇರುವುವು, ಕೆಟ್ಟರಾಜ್ಯಗಳೂ ಇರುವುವು. ರಾಜಪ್ರಭುತ್ವವೂ, ಮಹಾಜನಪ್ರಭುತ್ವವೂ, ಪ್ರಜಾಪ್ರಭುತ್ವವೂ, (Monarchy, Aristocracy and Polity) ಒಳ್ಳೆಯುವುಗಳೆಂದೂ, ಯಾವುದೇ ಆಗಲಿ ನಿರಂಕುಶವಾದರೆ ನೀಚ ಪ್ರಭುತ್ವವಾಗಿ ಪರಿಣಮಿಸುವುದೆಂದೂ ಅರಿಸ್ಟಾಟಲನ ಅಭಿಪ್ರಾಯ. ಆ ಕಾಲದಲ್ಲಿ ಪ್ರಚಾರಗೊಂಡಿದ್ದ ನಗರಸಂಸ್ಥಾನಗಳೇ (City States) ತನ್ನ ಕಾಲದಲ್ಲಿದ್ದ ರಾಜ್ಯಕ್ರಮಗಳಲ್ಲೆಲ್ಲಾ ಸರ್ವೋತ್ತಮವಾದುವುಗಳೆಂದು ಅರಿಸ್ಟಾಟಲನು ಹೇಳಿರುವನು. ಸ್ವಲ್ಪ ಹೆಚ್ಚು ಕಡಮೆ ಎಂಟು ಹತ್ತು ಸಾವಿರ ಜನಗಳಿರುವ ನಗರವೇ ಒಂದು ಸಂಸ್ಥಾನ. ಇದರಲ್ಲಿ ಆಸ್ತಿವಂತರಾಗಿಯೂ ವಿದ್ಯಾವೈಭವಗಳಿಂದ ಶೋಭಿಸುವವರಾಗಿಯೂ ಇರುವ ಜನರೇ ಸಂಸ್ಥಾನದಲ್ಲಿ ಹಕ್ಕು ಬಾಧ್ಯತೆಗಳನ್ನುಳ್ಳ ನಾಗರಿಕರೆಂದೆನಿಸಿಕೊಳ್ಳುವರು. ಈ ನಾಗರಿಕರಲ್ಲಿ ಪ್ರಮುಖರಾದವರು ರಾಜ್ಯಪದವಿಗಳನ್ನು ಧರಿಸುವುದಕ್ಕೂ ಯೋಗ್ಯರು. ಒಟ್ಟಿನಲ್ಲಿ ಮಹಾಜನಪ್ರಭುತ್ವವೇ ಸರ್ವೋತ್ತಮವಾದುದೆಂದು ಅರಿಸ್ಟಾಟಲನು ಬೋಧಿಸುವನು. ಯಾವ ಪ್ರಭುತ್ವ ವ್ಯಕ್ತಿ ಪುರುಷರ ಮತ್ತು ಮನೆತನದ ಆಶಯಗಳನ್ನು ಪೂರ್ಣವಾಗಿ ಸಿದ್ಧಿಗೊಳಿಸುವುದೋ ಮತ್ತು ಅತ್ಯಧಿಕ ಸಂಖ್ಯೆಯ ಜನರ ನೈತಿಕ ಶಿಕ್ಷೆ—ಸುಧಾರಣೆ—ಪ್ರವೃತ್ತಿಗಳಿಗೆ ಹೆಚ್ಚು ಅವಕಾಶಕೊಡುವುದೋ, ಯಾವ ಪ್ರಭುತ್ವದಲ್ಲಿ ಹೆಚ್ಚು ಜನರು ತಮ್ಮ ಧರ್ಮಸ್ವಭಾವದ ಚರಮಾವಸ್ಥೆಯನ್ನು ಅನುಭವ ಮಾಡಿಕೊಂಡು ಅದರ ಜೊತೆಗೆ ಕೂಡಿದ ಮಟ್ಟಿಗೂ ಸುಖಿಗಳಾಗಿ ಬಾಳಲು ಉತ್ತಮವಾದ ಅನುಕೂಲಗಳಿವೆಯೋ, ಆ ಪ್ರಭುತ್ವವೇ ಸರ್ವೋತ್ಕೃಷ್ಟವಾದುದು.[೧] ಈ ದೃಷ್ಟಿಯಿಂದ ನೋಡಿದಲ್ಲಿ

೧. ಆದರೆ ಇಂಥ ಪ್ರಭುತ್ವದಲ್ಲಿಯೂ ಕೂಡ ಎಲ್ಲಜಾತಿಯ ಜನರಿಗೂ ನಾಗರಿಕರ ಹಕ್ಕುಬಾಧ್ಯತೆಗಳಾಗಲಿ, ಆತ್ಮಸಿದ್ಧಿಯ ಅವಕಾಶಗಳಾಗಲಿ ಇರುವುದಿಲ್ಲ. ಪುರಾತನ ಗ್ರೀಸಿನ ನಗರಸಂಸ್ಥಾನಗಳಲ್ಲಿದ್ದಂತೆಯೇ ತಮ್ಮ ಆದರ್ಶರಾಜ್ಯಗಳಲ್ಲಿಯೂ ಗುಲಾಮರೆಂಬ ಒಂದು ಪಂಗಡದ ಜನರು ಇದ್ದೇ ಇರಬೇಕೆಂದೂ, ದೇಹಶ್ರಮದ ಕೆಲಸಗಳೆಲ್ಲವೂ

ಪ್ಲೇಟೊ ತನ್ನ 'ರಿಪಬ್ಲಿಕ್' ಎಂಬ ಸಂವಾದದಲ್ಲಿ ಚಿತ್ರಿಸಿರುವ ರಾಜ್ಯ ಸಿದ್ಧಾಂತ ಬಹು ಅಸಮರ್ಪಕವಾದುದೆಂದು ಅರಿಸ್ಟಾಟಲನು ಅದನ್ನು ಖಂಡಿಸುತ್ತಾನೆ. ಮುಖ್ಯವಾಗಿ ಅದರಲ್ಲಿರುವ ಸಂಸೃಷ್ಟವಾದ (ಜನರಿಗೆ ಸ್ವಂತ ಆಸ್ತಿ ಇರಕೂಡದು; ಪುತ್ರ ಕಳತ್ರಾದಿಗಳು ಒಬ್ಬೊಬ್ಬರಿಗೆ ಬೇರೆ ಬೇರೆಯಾಗಿರದೆ ಹೆಂಗಸರೆಲ್ಲರೂ ಮಕ್ಕಳೆಲ್ಲರೂ ಎಲ್ಲ ಗಂಡಸರಿಗೂ ಸೇರಿದವರಾಗಿರಬೇಕು ಎಂಬ ವಾದ) ಜನರ ನೈತಿಕಾಭಿವೃದ್ಧಿಗೆ ಅನುಕೂಲವಾಗಿರದೆ ಅವರ ಅಧಃಪತನಕ್ಕೆ ಸಹಾಯವಾಗುವುದೆಂದು ಅಭಿಪ್ರಾಯಪಡುತ್ತಾನೆ. ರಾಜಪ್ರಭುತ್ವವೇನೋ ಒಳ್ಳೆಯದೇ; ಆದರೆ ಅದು ನಿರಂಕುಶವಾದರೆ ಅದರಷ್ಟು ಕೆಟ್ಟುದು ಯಾವುದೂ ಇಲ್ಲ, ಮಹಾ ಜನ ಪ್ರಭುತ್ವವೋ ಅಂದರೆ ಶ್ರೀಮಂತರು ತಮ್ಮ ವಿವೇಕ–ಜ್ಞಾನ–ಮಹತ್ವಕ್ಕೆ ಆರಿಸಲ್ಪಟ್ಟರೆ ಆಗ ಅದು ಸುಖದಾಯಕವಾಗುವುದು; ಹಾಗಲ್ಲದೆ ಅವರು ತಮ್ಮ ಕುಲದ ಪ್ರೌಢಿಮೆಗಾಗಲಿ ಆಸ್ತಿಯ ಆಡಂಬರಕ್ಕಾಗಲಿ ಚುನಾಯಿಸಲ್ಪಟ್ಟರೆ ಆಗ ಅದು ಮೇಲೆನಿಸದು.

## ಅಧ್ಯಾಯ ೧೯

## ಅರಿಸ್ಟಾಟಲನ ಕಾವ್ಯಸಿದ್ಧಾಂತದ ಮೂಲತತ್ತ್ವಗಳು

ಪ್ಲೇಟೊ ಕವಿಗಳನ್ನೂ ಕಲಾವಿದರನ್ನೂ ತನ್ನ ಮಾದರಿ ರಾಜ್ಯದಿಂದ ಓಡಿಸಿಬಿಟ್ಟಿದ್ದನು. ಆದರೂ ಕಾವ್ಯವೆಂಬುದು ಮಾನವನ ಸಹಜ ಬುದ್ಧಿ: ತಾತ್ವಿಕರೂ ಶಾಸನಕರ್ತರೂ ಈ ಅಮರಜೀವವನ್ನು ಎಷ್ಟು ನಿರ್ಬಂಧದಲ್ಲಿಟ್ಟರೂ ಅದು ಸಂಕೋಲೆಗಳನ್ನೆಲ್ಲಾ ಕಿತ್ತೊಗೆದು " ಹರಿದು ಲಂಘಿಸಿ

---

ಇವರೇ ಮಾಡತಕ್ಕುದೆಂದೂ ಇವರಿಗೆ ನಾಗರಿಕರ ಹಕ್ಕು ಬಾಧ್ಯತೆಗಳೊಂದೂ ಇರಕೂಡದೆಂದೂ ಪ್ಲೇಟೊ ಮತ್ತು ಅರಿಸ್ಟಾಟಲ್ ಇಬ್ಬರೂ ಒತ್ತಿ ಹೇಳುತ್ತಾರೆ. ಅಮೋಘವಾದ ತತ್ತ್ವಶಾಸ್ತ್ರಗಳನ್ನು ರಚಿಸಿದ ಈ ಪುರಾಣಪುರುಷರಿಗೂ ವ್ಯವಹಾರದಲ್ಲಿ ಸರ್ವಸಮದೃಷ್ಟಿ ಬರಲಿಲ್ಲ! ಗ್ರೀಕರಲ್ಲದ ಜನರನ್ನೆಲ್ಲಾ ಗುಲಾಮರನ್ನಾಗಿ ಪರಿಗಣಿಸಬಹುದೆಂದು ಇವರ ನಂಬಿಕೆ. ಗ್ರೀಕರಲ್ಲದವರೆಲ್ಲಾ ಅನಾಗರಿಕರು, ಅಡನಾಡಿಗಳು ಅಥವಾ ಕಾಡುಮನುಷ್ಯರು (barbarians) ಎಂದು ಗ್ರೀಕರು ತಿಳಿದರು. ಸರ್ವಂ ಖಲ್ವಿದಂ ಬ್ರಹ್ಮ ಎಂದು ಸಾರಿದ ಭಾರತದ ಆರ್ಯರು ಅನಾರ್ಯರನ್ನು ಮ್ಲೇಚ್ಛರೆಂದು ಕರೆಯಲಿಲ್ಲವೆ?

ಚಿಮ್ಮಿ ನೆಗೆಯುತ ಭರದಿ ಬರುವುದು" ಮರ್ತ್ಯಮನುಜನ ಹೃದಯವೆಂಬ ದೊಡ್ಡಿಗೆ. ಗುರು ಹಾಕಿದ್ದ ನಿರ್ಬಂಧಗಳನ್ನು "ಗುರುಸಮ"ನೆನಿಸಿದ ಆತನ ಶಿಷ್ಯನೇ ತೆಗೆದುಹಾಕಿದನು. ಪ್ಲೇಟೋವಿನಂತೆ ಅರಿಸ್ಟಾಟಲನು ಕವಿಯಲ್ಲ, ಕಲಾಪಂಡಿತನಲ್ಲ, ಮತವಿಶ್ವಾಸಿಯಲ್ಲ; ಆದರೂ ಕಲಾವಿದ್ವನ್ಮಣಿಯೆನಿಸಿದ ಗುರು ತನ್ನ ಕಲೆಗೇ ಬಹಿಷ್ಕಾರ ಹಾಕಿ ಸಮಾಜದಿಂದ ಹೊರಗೆ ತಳ್ಳಿದಮೇಲೆ ಕೇವಲ ತಾರ್ಕಿಕನಾದ, ವಿಜ್ಞಾನಪ್ರಿಯನಾದ ಶಿಷ್ಯನು ಅದರ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸಿ ಆಚಂದ್ರಾರ್ಕವಾಗಿ ಅದರ ಪೂಜ್ಯತೆಗೌರವಗಳನ್ನು ಕಾಪಾಡಿದುದು ಸಾಹಿತ್ಯ ಚರಿತ್ರೆಯಲ್ಲಿ ಅದೃಷ್ಟದ ಸ್ವಲ್ಪ ವ್ಯಂಗ್ಯವರ್ತನೆಯೆಂದೇ ಹೇಳಬೇಕು.

ಅರಿಸ್ಟಾಟಲನಿಗೆ ಕವಿಯ ಅಂಶ ಇತ್ತೋ ಇಲ್ಲವೋ ನಮಗೆ ತಿಳಿಯದು. ಕಲಾವಿಮರ್ಶಕರಿಗೆ ಕಲಾವಿದರಿಗಿರುವಷ್ಟೇ ಅರಿವೂ ಜ್ಞಾನಪ್ರಭೆಯೂ ಇರಬೇಕೆಂದು ಸಾಧಾರಣವಾಗಿ ಹೇಳುತ್ತಾರೆ. ಇದು ಹೇಗಾದರೂ ಇರಲಿ; ಪರಂತು ಅರಿಸ್ಟಾಟಲಿನ ಕಾವ್ಯಸಿದ್ಧಾಂತ ಆತನ ಸ್ಥಿತಿತತ್ವ ಸಿದ್ಧಾಂತಕ್ಕನುಸಾರವಾಗಿಯೇ `ಇತ್ತೆಂಬುದರಲ್ಲಿ ಸಂದೇಹವಿಲ್ಲ. ಪ್ಲೇಟೊ ತನ್ನ ತತ್ವಸಿದ್ಧಾಂತದಲ್ಲಿ ನಿತ್ಯವಾದ ವಿಕಾರವನ್ನು ಹೊಂದದಿರುವ ಸಾಮಾನ್ಯ ಸತ್ತನ್ನು ಒತ್ತಿ ಹೇಳಿದ್ದನು. ವಿಜ್ಞಾನಪ್ರಿಯನಾದ ಅರಿಸ್ಟಾಟಲನು ಪರಿಣಾಮಹೊಂದುವ, ಸದಾ ಚಲನಾವಸ್ಥೆಯಲ್ಲಿ ಸಿಕ್ಕಿಕೊಂಡಿರುವ, ಪ್ರತ್ಯೇಕವಸ್ತುಗಳೇ ನಿಜವಾದ ಸತ್ತುರೂಪಗಳೆಂದು ತಿಳಿದನು. ಪ್ಲೇಟೊ ಸ್ಥಿತಿತತ್ವವೇ (being) ಮುಖ್ಯವೆಂದೆಣಿಸಿದನು; ಅರಿಸ್ಟಾಟಲನು ಗತಿತತ್ವವೇ ಪ್ರಧಾನವೆಂದು ನಂಬಿದನು. ಗತಿ (becoming) ಎಂದರೆ ಕಣ್ಣಿಗೆ ತೋರಿ ಮಾಯವಾಗುವುದಲ್ಲ, ಕ್ರಮವಾಗಿ ಅಭಿವೃದ್ಧಿಹೊಂದುವ ಪ್ರಕೃತಿ ವ್ಯಾಪಾರ, ಸಂಭಾವ್ಯ ಅಥವಾ ಬೀಜರೂಪದಲ್ಲಿರುವ ತತ್ವಗಳು ವಿಕಸನಹೊಂದಿ ಪೂರ್ಣರೂಪವನ್ನು ತಾಳಿ ಸಿದ್ಧಿತತ್ವಗಳಾಗುವ ಪ್ರಗತಿ ನಿಯಮ. ಹೀಗೆ ರೂಪಸಿದ್ಧಿಯನ್ನು ಪಡೆದ ಸ್ಥೂಲವಸ್ತುಗಳೇ ಪ್ರಥಮ ಸತ್ತುಗಳು—ಪ್ಲೇಟೊ ಹೇಳಿದಂತೆ ಅವು ತೋರಿಕೆಯ ಪ್ರಪಂಚದ ಛಾಯಾ ಮಾತ್ರಗಳಲ್ಲ. ಅಂದಮೇಲೆ ಸಜೀವ ನಿರ್ಜೀವಗಳೆಂಬ ಪ್ರಕೃತಿಚೇತನದ ನಾನಾ ಪ್ರದರ್ಶನಗಳು,

ಉತ್ಪತ್ತಿ, ಬೆಳವಣಿಗೆ, ಕ್ಷಯ, ನಾಶನಗಳೆಂಬ ಪ್ರಕೃತಿ ಪರಿಣಾಮಗಳು, ಐಂದ್ರಿಯ ಸೌಂದರ್ಯದ ಅನೇಕಾನೇಕ ರೂಪಾಂತರಗಳು — ಇವುಗಳೆಲ್ಲಾ ಅರಿಸ್ಟಾಟಲನ ತತ್ವಶಾಸ್ತ್ರದಲ್ಲಿ ಪ್ರಾಮುಖ್ಯ ಸ್ಥಾನವನ್ನು ಹೊಂದಿದುವು.

ಪ್ರತ್ಯೇಕ, ಗತಿ, ಪ್ರಗತಿ—ಇವುಗಳನ್ನೇ ತತ್ವಶಾಸ್ತ್ರದ ಮೂಲತತ್ವಗಳಾಗೆಣಿಸಿದ ಅರಿಸ್ಟಾಟಲನು, ಲಲಿತಕಲೆ ಸತ್ಯಕ್ಕೆ ವಿರೋಧವಾದುದಲ್ಲ, ಸತ್ಯಸತ್ತ್ವಕ್ಕೆ ಮೆರುಗುಕೊಡುವ, ಸ್ವರ್ಣಪುಷ್ಪಕ್ಕೆ ಸುಗಂಧವನ್ನೀಯುವ, ಉಚ್ಚತರದ ಸತ್ಯವೆಂದು ಭಾವಿಸಿದುದು ಆಶ್ಚರ್ಯವೇನೂ ಇಲ್ಲ. ಪ್ಲೇಟೋವಿನಲ್ಲಿ ನಾವು ಕಂಡಹಾಗೆ ಚಿತ್ರಕಲೆ, ಸಂಗೀತ, ಕಾವ್ಯ ಮುಂತಾದ ಲಲಿತಕಲೆಗಳಿಗೂ (fine arts), ಬಡಗಿ ಕೆಲಸ, ಚಮ್ಮಾರ ಕೆಲಸ, ಯಂತ್ರನಿರ್ಮಾಣ ಮೊದಲಾದ ಪ್ರಯೋಜನಾತ್ಮಕ ಕಲೆಗಳಿಗೂ ಭೇದವಿರಲಿಲ್ಲ. ಈ ಭೇದವನ್ನು ಮೊದಲು ಕಲ್ಪಿಸಿದವನು ಅರಿಸ್ಟಾಟಲನೇ. ಅವನ ಮತದಂತೆ ಲಲಿತಕಲೆ ಎಂಬುದು ಮತ, ತತ್ವ, ರಾಜನೀತಿ—ಇವುಗಳೊಂದಕ್ಕೂ ಸಂಬಂಧಪಡದ ಚಿತ್ತದ ಸ್ವತಂತ್ರ ಪ್ರತ್ಯೇಕ ನಿರಾತಂಕವಾದ ಪ್ರವೃತ್ತಿ. ಅದರ ಸ್ವಭಾವವೇನೆಂಬುದನ್ನು ಚರ್ಚೆ ಮಾಡುವುದರಲ್ಲಿ ಆತನು ಪ್ಲೇಟೋವಿನ ಅನುಕರಣಸಿದ್ಧಾಂತವನ್ನೇ ತೆಗೆದುಕೊಂಡು ಅದನ್ನು ಹೊಸರೀತಿಯಲ್ಲಿ ಅರ್ಥಮಾಡುತ್ತಾನೆ. "ಕಲೆ ಪ್ರಕೃತಿಯನ್ನು ಅನುಕರಿಸುತ್ತದೆ" ಎಂಬ ಲಕ್ಷಣವನ್ನು ಸಾಮಾನ್ಯವಾಗಿ ಪ್ರಯೋಜನಾತ್ಮಕ ಮತ್ತು ಕುಶಲಕಲೆಗಳೆರಡಕ್ಕೂ ಕೊಡಬಹುದು. ಆದರೂ ಕುಶಲಕಲೆಗೆ ಈ ಲಕ್ಷಣವನ್ನು ಅನ್ವಯಿಸುವುದಾದರೆ, ಕುಶಲಕಲೆ ಸ್ವಾಭಾವಿಕವಸ್ತುಗಳ ನಕಲು ಅಥವಾ ಪ್ರತಿಮಾತ್ರವೆಂದು ಅದರರ್ಥವಲ್ಲ. ಪ್ಲೇಟೊ ಹೀಗೆಂದು ಅರ್ಥಮಾಡಿ ಕುಶಲಕಲೆ ಸತ್ಯಸತ್ತ್ವಕ್ಕೆ ಮೂರು ಮೆಟ್ಟಲು ಕೀಳಾದುದೆಂದು ಅದನ್ನು ಹೀಯಾಳಿಸಿದ್ದನು. ಕಲೆಗಾರನು "ವಸ್ತುಗಳನ್ನು ಅವುಗಳು ನ್ಯಾಯವಾಗಿ ಇರಬೇಕಾದ ರೀತಿಯಲ್ಲಿ ಅನುಕರಿಸುತ್ತಾನೆ" ಎಂದು ಅರಿಸ್ಟಾಟಲನು ಅಭಿಪ್ರಾಯಪಡುತ್ತಾನೆ. ಇಲ್ಲಿ ಅನುಕರಣವೆಂದರೆ ವಸ್ತುವಿನ ಪ್ರತಿಕೃತಿ ಮಾಡುವುದು ಎಂದರ್ಥಮಾಡಲಾಗದು. ರಸಾನುಕರಣಕ್ಕೆ ಯೋಗ್ಯ

ವಾದ ವಿಷಯಗಳು ಮೂರು ಜಾತಿಯವು: (೧) ಚಿತ್ತದ ಪರಿಸ್ಥಿತಿಯನ್ನು ವ್ಯಕ್ತಪಡಿಸುವ ಶಾಶ್ವತ ವಾಸನೆಗಳು(dispositions), ಅಥವಾ ಸಂಸ್ಕಾರ ಗಳು ಮತ್ತು ಮಾನವಜಾತಿಗೆ ಲಕ್ಷಣವಾಗುವ ಧಾರ್ಮಿಕ (ನೈತಿಕ) ಗುಣಗಳು; (೨) ಹೆಚ್ಚು ಕ್ಷಣಿಕವಾದ ಮಾನವ ಭಾವಗಳು(emotions) ಮತ್ತು ಹರಿದುಹೋಗುವ ಚಿತ್ತಸಂವೇದನೆಗಳು (feelings); (೩) ಕ್ರಿಯಾತ್ಮಕವಾದ ಚಿತ್ತಸಂಕಲ್ಪಗಳು—ಇವುಗಳೇ ವಾಸ್ತವಿಕಾರ್ಥದಲ್ಲಿ ಕ್ರಿಯೆಗಳೆನಿಸುವುವು. ಬಾಹ್ಯಪ್ರಪಂಚದಲ್ಲಿ ನಡೆಯುವ ಕಾರ್ಯಗಳು, ಸಂಭವಗಳು, ಪ್ರಸಂಗಗಳು, ಸ್ವತಃ, ಅಂದರೆ ಈ ಬಾಹ್ಯರೂಪದಲ್ಲಿಯೇ ರಸಾನುಕರಣದ ವಿಷಯಗಳಲ್ಲ, ಅವು ಆಂತರಿಕವಾದ ಸಂಕಲ್ಪಶಕ್ತಿಯ ಪ್ರದರ್ಶನಗಳೆಂಬ ಎಣಿಕೆಯಲ್ಲಿ, ಅಥವಾ ತನ್ಮೂಲಕ ಚಿತ್ತದಲ್ಲಿ ಭಾವ ಸಂಕಲ್ಪಚಿಂತನಾಪ್ರವೃತ್ತಿಗಳನ್ನು ಪ್ರೇರೇಪಿಸುವುವೆಂಬ ಅರ್ಥದಲ್ಲಿ, ರಸಾನುಕರಣದ ವಿಷಯಗಳಾಗುವುವು.

ಮಾನವಜೀವನವನ್ನು—ಮಾನಸಿಕಜೀವನವನ್ನು—ಪ್ರಕಾಶಪಡಿಸುವ ವಸ್ತುವಿಷಯಗಳೆಲ್ಲಾ "ಕ್ರಿಯೆ" ಅಥವಾ "ಕಾರ್ಯ" ಎಂಬರ್ಥವನ್ನು ಸೂಚಿಸುತ್ತವೆ. ಮಾನವಜೀವನವೇ, ಚಿತ್ತಪ್ರವೃತ್ತಿಗಳೇ, ಹೃದಯದ ಆಂತರಿಕ ಪರಿಸ್ಥಿತಿಯನ್ನು ಹೊರಪಡಿಸುವ ಬಾಹ್ಯಕಾರ್ಯಗಳೇ, ಒಂದು ಮಾತಿನಲ್ಲಿ, ಆತ್ಮದ ಆಧಾರಭೂತವಾದ ವ್ಯಾಪಾರವೇ, ಕುಶಲಕಲೆಯ ತವರುಮನೆ. ಇಂತಹ ವ್ಯಾಪಾರವಿಲ್ಲದ ಮಾನವರಹಿತಪ್ರಪಂಚ —ಪ್ರಕೃತಿಸ್ವರೂಪ, ಪ್ರಾಣಿ ಗಿಡ ಮರ ಮುಂತಾದುವು— ಕುಶಲಕಲೆಗೆ ವಿಷಯವಾಗಲಾರದು. "ಕ್ರಿಯೆ" ಎಂಬ ಶಬ್ದಕ್ಕೆ ಮೇಲೆ ತೋರಿಸಿದ ಅರ್ಥವನ್ನು ಜ್ಞಾಪಕದಲ್ಲಿಟ್ಟುಕೊಂಡರೆ, ಕ್ರಿಯೆಯಲ್ಲಿ ಪ್ರವೇಶಿಸಿರುವ, ಅಥವಾ ಕ್ರಿಯಾಲೋಕದಲ್ಲಿ ಸಿಲುಕಿರುವ, ಪುರುಷರೇ ಕುಶಲಕಲೆಗಳು ಅನುಕರಿಸುವ ವಸ್ತುಗಳೆಂದು ಅರಿಸ್ಟಾಟಲನು ಸಾರಿದನು. ಅನುಕರಣವೆಂದರೆ ವಸ್ತುವಿನ ಶುದ್ಧ ಪ್ರತಿಕೃತಿ ಮಾಡುವುದಲ್ಲವೆಂದು ಹೇಳಿದಮೇಲೆ ಅದೇನೆಂಬುದನ್ನು ವಿವರಿಸಬೇಕಾಗಿದೆ. ಕಲಾವಸ್ತು ಸ್ವಾಭಾವಿಕ ಪ್ರಪಂಚದ ಪದಾರ್ಥವಾಗಿರಲಿ, ಚಿತ್ತಪ್ರಪಂಚದ ಧ್ಯೇಯವಾಗಿರಲಿ, ಮೂಲವಸ್ತುವಿನ ಮಾದರಿಮೇಲೆ ಕಲ್ಪನಾಶಕ್ತಿಯಿಂದ ಅದನ್ನು

ಸರಿಹೋಲುವಂತೆ ನಿರ್ಮಿಸಲ್ಪಟ್ಟ ಚಿತ್ರವೇ ಕಲಾಕೃತಿಯೆನ್ನುವುದು. ಈ ಕಲ್ಪನಾಶಕ್ತಿಯೆಂಬುದನ್ನು ಹೆಚ್ಚು ವಿವರಿಸಬೇಕಾಗಿಲ್ಲ. ಅದು ಸಂವೇದನೆ ಗಳನ್ನನುಭವಿಸುವ ಶುದ್ಧ ಜಡಸ್ವರೂಪದ ಕರ್ಮಣೀತತ್ವವಲ್ಲ, ಕೇವಲ ಇಂದ್ರಿಯಪ್ರಜ್ಞೆಗೆ (ಅವಗ್ರಹಕ್ಕೆ, ಗ್ರಾಹ್ಯಕ್ಕೆ) ಯೋಗ್ಯವಾದ ಗ್ರಹಣ ಬಲವಲ್ಲ; ಇಂದ್ರಿಯ ಪ್ರಜ್ಞೆಗೂ ಆಲೋಚನೆಗೂ ಮಧ್ಯೆ ಇರುವ, ವಸ್ತು ಗಳಿಂದುಂಟಾಗುವ ಇಂದ್ರಿಯಪ್ರಜ್ಞಾಪೂರ್ವಕವಾದ ಚಿತ್ರಗಳನ್ನು ಸ್ಮೃತಿ ಪಥಕ್ಕೆ ತರಬಲ್ಲ, ಹಾಗೂ ಅವುಗಳನ್ನು ಸಮೀಕ್ಷಿಸಬಲ್ಲ, ರಸೇಂದ್ರಿಯದ ಒಂದು ನಿರ್ಮಾಪಕಶಕ್ತಿ; ಬುದ್ಧಿಯ ಮತ್ತು ಇಂದ್ರಿಯಗಳ ಸಂಯೋಗ ಬಲವೆಂದು ಹೇಳಬಹುದು. ಕಲೆ ಶುದ್ಧಬುದ್ಧಿಯ ಕೆಲಸವಲ್ಲ, ಇಂದ್ರಿಯಾವ ಲೋಕನದ ಮತ್ತು ಕಲ್ಪನಾಶಕ್ತಿಯ ಕೆಲಸ; ವಸ್ತುಗಳ ಹೊರಗಣ ತೋರಿಕೆಯೇ ಅದರ ಆಧಾರ; ಕೆಲ ಸಮಯಗಳಲ್ಲಿ ಅದು ಭ್ರಾಂತಿ ವಿಪರ್ಯಾಯಗಳನ್ನೂ ಉಪಯೋಗಿಸುತ್ತದೆ; ಸತ್ಯವನ್ನು ಅದು ಕಾಣ ಲಾರದೆಂದಲ್ಲ, ಆದರೆ ತತ್ವರೂಪದಲ್ಲಿ, ಶುದ್ಧಭಾವರೂಪದಲ್ಲಿ, ಅದಕ್ಕೆ ಸತ್ಯ ಹಿಡಿಸುವುದಿಲ್ಲ, ಸತ್ಯದ ಸ್ಥೂಲರೂಪದ ಮೂರ್ತೀಕಾರಗಳನ್ನು ಲಕ್ಷ್ಯವಾಗಿಟ್ಟುಕೊಂಡು ತನ್ಮೂಲಕ ಅದು ಸತ್ಯದ ಹೃದಯವನ್ನು ಭೇದಿಸುತ್ತದೆ. ಆದುದರಿಂದ ಕಲಾಕೃತಿ ಮೂಲವಸ್ತುವನ್ನೇ ಹೋಲುವ ಕಲ್ಪನಾಚಿತ್ರವಲ್ಲ, ಆ ಮೂಲವಸ್ತು ಇಂದ್ರಿಯಗಳ ಮೇಲೆ ಒತ್ತುವ ಅಚ್ಚನ್ನು ಹೋಲುವ ಕಲ್ಪನಾಚಿತ್ರ. ವಸ್ತುಸತ್ವ ಹೇಗಾದರೂ ಇರ ಬಹುದು, ಅದು ನಮ್ಮ ಇಂದ್ರಿಯಗಳಿಗೆ ಹೇಗೆ ಗೋಚರಿಸುತ್ತದೆ, ಎಂಬುದೇ ಕಲೆಯ ಮುಖ್ಯ ಪ್ರಶ್ನೆ.

ಕಲೆ ಕೊಡುವುದೆಲ್ಲಾ ತೋರಿಕೆ, ಅಥವಾ ಹೋಲಿಕೆ—ಈ ಸಿದ್ಧಾಂತ ಮೊದಲು ಪ್ಲೇಟೋವಿನ ಕಲಾಖಂಡನೆಗೆ ಅನುಕೂಲವಾಗಿ ಕಂಡುಬಂದರೂ ಸಾವಧಾನವಾಗಿ ಪರಿಶೀಲಿಸಿದಲ್ಲಿ, ಅರಿಸ್ಟಾಟಲನ ಮತಪ್ರಕಾರವಾಗಿ ಅದೇ ಕಲೆಯ ಸಮರ್ಥನೆಯೆಂದು ವ್ಯಕ್ತವಾಗು ವುದು. ಈ ವಿಧವಾದ ತೋರಿಕೆ ಅಥವಾ ಭ್ರಾಂತಿಪ್ರಪಂಚವನ್ನು ನಿರ್ಮಿಸುವುದರಿಂದ ಕಲೆ ಮನುಷ್ಯನನ್ನು ಜೀವನದ ವ್ಯಸನವಿಡ್ದೂರ ಗಳಿಂದ, ಕಷ್ಟಕಾಠಿಣ್ಯಗಳಿಂದ, ಮುಕ್ತನನ್ನಾಗಿ ಮಾಡುತ್ತದೆ, ಎಂಬುದೇ

ಅರಿಸ್ಟಾಟಲನ ಕಲಾಸಮರ್ಥನದ ತಿರುಳು. ಮನುಷ್ಯನ ಭಾವರಾಗಗಳು, ಆಶೋತ್ತರಗಳು, ಕಷ್ಟಸುಖಗಳು, ಧ್ಯೇಯಸಂಕಲ್ಪಗಳು—ಇವುಗಳೇ ಪ್ರಧಾನಕಲಾವಸ್ತುಗಳೆಂದು ಹಿಂದೆಯೇ ಹೇಳಿದೆ. ಸ್ವರೂಪದಲ್ಲಿ ಇವುಗಳಲ್ಲೆಲ್ಲಾ ಒಂದು ಬಗೆಯ ಅಸಮಾಧಾನ, ಅಶಾಂತಿ, ತಲ್ಲಣಿಕೆ, ಇದ್ದೇ ಇರುವುದು. ಇವುಗಳನ್ನು ನಿಗ್ರಹಿಸಬೇಕೆಂದು ಪ್ರಯತ್ನಪೂರ್ವಕವಾಗಿ ಅವುಗಳನ್ನು ಅದುಮಿ ಅಡಗಿಸಿದಷ್ಟೂ ಅವುಗಳ ಬಲ ಇಮ್ಮಡಿಯಾಗಿ ಅದರಿಂದ ದೇಹಾರೋಗ್ಯಕ್ಕೂ ಚಿತ್ತಾರೋಗ್ಯಕ್ಕೂ ಅಪಾಯ ತಟ್ಟುವುದು. ಇಂಥ ಕಲಾವಸ್ತುಗಳಲ್ಲಿ ರಸವಿಲ್ಲ. ಆದರೂ ಕಲೆ ರಸೋತ್ಪಾದಕವಾದ ರೂಪಗಳನ್ನು ಅವುಗಳಿಗೆ ಕೊಡುವುದರಿಂದ, ಪರಸ್ಪರ ಸಮಂಜಸವಲ್ಲದ ಅಥವಾ ಉಚಿತವಲ್ಲದ ರೂಪ ಮತ್ತು ವಸ್ತುಗಳ ಸಂಯೋಗದಿಂದ ಒಂದುವಿಧವಾದ ಯಕ್ಷಿಣಿಯಂತಹ ಪರಿಣಾಮ ಫಲಿಸುತ್ತದೆ. ದಿನಜೀವನದ ಕಷ್ಟಕಾರ್ಪಣ್ಯಗಳ ಒತ್ತಾಯ ಸದ್ಯಕ್ಕೆ ತೆಗೆದುಹಾಕಲ್ಪಡುತ್ತದೆ, ಕ್ರಿಯಾಲೋಕದಲ್ಲಿ ಸಿಕ್ಕಿಕೊಂಡಿದ್ದ ಮಾನವನು ಈಗ ಕಲಾನುಭವಿಯಾಗಿ (ರಸಿಕನಾಗಿ) ಕಲ್ಪನಾಲೋಕದಲ್ಲಿ ವಿಹರಿಸುವುದಕ್ಕೆ ತೊಡಗುತ್ತಾನೆ, ತನ್ನೆದುರಿಗಿರುವ ಕಲಾಕೃತಿ ವಸ್ತುಸ್ಥಿತಿಯೆಂದೇ ಭ್ರಾಂತಿ ಹೊಂದುತ್ತಾನೆ, ಆತನ ರಸಾಸ್ವಾದನಾಚೈತನ್ಯ ಸ್ವತಂತ್ರವಾಗಿ ಕೆಲಸಮಾಡಲು ಹೊರಡುತ್ತದೆ, ಆನಂದದಿಂದ ಅವನ ಆತ್ಮವೇ ಪರವಶಗೊಳ್ಳುತ್ತದೆ. ಕಲಾನುಭವದಿಂದ ಆತ್ಮನಲ್ಲುಂಟಾಗುವ ಈ ಪರಿಣಾಮಕ್ಕೆ ಅರಿಸ್ಟಾಟಲನ ಪ್ರಯೋಗದಲ್ಲಿ "ಭಾವಸತ್ವಶುದ್ಧಿ" (catharsis) ಎಂದು ಹೆಸರು. ಈ ಕಾರಣದಿಂದ ಬಿಂಬ ಪ್ರತಿಬಿಂಬಗಳ ಲೋಕದಲ್ಲಿ ಚಲಿಸುವ ಕಲೆ, ಮನಸ್ಸಿನಲ್ಲಡಗಿರುವ ಮಾದರಿಗಳಿಗನುಸಾರವಾಗಿ ನಿರ್ಮಿಸುವ ಕಲೆ, ಭ್ರಾಂತಿ ಮೋಹಗಳನ್ನುಂಟುಮಾಡುವ ವಿದ್ಯೆಯನ್ನು ಚೆನ್ನಾಗಿ ಕಲಿತಿರಬೇಕು. ಕವಿ "ಅಸಂಭವವಾದ ಸತ್ಯಕ್ಕಿಂತಲೂ ಸಂಭವವಾದ ಮಿಥ್ಯವನ್ನೇ ಉತ್ತಮವೆಂದು ಆರಿಸಿಕೊಳ್ಳಬೇಕು"—ಹೀಗೆಂದು ಅರಿಸ್ಟಾಟಲನು ಅಭಿಪ್ರಾಯಪಡುತ್ತಾನೆ;—ರಸವತ್ತಾದ ಕಲೆಗೆ ಭ್ರಾಂತಿ ಮೋಹಗಳು ಎಷ್ಟು ಪ್ರಾಧಾನ್ಯವೆಂದು ಇದರಿಂದ ತೋರ್ಪಡುತ್ತದೆ.

ತೋರಿಕೆ, ಭ್ರಾಂತಿ, ಮೋಹ—ಈ ಶಬ್ದಗಳನ್ನುಪಯೋಗಿಸುವ ಕಲೆ ಸತ್ಯಸ್ಥಿತಿಯನ್ನು ಬಿಟ್ಟು ತನ್ನದೇ ಒಂದು ಪ್ರಪಂಚವನ್ನು ಸೃಷ್ಟಿಸುವುದೆಂದು ತಿಳಿಯಕೂಡದು. ಕಲೆಗೂ ಸತ್ಯಕ್ಕೂ ಬಹು ದೂರವಿಲ್ಲ. ಪ್ರಪಂಚವಸ್ತುಗಳು ಸತ್ಯದ ಛಾಯಾಮಾತ್ರವೇ ಎಂದು ಪ್ಲೇಟೊ ಹೇಳಿದ್ದೇ ತಪ್ಪು. ಸಾಮಾನ್ಯ ಪ್ರತ್ಯೇಕದಲ್ಲಿರುವುದೇ ಹೊರತು ಪ್ರತ್ಯೇಕವನ್ನು ಬಿಟ್ಟ ಬೇರೆ ಯಾವುದೋ ಒಂದು ಲೋಕದಲ್ಲಿದೆಯೆಂದು ತಿಳಿಯಕೂಡದು. ಪ್ರತ್ಯೇಕಪ್ರಪಂಚವೇ ಪಾರಮಾರ್ಥಿಕ ಸತ್ಯವನ್ನು ಒಳಗೊಂಡಿರತಕ್ಕುದು. ಅಂಥ ಪ್ರತ್ಯೇಕಗಳನ್ನೇ ಮೂಲವಸ್ತುಗಳನ್ನಾಗಿ ಇಟ್ಟುಕೊಂಡು ಅವುಗಳನ್ನು ಹೋಲುವಂತೆ ಪ್ರತಿಚಿತ್ರಗಳನ್ನು ನಿರ್ಮಿಸುವ ಕಲೆ ಸತ್ಯಕ್ಕೆ ವಿರೋಧವಾಗಿರಲಾರದು.

ಇಷ್ಟೇ ಅಲ್ಲ, ಕಲೆ ಪ್ರಕೃತಿವಸ್ತುಗಳಿಗಿಂತ ಹೆಚ್ಚು ಸ್ಪಷ್ಟವಾಗಿ ಸತ್ಯವನ್ನು ಬಿಂಬಿಸುತ್ತದೆ. ಕಲೆ ಪ್ರತ್ಯೇಕ ವಸ್ತುವನ್ನೇ ಮೂಲವನ್ನಾಗಿ ಭಾವಿಸುವುದೆಂದರೆ ಅದರ ಪ್ರತ್ಯೇಕಾಂಶವನ್ನೇ ಅನುಕರಿಸುತ್ತದೆಂದು ಅರ್ಥವಲ್ಲ: ಅದರ ಕ್ಷಣಿಕ ಪ್ರತ್ಯೇಕಾಂಶಗಳನ್ನೆಲ್ಲಾ ಹೊರಗೆ ಹಾಕಿ ಅದರ ಶಾಶ್ವತವಾದ ಪ್ರಾಧಾನ್ಯವಾದ ಗುಣಗಳನ್ನೇ ಆಯ್ದುಕೊಂಡು ಕೆಲಸಮಾಡುತ್ತದೆ. ಈ ಸಂದರ್ಭದಲ್ಲಿ ಅರಿಸ್ಟಾಟಲನ ರೂಪಸಿದ್ಧಾಂತವನ್ನು ನಾವು ಸ್ಮರಣೆಗೆ ತಂದುಕೊಳ್ಳಬೇಕು. ಪ್ರತಿ ಒಂದು ವಸ್ತುವಿಗೂ ಅದಕ್ಕೆ ತಕ್ಕ ರೂಪವನ್ನು ಕೊಡಬೇಕೆಂದು ಪ್ರಕೃತಿ ಒದ್ದಾಡುತ್ತದೆ, ಆದರೆ ಪ್ರಧಾನದಲ್ಲಿರುವ ನಿರೋಧಶಕ್ತಿಯ ದೆಸೆಯಿಂದ, ಅದರ ಪೂರ್ಣರೂಪವನ್ನು ಕೊಡಲಾಗುವುದಿಲ್ಲ. ಕಲಾವಿದನು ಪ್ರತ್ಯೇಕದ ಹೃದಯವನ್ನು ಭೇದಿಸಿ ಅದನ್ನು ನಿರ್ಮಿಸುವುದರಲ್ಲಿ ಪ್ರಕೃತಿಯ ಉದ್ದೇಶವೇನಿತ್ತು, ಅದು ಪ್ರತ್ಯೇಕಕ್ಕೆ ಹೊದಿಸಲು ಪ್ರಯತ್ನಮಾಡಿದ ಪೂರ್ಣರೂಪ ಯಾವುದು, ಎಂಬುದನ್ನು ಬುದ್ಧಿ ಅರಿವುಗಳ ಸಂಯೋಗರೂಪವಾದ ಕಲ್ಪನಾಶಕ್ತಿಯಿಂದ, ತನ್ನ ಆತ್ಮನಲ್ಲಡಗಿರುವ ಕಲಾಚಕ್ಷುಸ್ಸಿನಿಂದ, ರಸಚಕ್ಷುಸ್ಸಿನಿಂದ, ಪ್ರತ್ಯಕ್ಷವಾಗಿ ದರ್ಶನಮಾಡಿ ಆ ರೂಪವನ್ನು ತಾನು ನಿರ್ಮಿಸುವ ಪ್ರತ್ಯೇಕದ ಹೋಲಿಕೆಗೆ ಸಂಪೂರ್ಣವಾಗಿ ಧಾರೆಯೆರೆಯುವನು. ಇದರಿಂದ ಸತ್ಯವೆಂಬುದು ಪ್ರಕೃತಿನಿರ್ಮಾಣದಲ್ಲಿ ಸಂಭ

ವಿಸಬಹುದಾದ ದೋಷನ್ಯೂನಗಳಿಂದಲೂ, ಅಲ್ಲಿ ರೂಪಸಂಪ್ರಕಾಶಕ್ಕೆ ಅಡ್ಡಿಬರುವ ಉಪಾಧಿಗಳಿಂದಲೂ, ಬಿಡುಗಡೆ ಹೊಂದಿ, ಕಲೋಪಾಸಕನ ಕೈಯಲ್ಲಿ ಪರಿಶುದ್ಧವಾಗಿ, ಪುಟಹಾಕಿದ ಚಿನ್ನದಂತೆ, ಉತ್ಕೃಷ್ಟರೂಪವನ್ನು ಧರಿಸುವುದು. ಈ ಅರ್ಥದಲ್ಲಿ ವಸ್ತುಸ್ಥಿತಿಗೂ ಕಲ್ಪನೆಯ ಪ್ರದರ್ಶನಕ್ಕೂ (imaginative representation) ಯಾವ ವಿಧವಾದ ವಿರೋಧವೂ ಇರಲಾರದು: ವಿರೋಧವಿಪರ್ಯಾಸಗಳಿಂದ ಬಿಡುಗಡೆ ಹೊಂದಿ, ವಿಜಾತೀಯ ಸಂಸ್ಕಾರಗಳಿಂದಲೂ ಆಕಸ್ಮಿಕದ ಅವಾಂತರಗಳಿಂದಲೂ ನಿವೃತ್ತಿಹೊಂದಿ, ತನ್ನ ಸ್ವಭಾವಧರ್ಮಕ್ಕನುಸಾರವಾಗಿ ವಿಕಾಸವಡೆದ ವಸ್ತುಸ್ಥಿತಿಯೇ ಕಲ್ಪನೆಯ ಪ್ರದರ್ಶನವೆನಿಸುವುದು. ಈ ಅರ್ಥದಲ್ಲಿ ಕಲಾಕೃತಿಯನ್ನು ಪ್ರಕೃತಿಯ ಧ್ಯೇಯವೆನ್ನಬಹುದು. ಪ್ರಕೃತಿ ಸದ್ರೂಪಗಳನ್ನು ನಿರ್ಮಿಸಲಾರದೆಂದಲ್ಲ; ಸಜೀವಪ್ರಪಂಚದಲ್ಲಿ ಮರಳಿಮರಳಿ ತನ್ನ ಹಿಂದಿನ ಅಪಜಯಗಳನ್ನು ವಿಜಯಮಾಡುವುದಕ್ಕೋಸ್ಕರ ಅದ್ಭುತವಾದ ಪ್ರಯತ್ನಗಳನ್ನು ಪ್ರಕೃತಿ ಹೂಡುವುದನ್ನು ನಾವೆಲ್ಲರೂ ಕಾಣಬಹುದು. ಕಲೋಪಾಸಿ ತನ್ನ ಅನುಕರಣರಾಜ್ಯದಲ್ಲಿ ಪ್ರಕೃತಿಯ ಈ ಪ್ರಗತಿಮಾರ್ಗವನ್ನೇ ಅನುಸರಿಸುತ್ತಾ ಒಂದೆರಡು ಹೆಜ್ಜೆ ಮುಂದೆ ಹೋಗುತ್ತಾನೆ: ಪ್ರಕೃತಿಯ ಸೂಚನೆಗಳನ್ನೇ ಹಿಡಿದು ಪ್ರಕೃತಿಯಂತೆಯೇ ತಾನೂ ವಸ್ತುಸ್ಥಿತಿಗಿಂತ "ಉತ್ತಮ"ವಾದುದನ್ನು ನಿರ್ಮಿಸಲು ತವಕಪಡುತ್ತಾನೆ. ಆತನು ಸೃಷ್ಟಿಸುವುದು ಅನುಭವದಲ್ಲಿ ಬರುವ ವಸ್ತು ತಾನಲ್ಲ, ಅದರ "ನಕಲೂ" ಅಲ್ಲ, ಅದಕ್ಕಿಂತಲೂ ಉತ್ಕೃಷ್ಟತರವಾದ ವಸ್ತುಸತ್ಯ, ವಸ್ತು ಪೂರ್ಣರೂಪವನ್ನು ತಾಳಿದರೆ ಎಂತು ಶೋಭಿಸುವುದೋ ಅಂತಹ ಧ್ಯೇಯಸ್ಥಿತಿ—ಧ್ಯೇಯ ವಸ್ತುಸ್ಥಿತಿಗಿಂತಲೂ ಉತ್ಕೃಷ್ಟತರವಾಗಿರುವುದು ಸಹಜವೇ ತಾನೆ.

ಈ ಕಾರಣದಿಂದ ಸಾಮಾನ್ಯವನ್ನು—ಪೂರ್ಣರೂಪವನ್ನು—ಅನುಕರಿಸುವ ಕಲೆ ಧ್ಯೇಯವನ್ನು ಅನುಕರಿಸುತ್ತದೆಂದು ಹೇಳಬಹುದು; ಕಲಾಕೃತಿಯನ್ನು "ಇಂದ್ರಿಯುಗಳಿಗೆ ಪ್ರಕಟವಾಗುವ ರೀತಿಯಲ್ಲಿ, ಧ್ಯೇಯಕ್ಕನುಗುಣವಾಗಿ ಸುಷ್ಠುಗೊಳಿಸಲ್ಪಟ್ಟ—ಸುಧಾರಿಸಲ್ಪಟ್ಟ—

ಶೀಲ ಭಾವ ಕರ್ಮಗಳ, ಮಾನವ ಜೀವನದ, ಪ್ರದರ್ಶನ" ಎಂದು ವರ್ಣಿಸಬಹುದು. ಇಂತಹ ಅನುಕರಣ ಕಲೆಗಳಲ್ಲೆಲ್ಲಾ ಕಾವ್ಯವೇ ಅತ್ಯಂತ ಶ್ರೇಷ್ಠವಾದುದೆಂದು ಅರಿಸ್ಟಾಟಲನು ಅಭಿಪ್ರಾಯ ಪಡುತ್ತಾನೆ.

ಕಾವ್ಯಕ್ಕೆ ಅನ್ವಯಿಸುವ ರೀತಿಯಲ್ಲಿ "ಅನುಕರಣ" ಎಂದರೆ "ಸತ್ಯಗರ್ಭಿತವಾದ ಭಾವಕ್ಕೆ ಅನುಸಾರವಾಗಿ ನಿರ್ಮಿಸುವುದು" ಎಂಬ ಅರ್ಥ ಈಗ ಸ್ಪಷ್ಟವಾಗುವುದು. ಈ ಭಾವವನ್ನೇ ನಾವು ಸಾಮಾನ್ಯ ಅಥವಾ ಸಾರ್ವತ್ರಿಕವೆನ್ನುವುದು, ಇದೇ ವಸ್ತುವಿನ ನಿಜವಾದ ರೂಪ, ಅಥವಾ ಸ್ವರೂಪ. ವಸ್ತುವಿನಲ್ಲಿ ಅಂತರ್ಗತವಾಗಿರುವ ಈ ಸ್ವರೂಪ ಕಲಾಯೋಗಿಯ ಧ್ಯಾನಚಿತ್ತದಮೇಲೆ ತನ್ನ ಚಿತ್ರವನ್ನು ಇಂದ್ರಿಯರೂಪ ದಲ್ಲಿ ಕೆತ್ತುವುದು; ಈ ರೂಪವನ್ನು ಅನುಭವ ಕೊಡುವ ಕಲಾವಸ್ತುವಿನ ಮೇಲೆ ಪೂರ್ಣಾಕೃತಿಯಲ್ಲಿ ಒತ್ತುವುದೇ ಕಲಾವಿದನ ಕೌಶಲ್ಯ. ಇದು ಸಾಮಾನ್ಯಜನರಿಂದಾಗುವ ಕೆಲಸವಲ್ಲ. ಸಾಮಾನ್ಯದ ಸ್ವರೂಪವನ್ನು ಚಿತ್ತದಿಂದ ಆಕರ್ಷಿಸಿಕೊಂಡು, ಸರಳವಾದ, ಹಾಗೂ ಸಮ್ಮೋಹನಾಕಾರ ವಾದ, ಐಂದ್ರಿಯರೂಪವನ್ನು ಅದಕ್ಕೆ ಕೊಡುವುದೆಂದರೆ, ಇಂದ್ರಿಯ ಗೋಚರವಾದ ಸ್ಥಿತಿಯನ್ನು 'ನಕಲು' ಮಾಡುವುದೆಂದಲ್ಲ, ಪ್ರಕೃತಿ ಯೊಡನೆ ಸ್ಪರ್ಧೆಮಾಡಿ, ಆಕೆಯನ್ನು ಮೀರಿಸುವುದೆಂದರ್ಥ; ಪ್ರಕೃತಿಯ ಉದ್ದೇಶವನ್ನೇ ಸಮರ್ಪಕವಾದ ರೀತಿಯಲ್ಲಿ ಪೂರ್ತಿಗೊಳಿಸುವುದೆಂದರ್ಥ. ಪ್ಲೇಟೊ ಪ್ರಕೃತಿವ್ಯಾಪಾರಕ್ಕಿಂತ ಕಲೆಯ ಕಾರ್ಯ ಕೀಳಾದುದೆಂದು ನಂಬಿ ಪ್ರೌಢನಿರ್ಮಾಣಗಳಿಗೆಲ್ಲಾ ನಾವು ಪ್ರಕೃತಿಯ ಕಲಾಶಾಲೆಗೆ ಹೋಗಬೇಕೆಂದು ಹೇಳಿದ್ದನು: ಈಗ ಅರಿಸ್ಟಾಟಲನಾದರೋ "ರವಿ ಕಾಣದುದ ಕವಿ ಕಂಡ"ನೆಂದು ಕವಿಯ ಸ್ಫೂರ್ತಿಯನ್ನು ಪ್ರಶಂಸೆ ಮಾಡಿದನು.

ಕಲೆಯ ಗುರಿಯೇನು? ಪ್ರಯೋಜನಾತ್ಮಕಕಲೆಗಳು ಜೀವನದ ಅವಶ್ಯಕ ಸಲಕರಣೆಗಳನ್ನು ಒದಗಿಸಿಕೊಡುವುವು—ಈ ಅರ್ಥದಲ್ಲಿ ಬೇರೆ ಒಂದು ಅಂತ್ಯಗುರಿಗೆ ಅವು ಕೇವಲ ಉಪಕರಣಗಳು. ಕುಶಲಕಲೆಗಳು ಹಾಗಲ್ಲ. ಸುಖವನ್ನೀಯುವುದೇ ಅವುಗಳ ಗುರಿ, ಉಪಯೋಗ ಅನುಪ

ಯೋಗದ ಮಾತು ಇಲ್ಲಿ ಸಲ್ಲುವುದಿಲ್ಲ.[೧] ಆದರೆ ಕುಶಲಕಲೆಗಳಿಂದ ದೊರಕುವ ಸುಖ ಉತ್ತಮತರದ್ದಾಗಿರಬಹುದು, ಮಧ್ಯಮ ಅಥವಾ ಅಧಮ ಜಾತಿಗಳಿಗೆ ಸೇರಿದುದಾಗಿಯೂ ಇರಬಹುದು. ಕುಶಲ ಕಲೆಗಳಲ್ಲೆಲ್ಲಾ ಅರಿಸ್ಟಾಟಲನು ಸಂಗೀತವನ್ನೂ ಕಾವ್ಯವನ್ನೂ ಉತ್ತಮ ವಾದುವೆಂದೆಣಿಸಿ ಇವೆರಡರಲ್ಲಿಯೂ ಕಾವ್ಯಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುತ್ತಾನೆ. ಇವುಗಳಿಂದ ದೊರಕುವ ಸುಖವೇ ಶುದ್ಧವಾದುದು, ಪಾವನವಾದುದು, ದೀರ್ಘಕಾಲ ನಿಲ್ಲತಕ್ಕದು. ಪ್ರಹಸನ, ಕೀಳುತರದ ಚಿತ್ರಕಲೆ, ಇವುಗಳು ನಗದವರನ್ನು ನಗಿಸಬಹುದು, ಒಂದು ತರದ ವಿನೋದವನ್ನೂ ಹರ್ಷವನ್ನೂ ಕೊಡಬಹುದು. ಆದರೆ ಸುಖವೆಂದರೆ ಜ್ಞಾನಪೂರ್ವಕವಾದ ಆನಂದ—ಇದರಲ್ಲಿ ಪೂರ್ಣ ಶಾಂತಿಯೂ ಪೂರ್ಣ ಚೈತನ್ಯವೂ ಏಕಕಾಲದಲ್ಲಿ ಮಿಳಿತವಾಗಿರುವುವು. ಚಿತ್ರಕಲೆ, ವಾಸ್ತು ಶಿಲ್ಪ, ಇವುಗಳನ್ನು ಚರ್ಚಿಸುವಾಗ ಅರಿಸ್ಟಾಟಲನು ಆನಂದದ ಜ್ಞಾನ ಸಂಬಂಧವನ್ನು ಪ್ರಧಾನವೆಂದೆಣಿಸುತ್ತಾನೆ; ಆದರೆ ಕಾವ್ಯವಿಮರ್ಶೆ ಮಾಡುವಾಗ ರಸಾನಂದದಲ್ಲಿ ಜ್ಞಾನಬಲಕ್ಕಿಂತಲೂ ಭಾವಬಲದ ಸಂಸ್ಕಾರವೇ ಹೆಚ್ಚೆಂದು ವಿಶದಪಡಿಸುತ್ತಾನೆ. ಕಾವ್ಯದಿಂದುಂಟಾಗುವ ಆನಂದವನ್ನು ತತ್ವಶಾಸ್ತ್ರದ ಗುರಿಯಾದ ಧ್ಯಾನಾನಂದದೊಡನೆ ಹೋಲಿಸ ಬಹುದು. ಸ್ವರೂಪದಲ್ಲಿ ಎರಡೂ ಬೇರೆಬೇರೆಯಾದರೂ ಉತ್ಕೃಷ್ಟತೆ ಯಲ್ಲಿ ಎರಡೂ ಒಂದೇ. ಒಟ್ಟಿನಲ್ಲಿ ಕಲಾತ್ಮಕವಾದ ಸುಖ ಕೇವಲ ಇಂದ್ರಿಯ ಸುಖವಲ್ಲ, ಜ್ಞಾನಪೂರ್ವಕವಾದುದು. ಕವಿ ತಾನು ಜ್ಞಾನ ಬದ್ಧನಾಗಿ, ಜ್ಞಾನಬಲದಿಂದ ಕೆಲಸ ಮಾಡಿದಲ್ಲದೆ ಆತನ ಕಾವ್ಯ ದಿಂದ ಜ್ಞಾನಪೂರ್ವಕವಾದ ಸುಖ ಅದೆಂತು ದೊರಕುವುದು? ಈ ಕಾರಣದಿಂದ ಅರಿಸ್ಟಾಟಲನು ಸಾಕ್ರಟೀಸನ ಆವೇಶ ಸಿದ್ಧಾಂತವನ್ನು ಗೌಣವೆಂದೆಣಿಸಿ, ಕವಿಗೆ ಸ್ವಾಭಾವಿಕಶಕ್ತಿ ಇರಬೇಕು, ಈ ಸ್ವಾಭಾವಿಕ

---

೧. ಆಧುನಿಕ ಕಲಾಜಿಜ್ಞಾಸುಗಳನೇಕರು ಕಲೆಯಲ್ಲಿ ಲಲಿತಕಲೆ ಮತ್ತು ಪ್ರಯೋಜನಾತ್ಮಕ ಕಲೆ ಎಂದು ಮೇಲೆ ಹೇಳಿದ ವಿಭಾಗವನ್ನೂ ಅವುಗಳಿಗೆ ಕೊಟ್ಟ ವ್ಯತ್ಯಾಸವನ್ನೂ ಒಪ್ಪುವುದಿಲ್ಲ. ಈ ವ್ಯತ್ಯಾಸ "ಅಸಹ್ಯಕರ"ವಾದುದೆಂದೂ ಕಲೆಯೆಲ್ಲಾ ಸ್ವರೂಪದಲ್ಲಿ ಒಂದೇ ಎಂದೂ ಅವರು ಅಭಿಪ್ರಾಯಪಡುತ್ತಾರೆ.

ಶಕ್ತಿಯೇ ಆವೇಶವೆಂದು ತೀರ್ಮಾನಿಸುತ್ತಾನೆ. ಶಾಶ್ವತವಾದ, ಜ್ಞಾನ ಪೂರ್ವಕವಾದ ಬಲವೇ ಆವೇಶ. ರುದ್ರನಾಟಕಕವಿ ತಾನು ವರ್ಣಿಸುವ ರಾಗಭಾವಗಳ ಮರ್ಮವೇನೆಂಬುದನ್ನು ಬುದ್ಧಿಪೂರ್ವಕವಾಗಿ ತಿಳಿಯಬೇಕಲ್ಲದೆ ತನ್ನ ಅಂಗಚೇಷ್ಟೆಯಿಂದ ಕಥಾನಕವನ್ನು ಅಭಿನಯಿಸುವ ರೂಢಿಯನ್ನೂ ಹೊಂದಿರಬೇಕು.

ಅರಿಸ್ಟಾಟಲನ ಕಾವ್ಯ-ಕಲಾ-ಸಿದ್ಧಾಂತದಲ್ಲಿ ಆಧುನಿಕ ವಿದ್ವಾಂಸರು ಅನೇಕ ವಿಧವಾದ ದೋಷಗಳನ್ನು ಎತ್ತಿ ತೋರಿಸಿದ್ದಾರೆ. ಮಾನವಜೀವನವೇ ಕಾವ್ಯದ ಪ್ರಧಾನವಸ್ತುವೆಂದು ಬಗೆದು ಬಾಹ್ಯ ಪ್ರಪಂಚವನ್ನು—ಪ್ರಕೃತಿ ವ್ಯಾಪಾರ ವೈಭವಗಳನ್ನು—ತಿರಸ್ಕರಿಸಿದುದು ದೊಡ್ಡ ತಪ್ಪು. ಮಾನವಜೀವನದಲ್ಲಿಯೂ ಸರ್ವಸಾಧಾರಣವಾದ, ಸಾಮಾನ್ಯಗುಣಗಳೇ ಕಲಾಯೋಗ್ಯವಾದ ವಸ್ತುಗಳು, ವ್ಯಕ್ತಿಯ ಆತ್ಮೀಯ ರಾಗಭಾವ ಮನೋವ್ಯಾಪಾರಗಳು ಕಾವ್ಯದ ಮೂಲಗಳಾಗಲಾರವು. ಅರಿಸ್ಟಾಟಲನು ಈ ನಂಬಿಕೆಯನ್ನು ಪಡೆದಿದ್ದ ಕಾರಣ, ವೀರ ಕಾವ್ಯ (epic) ಮತ್ತು ನಾಟಕಗಳನ್ನೇ ಕಾವ್ಯದ ಮುಖ್ಯ ಪ್ರಭೇದಗಳೆಂದು ಭಾವಿಸಿ ಆತ್ಮೀಯ ಭಾವರಾಗಗಳನ್ನು ಪ್ರದರ್ಶಿಸುವ ಗೀತವನ್ನು (lyric) ಕಾವ್ಯವೆಂದೇ ಎಣಿಸಲಿಲ್ಲ. ಆಧುನಿಕ ಸಾಹಿತ್ಯದಲ್ಲಿ ಈ ಗೀತಕಾವ್ಯವೇ ಹೆಚ್ಚು ಪ್ರಾಶಸ್ತ್ಯವನ್ನು ಪಡೆದಿರತಕ್ಕುದು. ಕಲೆ ಪ್ರತ್ಯೇಕವನ್ನೇ ಅವಲಂಬಿಸಿರುತ್ತದೆಂಬ ಮತವನ್ನು ಖಂಡಿಸಿ ಕಲೆಯೂ ತತ್ವದಂತೆ ಸಾಮಾನ್ಯಗಳನ್ನೇ ಪ್ರದರ್ಶಿಸುತ್ತದೆಂದು ಪ್ಲೇಟೋವನ್ನು ತಿದ್ದಿದ ಅರಿಸ್ಟಾಟಲನು ಗೀತಕಾವ್ಯದಲ್ಲಿಯೂ ನಿಜವಾದ ಶಾಶ್ವತವಾದ ಸರ್ವಜನರಂಜಕವಾದ ಸಾಮಾನ್ಯ ಸರಣಿಯೊಂದಿರುವುದೆಂದು ತಿಳಿಯಲಾರದೆ ಹೋದನು. ಅಲ್ಲದೆ ಕಾವ್ಯದ ಗುರಿ ತದನುಗುಣವಾದ ಒಂದು ಪ್ರೌಢ ಜಾತಿಯ ಸುಖವೆಂದು ಅರಿಸ್ಟಾಟಲನು ಸಾರುತ್ತಾನೆ. ಕಲೆಗೂ ಸುಖಕ್ಕೂ ಏನು ಸಂಬಂಧ? ಸುಖವನ್ನು ಕಲೆಯ ಗುರಿಯನ್ನಾಗಿ ಮಾಡುವುದರಿಂದ ಕುಶಲಕಲೆಗಳನ್ನೂ ಪ್ರಯೋಜನಾತ್ಮಕಕಲೆಗಳ ಮಟ್ಟಲಿಗೆ ಇಳಿಸಿದಂತಾಗಲಿಲ್ಲವೆ? ಪ್ರತಿಯೊಂದು ಕಲೆಗೂ ಅದಕ್ಕನು ಸಾರವಾದ ರೂಪಪರಿಪೂರ್ಣತೆಯುಂಟು. ಈ ರೂಪಪರಿಪೂರ್ಣತೆಯನ್ನು

ಪಡೆಯುವುದೇ ಅದರ ಮುಖ್ಯ ಆಶಯವಾಗಿರಬೇಕಲ್ಲದೆ ಪ್ರೇಕ್ಷಕರ ಅಥವಾ ಶ್ರೋತೃಗಳ ಕಿವಿಕಣ್ಮನಗಳನ್ನು ತಣಿಸುವಂಥ ಪರಕೀಯ ಉದ್ದೇಶವನ್ನು ಅದೇಕೆ ಮುಂದಿಟ್ಟುಕೊಳ್ಳಬೇಕು? ಇದಕ್ಕೆ ಅರಿಸ್ಟಾಟಲನ ಪರವಾಗಿ ನಾವು ಕೊಡಬಹುದಾದ ಉತ್ತರವಿಷ್ಟೆ. ಮಾನವ ಜೀವನವನ್ನೇ ಕಲಾವಸ್ತುವನ್ನಾಗಿ ಮಾಸಲಿಟ್ಟ ಅರಿಸ್ಟಾಟಲನು ಆ ಜೀವನಕ್ಕೆ ಸಂಬಂಧಪಡದ ಹಾಗೆಯೇ ಕಲೆಯ ಧ್ಯೇಯವನ್ನು ಹೇಗೆ ನಿರ್ಣಯಿಸಲೊಪ್ಪುವನು? ಯಾವ ವಿಧವಾದ ಮಾನವವ್ಯಾಪಾರವೇ ಆಗಲಿ ಜನಜೀವನಕ್ಕೆ ನಿಕಟವಾದ ಸಂಬಂಧವನ್ನು ಹೊಂದದೆ ಹೋದರೆ ನಿರರ್ಥಕವಾಗುವುದು. ಆ ಜೀವನಕ್ಕೆ ಉತ್ಕೃಷ್ಟವಾದ ಆನಂದವನ್ನು ತರುವುದೇ ಕಲೆಯ ಗುರಿಯೆಂದು ಹೇಳಿದರೆ ತಪ್ಪೇನು? ಈ ರೀತಿಯಾಗಿ ಮಾನವ ಸೌಖ್ಯವನ್ನೇ ಮುಖ್ಯ ಗುರಿಯಾಗೆಣಿಸಿದ ಅರಿಸ್ಟಾಟಲನ ತತ್ವಶಾಸ್ತ್ರವನ್ನು —ಕಲಾಸಿದ್ಧಾಂತವನ್ನು — ಒಂದು ಬಗೆಯ ಮಾನವಶ್ರೇಷ್ಠತಾಪಂಥ (humanism) ಎಂದೇ ಹೇಳಬಹುದು. ಇಷ್ಟರಮೇಲೆ ಆನಂದವೆಂಬುದು ಕಲೆಗೆ ಹೊರಗಾದ, ಪರಕೀಯವಾದ, ಗುರಿಯೂ ಅಲ್ಲ. ಕಲೆಯಲ್ಲಿಯೇ ಆರೂಢವಾಗಿರುವ, ಕಲೆಯಿಂದಲೇ ಜನಿತವಾದ, ಕಲೆಯಿಂದಲೇ ಪೋಷಿತವಾದ, ಕಲಾಪರಿಪೂರ್ಣಕ್ಕೆ ಹೆಗ್ಗುರುತಾದ, ಅದೊಂದು ಕಳೆ. ಅದನ್ನು ಹೊಂದಿರುವ ಕಲೆಯ ಬಲವೇ ಬಲವಲ್ಲವೇ?

ಕೊನೆಯದಾಗಿ, ಅರಿಸ್ಟಾಟಲನು ಕಲೆಯನ್ನು ನೀತಿಯ ಶೃಂಖಲೆಗಳಿಂದ ಸಂಪೂರ್ಣವಾಗಿ ಬಿಡಿಸುವುದಿಲ್ಲವೆಂದು ಆಧುನಿಕರ ಅಸಂತುಷ್ಟಿ. ಇದನ್ನು ವಿಸ್ತಾರವಾಗಿ ಚರ್ಚಿಸಲು ಇಲ್ಲಿ ಅವಕಾಶವಿಲ್ಲ: ಚರ್ಚೆಯಲ್ಲಿ ಯಾವ ಪಕ್ಷದವರೇ ಆಗಲಿ ಒಂದು ವಿಧವಾದ ಕಾವನ್ನು ಬಿಟ್ಟು ಸಮಾಹಿತಮನಸ್ಸಿನಿಂದ ಮಾತನಾಡಬೇಕೆಂದರೂ ಕಷ್ಟವೇ. ಧರ್ಮಜೀವನಕ್ಕೆ ಗ್ಲಾನಿಯನ್ನು ತರುವುದೆಂದಲ್ಲವೇ ಪ್ಲೇಟೊ ಕಲೆಯನ್ನು ಖಂಡಿಸಿದುದು? ಅರಿಸ್ಟಾಟಲನು ಈ ಭಾಗದಲ್ಲಿ ಪ್ಲೇಟೋವಿಗಿಂತ ಸಾವಿರಪಾಲು ಮೇಲು. ಕಾವ್ಯದ ಉತ್ಕೃಷ್ಟತೆಯನ್ನು ನಿರ್ಧರಿಸಬೇಕಾದರೆ ಅದು ಕಾವ್ಯರೀತಿಯಲ್ಲಿ ಶ್ರೇಷ್ಠವಾಗಿರುವುದೇ ಎಂದು ಕೇಳಬೇಕೇ ಹೊರತು ಅದು ಸಚ್ಛೀಲವನ್ನು ಬೋಧಿಸುತ್ತದೆಯೇ ಎಂದು ಕೇಳಲಾಗದು. ರಸಾನುಭವವೂ

ಧಾರ್ಮಿಕಶಿಕ್ಷಣವೂ ಒಂದೇ ಅಲ್ಲ. ಕಾವ್ಯದಲ್ಲಿ ಶುದ್ಧವೆನ್ನುವುದೂ ಆಚಾರದಲ್ಲಿ ಶೀಲವೆನ್ನುವುದೂ ಬೇರೆಬೇರೆ. ಕಲಾಸತ್ಯವೂ ಶಾಸ್ತ್ರಸತ್ಯವೂ ಅಥವಾ ಚಾರಿತ್ರಕಸತ್ಯವೂ ಒಂದಲ್ಲ. ಕಾವ್ಯದ ಸತ್ಯಕ್ಕೂ, ಶಾಸ್ತ್ರದ ತಾತ್ವಿಕವಾದ ಸತ್ಯಕ್ಕೂ ಸಂಬಂಧವಿಲ್ಲ. ಕವಿ ಶಾಸ್ತ್ರವಿಷಯಗಳನ್ನು ತಪ್ಪು ರೀತಿಯಲ್ಲಿ ವರ್ಣಿಸಿದರೆ ಅದರಿಂದ ಅವನ ಕಾವ್ಯಕ್ಕೆ ಕುಂದುಂಟಾಗ ಲಾರದು: ಕಾವ್ಯದ ತಪ್ಪುನೆಪ್ಪುಗಳನ್ನು ನಿರ್ಣಯಿಸುವ ನಿಯಮ ನಿಬಂಧನೆಗಳೇ ಬೇರೆ. ಪರಿಪೂರ್ಣವೆನಿಸುವ ಕಲೆಗೆ ಪರಿಪೂರ್ಣರೆನಿಸುವ ಪಾತ್ರಗಳನ್ನೇ ಕೊಡಬೇಕೆಂಬ ಅಗತ್ಯವೇನೂ ಇಲ್ಲ. ಈ ಮುಂತಾದ ಅಭಿಪ್ರಾಯಗಳನ್ನು ಹೊಂದಿದ್ದ ಅರಿಸ್ಟಾಟಲನು ಕಲೆಯ ಸ್ವಾತಂತ್ರ್ಯ ವನ್ನು ಎಷ್ಟು ಜೋಪಾನವಾಗಿ ಕಾಪಾಡಿದನೆಂದು ಗೊತ್ತಾಗದೆ ಇರದು. ಆದರೂ ಸಮಗ್ರದೃಷ್ಟಿಯಲ್ಲಿ ಕಲೆ ಧರ್ಮಜೀವನಕ್ಕೆ ಸಹಾನುಭೂತಿ ಯನ್ನು ಕೊಡಬೇಕೇ ಹೊರತು ಅದಕ್ಕೆ ವಿರೋಧವಾಗಿ ಹೋಗಲಾಗದು ಎಂದು ಆತನು ಕೊನೆಯಮಾತಾಡುತ್ತಾನೆ. ಕಾವ್ಯ—ಅದರಲ್ಲಿಯೂ ರುದ್ರನಾಟಕ—ಜೀವನವನ್ನು—ಜೀವನದ ಸುಖದುಃಖಗಳನ್ನು—ಅನು ಕರಿಸುತ್ತದೆ, ಅಂದಮೇಲೆ ಅದರಲ್ಲಿ ಅಲ್ಪವಾದುದಾಗಲಿ ಹೇಯವಾದು ದಾಗಲಿ ಹೇಗೆ ಸ್ಥಾನಪಡೆದೀತು? ಉತ್ತಮಕಲೆಯು ಹೆಗ್ಗುರುತು ಸುಖ ವೆಂಬುದೇನೋ ನಿಜ; ಆದರೆ ಸುಷ್ಠುಗೊಳಿಸಲ್ಪಟ್ಟ ಜೀವನದ ಅನುಕರಣ ದಿಂದುಂಟಾಗುವ ಸುಖ ಆತ್ಮಸ್ವಾಸ್ಥ್ಯವನ್ನು ಕೊಡತಕ್ಕುದಾಗಿರಬೇಕು. ನೀಚ ಧ್ಯೇಯಗಳಿಂದುಂಟಾಗುವ ಸುಖ ಇಂಥ ಸ್ವಾಸ್ಥ್ಯವನ್ನು ತರ ಲಾರದು. ಅಂದರೆ ಪಾತ್ರಗಳಲ್ಲಿ ನೈತಿಕಕಳಂಕವಿರಕೂಡದೆಂದಲ್ಲ. ಕತೆಯ ರಚನೆಗೆ-ಅದರ ಕಟ್ಟಿಗೆ ಅಥವಾ ಪರಿಪೂರ್ಣಕ್ಕೆ-ಯಾವವಿಧವಾದ ಕಳಂಕ ವನ್ನು ಬೇಕಾದರೂ ಸಮಯೋಚಿತವಾಗಿ ಉಪಯೋಗಿಸಿಕೊಳ್ಳಬಹುದು. ಇದೇ ಕಲಾಕೌಶಲ. ಆದರೆ ಅದು ಅಲ್ಪವಾಗಿರಕೂಡದು; ಉದ್ದಾಮ ರೀತಿಯಲ್ಲಿದ್ದು ಪ್ರೇಕ್ಷಕರ ಅಥವಾ ವಾಚಕರ ಹೃದಯವನ್ನು ತನ್ನ ಮಹತ್ವದಿಂದ ತಟ್ಟುವಂತಹುದಾಗಿರಬೇಕು. ಹಾಗಿದ್ದರೆ ಒಟ್ಟಿನಲ್ಲಿ ಅದು ಸತ್ಪರಿಣಾಮಕಾರಿಯಾಗುವುದು. ನೀತಿಯನ್ನೇ ಜೀವನದ ಸೂತ್ರವಾಗಿ ಭಾವಿಸಿದ ಅರಿಸ್ಟಾಟಲನಂತಹ ತಾತ್ವಿಕನು ಮತ್ತೇನನ್ನು ಹೇಳುವನು?

ಆಧುನಿಕರಿಗೆ ಇದು ಅಸಮಾಧಾನಕರ. ಕಲೆಯು ಸಲುವಾಗಿಯೇ ಕಲೆಯೆಂದು ಅರಿಸ್ಟಾಟಲನು ಕೂಗಬೇಕಾಗಿತ್ತೆಂದು ಇವರ ಹಲುಬು. ಫಲ ಪರಿಣಾಮಗಳು ಏನಾದರೂ ಆಗಲಿ, ಕಲೆ ತನ್ನ ರೂಪಸಂಪೂರ್ತಿಯನ್ನು ಪಡೆದರೆ ಸಾಕೆಂದು ಇವರ ಮತ. ಪ್ರತಿಯೊಂದು ಗುಣಕ್ಕೂ—ದುರ್ಗುಣವಾಗಲಿ ಸದ್ಗುಣವಾಗಲಿ—ಅದರ ನೈಜವಾದ, ಶುದ್ಧವಾದ, ಪೂರ್ಣವಾದ ಪ್ರಭೆಯೊಂದಿದೆ. ಆ ಪ್ರಭೆಯನ್ನು ಆಕರ್ಷಿಸಿ ಚಿತ್ರನಿರ್ಮಾಣದಲ್ಲಿ ಎತ್ತಿ ತೋರಿಸುವುದೇ ಪರಮೋತ್ಕೃಷ್ಟವಾದ ಕಲೆಯೆಂದು ಇವರು ತಿಳಿಯುವರು. ಈ ಚರ್ಚೆಯಲ್ಲಿ ನಾವು ಹೇಳಬೇಕೆನ್ನುವುದಿಷ್ಟೆ: ಧರ್ಮಬೋಧನೆಯನ್ನೇ ಗುರಿಯಾಗಿಟ್ಟುಕೊಂಡು ಪ್ರತಿ ಒಂದು ಪಾತ್ರದ ಬಾಯಿಯಲ್ಲಿಯೂ "ಯದಾಯದಾಹಿ........ಭಾರತ" ಎಂದು ಉಪದೇಶ ಹೇಳಿಸುವ ನಾಟಕವಾಗಲಿ, ಧರ್ಮೋಜ್ಜೀವನವನ್ನೇ ಉದ್ದೇಶವಾಗಿಟ್ಟುಕೊಂಡು ಬರೆದ ಕಾವ್ಯವಾಗಲಿ, ಕಲಾರೀತಿಯಲ್ಲಿ ಅಧಮಾಧಮವೆಂದು ನಿಸ್ಸಂಶಯವಾಗಿ ಒಪ್ಪುತ್ತೇವೆ. ಆದರೆ ಕಲಾರೀತಿಯಲ್ಲಿಯೇ ಪರಾಕಾಷ್ಠತೆಯನ್ನು ಪಡೆದ ಕಾವ್ಯವಾದರೂ ಸಮಗ್ರದೃಷ್ಟಿಯಲ್ಲಿ ಜನಜೀವನದ ಮೇಲೆ ಶುಭ ಸಂಸ್ಕಾರವನ್ನು ಬೀರದೆ ಅಲ್ಪ ಅಥವಾ ನೀಚಮಾರ್ಗಗಳಿಗೆ ಜನರ ಮನಸ್ಸನ್ನು ಬಾಗಿಸುವುದಾದರೆ ಅದು ಉತ್ಕೃಷ್ಟ ಕಲೆಯೆಂದು ಮನಃಪೂರ್ವಕವಾಗಿ ಹೇಳಲು ಹೆದರುವೆವು.[೧]

---

೧ ಕಲೆಗೂ ಧರ್ಮಜೀವನಕ್ಕೂ ಯಾವ ಸಂಬಂಧವಿರಬೇಕೆಂಬುವನ್ನು ತಿಳಿಯಲಪೇಕ್ಷಿಸುವವರು ೧೯೩೪ನೆಯ ಡಿಸಂಬರ್ ಸಂಚಿಕೆಯ "ಜಯಕರ್ಣಾಟಕ"ದಲ್ಲಿ ಈ ಲೇಖಕನು ಬರೆದಿರುವ "ಇಂದಿನವರ ಜೀವನದ ಧ್ಯೇಯಗಳು" ಎಂಬ ಲೇಖನ ಮಾಲೆಯ ಮೂರನೆಯ ಲೇಖಾಂಕವಾದ "ನೂತನ ಸ್ವಾತಂತ್ರ್ಯಮಾರ್ಗ" ಎಂಬ ಲೇಖನವನ್ನು ನೋಡಬಹುದು. ಹಾಗೆಯೇ ಈ ಪುಸ್ತಕದಲ್ಲಿ ಪ್ಲೇಟೋನ ಕಲಾ ಸಿದ್ಧಾಂತದ ಚರ್ಚೆಯನ್ನು ನೋಡಿ. ಮತ್ತು ಈ ಲೇಖಕನ "The Metaphysics of Value" ಎಂಬ ಗ್ರಂಥದಲ್ಲಿ ೭ನೆಯ ಅಧ್ಯಾಯದ "ಲೀಲಾವಿನೋದಗಳು" ಎಂಬ ೨೧ನೆಯ ಪ್ರಕರಣವನ್ನೂ, "ಸೌಂದರ್ಯ ಮೀಮಾಂಸ—ಕಲೆ ಮತ್ತು ಸೌಂದರ್ಯ" ಎಂಬ ೧೧ನೆಯ ಅಧ್ಯಾಯದ "ಕಲಾವಸ್ತು" ಎಂಬ ೧೭ನೆಯ ಪ್ರಕರಣವನ್ನೂ, "ಕಲಾ ಮುಕ್ತಿ" ಎಂಬ ೨೯ನೆಯ ಪ್ರಕರಣವನ್ನೂ, "ನೀತಿ ಧರ್ಮ" ಎಂಬ ೧೨ನೆಯ ಅಧ್ಯಾಯದಲ್ಲಿ, "ಕಲೆ ಮತ್ತು ನೀತಿಧರ್ಮಗಳ ಸಂಬಂಧ" ಎಂಬ ೨೧ನೆಯ ಪ್ರಕರಣವನ್ನೂ, ೧೪ನೆಯ ಅಧ್ಯಾಯದಲ್ಲಿ "ಕಲೆ ಮತ್ತು ನೀತಿಧರ್ಮಗಳ ಸಂಬಂಧ ಮುಂದುವರಿದುದು" ಎಂಬ ೩೨ನೆಯ ಪ್ರಕರಣವನ್ನೂ ನೋಡಬಹುದು.

## ಅಧ್ಯಾಯ ೨೦

## ಎಪಿಕ್ಯೂರಿಯನರ ಭೋಗತತ್ತ್ವ

ಜನರ ನೀತಿನಡತೆಗಳನ್ನು ಸರಿಪಡಿಸಿ ಅವರನ್ನು ಸನ್ಮಾರ್ಗ ಪ್ರವರ್ತಕರನ್ನಾಗಿ ಮಾಡುವುದೇ ಸಾಕ್ರಟೀಸನ ಘನವಾದ ಧ್ಯೇಯ ವಾಗಿತ್ತೆಂಬುದನ್ನು ಹಿಂದೆಯೇ ತಿಳಿಸಿದೇವೆ. ಉಳಿದ ತತ್ತ್ವವಿಚಾರ ಗಳೆಲ್ಲವೂ ಜನರನ್ನು ನೀತಿವಂತರನ್ನಾಗಿ ಮಾಡಲು ಉಪಕರಣಗಳಷ್ಟೆ ಎಂದು ಆತನ ಅಭಿಪ್ರಾಯವಿದ್ದಿತು. ಪ್ಲೇಟೋವಿನಲ್ಲಿಯೂ ನೀತಿ ಶಾಸ್ತ್ರ ಅತಿ ಪ್ರಾಮುಖ್ಯವಾದ ಸ್ಥಾನವನ್ನು ಪಡೆದಿದ್ದಿತು. ಅರಿಸ್ಟಾ ಟಲನು ಜ್ಞಾನತತ್ತ್ವವನ್ನು ಪರಿಪಕ್ವಗೊಳಿಸುವ ಧ್ಯಾನಾಸಕ್ತಿಯನ್ನು ವಿಶೇಷವಾಗಿ ಕೊಂಡಾಡಿದನೆಂಬುದೇನೋ ನಿಜ; ಆದರೂ ಧರ್ಮ ಶೀಲನಾದ ಪುರುಷನೇ ಪ್ರಪಂಚದಲ್ಲಿ ಅತ್ಯಂತ ಸ್ತೋತ್ರಾರ್ಹನಾದವ ನೆಂದು ಅವನೂ ಒಪ್ಪಿಕೊಂಡನು. ಪ್ಲೇಟೊ, ಅರಿಸ್ಟಾಟಲ್—ಇವರ ಕಾಲಾನಂತರ ಇವರ ಶಿಷ್ಯವರ್ಗದವರು ತಮ್ಮತಮ್ಮ ಗುರುಬೋಧನೆ ಗಳನ್ನು ಪ್ರಚಾರಮಾಡುವುದರಲ್ಲಿಯೇ ಸಾಹಸಪಟ್ಟರಲ್ಲದೆ ಹೊಸದಾದ ಸಿದ್ಧಾಂತ ಯಾವುದನ್ನೂ ಏರ್ಪಡಿಸಲಿಲ್ಲ.

ಆಗಿನಕಾಲದ ಸಾಮಾಜಿಕ ಸ್ಥಿತಿಗಳಾದರೋ ಬಹು ಶೋಚನೀಯ ವಾಗಿದ್ದುವು. ಜನಸಾಮಾನ್ಯದ ಶೀಲವಿಚಾರ ಉತ್ತಮಗೊಳಿಸಲ್ಪಡಲಿಲ್ಲ; ಮತಾಭಿಪ್ರಾಯಗಳಂತೂ ಮೂಲೆಗೊತ್ತಿಡಲ್ಪಟ್ಟಿದ್ದುವು. ಇಹಲೋಕದ ಸುಖದೋಡಾಟಗಳಲ್ಲಿಯೇ ಜನರು ಕಾಲವನ್ನು ಕಳೆಯುತ್ತಿದ್ದರು. ಅದರಲ್ಲೂ ಆ ಕಾಲದಲ್ಲಿ ಗ್ರೀಸ್ ದೇಶಕ್ಕೆ ಬಂದೊದಗಿದ ದೀರ್ಘಕಾಲದ ಯುದ್ಧಗಳೂ ಕ್ಷಾಮಡಾಮರಗಳೂ ದೇಶವನ್ನೆಲ್ಲಾ ಅಲ್ಲೋಲಕಲ್ಲೋಲ ವನ್ನಾಗಿ ಮಾಡಿ ಜನರ ಸ್ಥಿತಿಗತಿಗಳನ್ನು ಸಂಪೂರ್ಣವಾಗಿ ಕಲಕಿ ಬಿಟ್ಟಿದ್ದುವು. ಪೆಲೊಪ್ಪನೀಷಿಯರ್ಗ ಯುದ್ಧ; ಕಾರಿಂತಿನಯುದ್ಧ; ಥೀಬ್ಸಿನ ಯುದ್ಧ—ಇವೆಲ್ಲವೂ ಗ್ರೀಸ್‌ದೇಶದಲ್ಲಿದ್ದ ಬೇರೆಬೇರೆ 'ನಗರಸಂಸ್ಥಾನ'ಗಳ ಶಕ್ತಿಯನ್ನೂ ಪರಸ್ಪರ ಮೈತ್ರಿಯನ್ನೂ ಹಾಳುಮಾಡಿ ಕಡೆಯಲ್ಲಿ ಮ್ಯಾಸಿಡೋ ದೇಶದ ದೊರೆಯಾದ ಫಿಲಿಪ್ ಎಂಬವನ ಕೈಗೆ ಗ್ರೀಸ್‌ದೇಶ ಸುಲಭವಾಗಿ ಸಿಕ್ಕಿಬೀಳುವಂತೆ ಮಾಡಿದುವು. ಅನಂತರದಲ್ಲಿ ಫಿಲಿಪ್ಪನ ಪುತ್ರನಾದ

ಅಲೆಗ್ಸಾಂಡರ್ ಮಹಾಶಯನು ಪರ್ಷಿಯಾ ದೇಶವನ್ನು ಜಯಿಸಿ ತನ್ನ ಅಗಾಧವಾದ ರಾಜ್ಯವನ್ನೆಲ್ಲಾ ತನ್ನ ಸರದಾರರಿಗೆ ಹಂಚಿಬಿಟ್ಟನು. ಮ್ಯಾಸಿಡೋನಿಯನ್ನರ ಕಾಲವಾದ ಬಳಿಕ ಗ್ರೀಸ್‌ದೇಶ ಹೊಸದಾಗಿ ಪ್ರಪಂಚವನ್ನೆಲ್ಲಾ ಆಕ್ರಮಿಸಿಕೊಳ್ಳುತ್ತಿದ್ದ ರೋಮ್ ಚಕ್ರಾಧಿಪತ್ಯದ ಭಾಗವಾಗಿ ಪರಿಣಮಿಸಿತು.

ಕಾಲದಶೆ ಈ ರೀತಿಯಲ್ಲಿದ್ದಾಗ ಜನರ ನೀತಿನಡತೆಗಳ ಕಡೆಗೆ ಪಂಡಿತರ ಗಮನ ಓಡಿದ್ದು ಆಶ್ಚರ್ಯವೇನೂ ಇಲ್ಲ. ಪ್ರಪಂಚ ಚರಿತ್ರೆಯಲ್ಲಿ ಸಂಧಿಕಾಲಗಳೆಂಬವು ಕೆಲವು ಬರುವುದುಂಟು; ಪ್ರಾಚೀನರ ಸಮಾಜ ಸಂಸ್ಥೆಗಳೆಲ್ಲಾ ಕಾರಣಾಂತರಗಳಿಂದ ಭಿನ್ನಭಿನ್ನವಾಗುವುವು; ಎಲ್ಲಿ ನೋಡಿದರೂ ಜನರು ಧರ್ಮಭ್ರಷ್ಟರಾಗಿ ದುರ್ಮಾರ್ಗವರ್ತನೆಯುಳ್ಳವರಾಗುವರು. ದೇಶ ಅನಾಯಕವಾಗಿ, ಜನರ ರಾಜ್ಯಸ್ವಾತಂತ್ರ್ಯ ಕೈತಪ್ಪಿ, ರಾಜ್ಯಸಂಸ್ಥೆಗಳೆಲ್ಲಾ ಒಡೆದುಹೋಗಿ, ದಂಡೆತ್ತಿಬಂದು ಧ್ವಂಸಮಾಡಲೆಳಸುವ ಧೂರ್ತರಿಗೇ ಕೈಮುಗಿಯುವ ಅವಸ್ಥೆ ಬರುವುದು. ಇಂಥ ಸಮಯಗಳಲ್ಲಿ ವಿವೇಕಿಗಳಾದವರು ಜೀವನದ ಹುಟ್ಟು, ಸ್ಥಿತಿ, ಗುರಿಗಳನ್ನು ವಿಚಾರಮಾಡಲು ಪ್ರಯತ್ನಪಡುವುದು ಸ್ವಾಭಾವಿಕವಾದುದೇ ಸರಿ. ಜನರ ಮನಸ್ಸಿಗೆ ಸಹಿಸಲಶಕ್ಯವಾದ ಬೇಸರ ಹತ್ತಿ, ಈ ಜೀವನವೆಂಬುದೇನು, ಇದರಿಂದ ಪ್ರಯೋಜನವೇನು, ಈ ಜೀವನವನ್ನು ಸಾರ್ಥಕಗೊಳಿಸುವುದು ಹೇಗೆ, ಎಂಬೀ ಮೊದಲಾದ ಪ್ರಶ್ನೆಗಳನ್ನು ಹಾಕಲು ಉಪಕ್ರಮಿಸುವರು. ಕಷ್ಟತರವಾದ ಸಂಸಾರದಲ್ಲಿ ಸಿಕ್ಕಿ, ಪ್ರಪಂಚದ ಜಂಜಾಟದಲ್ಲಿ—ಜೀವನದ ಗುದ್ದಾಟದಲ್ಲಿ—ಪೆಟ್ಟುತಿಂದು ನೋವುಪಟ್ಟವರೆಲ್ಲಾ ವಿವೇಕವನ್ನು ತಂದುಕೊಂಡು, ಜೀವನದ ಹರಿದಾಟದಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು, ಹಣೆಯಮೇಲೆ ಕೈಯಿಟ್ಟುಕೊಂಡು, —ಇದೇನು, ಈ ವಿಧವಾದ ಸ್ಥಿತಿಗೆ ವಿಮೋಚನೆಯೆಂಬುದೇ ಇಲ್ಲವೇ, ಕಣ್ಣು ಮುಚ್ಚಿಕೊಂಡು ನಾವು ಓಡುತ್ತಿರುವ ಈ ಓಟಕ್ಕೆ ಅಂತ್ಯ ಗುರಿಯೆಂಬುದೇ ಇಲ್ಲವೇ, ಮನುಷ್ಯನ ಪರಮಾರ್ಥಪ್ರಯೋಜನ ಯಾವುದು; ಆತನಿಗೆ ಅತ್ಯಂತ ಹಿತವನ್ನುಂಟುಮಾಡುವ ಪರಮಧ್ಯೇಯ ಯಾವುದು; ಮನುಷ್ಯನು ತನ್ನ ಜನ್ಮಸಾರ್ಥಕ್ಯಗೊಳಿಸಿಕೊಳ್ಳಬೇಕಾದರೆ

ತನ್ನ ಜೀವನವನ್ನು ಯಾವ ರೀತಿಯಲ್ಲಿ ನಡಸುತ್ತಿರಬೇಕು ; ಯಾವುದ ಕ್ಕೋಸ್ಕರ ನಾವು ಈ ಸಂಸಾರದಲ್ಲಿ ಒದ್ದಾಡಬೇಕು— ಈ ತೆರನಾದ ಪ್ರಯೋಜನ ಪ್ರಶ್ನೆಗಳನ್ನು ಹಾಕಿ ಅವುಗಳಿಗೆ ಉತ್ತರ ಕಂಡುಹಿಡಿಯಲು ಪ್ರಯತ್ನಪಡುವರು. ಗ್ರೀಸ್‌ದೇಶದಲ್ಲಿ ಈಗ ನಾವು ವರ್ಣಿಸುತ್ತಿರುವ ಕಾಲದಲ್ಲಿ ಈ ವಿಧವಾದ ಪ್ರಶ್ನೆಗಳು ತಲೆದೋರಿ, ವಿಧ ವಿಧ ಪಂಗಡ ದವರು ವಿಧ ವಿಧವಾದ ಉತ್ತರಗಳನ್ನು ಕೊಟ್ಟರು. ಎಪಿಕ್ಯೂರಿಯನ್ ಗುಂಪಿಗೆ ಸೇರಿದವರು ಸುಖವೇ ಮಾನವನ ಪರಮಾರ್ಥ ಪ್ರಯೋಜನ ವೆಂದೂ ಪ್ರಪಂಚದಲ್ಲಿ ಪ್ರತಿ ಒಂದು ಪ್ರಾಣಿಯೂ ಸುಖಜೀವನವನ್ನು ಗಳಿಸಿಕೊಳ್ಳಲು ಸ್ವಾಭಾವಿಕವಾಗಿ ಶ್ರಮಪಡುವುದರಿಂದ ಸುಖಾವಲಂಬ ನೆಯೇ ನಮ್ಮ ಪರಮ ಧ್ಯೇಯವಾಗಿರಬೇಕೆಂದೂ ಸಾರಿದರು. ಈ ಪ್ರಪಂಚದ ನುಗ್ಗು ತಾಕುಗಳಲ್ಲಿ, ಬಡಿದಾಟ ಕಚ್ಚಾಟಗಳಲ್ಲಿ, ಯಾವನು ನಿಶ್ಚಲಚಿತ್ತನಾಗಿದ್ದುಕೊಂಡು ಸಾಧ್ಯವಾದಷ್ಟು ಸ್ವಪ್ರಯೋಜನವನ್ನೂ ಸ್ವಸುಖವನ್ನೂ ಗಳಿಸಿಕೊಳ್ಳಲು ಪ್ರಯತ್ನಿಸುವನೋ ಅವನೇ ಜಾಣ ನೆಂದೆನಿಸುವನು. ಸ್ಟೋಯಿಕರೆಂಬವರು ಸುಖ ನಮ್ಮ ಪರಮ ಶ್ರೇಯವಾಗಲಾರದು ; ಶೀಲ, ಸದ್ಗುಣ, ಸೌಜನ್ಯ, ಕರ್ತವ್ಯದೀಕ್ಷೆ, ಆತ್ಮಸಂಯಮ, ಲೋಕಸಂಗ್ರಹಾರ್ಥವಾಗಿ ಸ್ವಪ್ರಯೋಜನ ಪರಿತ್ಯಾಗ —ಒಂದು ಮಾತಿನಲ್ಲಿ, ಧರ್ಮಜೀವನವೇ ನಮ್ಮ ಸರ್ವೋತ್ತಮವಾದ ಹಿತವೆಂದು ವಾದಿಸಿದರು. ಸುಖ ನಮ್ಮ ಪ್ರೇಯವಸ್ತುವಾಗಿರ ಬಹುದು. ಆದರೆ ಧರ್ಮಜೀವನವೇ ನಮ್ಮ ಪರಮಶ್ರೇಯ. ನಾವು ಬಯಸುವ, ಆಶೆಪಡುವ ಪ್ರೇಯವೂ, ನಾವು ನ್ಯಾಯವಾಗಿ ಬಯಸ ಬೇಕಾದ, ಸಿದ್ಧಿಮಾಡಿಕೊಳ್ಳಲು ಪ್ರಯತ್ನಿಸಬೇಕಾದ, ನಮ್ಮ ಶ್ರೇಯವೂ ಪರಸ್ಪರ ವ್ಯತ್ಯಾಸವುಳ್ಳವುಗಳೆಂದೂ ಪ್ರತ್ಯೇಕಗಳೆಂದೂ ತಿಳಿಯಬೇಕು.

ಆದುದರಿಂದ ಜೀವನವನ್ನು ಸುಸೂತ್ರವುಳ್ಳುದಾಗಿ ನಡಸುವುದೇ —ನೈತಿಕಸುಧಾರಣೆಯೇ—ಎಪಿಕ್ಯೂರಿಯನರ ಮತ್ತು ಸ್ಟೋಯಿಕರ ಪ್ರಥಮ ಕರ್ತವ್ಯವಾಯಿತು. ಆದರೂ ತಮ್ಮ ತಮ್ಮ ಮತಗಳನ್ನು ಜ್ಞಾನಪೂರ್ವಕವಾಗಿ, ಸಕಾರಣವಾಗಿ ಸಾಧಿಸಿ ತೋರಿಸಬೇಕೆಂದು ಇಬ್ಬರೂ ತಿಳಿದಿದ್ದರು. ಈರೀತಿಯಲ್ಲಿ ನಾವು ನಡೆಯಬೇಕು ಎಂದು

ಯಾರಾದರೂ ಹೇಳಿದರೆ, ಏಕೆ ಅದೇ ರೀತಿಯಲ್ಲಿ ನಡೆಯಬೇಕು, ಬೇರೆ ಮಾರ್ಗವಿಲ್ಲವೆ ಎಂಬ ಚರ್ಚೆ ಬರುವುದು ಸಹಜವೇ ಸರಿ. ನಾವಿರುವ ಪ್ರಪಂಚದ ಮೂಲ, ಅದರ ಸ್ವಭಾವ, ಇವೇ ಮೊದಲಾದ ಅಧ್ಯಾತ್ಮ ವಿಚಾರಗಳನ್ನು ಮಾಡಿದಲ್ಲದೆ ನಮ್ಮ ಆತ್ಮಶ್ರೇಯ ಇದೇ ಸರಿ ಎಂದು ನಿರ್ಧರಿಸಲಾಗುವುದಿಲ್ಲ. ಪ್ರಪಂಚದ ವಿಷಯವಾಗಿ ನಾವು ಹೇಗೆ ಹೇಗೆ ಅಭಿಪ್ರಾಯಪಟ್ಟರೆ ಅದಕ್ಕನುಸಾರವಾಗಿ ನಮ್ಮ ಜೀವನ ವನ್ನು ಏರ್ಪಡಿಸಲು ಅನುಕೂಲವಾಗುವುದು. ಆದುದರಿಂದ ಪ್ರಪಂಚ ತತ್ವಶಾಸ್ತ್ರವನ್ನು ತಿಳಿಯದೇ ಇದ್ದರೆ ನೀತಿಶಾಸ್ತ್ರ ನಿರಾಧಾರವಾಗಿ ಪ್ರಯೋಜನವಾಗಲಾರದು. ಈ ಕಾರಣದಿಂದ ಎಪಿಕ್ಯೂರಿಯನರೂ ಸ್ಟೋಯಿಕರೂ ಕರ್ಮವ್ಯವಸಾಯದಲ್ಲಿ ಮಹದಾಸಕ್ತಿಯುಳ್ಳವರಾಗಿ ದ್ದರೂ ಜ್ಞಾನಸಿದ್ಧಾಂತವನ್ನು ಮರೆಯಲಿಲ್ಲ; ನೀತಿಶಾಸ್ತ್ರ ಪ್ರಚಾರಕ ರಾದರೂ ಅಧ್ಯಾತ್ಮ ಶಾಸ್ತ್ರವನ್ನೇ ತಮ್ಮ ನೀತಿಸಿದ್ಧಾಂತಗಳ ತಳಹದಿ ಯನ್ನಾಗಿ ಮಾಡಿದರು.

ಆದುದರಿಂದ ಸತ್ಯಜ್ಞಾನವನ್ನು ಪಡೆಯುವುದು ಹೇಗೆ? ಸತ್ಯವನ್ನು ಮಿಥ್ಯದಿಂದ ಬೇರೆ ಮಾಡುವುದೆಂತು ? ಸತ್ಯವೆಂದರೇನು ? ಅದರ ಮೂಲ ಯಾವುದು? ಇವೇ ಮೊದಲಾದ ಪ್ರಶ್ನೆಗಳು ಅಗತ್ಯವಾಗಿ ತಲೆಹಾಕುವುವು. ಇವುಗಳಿಗೆಲ್ಲಾ ತರ್ಕಶಾಸ್ತ್ರ ಸಮಾಧಾನವಾದ ಉತ್ತರಗಳನ್ನು ಕೊಡು ವುದು. ಆದುದರಿಂದ ನಮ್ಮ ಜೀವನದ ಪರಮ ಧ್ಯೇಯವನ್ನು ಕಂಡು ಹಿಡಿಯಬೇಕಾದರೆ ಪ್ರಥಮದಲ್ಲಿ ನ್ಯಾಯಶಾಸ್ತ್ರವನ್ನೂ ಅಧ್ಯಾತ್ಮಶಾಸ್ತ್ರ ವನ್ನೂ ಪರಿಶೋಧಿಸಬೇಕು.

ಪುರಾತನ ಕಾಲದಲ್ಲಿ ಭೋಗತತ್ವವನ್ನು ನೀತಿಸೂತ್ರವನ್ನಾಗಿ ಮಾಡಿ ಯೂರೋಪ್ ಖಂಡದಲ್ಲೆಲ್ಲಾ ಅದು ಈಗಲೂ ಬೇರೂರಿ ಕೊಂಡಿರುವಷ್ಟು ಅದಕ್ಕೆ ಶಕ್ತಿಯಿತ್ತು ಪ್ರಚಾರಮಾಡಿದವನು ಎಪಿಕ್ಯೂ ರಸ್ ಎಂಬ ತಾತ್ವಿಕನು. ಈತನ ಪ್ರಪಂಚತತ್ವಶಾಸ್ತ್ರವೆಲ್ಲಾ ಸ್ವಲ್ಪ ಹೆಚ್ಚು ಕಡಮೆ ಡೆಮಾಕ್ರಿಟಸ್ ಎಂಬವನ ತತ್ವಶಾಸ್ತ್ರದ ಪ್ರತಿಯೆಂದೇ

ಹೇಳಬಹುದು. ಈತನು ಸೇಮೂಸ್ ದ್ವೀಪದಲ್ಲಿ ಕ್ರಿ. ಪೂ. ೩೪೧ರಲ್ಲಿ ಜನಿಸಿದನು. ನೌಸಿಫೇನಸ್ ಎಂಬ ಗುರುವಿನ ಬಳಿ ಡೆಮಾಕ್ರಿಟಸ್ಸಿನ ಬರವಣಿಗೆಗಳನ್ನೆಲ್ಲಾ ಅಭ್ಯಾಸ ಮಾಡಿ ಗ್ರೀಸ್‌ದೇಶದ ಅನೇಕ ನಗರಗಳಲ್ಲಿ ತನ್ನ ಮತವನ್ನು ಬೋಧಿಸುತ್ತ ಕಡೆಯಲ್ಲಿ ಕ್ರಿ. ಪೂ. ೩೦೬ರಲ್ಲಿ ಅಥೆನ್ಸ್ ನಗರಕ್ಕೆ ಬಂದು ಅಲ್ಲಿ ಒಂದು ವಿದ್ಯಾಶಾಲೆಯನ್ನು ಸ್ಥಾಪಿಸಿ ನಿಂತನು. ಸಾವಿರಾರು ಜನರು—ಪುರುಷರು, ಸ್ತ್ರೀಯರೂ ಸಹ—ಈತನ ಶಿಷ್ಯರಾಗಿ ಕ್ರಿ. ಪೂ. ೨೭೦ರಲ್ಲಿ ಈತನು ಮರಣ ಹೊಂದುವವರೆಗೂ ಈತನನ್ನು ಸೇವಿಸುತ್ತಿದ್ದರು. ಯೂರೋಪ್ ದೇಶದ ಜ್ಞಾನಿಗಳಲ್ಲಿ ಈತನಷ್ಟು ಜನಗಳ ಕೈಯಿಂದ ಅನ್ಯಾಯ ಹೊಂದಿದವರು ಮತ್ತೆ ಯಾರೂ ಇರಲಾರರು. ಈತನ ಬೋಧನೆಗಳನ್ನು ಜನರು ತಪ್ಪು ತಪ್ಪಾಗಿ ತಿಳಿದುಕೊಂಡು ಅನುಷ್ಠಾನದಲ್ಲಿ ವೈಪರೀತ್ಯಗಳನ್ನಾಚರಿಸಿದ್ದರ ಫಲವಾಗಿ ಈತನ ಹೆಸರೇ ದುಷ್ಪ್ರವರ್ತನೆಗೂ ವಿಷಯಲಂಪಟತ್ವಕ್ಕೂ ಸಾಮ್ಯವಾಗಿ ಪರಿಣಮಿಸಿರುವುದೆಂದರೆ ಈತನಿಗೆ ಅನ್ಯಾಯವಲ್ಲದೆ ಮತ್ತೇನು?

ಸುಖಜೀವನವನ್ನು ಹೊಂದಲು ಸಹಾಯಮಾಡುವ ಮಾರ್ಗವನ್ನು ಕಂಡುಹಿಡಿಯುವುದೇ ಸಮಸ್ತ ತತ್ವಶಾಸ್ತ್ರದ ಮೂಲಸೂತ್ರವಾಗಿರಬೇಕು. ಕೇವಲ ಜ್ಞಾನದಿಂದೇನೂ ಆಗಬೇಕಾದುದಿಲ್ಲ; ಜ್ಞಾನ ಕರ್ಮದಲ್ಲಿ ಫಲಿಸಿ ತನ್ಮೂಲಕ ಮಾನವನ ಜೀವನವನ್ನು ಸುಖಪಡಿಸಲು ಶಕ್ತಿಯುಳ್ಳುದಾಗಿರಬೇಕು. ಮನುಷ್ಯನ ಜೀವನಕ್ಕೆ ಯಾವ ವಿಧವಾದ ವ್ಯತ್ಯಾಸವನ್ನೂ ತರದಿರುವ— ಗಣಿತ, ರೇಖಾಗಣಿತ, ಸಂಗೀತ, ಜ್ಯೋತಿಷಶಾಸ್ತ್ರ— ಈ ಮೊದಲಾದ ಶಾಸ್ತ್ರಗಳ ಅಭ್ಯಾಸ ವ್ಯರ್ಥವಾದುದು: ಅದರಿಂದ ನಮಗೆ ಕಿಂಚಿತ್ತಾದರೂ ಪ್ರಯೋಜನವಿಲ್ಲ. ಸತ್ಯಾಸತ್ಯವಿವೇಕವನ್ನು ತಿಳಿದುಕೊಳ್ಳಬೇಕಾದರೆ ಸತ್ಯಜ್ಞಾನಕ್ಕೆ ಒಂದು ಕಟ್ಟು, ನ್ಯಾಯಸೂಚಕವಾದ ಒಂದು ಪ್ರಮಾಣ, ಒಂದು ಒರೆಗಲ್ಲು, ಅವಶ್ಯಕವಾಗಿರುವುದು. ಇಂಥ ಪ್ರಮಾಣವನ್ನು ಕಂಡುಹಿಡಿಯಲು ತರ್ಕಶಾಸ್ತ್ರ ಸಹಾಯಮಾಡುವುದರಿಂದ ತಕ್ಕಮಟ್ಟಿಗೆ ನ್ಯಾಯಶಾಸ್ತ್ರವನ್ನು ಅಭ್ಯಾಸಮಾಡಬೇಕು. ಪ್ರಪಂಚ ಹೇಗೆ ಉತ್ಪತ್ತಿಯಾಯಿತು,

ಅದರ ಸ್ವಭಾವ, ಪರಿಣಾಮಗಳೇನು ಎಂಬ ಜ್ಞಾನ ನೀತಿಶಾಸ್ತ್ರಕ್ಕೆ ತಳಹದಿಯೋಪಾದಿಯಲ್ಲಿರುವುದರಿಂದ ತಕ್ಕಮಟ್ಟಿಗೆ ಈ ಪ್ರಪಂಚತತ್ತ್ವ ಶಾಸ್ತ್ರ (ಭೌತಶಾಸ್ತ್ರ)ವನ್ನೂ ತಿಳಿದುಕೊಂಡಿರಬೇಕು. ಇಂಥ ಸತ್ಯಜ್ಞಾನ ದಿಂದ, ಅಜ್ಞಾನದಿಂದಲೋ ಮೂಢಭಕ್ತಿಯಿಂದಲೋ ಜನಿತವಾಗುವ ಆಧ್ಯಾತ್ಮಿಕ, ಆಧಿಭೌತ ಮತ್ತು ಆಧಿದೈವಿಕವಾದ ಭಯೋತ್ಪಾತಗಳು (ದೈವ, ಪಿಶಾಚ, ರೋಗ, ಸಾವು—ಈ ಕಾರಣಗಳಿಂದ ಹುಟ್ಟುವ ಭಯಗಳು) ಸಂಪೂರ್ಣವಾಗಿ ನಿವೃತ್ತಿಯಾಗಿ ಜನರು ನಿರ್ಭಯ, ನಿಶ್ಚಲ ಚಿತ್ತರಾಗಿ ಸುಖವನ್ನು ಅನುಭವಿಸಲು ಶಕ್ತಿಯುಳ್ಳವರಾಗುವರು. ಒಟ್ಟಿನಲ್ಲಿ, ಪ್ರಪಂಚ ವ್ಯಾಪಾರಗಳಲ್ಲಿ ದೈವಿಕ, ಅಮಾನುಷ ಅಥವಾ ಅಸ್ವಾಭಾವಿಕ ಕಾರಣಗಳು ಯಾವುವೂ ಇಲ್ಲವೆಂದೂ, ಎಲ್ಲವೂ ಸ್ವಾಭಾವಿಕ ಪ್ರಕೃತಿ ವ್ಯಾಪಾರಗಳೆಂದೂ, ದೇವರುದಿಂಡರುಗಳೆಂಬವರು ಮೂಢರು ನಂಬಿರುವ ಪ್ರಕಾರವಾಗಿ ಇಲ್ಲವೇ ಇಲ್ಲದುದರಿಂದ ಅವರಿಗೆ ನಾವು ಭಯಪಡಬೇಕಾದ ಅಗತ್ಯವೇನೂ ಇಲ್ಲವೆಂದೂ, ಭೌತಶಾಸ್ತ್ರ ಬೋಧಿಸುವುದು.

### ನ್ಯಾಯ

ಯಾವ ಆಧಾರದಮೇಲೆ ನಿಂತರೆ ನಮ್ಮ ಪ್ರಮೇಯಗಳು ನಿಜ ವೆಂದೆನಿಸುವುವು? ಯಾವ ಸಂಬಂಧವನ್ನು ಹೊಂದಿದ್ದರೆ ನಮ್ಮ ಜ್ಞಾನ ಸತ್ಯಜ್ಞಾನವೆನಿಸುವುದು? ಇದೇ ನ್ಯಾಯಶಾಸ್ತ್ರದ ಮೂಲಪ್ರಶ್ನೆ. ಇಂದ್ರಿಯಾವಲೋಕನವೇ, ಪ್ರತ್ಯಕ್ಷವೇ ಸತ್ಯದ ಪ್ರಮಾಣ. ನಾವು ನೋಡುವ, ಕೇಳುವ, ಮುಟ್ಟಿನೋಡುವ, ಮೂಸಿನೋಡುವ, ಸವಿ ನೋಡುವ ವಿಷಯಗಳು—ಪಂಚೇಂದ್ರಿಯ ಜನ್ಯಜ್ಞಾನ—ಸತ್ಯವಾದುವು. ಪ್ರತ್ಯಕ್ಷ (ದರ್ಶನ)ವೇ ಪ್ರಮಾಣ; ಅವಗ್ರಹ ಅಥವಾ ಗ್ರಾಹ್ಯಗಳೇ (sensations) ಜ್ಞಾನದ ಮೂಲ. ಅವಗ್ರಹಗಳಿಲ್ಲದಿದ್ದರೆ, ಅಥವಾ ಅವು ಸತ್ಯವೆಂದು ನಾವು ನಂಬದಿದ್ದರೆ, ಜ್ಞಾನವೆಂಬುದೇ ಇಲ್ಲ. ಹಾಗಾದರೆ ಪ್ರತ್ಯಕ್ಷಾಭಾಸಗಳ ಅಥವಾ ಭ್ರಾಂತಿ ದರ್ಶನದ (Illusions) ವಿವರಣೆ ಯೇನು? ದರ್ಶನ ಅಯಥಾರ್ಥವಾದರೆ ಅವಗ್ರಹದ ದೋಷವೇನೂ ಇಲ್ಲ, ಇಂದ್ರಿಯಗಳ ತಪ್ಪಾವುದೂ ಇಲ್ಲ; ನಮ್ಮ ಅವಾಯ ಅಥವಾ

ನಿಶ್ಚಯ (percept) ಅಸಾಧುವಾದುದೆಂದು ಹೇಳಬೇಕು. ಪ್ರತ್ಯಕ್ಷ ಹಲವು ಪ್ರಸ್ಥಾನಗಳನ್ನು ಹೊಂದಿರುವುದೆಂದು ಹಿಂದೆಯೇ ಹೇಳಿದೇವೆಯಷ್ಟೆ. ಬಾಹ್ಯವಸ್ತುಗಳು ನಮ್ಮ ಇಂದ್ರಿಯಗಳ ಮೇಲೆ ತಮ್ಮ ಸಂಸ್ಕಾರವನ್ನು ಬೀರಿದ ನಂತರ ನಮಗೆ ಒಂದು ವಿಧವಾದ ಅನುಭವವುಂಟಾಗುವುದು ; ಇದೇ ಅವಗ್ರಹ ಅಥವಾ ಗ್ರಾಹ್ಯ ಅಥವಾ ಇಂದ್ರಿಯಪ್ರಜ್ಞೆಯೆಂದೆನಿಸುವುದು (Sensation). ಈ ಅನುಭವ ಉಂಟಾದಮೇಲೆ ಈ ಅವಗ್ರಹಗಳೇನು, ಇವು ಸತ್ಯವೋ, ಮಿಥ್ಯವೋ ಎಂಬುದನ್ನು ಕಂಡುಹಿಡಿಯುವುದೋ ಎನ್ನುವಹಾಗೆ ನಮ್ಮ ಚಿತ್ತ ಈ ಅವಗ್ರಹಗಳ ಕಡೆಗೆ ಗಮನವಿಟ್ಟು ಅವುಗಳಿಗೆ ತಕ್ಕ ರೂಪವನ್ನೂ ಆಕಾರವನ್ನೂ ಕೊಡುವುದು. ಅವಗ್ರಹಗಳ ಮೇಲೆ ನಡಸತಕ್ಕ ಈ ವಿಧವಾದ ಚಿತ್ತದ ಕಾರ್ಯಕ್ಕೆ ಈಹವೆಂದು ಜೈನಸಿದ್ಧಾಂತದಲ್ಲಿ ಹೇಳುತ್ತಾರೆ. ಕಡೆಯಲ್ಲಿ ಚಿತ್ತ ತನ್ನ ಕೆಲಸವನ್ನು ಪೂರೈಸಿ ಗ್ರಾಹ್ಯಗಳು ಇಂಥವೇ ಸರಿ, ನನಗೀಗ ಉಂಟಾದುದು ಮರದ ಅನುಭವ, ನಾನೀಗ ನೋಡುತ್ತಿರುವುದು ಹಸು, ಎಂದು ಗ್ರಾಹ್ಯಗಳನ್ನು ಅವುಗಳ ಮೂಲಕಾರಣಗಳಿಗೆ ಸಂಬಂಧಿಸಿದಮೇಲೆ ಫಲಿಸುವ ನಿಶ್ಚಯ ಜ್ಞಾನಕ್ಕೆ ಅವಾಯವೆಂದು ಜೈನ ತರ್ಕದಲ್ಲಿಯೂ, (percept) ನಿಶ್ಚಯವೆಂದು ಹಿಂದೂ ನ್ಯಾಯಶಾಸ್ತ್ರದಲ್ಲಿಯೂ ಹೇಳುತ್ತಾರೆ. ಎಪಿಕ್ಯೂರಸ್ಸಿನ ಸಿದ್ಧಾಂತದ ಪ್ರಕಾರ ಭ್ರಾಂತಿದರ್ಶನ ಇಂದ್ರಿಯಗಳ ಅಥವಾ ಅವಗ್ರಹಗಳ ದೋಷವಲ್ಲ; ಅವಗ್ರಹಗಳು ಇಂಥವೇ ಸರಿಯೆಂದು ನಿಶ್ಚಯಮಾಡುವ ಚಿತ್ತದ ಭ್ರಮೆಯ ಫಲ. ಅವಗ್ರಹಗಳೇನೋ ಬಾಹ್ಯವಸ್ತುಗಳ ಯಥಾರ್ಥವಾದ ಬಿಂಬಗಳು ; ಆದರೆ ಚಿತ್ತ ಅವುಗಳನ್ನು ಬೇರೆ ಪದಾರ್ಥಗಳಿಗೆ ಅನುಸಂಧಿಸಬಹುದು ; ಇಲ್ಲವೆ ಈ ಪ್ರತಿಬಿಂಬಗಳು ಬಾಹ್ಯವಸ್ತುವನ್ನು ಬಿಟ್ಟುಬಂದು ನಮ್ಮ ಇಂದ್ರಿಯಗಳೊಡನೆ ಸಂಯೋಗವಾಗುವುದಕ್ಕೆ ಪೂರ್ವದಲ್ಲಿಯೇ ಮಧ್ಯೆ ಕಾರಣಾಂತರಗಳಿಂದ ವ್ಯತ್ಯಾಸ ಹೊಂದಬಹುದು. ಈ ದ್ವಿವಿಧಕಾರಣಗಳಿಂದಲೂ ನಮ್ಮ ಚಿತ್ತ ಭ್ರಮೆಗೊಂಡು (ತಪ್ಪು ನಿಶ್ಚಯಗಳನ್ನು ಪಡೆದು) ಪ್ರತ್ಯಕ್ಷಾಭಾಸಗಳನ್ನು ಅಥವಾ ಅಯಥಾರ್ಥ ದರ್ಶನವನ್ನುಂಟುಮಾಡುತ್ತದೆ. ಆದರೂ ನಮ್ಮ ಸ್ವಾನುಭವವನ್ನು ಅನೇಕಾವರ್ತಿ ಪರೀಕ್ಷಿಸುವುದರಿಂದಲೂ ನಮ್ಮ

ಪ್ರತ್ಯಕ್ಷಗಳನ್ನು ಇತರರ ದರ್ಶನಗಳೊಂದಿಗೆ ಹೋಲಿಸಿ ನೋಡುವುದರಿಂದಲೂ ಯಥಾರ್ಥಜ್ಞಾನವನ್ನು ಪಡೆಯಬಹುದು.

ಅವಗ್ರಹಗಳಲ್ಲದೆ ಅವುಗಳನ್ನೇ ಆಧಾರವಾಗಿ ಉಳ್ಳ ಸಾಮಾನ್ಯ ಭಾವಗಳೂ ಸಹ ಸ್ವತಸ್ಸಿದ್ಧವಾದುವು, ಪ್ರಮಾಣವಾದುವುಗಳು. ಆದರೆ ಪ್ಲೇಟೊ ಮತ್ತು ಅರಿಸ್ಟಾಟಲನು ಹೇಳಿದಂತೆ ಈ ಸಾಮಾನ್ಯಗಳು ಅಥವಾ ರೂಪಗಳು ಸ್ವತಃ ಸತ್ವಗಳಲ್ಲ; ಇವುಗಳಿಗೆ ಅನುಸಾರವಾದ ಗುಣಗಳು ಯಾವುವೂ ಸ್ವತಂತ್ರವಾಗಿಲ್ಲ. ಈ ಸಾಮಾನ್ಯ ಭಾವಗಳು ಸೂಚಿಸುವ ಬಾಹ್ಯವಸ್ತುಗಳೇ ಇವುಗಳಿಗೆ ಅನುಸಾರವಾದ ವಸ್ತುಸತ್ವಗಳು. ಸ್ವತಂತ್ರ ಸತ್ವವನ್ನುಳ್ಳ ಬಾಹ್ಯವಸ್ತುಗಳನ್ನು ಸೂಚಿಸಲು ಅನುಕೂಲವಾದ ಗುರುತುಗಳು ಬೇಕು; ಸಾಮಾನ್ಯಗಳೇ ಈ ಗುರುತುಗಳು; ಇಷ್ಟಲ್ಲದೆ ಸಾಮಾನ್ಯಭಾವಗಳಿಗೆ ವಿಶೇಷವಾದ ಪ್ರಾಶಸ್ತ್ಯವೇನೂ ಇಲ್ಲ.

ಅವಗ್ರಹಗಳು ಮತ್ತು ಭಾವಗಳಲ್ಲದೆ ಅಭಿಪ್ರಾಯ ಅಥವಾ ಸಿದ್ಧಾಂತಗಳೆಂಬುದೂ ಉಂಟು. ಜನರ ಅಭಿಪ್ರಾಯಗಳು ಪ್ರತ್ಯಕ್ಷದಿಂದ ಅಬಾಧಿತಗಳಾಗಿರಬೇಕು. ಆಗ ಅಂಥ ಅಭಿಪ್ರಾಯಗಳು ಸತ್ಯಜ್ಞಾನವನ್ನು ಕೊಡುವುವೆಂದು ತಿಳಿಯಬೇಕು. ಉದಾಹರಣೆಗೆ: ಪರಮಾಣುಗಳನ್ನು ಎಂದೂ ನೋಡಿದವರೂ ಇಲ್ಲ, ಇನ್ನು ಮುಂದೆ ನೋಡುವ ಸಂಭವವೂ ಇಲ್ಲ. ಆದರೂ ನಮ್ಮ ಸರ್ವಸಾಧಾರಣವಾದ ಅನುಭವದ ಬಲದಿಂದ ಪರಮಾಣುವೆಂಬುದರ ಭಾವವನ್ನು ನಾವು ಹೊಂದಬಹುದು; ಅಲ್ಲದೆ ನಮ್ಮ ಅನುಭವದಲ್ಲಿ ಕಂಡುಬರದಿರುವ ಅಪೂರ್ವಗುಣಗಳು ಯಾವುದನ್ನಾಗಲಿ ಪರಮಾಣು ಹೊಂದಿದೆಯೆಂದು ನಾವು ಹೇಳುವುದಿಲ್ಲ; ಈ ಕಾರಣದಿಂದ ಪರಮಾಣುಸಿದ್ಧಾಂತ ಬರಿಯ ಅಭಿಪ್ರಾಯವಾದರೂ ಸತ್ಯವೆಂದು ನಂಬಲು ಅರ್ಹವಾಗಿರುವುದು.

ಪ್ರತ್ಯಕ್ಷ ಅಥವಾ ಅನುಭವಜ್ಞಾನ, ಭಾವಜ್ಞಾನ, ಸಿದ್ಧಾಂತಜ್ಞಾನ—ಈ ತೆರನಾಗಿ ತ್ರಿವಿಧವಾದ ಜ್ಞಾನವನ್ನು ಮನುಷ್ಯನು ಪಡೆಯಬಹುದು. ಇವುಗಳಲ್ಲೆಲ್ಲಾ ಪ್ರತ್ಯಕ್ಷಜ್ಞಾನವೇ ಸ್ವತಸ್ಸಿದ್ಧವಾದುದು, ಶ್ರೇಷ್ಠವಾದುದು; ಉಳಿದುವುಗಳೆರಡೂ ಅದರ ಯಥಾರ್ಥವನ್ನೇ ಅವಲಂಬಿಸಿವೆ. ಎಪಿಕ್ಯೂರಸ್ಸಿನ ಈ ಪ್ರತ್ಯಕ್ಷಸಿದ್ಧಾಂತ ಡೆಮಾಕ್ರಟಸ್ಸಿನ

ದರ್ಶನಸಿದ್ಧಾಂತವನ್ನೇ ಅನುಸರಿಸಿರುವುದು. ವಸ್ತುವೊಂದನ್ನು ನಾವು ಈಕ್ಷಿಸುವಾಗ, ಆ ವಸ್ತುವನ್ನೇ ನಾವು ನೋಡಲಾರೆವು; ಅದರ ಬಿಂಬ ಅಥವಾ ಪ್ರತಿ (ನಕಲು) ಒಂದು ಆ ವಸ್ತುವನ್ನು ಬಿಟ್ಟು ನಮ್ಮ ಜ್ಞಾನೇಂದ್ರಿಯವನ್ನು ತಾಕುವುದು. ಆಗ ನಮಗೆ ಉಂಟಾಗುವ ಅನುಭವವೇ ಅವಗ್ರಹ. ಅವಗ್ರಹವೇ ಸಮಸ್ತ ಜ್ಞಾನಕ್ಕೂ ಮೂಲಾಧಾರ.

## ಪ್ರಕೃತಿ ತತ್ವಶಾಸ್ತ್ರ

ಜ್ಞಾನೇಂದ್ರಿಯಗಳ ಮೂಲಕ ನಾವು ಪ್ರಕೃತಿಯಲ್ಲಿ ಕಾಣುವುದೇನು? ವಸ್ತುಗಳು ಮತ್ತು ವಸ್ತುಸಮುದಾಯಗಳು. ಆದುದರಿಂದ ಈ ವಸ್ತುಗಳೇ ಯಥಾರ್ಥವಾದುವುಗಳು; ಇವುಗಳನ್ನುಳಿದ ಸತ್ಯಸತ್ವಗಳು ಯಾವುವೂ ಇಲ್ಲ. ಆದರೆ ಈ ವಸ್ತುಗಳು ಇರಬೇಕಾದರೆ ಮತ್ತು ಚಲಿಸಬೇಕಾದರೆ, ಇವುಗಳಿಗೆ ಅವಕಾಶಕೊಡುವ, ಇವುಗಳನ್ನೊಳಗೊಂಡಿರುವ ಸತ್ವವಿಶೇಷವೊಂದಿರಬೇಕಲ್ಲವೇ? ಇದೇ "ಶೂನ್ಯಾಕಾಶ," "ಅಮೂರ್ತ ಪ್ರಧಾನ" ಅಥವಾ ಅಸತ್ತೆನಿಸುವುದು. ವಸ್ತುಗಳು ನಿರ್ನಾಮವಾಗಿ ನಾಶವಾಗುವುದಾಗಲಿ, ಹೊಸದಾಗಿ ಸೃಷ್ಟಿಯಾಗುವುದಾಗಲಿ ಇಲ್ಲವಾದುದರಿಂದ, ಉತ್ಪತ್ತಿ, ಪರಿಣಾಮ, ಲಯಗಳೆಂಬ ಅವಸ್ಥಾವಿಶೇಷಗಳೆಲ್ಲಾ ಮೂಲದ್ರವ್ಯಗಳ ಪರಸ್ಪರಸಂಬಂಧವ್ಯತ್ಯಾಸದ ಫಲಗಳೆಂದೇ ಹೇಳಬೇಕು. ಈ ಮೂಲದ್ರವ್ಯಗಳು ಅತಿಸೂಕ್ಷ್ಮಗಳಾದ ಪುದ್ಗಲಭಾಗಗಳು; ಅರೂಪವಾಗಿಯೂ, ಅವಿನಶ್ವರವಾಗಿಯೂ, ನಿರ್ವಿಕಾರಗಳಾಗಿಯೂ, ಅಭಾಜ್ಯಗಳಾಗಿಯೂ ಇರತಕ್ಕುವು. ತಮ್ಮ ಸ್ವಂತ ಶಕ್ತಿಯಿಂದಲೇ ಇರತಕ್ಕ ಸ್ವತಂತ್ರ ದ್ರವ್ಯಗಳಾಗಿ ಸಂಪೂರ್ಣವಾದುವುಗಳು; ಎಂದರೆ ಅವುಗಳಲ್ಲಿ ಶೂನ್ಯದೇಶಗಳಿಲ್ಲ. ಅಭೇದ್ಯವಾಗಿಯೂ, ಅಛೇದ್ಯವಾಗಿಯೂ, ಬಹುಗಟ್ಟಿಯಾಗಿಯೂ ಇರುವುದರಿಂದ ಅವುಗಳಿಗೆ ಪರಮಾಣುಗಳೆಂದು ಹೆಸರು. ಅಲ್ಲದೆ ಪರಮಾಣುಗಳು ಪರಸ್ಪರ ವ್ಯತ್ಯಾಸವುಳ್ಳ ಗಾತ್ರ, ಆಕಾರ ಮತ್ತು ತೂಕವನ್ನೂ ಹೊಂದಿರುವುವು. ವಸ್ತುಗಳು ಪರಸ್ಪರ ವ್ಯತ್ಯಾಸವಾಗಿರುವುದಕ್ಕೆ ಪರಮಾಣುಗಳಲ್ಲಿರುವ ಈ ಪರಸ್ಪರ ಆಕಾರ, ಗಾತ್ರ, ತೂಕ ಮತ್ತು ಸಂಬಂಧ ವ್ಯತ್ಯಾಸಗಳೇ ಕಾರಣ. ಆಕಾರಗಳ ಸಂಖ್ಯೆಯಾದರೋ

ಅನಂತವಾದುದಲ್ಲ. ಪರಮಾಣುಗಳ ಸಂಖ್ಯೆ ಅನಂತವಾದುದರಿಂದ ಅವುಗಳನ್ನೊಳಗೊಂಡಿರುವ ಆಕಾಶವೂ ಅನಂತಾಕಾಶವಾಗಿರಬೇಕು. ಪರಮಾಣುಗಳಿಗೆ ಚಲನೆ ನೈಜವಾದುದು. ಆದುದರಿಂದ ಅವು ನಿರಂತರವೂ ಚಲನಸ್ಥಿತಿಯಲ್ಲಿಯೇ ಇರತಕ್ಕುವು.

ಪರಮಾಣುಗಳು ತಮ್ಮ ಸಹಜವಾದ ತೂಕದಿಂದ ಸಮವೇಗದೊಡನೆ ನೇರವಾದ ರೀತಿಯಲ್ಲಿ ಅಧೋಗತಿಯನ್ನು ಹೊಂದುವುವು. ಆದರೆ ಈರೀತಿಯಾಗಿ ನೇರವಾಗಿ ಅಧೋಮುಖವಾಗಿ ಬಿದ್ದರೆ ನಿಲುಕಡೆಯಿಲ್ಲದೆ ಆಕಾಶದಿಂದ ಪರಮಾಣುಗಳು ಉದುರಿ ಬೀಳುತ್ತಿರುವುವಲ್ಲದೆ ಪ್ರಪಂಚಯಾವುದೂ ಉತ್ಪತ್ತಿಯಾಗುವುದಕ್ಕೆ ಅವಕಾಶವಾಗುವುದಿಲ್ಲ. ಈ ಕಾರಣದಿಂದ ಪರಮಾಣುಗಳು ಕೆಳಕ್ಕೆ ಬೀಳುವಾಗ ಸ್ವಲ್ಪಮಟ್ಟಿಗೆ ಓರೆಯಾಗಿ ಬಗ್ಗುವುದಕ್ಕೆ ಅವುಗಳಿಗೆ ಶಕ್ತಿಯುಂಟೆಂದು ಎಪಿಕ್ಯೂರಸ್ಸನು ಅಭಿಪ್ರಾಯಪಡುತ್ತಾನೆ. ಇದರ ಆವಶ್ಯಕತೆ ಏನೆಂದರೆ, ಪರಮಾಣುಗಳು ಓರೆಯಾಗಿ ಬಗ್ಗುವುದಾದರೆ ಪರಸ್ಪರ ಕಲೆತು ಸಂಯೋಗವಾಗಿ ಸ್ಕಂಧರೂಪಗಳಾದ ವಸ್ತುಗಳೂ, ವಸ್ತುಭರಿತವಾದ ಪ್ರಪಂಚವೂ ಉತ್ಪತ್ತಿಯಾಗಲು ದಾರಿಮಾಡಿದಂತಾಗುವುದು.

ಚೇತನಪ್ರಾಣಿಗಳೂ ಇದೇ ರೀತಿಯಲ್ಲಿ ಉಂಟಾಗುವುವು. ಪ್ರಥಮದಲ್ಲಿ ವಿಕಾರರೂಪವುಳ್ಳ ರಾಕ್ಷಸಜಂತುಗಳು ಶರೀರವಡೆದುವು. ಆದರೆ ಇಂಥ ಪ್ರಾಣಿಗಳು ಈ ಭೂಮಿಯ ಜಲವಾಯುಗುಣಗಳಿಗನುಸಾರವಾಗಿ ನಡೆದುಕೊಳ್ಳಲಾರದೆ ಬಹು ಶೀಘ್ರದಲ್ಲಿಯೇ ನಿರ್ನಾಮವಾದುವು. ಅಂತರಿಕ್ಷ ಜ್ಯೋತಿಗಳೂ ಗೋಳಗಳೂ ಸ್ವಾಭಾವಿಕ ಕಾರಣದಿಂದಲೇ ಜನಿಸಿದುವು. ಅವುಗಳಲ್ಲಿ ಆತ್ಮನಿಲ್ಲ, ಏಕೆಂದರೆ ಅವು ಚೇತನವಸ್ತುಗಳಲ್ಲ.

ದೇವರುದಿಂಡರುಗಳಿವಾರೆಯೇ ಎಂದು ಕೇಳಿದರೆ ಎಪಿಕ್ಯೂರಸ್ಸನು ಉಂಟೆಂದು ಉತ್ತರ ಕೊಡುವನು. ದೇವತೆಗಳಿದಾರೆ, ಆದರೆ ಅವರಿಂದ ಈ ಪ್ರಪಂಚ ಸೃಷ್ಟಿಯಾಯಿತೆಂಬುದು ಶುದ್ಧ ಅವಿವೇಕ. ಸ್ವಾಭಾವಿಕಸೃಷ್ಟಿಯಲ್ಲಿ ಅವರೂ ಉತ್ಪನ್ನರಾಗಿ ನಮಗಿಂತಲೂ ಉತ್ತಮಸ್ಥಿತಿಯಲ್ಲಿರುವರಷ್ಟೆ. ಪರಿಪೂರ್ಣರೂ, ಆನಂದಮಯರೂ, ಸರ್ವಕಾಮಸಿದ್ಧರೂ ಆದ ದೇವತೆಗಳಿಗೆ ಈ ಪ್ರಪಂಚವನ್ನು ಸೃಷ್ಟಿಸಲು ಏನು

ಆಗತ್ಯವಿತ್ತು ? ಮತ್ತು ಇಂಥ ಪ್ರಪಂಚದ ಭಾವವನ್ನಾದರೂ ಅವರು ಎಲ್ಲಿಂದ ಹೊಂದಿಯಾರು ? ಅಲ್ಲದೆ ಪರಿಪೂರ್ಣರಾದ ದೇವತೆಗಳು ಬಹು ಅಪರಿಪೂರ್ಣವಾದ ಈ ಪ್ರಪಂಚವನ್ನು ಸೃಷ್ಟಿಸಿದರೆಂಬುದು ಅಸಂಭವ ವಲ್ಲದೆ ಅವರಿಗೆ ಅಗೌರವವಾದುದೂ ಅಲ್ಲವೆ ? ಈ ಕಾರಣಗಳಿಂದ ದೇವತೆಗಳು ಈ ಪ್ರಪಂಚವನ್ನು ಸೃಷ್ಟಿಸಿದರೆಂಬುದಾಗಲಿ, ಇಲ್ಲಿನ ವ್ಯವಹಾರ ವಿದ್ಯಮಾನಗಳಲ್ಲಿ ಆಸಕ್ತಿಯನ್ನಿಟ್ಟುಕೊಂಡು ಮನುಷ್ಯನಿಗೆ ಒಳ್ಳೆಯದು ಕೆಟ್ಟುದು ಮಾಡಬಲ್ಲವರೆಂಬುದಾಗಲಿ, ಶುದ್ಧ ಅಸಂಗತ ವಾದುದು. ದೇವತೆಗಳಿದಾರೆ, ಆದರೆ ಅವರಿಗೂ ನಮಗೂ ಯಾವ ವಿಧ ವಾದ ಸಂಬಂಧ, ಸಂಪರ್ಕ, ಪರಸ್ಪರ ಸಂಸ್ಕಾರಗಳಾಗಲಿ ಇರುವುದಿಲ್ಲ. ಮನುಷ್ಯರಂತೆಯೇ ದೇವತೆಗಳೂ ಶರೀರಗಳನ್ನು ಹೊಂದಿದಾರೆ, ಆದರೆ ಅವರ ಶರೀರಗಳು ಅತಿ ಸುಂದರತರಗಳಾಗಿಯೂ ಅತಿಸೂಕ್ಷ್ಮತರವಾದ ಪರಮಾಣುಗಳಿಂದ ಮಾಡಲ್ಪಟ್ಟವುಗಳಾಗಿಯೂ ಇರುವುವು, ಅವರ ಶರೀರಗಳು ಸ್ವಯಂಜ್ಯೋತಿಗಳು. ದೇವತೆಗಳಲ್ಲಿಯೂ ಸ್ತ್ರೀಪುರುಷ ಭೇದವುಂಟು ; ಅವರೂ ಆಹಾರವನ್ನು ಸೇವಿಸಲೇಬೇಕು ; ಬಹುತರ ಅವರೂ ಗ್ರೀಕ್ ಭಾಷೆಯನ್ನೇ ಆಡುತ್ತಾರೆಂದು ಎಪಿಕ್ಯೂರಸ್ಸಿನ ಅಭಿ ಪ್ರಾಯವಿದ್ದಿತು ! ದೇವತೆಗಳು ಸುಖಪುರುಷರು, ಅವರಿಗೆ ಚಿಂತೆಯೆಂಬು ದಾಗಲಿ ತೊಂದರೆಗಳೆಂಬುದಾಗಲಿ ಇಲ್ಲವೇ ಇಲ್ಲ. ಆ ಪಕ್ಷಕ್ಕೆ ಇಂಥ ದೇವತೆಗಳಿದಾರೆಂಬುದು ಕೂಡ ಹೇಗೆ ನಂಬುವುದೆಂದು ಪ್ರಶ್ನಿಸಿದರೆ, ದೇವತೆಗಳಿದಾರೆಂಬುದು ಮಾನವನಿಗೆ ಸಹಜವಾದ ಭಾವವಾಗಿ ಅಥವಾ ನಂಬಿಕೆಯಾಗಿ ಬಂದಿದೆ. ಈ ಸಹಜವಾದ ಭಾವನೆಗೆ ಸಹಜವಾದ ಕಾರಣವೊಂದಿರಬೇಕು; ದೇವತೆಗಳ ಇರುವಿಕೆಯೇ ಈ ಭಾವನೆಗೆ ಕಾರಣವೆಂದು ಎಪಿಕ್ಯೂರಸ್ಸನು ಉತ್ತರ ಕೊಡುವನು.

## ಮನಶ್ಶಾಸ್ತ್ರ

ಮನುಷ್ಯನ ಆತ್ಮವೆಂಬುದೂ ಇತರ ಪದಾರ್ಥಗಳಂತೆಯೇ ಪುದ್ಗಲ ಕೃತವಾದುದು. ಅದು ಅತ್ಯಂತ ಸೂಕ್ಷ್ಮವಾದ, ದುಂಡಾದ ಹಗುರ ವಾದ ಪರಮಾಣುಗಳ ಸ್ಕಂಧರೂಪವಾಗಿದೆ. ಆತ್ಮ ಶರೀರದ ಎಲ್ಲಾ

ಭಾಗಗಳಲ್ಲಿಯೂ ಪ್ರಸರಿಸಿಕೊಂಡಿದೆ; ಶರೀರದ ಯಾವ ಭಾಗದಲ್ಲಿ ವೇದನೆ ತೋರಿದರೂ ಅಲ್ಲಿ ಆತ್ಮ ಇದ್ದುಕೊಂಡೇ ಅನುಭವವನ್ನು ಹೊಂದುವುದು. ಆತ್ಮ ಮರಣಾತೀತವಲ್ಲ, ಶರೀರದೊಡನೆಯೇ ಮರಣವನ್ನು ಹೊಂದುವುದು. ಮನುಷ್ಯನು ಮರಣ ಹೊಂದಿದ ಕೂಡಲೆ ಅವನ ಚೈತನ್ಯವೂ ಜ್ಞಾನವೂ ಅದೃಶ್ಯವಾಗಿಹೋಗುವುವೆಂದು ನಾವು ದೃಢವಾಗಿ ನಂಬಿದ ಪಕ್ಷದಲ್ಲಿ ಇನ್ನು ಸಾವಿಗೆ ಹೆದರುವುದೇಕೆ ? ಸತ್ತಮೇಲೆ ಮನುಷ್ಯನಿಗೇನಾಗುವುದು, ಸಾಯುವುದು ಹೇಗೆ ಎಂಬ ಭೀತಿಗೆ ಅವಕಾಶವೇ ಇಲ್ಲ ; ಏಕೆಂದರೆ ಸತ್ತಮೇಲೆ ಯಾವುದೂ ಇರುವುದಿಲ್ಲ ; ಸ್ವರ್ಗ, ಸುಖ, ನರಕಯಾತನೆ ಇವುಗಳೆಲ್ಲವೂ ಅಜ್ಞಾನಿಗಳ ಅನವಶ್ಯಕವಾದ ಕಲ್ಪನೆಗಳು; ಸತ್ತಮೇಲೆ ಸುಖಯಾತನೆಗಳನ್ನನುಭವಿಸುವವರು ಯಾರು? ದೇಹವೂ, ಆತ್ಮವೂ ನಿರ್ನಾಮವಾದಮೇಲೆ ಉಳಿದಿರುವುದೇನು ? ಪರಮಾಣುಗಳ ಸಂಯೋಗಬಲದಿಂದ ದೇಹಾತ್ಮಗಳು ಉಂಟಾದುವು ; ಇವು ಸತ್ತೊಡನೆಯೇ ಪರಮಾಣುಗಳು ಪರಸ್ಪರ ವಿಯೋಗವಾಗಿ ಪ್ರಕೃತಿಯಲ್ಲಿ ಲಯವಾಗುವುವು ; ಪರಮಾಣುಗಳ ವಿಯೋಗವೇ ದೇಹಾತ್ಮಗಳ ಮರಣ. ಹೀಗೆಂದಮೇಲೆ ಇನ್ನು ಮರಣಾನಂತರ—ಜೀವಿಸಿರುವುದಾಗಲಿ ಪುನರ್ಜನ್ಮವಾಗಲಿ ಮೂಢರ ಮಾತಲ್ಲವೇ ? ಬದುಕಿರುವವರೆಗೂ (ಪ್ರಾಣವಿರುವವರೆಗೂ) ಸಾವೆಂಬುದು ಇಲ್ಲ; ಸಾವು ಬಂದಮೇಲೆ ನಾವಿಲ್ಲ ( ಪ್ರಾಣವಿಲ್ಲ ). ಬದುಕಿರುವವರೊಡನೆ ಸಾವಿಲ್ಲ, ಸತ್ತವರಲ್ಲಿ ಪ್ರಾಣವಿಲ್ಲ—ಹೀಗೆಂದಮೇಲೆ ಬದುಕಿರುವವರಿಗಾಗಲಿ ಸತ್ತವರಿಗಾಗಲಿ ಮರಣದಿಂದೇನಂಜಿಕೆ? ಸಂಭವಿಸಿದಮೇಲೂ ಯಾವುದರ ದೆಸೆಯಿಂದ ನಮಗೆ ಅಪಾಯವೇನೂ ಇಲ್ಲವೋ, ಇನ್ನು ಅಂಥದು ಸಂಭವಿಸುವುದಕ್ಕೆ ಮೊದಲೇ ಅದರ ದೆಸೆಯಿಂದ ಏಕೆ ಭಯ ?

## ನೀತಿಶಾಸ್ತ್ರ.

ಪ್ರಪಂಚದಲ್ಲಿ ಪ್ರತಿ ಒಂದು ಪ್ರಾಣಿಯೂ ಆಜನ್ಮತಃ ಸುಖವನ್ನೇ ಹುಡುಕುವುದು, ದುಃಖದಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಡುವುದು, ಸ್ವಭಾವಸಿದ್ಧವಾಗಿದೆಯಷ್ಟೆ. ಸುಖವನ್ನು ಸಂಪಾದಿಸುವುದೇ ನಮ್ಮ

ಪ್ರವೃತ್ತಿಗಳ ಪರಮಗುರಿಯಾಗಿರಬೇಕು; ಸುಖಜೀವನವೇ ಮನುಷ್ಯನ ಪರಮಪುರುಷಾರ್ಥ. ಪ್ರತಿಯೊಂದು ಸುಖವೂ ಸುಖವಾಗಿರುವುದ ರಿಂದಲೇ ಒಳ್ಳೆಯದು; ಪ್ರತಿಯೊಂದು ನೋವೂ ನೋವಾಗಿರುವುದ ರಿಂದಲೇ ಕೆಟ್ಟುದು. ಆದರೆ ಸುಖವನ್ನಾರಿಸಿಕೊಳ್ಳುವುದರಲ್ಲಿ ನಾವು ಬಹು ಜಾಗರೂಕರಾಗಿರಬೇಕು. ಒಂದು ಸುಖವೂ ಮತ್ತೊಂದು ಸುಖವೂ ತೀಕ್ಷ್ಣತೆಯಲ್ಲಿಯೂ ನಿಲ್ಲುವ ಕಾಲದಲ್ಲಿಯೂ ಸಮವಾಗಿದ್ದರೆ ಅವುಗಳಲ್ಲಿ ಆರಿಸಬೇಕಾದುದೇನೂ ಇರುವುದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಕೆಲವು ತರಹೆ ಸುಖಗಳು ಸುಖವನ್ನುಂಟುಮಾಡುವುದರ ಜೊತೆಗೆ ಅಧಿಕ ನೋವನ್ನೂ ಕೊಡುವುವು. ವಿಷಯಲಂಪಟಗಳು ಬಯ ಸುವ ಸುಖಗಳು ಅವರಿಗೆ ಮನಶ್ಯಾಂತಿಯನ್ನೂ ದುಃಖನಿವಾರಣೆಯನ್ನೂ ತರುವುದಾದರೆ ಅವುಗಳನ್ನು ನಾವು ಆಕ್ಷೇಪಿಸಬೇಕಾದುದೇನಿತ್ತು? ಕೆಲವು ಸುಖಗಳು ತಮ್ಮ ಜೊತೆಯಲ್ಲಿ ವಿಶೇಷ ನೋವನ್ನು ತರುವುವು, ಇಂಥ ಸುಖಗಳನ್ನು ವರ್ಜಿಸಬೇಕು. ಕೆಲವು ದುಃಖಗಳು ಹಿಂದೆಯೇ ವಿಶೇಷ ಸುಖವನ್ನು ಕೊಡುವುವು, ಇಂಥ ದುಃಖಗಳಾದರೂ ಮೊದಲಿನ ಸುಖಗಳಿಗಿಂತಲೂ ಮೇಲು. ಅಲ್ಲದೆ ಸುಖಗಳು ತೀಕ್ಷ್ಣತೆಯಲ್ಲಿ ಪರಸ್ಪರ ಬಹು ವ್ಯತ್ಯಾಸವನ್ನು ಹೊಂದಿರುವುವು. ಶರೀರಸುಖಗಳಿ ಗಿಂತಲೂ ಮಾನಸಿಕಸುಖಗಳು ಹೆಚ್ಚು ಸಂತೋಷಕರಗಳು, ತೀಕ್ಷ್ಣ ವಾದುವುಗಳು. ಹಾಗೆಯೇ ಮಾನಸಿಕವ್ಯಸನಗಳು ಶರೀರದ ನೋವುಗಳಿ ಗಿಂತಲೂ ಕಟುತರವಾದುವು. ಶರೀರದ ಸುಖದುಃಖಗಳು ವರ್ತಮಾನ ಕಾಲಕ್ಕೆ ಮಾತ್ರ ಸಂಬಂಧಿಸಿರುವುವು; ವರ್ತಮಾನದ ಅನುಭವ ನಿಂತು ಹೋದರೆ ಸುಖದುಃಖಗಳು ನಿವೃತ್ತಿಯಾಗುವುವು. ಮಾನಸಿಕವ್ಯಾಪಾರ ಗಳಾದರೋ ಭೂತಭವಿಷ್ಯದ್ವರ್ತಮಾನ ತ್ರಿಕಾಲಗಳಲ್ಲಿಯೂ ಹರಡಿ ಕೊಂಡಿರುವುವು. ಇಷ್ಟೇ ಅಲ್ಲ; ಮನಸ್ಸಿನ ಅನುಭವವಿಲ್ಲದಿದ್ದರೆ ಶರೀರದ ಸುಖದುಃಖಗಳು ಬೋಧೆಯಾಗುವ ಸಂಭವವೇ ಇರುತ್ತಿರಲಿಲ್ಲ. ಈ ಎಲ್ಲ ಕಾರಣಗಳಿಂದಲೂ ಮಾನಸಿಕಸುಖಗಳೇ — ಜ್ಞಾನಾರ್ಜನೆ ಯಿಂದುಂಟಾಗುವ ಸುಖವೇ—ಅತ್ಯಂತ ಹಿತಕರವಾದುದು. ಹೋಳಿಗೆ ಯನ್ನು ತಿನ್ನುವ ಸುಖಕ್ಕಿಂತ ಕಾಳಿದಾಸನ ಶಾಕುಂತಲವನ್ನು ಓದಿ

ಗ್ರಹಿಸುವವನ ಸುಖ ಶ್ರೇಷ್ಠತರವಲ್ಲವೇ? ಆದುದರಿಂದ ಪ್ರತಿ ಒಬ್ಬನೂ ಸಾಧ್ಯವಾದಷ್ಟುಮಟ್ಟಿಗೆ ತನ್ನ ಜ್ಞಾನವನ್ನೂ ಬುದ್ಧಿಯನ್ನೂ ವ್ಯವಸಾಯ ಮಾಡಿ ವೃದ್ಧಿಮಾಡಿಕೊಳ್ಳುವುದರಿಂದುಂಟಾಗುವ ಸುಖವನ್ನು ಅನುಭವಿಸಲು ಪ್ರಯತ್ನಪಡಬೇಕು. ಎಪಿಕ್ಯೂರಸ್ಸನು ಹೀಗೆ ಹೇಳುವುದರಲ್ಲಿ ಒಂದು ಒಳಮರ್ಮವಿದೆ. ಸಾಧಾರಣವಾಗಿ ಜನರು ಪ್ರಕೃತಿಸಂಘಟನೆಗಳಿಂದಲೂ, ದೇವರುದಿಂಡರುಗಳ ಕೋಪತಾಪಗಳೆಂಬ ಭಯದಿಂದಲೂ, ಮುಪ್ಪು, ಸಾವು, ಇವುಗಳ ಭೀತಿಯಿಂದಲೂ ಸಂಕಟಪಡುವೆವೆಂಬ ನಂಬಿಕೆ ಇಟ್ಟುಕೊಂಡಿರುವರಲ್ಲವೆ? ಹಾಗೆ ನಂಬಿದರೆ ಹಾಗೆಯೇ ನೋವು ಪಡುವರು. ಜ್ಞಾನಾರ್ಜನೆಯಿಂದ—ಪ್ರಕೃತಿಯ ಯಥಾರ್ಥ ತತ್ವಪರಿಶೋಧನೆಯಿಂದ—ಪ್ರಪಂಚವ್ಯಾಪಾರಗಳೆಲ್ಲವೂ ಸ್ವಾಭಾವಿಕ ಕಾರಣಗಳಿಂದಲೇ ಉಂಟಾಗುವುವೆಂದೂ ಅವಕ್ಕೆ ಭಯಬೀಳಬೇಕಾದುದೇನೂ ಇಲ್ಲವೆಂದೂ ನಾವು ತಿಳಿಯುವವರಾದರೆ ಆಗ ಅನೇಕ ವಿಧವಾದ ನಿಷ್ಕಾರಣ ವ್ಯಸನಗಳಿಂದ ವಿಮುಕ್ತರಾಗುತ್ತೇವೆ. ಜನರಿಗೆ ತಾನಾಗಿ ಬರುವುದು ಒಂದು ಕಷ್ಟವಾದರೆ ತಾವಾಗಿ ತಂದುಕೊಳ್ಳುವುದು ಸಾವಿರವೆನ್ನುವ ನಾಣ್ನುಡಿ ಅನುಭವಸಿದ್ಧವಲ್ಲವೇ? ಆದುದರಿಂದ ಪ್ರಕೃತಿಯ ಯಥಾರ್ಥಜ್ಞಾನವನ್ನು ಹೊಂದಿದ ಹೊರತು ಮನುಷ್ಯನು ನಿಷ್ಕಲ್ಮಷವಾದ ಸುಖವನ್ನು ಅನುಭವಿಸಲಾರನು.

ಸುಖಗಳನ್ನು ನಾವು ಎರಡು ವಿಧಗಳಲ್ಲಿ ಅನುಭವಿಸಬಹುದು. ನಮ್ಮ ಮನಸ್ಸಿನಲ್ಲಿ ಹುಟ್ಟುವ ಆಶೆಗಳನ್ನು ಸಂತೃಪ್ತಿಮಾಡಿಕೊಳ್ಳುವುದರಿಂದ ಉಂಟಾಗುವ ಸುಖವನ್ನನುಭವಿಸುವುದು ಒಂದು ವಿಧ; ಆಶೆಯೇ ಇಲ್ಲದೆ, ಕಾಮವೆಂಬುದೇ ಹುಟ್ಟದೆ, ಶಾಂತಮನಸ್ಕರಾಗಿರುವುದರಿಂದ ಉಂಟಾಗುವ ಸುಖವನ್ನನುಭವಿಸುವುದು ಒಂದು ವಿಧ. ಇವೆರಡರಲ್ಲಿ ನಿಷ್ಕಾಮಸುಖವೇ ಶ್ರೇಷ್ಠವಾದುದು; ಏಕೆಂದರೆ ಕಾಮತೃಪ್ತಿಯಿಂದುಂಟಾಗುವ ಸುಖ ಶುದ್ಧಸುಖವೆಂದು ಹೇಳುವುದಕ್ಕಾಗುವುದಿಲ್ಲ: ಅನೇಕವೇಳೆ ಅದರ ಜೊತೆಯಲ್ಲಿ ನೋವೂ ಸೇರಿರುವುದು. ಇದಕ್ಕೆ ಬದಲಾಗಿ ಒಮ್ಮೆ ನಮ್ಮ ಆಶೆ ಸಂತೃಪ್ತವಾದಬಳಿಕ ಪುನಃ ಆಶೆಯೇ ಜನಿಸದಂತೆ ನಿರ್ವಿಕಲ್ಪಚಿತ್ತರಾಗಿರುವುದೇ ಪರಮಸುಖ. ಅಂದರೆ

ಪ್ರತಿಯೊಂದು ಕಾಮವೂ ದುಃಖಜನಕ; ವ್ಯಸನಾತೀತನಾಗಿರುವುದೇ ಪರಮೋತ್ಕೃಷ್ಟವಾದ ಸುಖ. ಪ್ರತಿಯೊಬ್ಬನೂ ವ್ಯಸನದಿಂದ ನಿವೃತ್ತನಾಗಲು ಯತ್ನಿಸಬೇಕು; ಇದಕ್ಕಿಂತ ಹೆಚ್ಚು ಸುಖವನ್ನು ಬಯಸುವವನು ವಿವೇಕಿಯಲ್ಲ.

ವಿವೇಕವಿಲ್ಲದಿದ್ದರೆ ಅಜ್ಞಾನಜನ್ಯಗಳಾದ ಭಯಗಳನ್ನೂ ಇತರ ವಿಧವಾದ ತೊಂದರೆಗಳನ್ನೂ ತಪ್ಪಿಸಿಕೊಳ್ಳಲು ಆಗುವುದಿಲ್ಲ. ವಿವೇಕಿಯಾದವನು ನೀತಿಧರ್ಮಗಳೆಲ್ಲವನ್ನೂ ಗಮನಿಸಿ ಅನುಷ್ಠಿಸುವನು; ನ್ಯಾಯವನ್ನೂ, ಗೌರವವನ್ನೂ, ವಿವೇಕವನ್ನೂ ಬಿಟ್ಟವನು ಸುಖಿಯಾಗಿ ಬಾಳುವುದು ಅಸಂಭವ. ಆದುದರಿಂದ ಸುಖಜೀವನ ನಮ್ಮ ಧ್ಯೇಯವಾಗಿರುವುದಾದರೆ ಅದನ್ನು ಅನುಭವಮಾಡಿಕೊಳ್ಳಲು ಸಹಾಯಮಾಡುವ ಸದ್ಗುಣಗಳನ್ನೆಲ್ಲಾ ನಾವು ಅಭ್ಯಾಸಮಾಡಬೇಕು. ಧರ್ಮಜೀವನ ಸುಖಜೀವನವನ್ನು ಪಡೆಯಲು ಸಹಾಯಕಾರಿ ಮಾತ್ರವಲ್ಲದೆ ಧರ್ಮಜೀವನವೇ, ನೀತಿವಂತನಾಗಿ ಬಾಳುವುದೇ, ನಮ್ಮ ಪುರುಷಾರ್ಥವಲ್ಲ. ಸೌಶೀಲ್ಯದ ಅರ್ಥ (ಪ್ರಯೋಜನ) ಸುಖ. ಈ ಕಾರಣದಿಂದ ವಿಷಯಲಂಪಟತ್ವವೂ, ಕುಡುಕತನವೂ, ಬಂಡಬಾಳೂ ಒಳ್ಳೆಯದಲ್ಲ. ಆದರಿಂದ ಸುಖಜೀವನ ಪ್ರಾಪ್ತಿಸುವುದಿಲ್ಲ. ಸುಖಜೀವನ ದೊರೆಯಬೇಕಾದರೆ ಅರಿಸ್ಟಾಟಲ್ ಮತ್ತು ಸ್ಟೋಯಿಕರು ಹೊಗಳಿದ ವಿವೇಕ, ಧೈರ್ಯ, ಮಿತವ್ಯವಹಾರ ಮತ್ತು ನ್ಯಾಯಶೀಲತೆ ಈ ಸಾಧನ ಚತುಷ್ಟಯಗಳನ್ನೇ ನಾವು ಅಭ್ಯಾಸಮಾಡಬೇಕು.

ಅಂದಮೇಲೆ ಎಪಿಕ್ಯೂರಸ್ಸಿನ ಭೋಗತತ್ತ್ವ ಪರಿಣಾಮದಲ್ಲಿ ಶ್ರೇಷ್ಠವಾದ ನೀತಿಮಾರ್ಗವೇ ಆಯಿತು. ಅದರ ಉದ್ದೇಶ ಹೇಗಾದರೂ ಇರಲಿ; ಫಲಿತಾಂಶದಲ್ಲಿ — ಕಾರ್ಯಪ್ರಸಂಗದಲ್ಲಿ — ಅನುಷ್ಠಾನಯೋಗ್ಯವಾದ ಅಭ್ಯಾಸವೇ ಆಯಿತು. ಕಾಮಸಂತೃಪ್ತಿ ನಿಜವಾದ ಸುಖವಲ್ಲ, ವ್ಯಸನಾತೀತನಾಗಿರುವುದೇ ಉತ್ತಮವಾದ ಸುಖ. ಆದ್ದರಿಂದ ವ್ಯಸನಗಳನ್ನು — ಆಧ್ಯಾತ್ಮಿಕ, ಆಧಿಭೌತ, ಆಧಿದೈವಿಕರೂಪಗಳಾದ ತ್ರಿಬಾಧೆಗಳನ್ನು —ನೀಗಿಸುವ ಉಪಾಯಗಳು ಯಾವುವೋ ಅವೆಲ್ಲವೂ ಸುಖಕರಗಳು, ನೀತಿಧರ್ಮದ ಸೂತ್ರಗಳು. ಸ್ನೇಹಿತರ ಮತ್ತು ನಮ್ಮ ಸಮಾಜದವರ

ಸಂಪರ್ಕ—ಅವರೊಡನೆ ಸಂಭಾಷಣೆ—ಇವು ಬಹು ಬೆಲೆಯುಳ್ಳ ಸುಖವನ್ನೊದಗಿಸಬಲ್ಲವು. ಇವೆಲ್ಲಕ್ಕಿಂತಲೂ ಚಿತ್ತಶಾಂತತೆ, ಪ್ರಶಾಂತವಾದ, ಅಲುಗದಿರುವ ಸಂತೃಪ್ತಿಭಾವ, ಸುಖದುಃಖಗಳೆರಡರ ವಿಷಯದಲ್ಲಿಯೂ ಔದಾಸೀನ್ಯಅಥವಾ ಉಪೇಕ್ಷೆ–ಇವೇ ಭೋಗತತ್ವದ ಪರಮರಹಸ್ಯಗಳು. ಸಮಾಹಿತಮನಸ್ಸಿನ ಆತ್ಮಸೌಖ್ಯ, ಅದೃಷ್ಟತರುವ ಉನ್ನತಿ ಅವನತಿಗಳೆರಡನ್ನೂ ಒಂದೇರೀತಿಯಾಗಿ ನಿರಾಕರಿಸುವ ಆತ್ಮಶ್ರೇಷ್ಠತೆ, ಆತ್ಮಗೌರವ—ಇವೇ ತಾತ್ವಿಕನ—ಸಮ್ಯಗ್ದರ್ಶಿಯ—ಜೀವನದ ಹೆಗ್ಗುರುತುಗಳಲ್ಲದೆ ಆತ್ಮವನ್ನು ಅಲುಗಾಡಿಸುವ ಚಿತ್ತತರಂಗಗಳೆಂಬ ಇಂದ್ರಿಯ ಕಾಮಗಳನ್ನು ಅನುಭವಿಸುವುದು ಎಂದಿಗೂ ಅವನ ಧ್ಯೇಯವಾಗಲಾರದು. ಹೀಗೆಂದು ಎಪಿಕ್ಯೂರಿಯನರು ಕಡೆಕಡೆಯಲ್ಲಿ ಅಭಿಪ್ರಾಯಪಟ್ಟರು.

ಸಂಘಜೀವನ, ಸಮಾಜಸಂಪರ್ಕ—ಇವು ಪುರುಷನಿಗೆ ಸುಖದಾಯಕಗಳಾದುದರಿಂದ ಒಳ್ಳೆಯವು. ಮನುಷ್ಯರು ತಮ್ಮ ತಮ್ಮ ಕ್ಷೇಮವನ್ನು ಭದ್ರಪಡಿಸಿಕೊಳ್ಳುವುದಕ್ಕಾಗಿ ಗುಂಪುಕೂಡಿ ಸಂಘವೊಂದನ್ನೇರ್ಪಡಿಸುವರು. ಆದುದರಿಂದ ದೇಶದ ಕಾಯಿದೆಕಟ್ಟಳೆಗಳು ಸ್ವಭಾವತಃ ನ್ಯಾಯವಾದುವುಗಳು. ಅವುಗಳನ್ನು ನಾವು ಸರ್ವಕಾಲದಲ್ಲಿಯೂ ಗಮನಿಸಲೇಬೇಕೆಂಬುದೇನೂ ಇಲ್ಲ. ದೇಶಕಾಲಾನುಗುಣ್ಯವಾಗಿ ಜನರು ತಮ್ಮ ತಮ್ಮ ಕ್ಷೇಮವೃದ್ಧಿಗೋಸ್ಕರ ಹಲವು ಕಾನೂನುಗಳನ್ನು ಮಾಡಿಕೊಂಡಿರುತ್ತಾರೆ. ಎಂದಿನವರೆಗೂ ಈ ಕಾನೂನುಗಳು ಪುರುಷನ ಸುಖಕ್ಕೆ ಚ್ಯುತಿಯಿಲ್ಲದಂತೆ ಕಾಪಾಡುವುವೋ ಅಂದಿನವರೆಗೂ ಅವು ನ್ಯಾಯವಾದುವು. ನಾವು ನ್ಯಾಯವಾದ ಮಾರ್ಗದಲ್ಲಿ ನಡೆಯಬೇಕು, ಏಕೆಂದರೆ ಹಾಗೆ ನ್ಯಾಯವರ್ತಿಗಳಾಗಿರುವುದು ನಮಗೇ ಲೇಸು. ಅನ್ಯಾಯದಲ್ಲಿ ಅನ್ಯಾಯವಾಗಿರುವುದರಿಂದಲೇ ದೋಷವೇನೂ ಇಲ್ಲ: ಅದು ನಮಗೆ ಲೇಸನ್ನೆಸಗದು, ಅಷ್ಟೆ. ಕಳ್ಳತನಮಾಡುವುದರಿಂದಲೇ ತಪ್ಪೇನೂ ಇಲ್ಲ; ಓಲೆಕಾರರ ಕೈಗೆ ಸಿಕ್ಕಿ ನ್ಯಾಯಾಧಿಪತಿಯಿಂದ ಶಿಕ್ಷೆ ಹೊಂದುವುದು ತಪ್ಪುವುದಿಲ್ಲವಾದುದರಿಂದ ಕಳ್ಳತನ ಕೆಟ್ಟುದು.

ಚಾರ್ವಾಕರ ಮತದಂತೆ ಎಪಿಕ್ಯೂರಸ್ಸಿನ ಸಿದ್ಧಾಂತವೂ ಭೋಗತತ್ವವಾದರೂ ಎಪಿಕ್ಯೂರಸ್ಸಿನ ಬೋಧನೆಯನ್ನೇ ನಾವು ಪರೀಕ್ಷಿಸಿದರೆ

ಅದು ವಿಷಯಲಂಪಟತ್ವವೆಂದು ಹೇಳಲಾಗುವುದಿಲ್ಲ. ಫಲಿತಾಂಶದಲ್ಲಿ ಪ್ಲೇಟೊ, ಅರಿಸ್ಟಾಟಲ್, ಸ್ಟೋಯಿಕರು—ಇವರ ನೀತಿಬೋಧೆಯಂತೆಯೇ ಸನ್ಮಾರ್ಗ ಸೂಚಕವಾಗಿರುವುದು. ಕೆಲವು ಕಡೆ ಎಪಿಕ್ಯೂರಸ್ಸಿನ ಭೋಗತತ್ತ್ವವನ್ನು ಅರಿಸ್ಟಾಟಲಿನ ಆನಂದತತ್ತ್ವವೆಂದೇ ನಾವು ಹೇಳಬಹುದು; ಸಾಮಾನ್ಯವಾಗಿ ಅರಿಸ್ಟಾಟಲನಿಗೂ ಎಪಿಕ್ಯೂರಸ್ಸನಿಗೂ ಇರುವ ತಾರತಮ್ಯವೇನೆಂದರೆ: ಅರಿಸ್ಟಾಟಲನು ಸುಖ ಧರ್ಮ ಜೀವನದ ಫಲಮಾತ್ರವಾದುದೆಂದೂ ಗೌಣವಾದುದೆಂದೂ ಬೋಧಿಸುವನು; ಎಪಿಕ್ಯೂರಸ್ಸನು ಸುಖವೇ ಪ್ರಧಾನವಾದುದೆಂದೂ ಅದೇ ನಮ್ಮ ಪುರುಷಾರ್ಥವಾಗಿರಬೇಕೆಂದೂ ಸಾರುವನು. ನೀತಿವಂತನು ಸುಖಿಯಾಗಿಲ್ಲದಿದ್ದರೆ ಅವನ ನೀತಿ ನೀತಿಯಲ್ಲ, ಅದು ಕೆಟ್ಟುದು. ಅಲ್ಲದೆ ಆನಂದಕ್ಕೂ ಸುಖಕ್ಕೂ ಬಹು ವ್ಯತ್ಯಾಸವಿರುವುದು. ಸಮಾಹಿತ ಮನಸ್ಸು—ಸಮತೂಕದ ಬುದ್ಧಿ, ಆತ್ಮಸಂಯಮ, ಸಾಂತ್ವವರ್ತನ, ಪರೋಪಕಾರ ಪ್ರೇಮ—ಇವು ಆನಂದದ ಗುರುತುಗಳು. ಸ್ವಪ್ರಯೋಜನ ನಿರೀಕ್ಷಣೆಯೇ ಸುಖದ ಬೀಜಮಂತ್ರ. ಪ್ರಪಂಚವ್ಯಾಪಾರಗಳಲ್ಲಿ ಕರ್ತವ್ಯದಕ್ಷತೆ, ನಿಷ್ಕಾಮ ಕರ್ಮ, ಸರ್ವರಲ್ಲಿಯೂ ಸಮಭಾವನೆ, ದೃಢವಾದ ವೈರಾಗ್ಯವಿದ್ದರೂ ಪ್ರಪಂಚಸೇವೆಯಲ್ಲಿ ಅಭಿಲಾಷೆ, ಆತ್ಮಾನುಭವದಲ್ಲಿ ಅಪರಿಮಿತ ಸೌಖ್ಯ, ಪರಿಪೂರ್ಣ ತೃಪ್ತಿ,—ಇವು ನಿಜವಾದ ಆನಂದ ಸೂಚಕಗಳು. ಪ್ರಾಪಂಚಿಕ ಸುಖಾಪೇಕ್ಷೆ, ಎಷ್ಟು ಸುಖವನ್ನನುಭವಿಸಿದರೂ ಅಸಂತುಷ್ಟಿ, ಚಪಲಚಿತ್ತತೆ, ಸ್ವಕಾರ್ಯ ದುರಂಧರತೆ—ಇವು ಸುಖದ ಚಿಹ್ನೆಗಳು. ಎಪಿಕ್ಯೂರಸ್ಸನೇನೋ ತನ್ನ ಬೋಧನೆಯಲ್ಲಿ ಸ್ಥಿತಪ್ರಜ್ಞತೆಯೇ ಸುಖದ ಪರಮಾವಧಿಯೆಂದೂ ಆತ್ಮಸುಖಗಳೇ ಶರೀರ ಸುಖಗಳಿಗಿಂತಲೂ ಶ್ರೇಷ್ಠತರವಾದುವುಗಳೆಂದೂ ಒತ್ತಿ ಹೇಳಿದ್ದರೂ, ಹೇಗೆ ಅವನ ಬೋಧನೆ ವಿಷಯಲಂಪಟತ್ವಕ್ಕೆ ಸುಲಭವಾಗಿ ದಾರಿಮಾಡಿತೆಂಬುದನ್ನು ಹೆಚ್ಚು ವಿವರಿಸಬೇಕಾದುದಿಲ್ಲ. ಸುಖವೇ ಮನುಷ್ಯನ ಪರಮ ಪ್ರಯೋಜನವಾದರೆ, ಯಾವುದು ಅವನಿಗೆ ಹಿತಕರವೆಂದು ತೋರುವುದೋ ಅದೇ ಅವನ ಸುಖ. ಶರೀರಸುಖಗಳು ಮಿಶ್ರವಾದುವು ಎಂದು ಹೇಳುವಿರೋ? ಇರಬಹುದು. ಆದರೆ ಅವು ತರುವ

ನೋವುಗಳಿಗಿಂತಲೂ ಅವು ಕೊಡುವ ಸುಖಗಳು ಅಧಿಕವೆಂದು ನಮಗೆ ತೋರಿದರೆ, ಜ್ಞಾನಾರ್ಜನೆ ಮಾಡಬೇಕಾದ ಅಗತ್ಯವಿಲ್ಲದೆಯೇ, ಮೂಢ ಭಕ್ತಿಯಿಂದ ಹುಟ್ಟುವ ಭೀತಿಭಯಗಳೊಂದಕ್ಕೂ ವಶವಾಗದೆಯೆ, ಬದುಕಿರುವ ಸ್ವಲ್ಪ ಕಾಲದಲ್ಲಿಯೇ ಸಾಧ್ಯವಾದಷ್ಟು ದೇಹ ಸುಖವನ್ನನು ಭವಿಸಿ ಹೋಗೋಣವೆಂದರೆ, ಆಗದೆನ್ನುವರಾರು? ಲಭಿಸುವ ಸುಖ ಪರಿಮಾಣದಲ್ಲಿ ಒಂದೇ ಆಗಿರುವಲ್ಲಿ, ಕಡುಬಿಗಿಂತಲೂ ಕಾವ್ಯಕಥನ ಶ್ರೇಷ್ಠತರವಾದ ಸುಖವೆಂದು ಹೇಳುವುದು ಹೇಗೆ? ಎಪಿಕ್ಯೂರಸ್, ಲುಕ್ರೀಷಿಯಸ್, ಅಟಿಕಸ್, ಹೊರೇಸ್—ಇಂಥವರು ಕೆಲವರು ಮಾನಸಿಕ ಸುಖಗಳು ಶ್ರೇಷ್ಠತರವಾದುವುಗಳೆಂದು ಹೇಳಿರಬಹುದು; ಆದರೆ ಜ್ಞಾನಸುಖವನ್ನು ಕೋರುವ ಒಬ್ಬ ಲುಕ್ರೀಷಿಯಸ್, ಒಬ್ಬ ಅಟಿಕಸ್ಸಿಗೆ ಇತ್ತಕಡೆ ದೇಹಸುಖಗಳನ್ನು ಬಯಸುವ ಸಾವಿರ ಮಂದಿ ಕ್ಯಾಟಿಲೀನ್, ಸಾವಿರ ಮಂದಿ ವೆರ್ರೀಸ್ ಪುರುಷರಿಲ್ಲವೆ? ಇದರ ಅಂತ ರಂಗವೇನೆಂದರೆ, ಎಪಿಕ್ಯೂರಸ್ಸಿನ ಸಿದ್ಧಾಂತ ಜ್ಞಾನಪೂರ್ವಕವಾದ ಸ್ವಾರ್ಥತೆ, ವಿಚಾರಯುತವಾದ ಸ್ವಪ್ರಯೋಜನತೆ (enlightened self-interest) ಎಂದು ಹೇಳಬಹುದು. ಯಾವಾಗ ಮನುಷ್ಯನು ತನ್ನ ಸೌಖ್ಯವೇ ತನ್ನ ಜೀವನದ ಮುಖ್ಯ ತತ್ವವೆಂದು ತಿಳಿಯುವನೋ ಆಗ ಈ ಬುದ್ಧಿ ಪರಪ್ರಯೋಜನನಿರಾಕರಣೆಗೂ ವಿಷಯಲಂಪಟತ್ವಕ್ಕೂ ದಾರಿ ಮಾಡುವುದೇನೂ ಆಶ್ಚರ್ಯಕರವಾದುದಲ್ಲ.

ಎಪಿಕ್ಯೂರಸ್ಸಿನ ಸಿದ್ಧಾಂತದ ವಿಚಾರವಾಗಿ ಹೇಳಬೇಕಾದ ಕಡೆಯ ಮಾತೇನಂದರೆ, ಹಿಂದೂತತ್ವಶಾಸ್ತ್ರ ಚರಿತ್ರೆಯಲ್ಲಿ ಕಂಡುಬರುವ ಚಾರ್ವಾಕರ (ಲೋಕಾಯತಿಕರ) ಮತವೂ ಈ ತತ್ವವೂ ಒಂದೇ ಎಂದು ಪ್ರಥಮದಲ್ಲಿ ತೋರಿದರೂ ಸಾವಧಾನವಾಗಿ ಪರ್ಯಾಲೋಚಿಸಿದಲ್ಲಿ ಎರಡಕ್ಕೂ ಇರುವ ಅಜಗಜಾಂತರ ಸ್ಪಷ್ಟವಾಗದಿರದು. ಚಾರ್ವಾಕರು ಇಂದ್ರಿಯಭೋಗವೇ — ಐಹಿಕಸುಖವೇ — ಮಾನವನ ಪರಮ ಧ್ಯೇಯವೆಂದು ಸಾರಿದರು. "ಸತ್ತ ಕೂಡಲೆ ಈ ದೇಹವನ್ನು ಚಿತೆಯ ಮೇಲಿಟ್ಟು ಸುಟ್ಟುಬಿಡುವರಲ್ಲ; ಅದು ಪುನಃ ಹಿಂತಿರುಗುವ ಬಗೆಯೆಂತು? ಆದ್ದರಿಂದ, ಬದುಕಿರುವಾಗಲೇ—ತೀರಿಸಲಾಗದಿದ್ದರೂ ಚಿಂತೆಯಿಲ್ಲ—

ಸಾಲಮಾಡಿಯಾದರೂ ಘೃತಪೂರಿತವಾದ ಭಕ್ಷ್ಯ ಭೋಜ್ಯಗಳನ್ನು ಮಾಡಿ ತಿಂದು ಸುಖಿಸಬೇಕು." ಸ್ವೇಚ್ಛಂದಚಾರಿಗಳ ಈ ಸಂದೇಶಕ್ಕೂ, ದೈಹಿಕ ಕಾಮುಗಳನ್ನೆಲ್ಲಾ ತೊರೆದು, ಜ್ಞಾನಾರ್ಜನೆ ಮಾಡಿ, ಸೌಜನ್ಯ ಸಚ್ಛೀಲಾದಿ ಸದ್ಗುಣ ಸಂಪತ್ತಿನಿಂದೊಡಗೂಡಿ, ಚಿತ್ತಸಂರಂಭವಿಲ್ಲದೆ, ಸಮಾಹಿತಮನಸ್ಸಿನಿಂದ ಲಭಿಸುವ ಆತ್ಮಶಾಂತಿ ಎಂಬ ಸುಖವನ್ನನು ಭವಿಸಬೇಕೆನ್ನುವ ಎಪಿಕ್ಯೂರಸ್ಸಿನ ಬೋಧನೆಗೂ ಎಲ್ಲಿಗೆಲ್ಲಿಗೆ ಸಂಬಂಧ !

## ಅಧ್ಯಾಯ ೨೧

## ಸ್ಟೋಯಿಕರ ಯೋಗರಹಸ್ಯ

ಎಪಿಕ್ಯೂರಸ್ಸಿನ ಬೋಧನೆ ಸ್ವಾರ್ಥಪರತೆಯನ್ನೇ ಅಧಿಕವೆಂದು ತಿಳಿದ ಭೌತವಾದಪೂರ್ವಕವಾದ ಭೋಗತತ್ತ್ವವಾಗಿತ್ತು. ಸಾಕ್ರಟೀಸ್, ಪ್ಲೇಟೊ ಮತ್ತು ಅರಿಸ್ಟಾಟಲ್ ಇವರ ಸಿದ್ಧಾಂತಗಳು ಭೋಗತತ್ತ್ವಕ್ಕೆ ವಿರೋಧವಾಗಿದ್ದುವೆಂಬುದರಲ್ಲಿ ಸಂಶಯವಿಲ್ಲ. ಸಾಕ್ರಟೀಸನ ಕಾಲಾನಂತರದಲ್ಲಿಯೇ ಈ ಭೋಗತತ್ತ್ವದ ಮೂಲರೂಪವಾದ 'ಸಿರಿನೇಯಕರು' ಎಂಬವರ ಮತ ಹರಡುತ್ತಿದ್ದುದನ್ನು ನೋಡಿ ಅದನ್ನು ನಿಗ್ರಹಿಸುವುದಕ್ಕಾಗಿ 'ಸಿನಿಕ್ಸ್' ಎಂಬ ವಿರಕ್ತರ ಪಂಗಡವೊಂದು ವೈರಾಗ್ಯ ತತ್ತ್ವಗಳನ್ನು ಜನರಿಗೆ ಬೋಧಿಸುತ್ತ ಪ್ರಚುರಪಡಿಸುತ್ತಲಿತ್ತು. ಪ್ಲೇಟೊ, ಅರಿಸ್ಟಾಟಲ್ ಇವರೂ ಸಹ ಈ ಸಿನಿಕರ (ಪ್ರಪಂಚಪರಿತ್ಯಾಗಿಗಳ) ಬೋಧನೆಗಳಿಂದ ಸಂಸ್ಕೃತರಾದವರೆ. ಈಗ ಪುನಃ ಭೋಗತತ್ತ್ವ ತಲೆಯೆತ್ತುತ್ತಿರುವುದನ್ನು ಕಂಡು, ಸೀನೊ ಎಂಬ ತಾತ್ತ್ವಿಕನು ಸುಮಾರು ಕ್ರಿ. ಪೂ. ೩೦೦ರಲ್ಲಿ ಅಥೆನ್ಸ್ ನಗರದಲ್ಲಿ ಪಾಠಶಾಲೆಯೊಂದನ್ನು ಸ್ಥಾಪಿಸಿ ಸಿನಿಕರ ಮತ್ತು ಪ್ಲೇಟೊ, ಅರಿಸ್ಟಾಟಲ್ ಇವರುಗಳ ನೀತಿಶಾಸ್ತ್ರದ ಮುಖ್ಯಾಭಿಪ್ರಾಯಗಳನ್ನೆಲ್ಲಾ ಆಯ್ದುಕೊಂಡು, ಪ್ರಪಂಚದಲ್ಲೇ ಇದ್ದುಕೊಂಡು ಕರ್ಮಪರಿತ್ಯಾಗ ಮಾಡದೆ ಜ್ಞಾನಾರ್ಜನೆಯನ್ನು ಮಾಡಿ ಜೀವನ್ಮುಕ್ತರಾಗುವುದೆಂತೆಂಬ ರಾಜಯೋಗಮಾರ್ಗವನ್ನು ಜನರಿಗೆ ಬೋಧಿಸತೊಡಗಿದನು. ಸೀನೊವಿನ ಸಿದ್ಧಾಂತ ಬಹುಜನರಿಗೆ ಮನಹತ್ತಿ

ಗ್ರೀಸ್ ದೇಶದಲ್ಲಿಯೇ ಅಲ್ಲದೆ ರೋಮ್ ಚಕ್ರಾಧಿಪತ್ಯದಲ್ಲಿಯೂ ಕೂಡ ಅನೇಕ ಕಡೆ ಪೋಷಿಸಲ್ಪಟ್ಟು ಕ್ರಿಸ್ತಶಕದಲ್ಲಿ ಬಹುಕಾಲದ ವರೆಗೂ ತನ್ನ ಶಕ್ತಿಯನ್ನು ತೋರ್ಪಡಿಸುತ್ತಲಿತ್ತು. ಮೂಸೋನಿಯಸ್ ರೂಫಸ್, ಸೆನಕ, ಎಪಿಕ್ಟಿಟಸ್ ಇವರು ರೋಮನರಲ್ಲಿ ಸ್ಟೋಯಿಕ್ ಮತದ ಪ್ರಧಾನ ಕವಿಗಳು ಮತ್ತು ಗ್ರಂಥಕಾರರು. ಮಾರ್ಕಸ್ ಆರೀಲಿ ಯಸ್ ಎಂಬ ರೋಮನ್ ಚಕ್ರಾಧಿಪತಿ ಸ್ಟೋಯಿಕ್ ಮತವನ್ನವ ಲಂಬಿಸಿದ ವೈರಾಗ್ಯ ಚಕ್ರವರ್ತಿ. ಸ್ಟೋಯಿಕ್ ಮತದಲ್ಲಿ ಪ್ರಶಂಸ ನೀಯವಾದ ಅನೇಕ ತತ್ತ್ವಗಳು ಹಿಂದೂ ವೇದಾಂತ ಮಾರ್ಗದಲ್ಲಿಯೂ —ಅದರಲ್ಲಿಯೂ ಗೀತಾಬೋಧೆಯಲ್ಲಿ—ತುಂಬಿವೆಯೆಂಬುದನ್ನು ವಾಚ ಕರು ಈ ಸಿದ್ಧಾಂತವನ್ನು ಓದುತ್ತ ಹೋದಹಾಗೆಯೇ ಗ್ರಹಿಸಬಹುದು.

ಸದಾಚರಣೆಗೆ ಸಮರ್ಪಕವಾದ ತಳಹದಿಯನ್ನು ಹಾಕುವುದೇ ತತ್ತ್ವಶಾಸ್ತ್ರದ ಮುಖ್ಯೋದ್ದೇಶ. ಸತ್ಯಜ್ಞಾನವೆಂದರೇನು, ಸತ್ಯ ಜ್ಞಾನದ ಪ್ರಮಾಣ ಯಾವುದು, ಎಂಬುದನ್ನು ನಿರ್ಧರಿಸಿದ ಹೊರತು ಮಾನವನ ಶ್ರೇಯವನ್ನು ನಿಷ್ಕರಿಸಲಾಗುವುದಿಲ್ಲ. ಆದುದರಿಂದ ಪ್ರಮಾಣ ಶಾಸ್ತ್ರವಾದ ನ್ಯಾಯವನ್ನು ಮೊದಲು ಪರಿಶೀಲಿಸಬೇಕು. ಮತ್ತು ಪ್ರಪಂಚತತ್ತ್ವವನ್ನು ಶೋಧಿಸಿದ ಹೊರತು ಸನ್ಮಾರ್ಗದಲ್ಲಿ ನಡೆಯ ಬೇಕೆನ್ನುವ ಬೋಧನೆ ಜನರಿಗೆ ಮನಗಾಣಿಸುವುದಿಲ್ಲ. ಏಕೆಂದರೆ ಪ್ರಪಂಚ ವಿಚಾರವಾಗಿ ಯಾರು ಯಾವ ಭಾವವನ್ನಿಟ್ಟುಕೊಂಡಿದ್ದರೆ ಅವರು ಅದಕ್ಕನುಸಾರವಾಗಿ ತಮ್ಮ ಜೀವನವನ್ನು ರೂಪುಗೊಳಿಸುವರು. ಆದುದರಿಂದ ತತ್ತ್ವಶಾಸ್ತ್ರ ತ್ರಿಮುಖಿಯಾಗಿರುವುದು. ನ್ಯಾಯವೇ ಸುತ್ತಲೂ ಕಾಪಾಡಿಕೊಂಡಿರುವ ಬೇಲಿ; ಪ್ರಕೃತಿತತ್ತ್ವಶಾಸ್ತ್ರವೇ ಉತ್ತು, ಬಿತ್ತಿ ರಸವತ್ತಾಗಿರುವ ಭೂಮಿ; ನೀತಿಶಾಸ್ತ್ರವೇ ಪರಮಶ್ರೇಯ ವಾಗಿರುವ ಫಲ.

## ನ್ಯಾಯ

ಚಿಂತನೆಯ ಸ್ವರೂಪ, ಕ್ರಮ, ಕಟ್ಟು—ಇವುಗಳನ್ನು ತಿಳಿಸುವ ಶಾಸ್ತ್ರವೇ ನ್ಯಾಯ. ಭಾವ (concept), ಪ್ರಮೇಯ (judgment),

ವಾಕ್ಯ (proposition), ಅನುಮಿತಿ (inference)—ಇವುಗಳಿಗೆ ಸಂಬಂಧಿಸಿದ ವಿಧಿಗಳನ್ನು ಕಂಡುಹಿಡಿಯುವುದೇ ಮತ್ತು ಇವುಗಳನ್ನು ಭಾಷೆಯ ಮೂಲಕ ವ್ಯಕ್ತಗೊಳಿಸುವುದೇ ನ್ಯಾಯದ ಕಾರ್ಯ. ಸ್ಟೋಯಿಕರು ವ್ಯಾಕರಣ ಭಾಗವನ್ನೂ ನ್ಯಾಯದಲ್ಲಿಯೇ ಸೇರಿಸಿ ಅಭ್ಯಾಸಮಾಡಿದರು. ಸದ್ಯದಲ್ಲಿ ನಾವು ಅವರ ನ್ಯಾಯವನ್ನೇ ಪರೀಕ್ಷಿಸುತ್ತ ಹೋದರೆ ಎರಡು ಮುಖ್ಯ ಪ್ರಶ್ನೆಗಳನ್ನು ಗಮನದಲ್ಲಿಡಬೇಕು : ಜ್ಞಾನದ ಮೂಲವೇನು ಅಥವಾ ನಾವು ಸತ್ಯಜ್ಞಾನವನ್ನು ಪಡೆಯುವುದು ಹೇಗೆ? ಸತ್ಯಜ್ಞಾನದ ಪ್ರಮಾಣ, ಕಟ್ಟು ಅಥವಾ ಒರೆಗಲ್ಲು ಯಾವುದು ?

ಪ್ರತ್ಯಕ್ಷವೇ ಸಮಸ್ತ ವಿಧವಾದ ಜ್ಞಾನದ ಮೂಲ. ಪ್ಲೇಟೊ ಹೇಳಿದಂತೆ ನಮ್ಮ ಚಿತ್ತ್ರಪಂಚದಲ್ಲಿ ಅಂತರ್ಭೂತವಾಗಿರುವ ಅಥವಾ ಬುದ್ಧ್ಯಾರೂಢವಾದ(innate, a priori)ಭಾವಗಳು ಯಾವುವೂ ಇಲ್ಲ. ಹುಟ್ಟುತ್ತ ನಮ್ಮ ಆತ್ಮ ಶುಭ್ರವಾದ ಹಲಗೆಯಂತಿರುವುದು (tabula rasa). ಬಾಹ್ಯವಸ್ತುಗಳು ಈ ಹಲಗೆಯ ಮೇಲೆ ತಮ್ಮ ಅಕ್ಷರಗಳನ್ನು ಕೆತ್ತುವುವು. ಅವಗ್ರಹಗಳು ಚಿತ್ತ್ರಪಂಚದಲ್ಲಿ ತಮ್ಮ ಸ್ಮೃತಿಚಿತ್ರಗಳನ್ನು ಬಿಟ್ಟು ಹೋದಮೇಲೆ ಈ ಚಿತ್ರಗಳು ತಕ್ಕಮಟ್ಟಿಗೆ ಸ್ಫುಟರೂಪವನ್ನು ಹೊಂದಿ ಪರಸ್ಪರ ಸಂಯೋಗವಾಗಿ ನಮ್ಮ ಅನುಭವವನ್ನುಂಟುಮಾಡುವುವು. ಅವಗ್ರಹಗಳ ಮತ್ತು ಸ್ಮೃತಿಚಿತ್ರಗಳ ಸಹಾಯದಿಂದ ವಸ್ತುಗಳ ಸಾಮಾನ್ಯಗುಣಭಾವಗಳನ್ನೂ ಹೊಂದಬಹುದು. ಈ ಸಾಮಾನ್ಯಭಾವಗಳು ಸಾರ್ವತ್ರಿಕವಾದ ಅನುಭವದ ಮೇಲೆ ನಿಂತು ಶಾಶ್ವತಸ್ಥಿತಿಯನ್ನು ಪಡೆಯುವುವು. ಇವು ಎಲ್ಲಾ ಜನರಲ್ಲಿಯೂ ಒಂದೇ ತರವಾಗಿದ್ದು ವಿಪರ್ಯಾಯವನ್ನು ಹೊಂದಲಾರವು. ಆದರೆ ಇವು ಶಾಸ್ತ್ರೀಯವಾದ ಸಾಮಾನ್ಯ ಭಾವಗಳೆಂದು ಹೇಳಲಾಗುವುದಿಲ್ಲ.

ಅನೇಕ ಪ್ರತ್ಯೇಕಗಳನ್ನೀಕ್ಷಿಸಿ ಅವುಗಳೆಲ್ಲವುಗಳಲ್ಲಿಯೂ ಕಂಡುಬರುವ ತಾದಾತ್ಮ್ಯ (ಸ್ವಭಾವಸಮತ್ವ)ವನ್ನು ನಿರ್ಣಯಿಸಿ, ಅವುಗಳ ಸಾಮಾನ್ಯಗುಣಗಳನ್ನೆಲ್ಲಾ ಜಾತಿಸೂಚಕ ಭಾವಗಳಲ್ಲಿ (class-concepts) ಅಡಗಿಸುವ ಶಕ್ತಿ ನಮ್ಮ ಚಿತ್ತಕ್ಕೆ ಉಂಟು. ಇಷ್ಟೇ ಅಲ್ಲ; ಈ ಭಾವಗಳ ಆಧಾರದ ಮೇಲೆ ಸಾರ್ವತ್ರಿಕ ಪ್ರಮೇಯಗಳನ್ನು

ಪ್ರಯೋಗಿಸಬಲ್ಲ ಶಕ್ತಿಯೂ ಅದಕ್ಕೆ ಉಂಟು. ಚಿತ್ತದ ಈ ವಿಧವಾದ ಶಕ್ತಿಗೆ ವಿಜ್ಞಾನವೆಂದು ಹೆಸರು. ಈ ವಿಜ್ಞಾನವೂ, ಪ್ರಧಾನವನ್ನು ತನ್ನ ಚಿಂತನೆಗನುಸಾರವಾಗಿ ರೂಪುಗೊಳಿಸಿ ಪ್ರಪಂಚವನ್ನು ಸೃಷ್ಟಿಮಾಡುವ ದೈವಿಕಜ್ಞಾನವೂ (Divine Reason) ಅಥವಾ ಲೋಕಾತ್ಮ (World Soul, ಸೂತ್ರಾತ್ಮ, ಹಿರಣ್ಯಗರ್ಭ) ಎಂಬುದೂ ಸತ್ವದಲ್ಲಿ ಒಂದೇ ಎಂದು ಸ್ಟೋಯಿಕರ ನಂಬುಗೆ. ಇದರಿಂದಲೇ ಮಾನವನ ವಿಜ್ಞಾನವೂ ಈಶ್ವರನ ಜ್ಞಾನವನ್ನು ಪಡೆದು ಆತನ ಚಿಂತನೆಗಳನ್ನೇ ಚಿಂತಿಸಬಲ್ಲುದು. ಆದರೆ ಸಾಮಾನ್ಯಭಾವಗಳು ಈಶ್ವರನ ಚಿಂತನೆಗಳನ್ನು ಹೋಲಬೇಕಾದರೆ ಇವುಗಳ ಪ್ರತಿಬಿಂಬರೂಪವಾದ ವಸ್ತುಗಳು ಯಥಾರ್ಥಗುಣಗಳನ್ನು ವ್ಯಕ್ತಗೊಳಿಸಬೇಕು. ಪ್ರತ್ಯೇಕ ವಸ್ತುಗಳೇ ಯಥಾರ್ಥದ್ರವ್ಯಗಳು; ಅವುಗಳ ಗುಣಗಳೇ ನಮ್ಮ ಭಾವಗಳ ಅಧಿಷ್ಠಾನ (ground, basis). ಈ ಕಾರಣದಿಂದ ಸಾಮಾನ್ಯಗಳೇ ಸತ್ಯಸತ್ವಗಳೆಂದೂ ಬೋಧಿಸಿದ ಪ್ಲೇಟೋವಿನ ಸಿದ್ಧಾಂತ ನಿಜವಲ್ಲ. ಸಾಮಾನ್ಯಗಳು ವಿಕಲ್ಪ ಶಕ್ತಿಯ (power of abstraction) ಫಲಗಳು, ಬುದ್ಧಿನಿರ್ಮಾಣವಾದುವುಗಳು. ಬಾಹ್ಯವಸ್ತುಗಳೇ ಸ್ವತಂತ್ರ ಸಂಸ್ಥಿತಿಯನ್ನು ಪಡೆದಿರುವ ದ್ರವ್ಯಗಳು.

ಪ್ರತ್ಯಕ್ಷ, ಸಾರ್ವತ್ರಿಕಭಾವ, ಸಾಮಾನ್ಯ—ಇವುಗಳೇ ನಮ್ಮ ವಿಶಿಷ್ಟಜ್ಞಾನದ ಆಧಾರಗಳು. ಇಂದ್ರಿಯಚಿತ್ರ ವಸ್ತುವಿನ ಸಮವಾದ ಪ್ರತಿಕೃತಿಯಾದರೆ ನಿಜವೆಂದೆನಿಸುವುದು. ಆದರೆ ಅವಾಯುಗಳೂ (Percepts) ಭಾವಗಳೂ (Concepts) ವಸ್ತುಗಳ ಸಮವಾದ ಪ್ರತಿಕೃತಿಗಳೆಂದು ಹೇಳುವುದು ಹೇಗೆ? ಅನೇಕವೇಳೆ ಅವಾಯುಗಳು ವಿಪರ್ಯಾಯಗಳಾಗಿ ಪ್ರತ್ಯಕ್ಷಾಭಾಸ (Illusion)ಗಳೆಂದೆನಿಸಿಕೊಳ್ಳುವುದಿಲ್ಲವೆ? ನಮ್ಮ ಅವಾಯುಗಳು ನಿಜವೋ ಸುಳ್ಳೋ ನಿರ್ಧರಿಸುವುದೆಂತು? ಕೆಲವು ವೇಳೆ ನಮ್ಮ ಇಂದ್ರಿಯಜ್ಞಾನ ಮಿಥ್ಯವಾಗಿ ಪರಿಣಮಿಸಿದರೆ ಪ್ರತಿ ಒಂದುಸಲವೂ ವೈತಥ್ಯವೇ ಎಂದು ಹೇಳಲು ಏನು ಅಡ್ಡಿ? ಅವಾಯುಗಳೂ ಭಾವಗಳಂತೆಯೇ ಸ್ವಕಪೋಲ ಕಲ್ಪಿತಗಳಾಗಿ ಏಕೆ ಇರಕೂಡದು? ಸತ್ಯಾವಾಯು, ಸತ್ಯಭಾವಗಳನ್ನು, ಮಿಥ್ಯಾವಾಯು, ಮಿಥ್ಯಭಾವಗಳಿಂದ ಭೇದಿಸುವುದು ಹೇಗೆ? ನಮ್ಮ ವಿಶಿಷ್ಟಜ್ಞಾನವೂ ಪ್ರತ್ಯಕ್ಷದ ಮೇಲೆ

ನಿಂತಿರುವುದೆಂಬುದೇನೋ ನಿಜ. ಆದರೆ ಎಂದು ಪ್ರತ್ಯಕ್ಷ ಸತ್ಯವೆಂದೂ, ತನಗೆ ಸರಿಹೋಲುವ ಬಾಹ್ಯವಸ್ತುವೊಂದು ನಿಜವಾಗಿಯೂ ಇದೆಯೆಂದೂ, ತನ್ನ ಪ್ರಮಾಣವನ್ನು ತಾನೇ ಮನಸ್ಸಿಗೆ ತರುವುದೋ, ಎಂದು ನಾವು ಪ್ರತ್ಯಕ್ಷ ಸತ್ಯವೆಂದು ತಕ್ಷಣವೇ ಮನಗಾಣುತ್ತೇವೆಯೋ, ಅದರ ಮೂಲರೂಪವಾದ ವಸ್ತುವಿದೆಯೆಂದು ತಕ್ಷಣವೇ ನಮ್ಮ ಮನಸ್ಸಿಗೆ ಹೊಳೆಯುತ್ತದೆಯೋ, ಅಂದು ಆ ಪ್ರತ್ಯಕ್ಷವೇ ನಿಜ; ಆ ಅವಾಯವೇ ಸತ್ಯಾವಾಯ. ಈ ವಿಧವಾದ ಸ್ವತಃಪ್ರಾಮಾಣ್ಯತೆ ಎಲ್ಲಾ ಪ್ರತ್ಯಕ್ಷಗಳಿಗೂ ಇರುವುದಿಲ್ಲ. ಪ್ರತಿಯೊಂದು ಸಲವೂ ಪ್ರತ್ಯಕ್ಷ ನಿಜವೆಂಬ ತಕ್ಷಣಜ್ಞಾನವನ್ನು (ತಾತ್ಪರ್ಯ-Intuition) ನಾವು ಹೊಂದುವುದಿಲ್ಲ. ನಮ್ಮ ಜ್ಞಾನೇಂದ್ರಿಯ ಸರಿಯಾದ ಸ್ಥಿತಿಯಲ್ಲಿದೆಯೆಂದೂ, ಅವಾಯ ಪ್ರತ್ಯೇಕವಾಗಿ ಸ್ಫುಟವಾಗಿದೆಯೆಂದೂ, ಪುನಃ ಪುನಃ ನಾವು ಮತ್ತು ಇತರರು ಮಾಡಿದ ಪರೀಕ್ಷೆಗಳು ನಮ್ಮ ಮೊದಲಿನ ಅವಾಯವನ್ನು ಸ್ಥಿರಗೊಳಿಸುವುವೆಂದೂ, ನಮಗೆ ತೋರಿದರೆ ಆಗ ಮೇಲೆ ವಿವರಿಸಿದ ಪ್ರತ್ಯಕ್ಷದ ಸತ್ಯವಿಷಯಕವಾದ ತಕ್ಷಣಜ್ಞಾನ ನಮಗೆ ಹೊಳೆಯುವುದು. ಈ ತೆರನಾದ ತಾತ್ಪರ್ಯಜ್ಞಾನವನ್ನು ಕೊಡುವ ಅವಗ್ರಹಕ್ಕೆ ಭಾವಚಿತ್ರ ಅಥವಾ ಜ್ಞಾನಪ್ರತ್ಯಕ್ಷವೆಂದು ಸೀನೋ ಹೇಳಿದನು.

ಅವಾಯಗಳ ಮತ್ತು ಭಾವಗಳ ಸ್ವತಃಪ್ರಾಮಾಣ್ಯತೆಯೇ, ಅವು ನಿಜವೆಂದೂ, ಅವುಗಳ ಮೂಲಗಳಾದ ವಸ್ತುಗಳು ಬಾಹ್ಯ ಪ್ರಪಂಚದಲ್ಲಿವೆಯೆಂದೂ ನಮಗೆ ಹುಟ್ಟುವ ನಂಬಿಕೆಯೇ, ಸತ್ಯಜ್ಞಾನದ ಪ್ರಮಾಣ ಅಥವಾ ಕಟ್ಟು. ಹಿಂದೆ ಹೇಳಿದಂತೆ ನಮ್ಮ ಎಲ್ಲ ಅವಾಯಗಳೂ ಭಾವಗಳೂ ಇಂತಹ ಸತ್ಯದ ಹೆಗ್ಗುರುತು ಹೊಂದಿರುವುವೆಂದು ಹೇಳಲಾಗುವುದಿಲ್ಲ. ಶುದ್ಧಸ್ವಕಪೋಲಕಲ್ಪಿತ ಚಿತ್ರಗಳಾಗಲಿ ಭಾವಗಳಾಗಲಿ ಇಂಥ ಸತ್ಯ ಪ್ರಮಾಣವನ್ನು ಧರಿಸಿರುವುದಿಲ್ಲ: ಅವುಗಳು ನಿಜವೆಂದು ನಾವು ನಂಬುವ ಹಾಗೂ ಇಲ್ಲ, ಅವುಗಳನ್ನು ಕುರಿತು ಪ್ರಮೇಯಗಳನ್ನು (Judgment) ಉಪಯೋಗಿಸಬೇಕಾದ ಅಗತ್ಯವೂ ಇರುವುದಿಲ್ಲ. ಇದನ್ನು ಮರೆತು ಕಾಲ್ಪನಿಕ ಚಿತ್ರಭಾವಗಳಿಗೆಲ್ಲಾ ನಾವು ನಮ್ಮ ಸಮ್ಮತಿಯನ್ನಿತ್ತು ಅವುಗಳನ್ನು ಪ್ರಮೇಯಗಳಲ್ಲಿ

ಉಪಯೋಗಿಸಿದರೆ ಆಗಲೇ ವಿಪರ್ಯಾಯ ಅಥವಾ ಪ್ರತ್ಯಕ್ಷಾಭಾಸಗಳೂ ಅದರೊಂದಿಗೆ ಮಿಥ್ಯಾಜ್ಞಾನವೂ ಉತ್ಪನ್ನವಾಗುವುವು. ಮಿಥ್ಯಾಜ್ಞಾನಕ್ಕೆ ನಾವೇ ಕಾರಣಕರ್ತರು. ಸ್ವಲ್ಪ ವಿವೇಚನಾಶಕ್ತಿಯನ್ನುಪಯೋಗಿಸುವುದರಿಂದ ನಮ್ಮ ಜ್ಞಾನದಲ್ಲಿ ತಪ್ಪುಗಳನ್ನೂ, ವಿರುದ್ಧಭಾವಗಳನ್ನೂ, ವಿಪರ್ಯಾಯಗಳನ್ನೂ ದೂರಮಾಡಿಕೊಳ್ಳಬಹುದು.

ಜ್ಞಾನವೆಂಬುದು ಶಾಸ್ತ್ರಕಾರರಿಗೇ ಅಥವಾ ತತ್ವವೇತ್ತುಗಳಿಗೇ ಸಂಬಂಧಪಟ್ಟುದಲ್ಲ. ಜನರೆಲ್ಲರೂ ತಮ್ಮ ಸಾರ್ವತ್ರಿಕಭಾವಗಳ ಮುಖಾಂತರ ಜ್ಞಾನವನ್ನು ಪಡೆಯಬಹುದು. ಆದರೆ ಇಂಥ ಸಾರ್ವತ್ರಿಕಭಾವಗಳು ಸ್ವತಃಪ್ರಮಾಣಗಳಾಗಿ ಇರುವುದಿಲ್ಲವಾದುದರಿಂದ ಸಮ್ಯಗ್‌ಜ್ಞಾನವಾಗಲಾರವು. ಸಮ್ಯಗ್‌ಜ್ಞಾನ ಅಥವಾ ಶಾಸ್ತ್ರೀಯ ಜ್ಞಾನ ಬರಬೇಕಾದರೆ ನಾವು ನಮ್ಮ ವಿಜ್ಞಾನ ಶಕ್ತಿಯನ್ನುಪಯೋಗಿಸಬೇಕು.

ಪ್ರಮೇಯಗಳನ್ನು ಪರಸ್ಪರ ಸಂಬಂಧಿಸಿ ಅನುಮಿತಿ (inference, conclusion) ಗಳನ್ನೆಳೆದು, ಸಿದ್ಧಾಂತವನ್ನೇರ್ಪಡಿಸುವುದೇ ವಿಜ್ಞಾನದ ಕಾರ್ಯ. ನ್ಯಾಯದ ಮಾರ್ಗದಿಂದಲೇ ನಮಗೆ ಸತ್ಯಜ್ಞಾನ ದೊರೆಯುವುದು. ಆದುದರಿಂದ ಸತ್ಯಜ್ಞಾನವನ್ನು ಪಡೆಯುವ ಅಭಿಲಾಷೆಯುಳ್ಳವರೆಲ್ಲರೂ ನ್ಯಾಯಶಾಸ್ತ್ರವನ್ನು ಚನ್ನಾಗಿ ಪರಿಶೀಲಿಸಬೇಕು. ಈ ಕಾರಣದಿಂದ ಸ್ಟೋಯಿಕರು ನ್ಯಾಯಶಾಸ್ತ್ರಕ್ಕೆ ವಿಶೇಷ ಗಮನ ಕೊಟ್ಟು ಅದರಲ್ಲಿಯೂ ಅನುಮಾನ ಪ್ರಕರಣವನ್ನು ಪರಿಶೋಧಿಸಿ ಅರಿಸ್ಟಾಟಲನ ಅನೇಕ ಸಿದ್ಧಾಂತಗಳನ್ನು ಸಮೀಕರಿಸಿದರು.

ಸ್ವಭಾವಜನ್ಯಜ್ಞಾನ ಯಾವುದೂ ಇಲ್ಲವೆಂದೂ, ಚಿತ್ತ ತನ್ನಷ್ಟಕ್ಕೆ ತಾನೇ ಜ್ಞಾನವನ್ನು ಉತ್ಪತ್ತಿಮಾಡಲಾರದೆಂದೂ, ಪ್ರತ್ಯಕ್ಷವೇ, ಅನುಭವವೇ, ನಮ್ಮ ಸರ್ವಜ್ಞಾನದ ಆಸರೆಯೆಂದೂ ತೋರಿಕೊಡುವುದೇ ಸ್ಟೋಯಿಕರ ನ್ಯಾಯಶಾಸ್ತ್ರದ ಮುಖ್ಯ ಗುರಿ. ಹೀಗೆಂದ ಮಾತ್ರಕ್ಕೆ ಚಿಂತನೆಯ ಕಾರ್ಯವೇ ಇಲ್ಲವೆಂದು ಹೇಳಿದ ಹಾಗಲ್ಲ. ಪ್ರತ್ಯಕ್ಷ ನಮ್ಮ ಜ್ಞಾನಕ್ಕೆ ಉಪಾದಾನಕಾರಣ: ಅವಶ್ಯಕವಾದ ಸಾಮಗ್ರಿಗಳನ್ನೊದಗಿಸುವುದು. ಅವಗ್ರಹಗಳಿಂದ ಸಾಮಾನ್ಯಗಳನ್ನು ಹೊರ

ಪಡಿಸುವುದೂ, ಸಾಮಾನ್ಯಗಳನ್ನು ಸಂಬಂಧಿಸಿ ಪ್ರಮೇಯಗಳನ್ನು ಉತ್ಪತ್ತಿಗೊಳಿಸುವುದೂ, ಪ್ರಮೇಯಗಳನ್ನು ಪರಸ್ಪರ ಹೋಲಿಸಿ ಅಗತ್ಯವಾಗಿ ಹೊರಬೀಳುವ ಅನುಮಿತಿ ಅಥವಾ ನಿಗಮನಗಳನ್ನು ಗ್ರಹಿಸುವುದೂ—ಇವೆಲ್ಲವೂ ಚಿಂತನೆಯ ಕಾರ್ಯ. ಚಿಂತನೆಯ ಕಾರ್ಯವಿಲ್ಲದಿದ್ದರೆ ವರ್ತಮಾನದ ಅವಗ್ರಹದಿಂದ ಭೂತ ಭವಿಷ್ಯಗಳಿಗೆ ಸಂಬಂಧಪಟ್ಟ ಜ್ಞಾನ ಹೇಗೆ ಲಭಿಸುವುದು?

## ಅಧ್ಯಾತ್ಮಶಾಸ್ತ್ರ

ಪ್ರಪಂಚವೆಲ್ಲವೂ ಕರ್ತೃ, ಕರ್ಮ, ಅಥವಾ ಚೇತನ, ಅಚೇತನ ಈ ತತ್ತ್ವದ್ವಯಗಳ ಸಂಯೋಗಫಲವೆಂದೂ, ಈ ತತ್ತ್ವದ್ವಯಗಳು ಬೇರೆಯೆಂದು ನಾವು ಚಿಂತನೆಯಲ್ಲಿ ಬೇರೆಮಾಡಿದರೂ ವಸ್ತುತಃ ಅವು ಪರಸ್ಪರ ಅವಶ್ಯಕವೆಂದೂ ಅರಿಸ್ಟಾಟಲನೊಡನೆ ಸ್ಟೋಯಿಕರೂ ಒಪ್ಪಿಕೊಳ್ಳುವರು. ಆದರೆ ಈ ತತ್ತ್ವಗಳ ಸ್ವರೂಪ ಅಥವಾ ಸ್ವಭಾವವನ್ನು ನಿರ್ಣಯಿಸುವುದರಲ್ಲಿ ಅರಿಸ್ಟಾಟಲನಿಗೂ ಸ್ಟೋಯಿಕರಿಗೂ ವ್ಯತ್ಯಾಸ ಕಂಡುಬರುವುದು. ಕರ್ತೃತತ್ತ್ವವೆಂಬುದೂ ಕರ್ಮಣಿತತ್ತ್ವವೆಂಬುದೂ ಉಂಟು: ಆದರೆ ನಾವು ಕಂಡಂತೆ ವಸ್ತುಗಳಿಗಲ್ಲದೆ ಮತ್ತೆ ಯಾವುದಕ್ಕೆ ಕರ್ತೃಸ್ವರೂಪವಾಗಲಿ ಕರ್ಮಣಿಸ್ವರೂಪವಾಗಲಿ ಇರುವುದು? ಇದರಿಂದ ಕರ್ತೃ ಕರ್ಮ ತತ್ತ್ವಗಳೆರಡೂ, ರೂಪಪ್ರಧಾನವೆರಡೂ, ಭೌತವಾದುವುಗಳು, ಅಮೂರ್ತ (non-corporeal) ಎಂಬುದಿಲ್ಲವೇ ಇಲ್ಲ. ರೂಪವನ್ನು ಸ್ಟೋಯಿಕರು ಶಕ್ತಿ (force) ಎಂದು ಕರೆಯುವರು. ಶಕ್ತಿಯೂ ಪ್ರಧಾನವೂ ಎರಡೂ ಮೂರ್ತವಾದರೂ ಅವುಗಳ ಮೂರ್ತತೆಯಲ್ಲಿ ತಾರತಮ್ಯವಿರುವುದು. ಪ್ರಧಾನ ಸ್ಥೂಲವಾಗಿಯೂ, ರೂಪರಹಿತವಾಗಿಯೂ ನಿಶ್ಚಲವಾಗಿಯೂ ಇರುವುದು; ಶಕ್ತಿಯಾದರೋ ಅತಿ ಸೂಕ್ಷ್ಮವಾದ, ಚುರುಕಾದ ವಸ್ತುವಿಶೇಷವನ್ನೊಳಗೊಂಡಿರುವುದು. ಶಕ್ತಿಯನ್ನು ನಾವು ರಜಸ್ಸೆಂದೂ, ಪ್ರಧಾನವನ್ನು ತಮಸ್ಸೆಂದೂ ಹೇಳಬಹುದು. ರಜಸ್ತಮೋಗುಣಗಳೆರಡೂ ಸ್ವಭಾವದಲ್ಲಿ ಭೌತವಾಗಿದ್ದು ಸರ್ವದಾ ಸಿಷಿಕ್ತವಾಗಿರುವುವು. ರಜಸ್ಸಿದ್ದ ಕಡೆ ತಮಸ್ಸಿದ್ದೇ ಇರುವುದು;

ತಮಸ್ಸಿದ್ದೆಡೆಯಲ್ಲೆಲ್ಲಾ ರಜಸ್ಸೂ ಇರುವುದು. ಜಗತ್ತಿನ ಸಮಸ್ತ ವಸ್ತುಗಳೂ, ತತ್ವಗಳೂ ಭೌತವಾದುವುಗಳು: ಮಾನವನ ಆತ್ಮವೂ ಸಹ, ಈಶ್ವರನೂ ಕೂಡ, ಭೌತವೇ! ವಸ್ತುಗಳ ವಿವಿಧಗುಣಗಳೂ ಅಗ್ನಿ ವಾಯುಗಳಿಂದ ಮಾಡಲ್ಪಟ್ಟ ಒಂದು ವಿಧವಾದ ಸೂಕ್ಷ್ಮ ಪುದ್ಗಲಾಣುಕೃತಗಳು. ಈ ಪುದ್ಗಲಾಣುಗಳು (particles of matter) ವಸ್ತುವಿನ ಹೊರಗೂ ಒಳಗೂ ಸರ್ವ ಪ್ರದೇಶದಲ್ಲಿಯೂ ತುಂಬಿ ಆಯಾಯಾ ವಸ್ತುಗಳಿಗೆ ಅನುಸಾರವಾದ ಗುಣಗಳನ್ನುಂಟುಮಾಡುತ್ತವೆ. ವಾಯುವೂ ಅಗ್ನಿಯೂ ರಜೋಗುಣವುಳ್ಳವು—ಜೀವಚೇತನ ಕಾರಣಗಳು. ಪೃಥ್ವಿಯೂ ಅಪ್ಪೂ ತಮಃಪ್ರಧಾನವಾದುವು—ಕುಂಬಾರನ ಕೈಯಲ್ಲಿರುವ ಮಣ್ಣಿನಂತೆ ಚೈತನ್ಯರಹಿತವಾದುವು.

ಶಕ್ತಿಗಳೇ ಕ್ರಿಯೆಗಳನ್ನುಂಟುಮಾಡುವ ಕ್ರಿಯಾಕಾರಿತ್ವವನ್ನು (ಬೌದ್ಧರ ತತ್ವದಲ್ಲಿ ಅರ್ಥಕ್ರಿಯಾಕಾರಿತ್ವವೆನ್ನುತ್ತಾರೆ) ಪಡೆದಿರುವುವು; ವಸ್ತುಗಳೇ ಕಾರ್ಯಕಾರಣಸಂಬಂಧಕ್ಕೆ ಒಳಗಾಗತಕ್ಕುವು. ಆದರೆ ಕಾರಣದಿಂದುಂಟಾದ ಕಾರ್ಯ(effect)ಮಾತ್ರ ವಸ್ತುವಿನಲ್ಲುಂಟಾಗುವ ಒಂದು ಚಲನೆ, ಪರಿಣಾಮ ಅಥವಾ ಸ್ಥಿತಿವ್ಯತ್ಯಾಸವಲ್ಲದೆ, ವಸ್ತುವೂ ಅಲ್ಲ, ವಸ್ತುವಿನ ಗುಣವೂ ಅಲ್ಲ. ಸ್ಟೋಯಿಕರು ಶಕ್ತಿಯೂ ಕ್ರಿಯಾಕಾರಿತ್ವವೂ ಒಂದೇ ಎಂದು ತಿಳಿದು ವಸ್ತುಗಳ ಮೇಲೆಯೇ ಶಕ್ತಿಪ್ರಯೋಗವಾಗಬಲ್ಲುದೆಂದೂ ಹೇಳಿದರು. ಆದರೆ ಫಲಿಸುವ ಕಾರ್ಯ ವಸ್ತುವಲ್ಲ; ಕೇವಲ ಔಪಾಧಿಕವಾದ ವಸ್ತುಸ್ಥಿತಿಯಷ್ಟೆ. ಕಾರ್ಯ ವಸ್ತುವಾಗಿದ್ದರೆ ಅದರಮೇಲೆ ಶಕ್ತಿಪ್ರಯೋಗಬಲದಿಂದ ಅದರಿಂದ ಮತ್ತೊಂದು ವಸ್ತು ಉತ್ಪನ್ನವಾಗಬಹುದಾಗಿತ್ತು. ಆದುದರಿಂದ ಕಾರ್ಯ ಭೌತವಲ್ಲ, ಅಮೂರ್ತ. ವಸ್ತುಗಳ ಪರಸ್ಪರ ಸಂಬಂಧವಿಶೇಷಗಳೂ ಸಹ ಅಮೂರ್ತವಾದುವುಗಳು. ಕರ್ತೃತತ್ವ ಭೌತವೆಂದು ಸ್ಟೋಯಿಕರು ಹೇಳಿದರೂ ಜೀವಯುಕ್ತವಾದುದೆಂದೂ ಚೈತನ್ಯವುಳ್ಳುದೆಂದೂ ಬೋಧಿಸಿದುದರಿಂದ ಸ್ವಲ್ಪಮಟ್ಟಿಗೆ ಅರಿಸ್ಟಾಟಲನ ರೂಪವರ್ಣನೆಯೇ ಆಯಿತು. ಕೇವಲ ಅವಗ್ರಹವೇ ಸರ್ವ ಜ್ಞಾನಕ್ಕೂ ಮೂಲವೆಂದು ಹೇಳಿದುದರಿಂದ ಸ್ಟೋಯಿಕರು ಶಕ್ತಿಯನ್ನು ಆತ್ಮನೆಂದಾಗಲಿ, ಶುದ್ಧ ಸತ್ವವೆಂದಾಗಲಿ ಹೇಳಲಾರದೆ ಹೋದರು.

ಪ್ರಪಂಚದಲ್ಲಿರುವ ಶಕ್ತಿಗಳಿಗೆಲ್ಲಾ ಆಶ್ರಯರೂಪವಾದ ಮೂಲ ಶಕ್ತಿಯೊಂದುಂಟು. ಇದೇ ಅಗ್ನಿತತ್ವವೆಂದು ಹಿರಾಕ್ಲಿಟಸನು ಸಾರಿದ ಜೀವಚೇತನಯುತವಾದ, ಜಗತ್ತಿನಲ್ಲೆಲ್ಲಾ ಅಂತರ್ಭೂತವಾಗಿರುವ, ಚಿಚ್ಛಕ್ತಿವಿಶೇಷ. ಇದು ಏಕ—ಪ್ರಪಂಚವೆಲ್ಲ ಸಮ್ಮೇಳನಹೊಂದಿ ಏಕರೂಪವಾಗಿರುವುದೇ ಕಾರಣ. ಇದು ಮಂಗಳಕರವೂ, ನೈಗಮಿಕವೂ (teleological) ಆದ ಚಿದಾತ್ಮಕ ವಸ್ತು — ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಕ್ರಮ, ಸಮೀಚೀನತೆ, ಸಮತೋಲನ ಕಂಡು ಬಂದು ಪ್ರತಿಯೊಂದು ಭಾಗವೂ ಅನುಕೂಲವಾದ ರೀತಿಯಲ್ಲಿ ಸಂಬಂಧ ಹೊಂದಿ ಒಟ್ಟಿನಲ್ಲಿ ಲೋಕವೆಲ್ಲವೂ ಸೌಂದರ್ಯಾತಿಶಯದಿಂದ ತುಂಬಿ ತುಳುಕುತ್ತಿರುವುದೇ ಇದಕ್ಕೆ ದೃಷ್ಟಾಂತ. ಇದು ಪರಿಪೂರ್ಣ ಜ್ಞಾನವುಳ್ಳುದೂ, ಜ್ಞಾನಪ್ರದವೂ ಆಗಿರುವುದು. ಇದೇ ಈಶ್ವರತತ್ವ. ಮಾನವನ ದೇಹಕ್ಕೆ ಆತ್ಮ ಹೇಗೆ ಸಂಬಂಧಿಸಿರುವುದೋ ಹಾಗೆ ಈ ಮಹತ್ತು ಪ್ರಪಂಚಕ್ಕೆ ಸಂಬಂಧಿಸಿರುವುದು: ಪ್ರಪಂಚ ಈಶ್ವರನ ಶರೀರದಂತಿರುವುದು. ಈಶ್ವರನು ಪ್ರಪಂಚದ ಅಂತರ್ಯಾಮಿ, ಲೋಕಾತ್ಮನು ಅಥವಾ ಸೂತ್ರಾತ್ಮನು. ಪ್ರಪಂಚವೆಲ್ಲವೂ ಅವನಿಂದಲೇ ಉತ್ಪತ್ತಿಯಾಗುವುದು: ಪ್ರತಿ ಒಂದು ವಸ್ತುವಿನಲ್ಲಿಯೂ ಅವನೇ ಪ್ರಕಾಶಿಸುವನು. ಜಗತ್ತೆಲ್ಲವೂ ಈಶ್ವರಮಯ. ಗಿಡ ಬೀಜದಲ್ಲಿ ಹೇಗೆ ಅಡಗಿರುವುದೋ ಹಾಗೆ ಪ್ರಪಂಚವೆಲ್ಲವೂ ಭಗವಂತನಲ್ಲಿ ಅಂತರ್ಭೂತವಾಗಿರುವುದು. ಇದನ್ನೇ ವಿಶ್ವಬ್ರಹ್ಮವಾದವೆಂದು (Pantheism) ಹೇಳಬಹುದು.

ಜಗತ್ತೆಲ್ಲವೂ ಬ್ರಹ್ಮಮಯವೆಂದೂ, ಪ್ರತಿಯೊಂದು ಚರಾಚರ ವಸ್ತುವಿನಲ್ಲಿಯೂ ಆತನು ಪ್ರಕಾಶಿಸುವನೆಂದೂ ಹೇಳಿದೆಯಷ್ಟೆ. ಆದರೂ ಶರೀರದಲ್ಲೆಲ್ಲಾ ಆತ್ಮನು ಜೀವಿಸುತ್ತಿದ್ದರೂ ಆತ್ಮನ ಮುಖ್ಯ ಆವಾಸಸ್ಥಾನ ಹೃದಯವೆಂದು ನಾವು ಹೇಳುವಂತೆ, ಈಶ್ವರನು ಇಲ್ಲಿರುವನು, ಅಲ್ಲಿಲ್ಲ, ಎಂಬ ಸೊಲ್ಲು ಸಲ್ಲದಿದ್ದರೂ ಆತನು ಪ್ರಪಂಚದ ಅಂತ್ಯ ಪ್ರದೇಶದಲ್ಲಿ ಈಶ್ವರ ರೂಪವನ್ನು ತಾಳಿ ಪ್ರಪಂಚವನ್ನೆಲ್ಲಾ ತನ್ನ ಮಹಿಮೆಯಿಂದ ಆಳುವನು. ಪ್ರಪಂಚವೆಲ್ಲವೂ ಬ್ರಹ್ಮಮಯವೇ;

ಆದರೂ ಇದನ್ನಾಳಲು ಮೂಲತತ್ವ ಪುರುಷತ್ವವನ್ನು ಧರಿಸಿ ಈಶ್ವರ ನಾಗುವುದು. ಈಶ್ವರನು ಸರ್ವಮಂಗಳಗುಣಭರಿತನು; ಸರ್ವಕ್ಕೂ ಪಿತನು; ದಯಾಮಯನು; ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪರಿಪಾಲಿಸತಕ್ಕವನು. ಆದರೂ ಈಶ್ವರನಿಗೆ ಕ್ರಿಯಾಕಾರಿತ್ವಶಕ್ತಿ ಇದೆಯೆಂದು ಹೇಳಲಾಗುವುದಿಲ್ಲ. ಈಶ್ವರನು ಪ್ರಪಂಚ ಸೃಷ್ಟಿಗೆ ಉಪಾದಾನಕಾರಣನು ಮಾತ್ರ: ಸೃಷ್ಟಿಯಾಗುವುದು ಆತನ ಇಚ್ಛೆಯಿಂದಲ್ಲ. ಸ್ವಭಾವನಿರ್ಬಂಧವೆಂಬ ಪ್ರಕೃತಿಯ ನಿಯಮಕ್ಕನುಸಾರವಾಗಿ ಮೂಲತತ್ವ ಪ್ರಪಂಚರೂಪವಾಗಿ ಸ್ವಾಭಾವಿಕವಾಗಿಯೇ ಪರಿಣಾಮಹೊಂದುವುದು. ಆದುದರಿಂದ ಸಾಂಖ್ಯರೀತಿಯಾಗಿ ಸ್ಟೋಯಿಕರ ಸೃಷ್ಟಿಕ್ರಮವನ್ನು ಪರಿಣಾಮವಾದವೆಂದು ಹೇಳಬಹುದು. ಇದರಿಂದ ಸ್ಟೋಯಿಕರ ತತ್ವಶಾಸ್ತ್ರದಲ್ಲಿ ವಿಶ್ವೇಶ್ವರವಾದ (Theism), ವಿಶ್ವಬ್ರಹ್ಮವಾದ (Pantheism) ಇವೆರಡೂ ಕಂಡುಬರುವವು. ಹೀಗಿದ್ದರೂ ಈಶ್ವರನಿಗೆ ಇಚ್ಛಾಶಕ್ತಿಯೂ ಭವಿಷ್ಯಜ್ಞಾನವೂ ಉಂಟೆಂದು ಸ್ಟೋಯಿಕರ ಅಭಿಪ್ರಾಯವಿದ್ದಿತು.

ಮೂಲತತ್ವದಿಂದ ಪ್ರಪಂಚ ಹೇಗೆ ಉತ್ಪತ್ತಿಯಾಯಿತೆಂಬುದನ್ನು ಸ್ಟೋಯಿಕರು ಸವಿಸ್ತಾರವಾಗಿ ವರ್ಣಿಸುತ್ತಾರೆ. ದೇವತತ್ವವಾದ ಅಗ್ನಿಯಿಂದ ವಾಯು, ನೀರು, ಭೂಮಿ, ಇವು ಉತ್ಪತ್ತಿಯಾದುವು. ಪೃಥಿವಿಯೂ ಅಪ್ಪೂ, ಅಗ್ನಿತತ್ವ ತನ್ನ ಶಕ್ತಿಯನ್ನು ನೀಗಿಬಿಟ್ಟುದರಿಂದ ಫಲಿತವಾದ ಜಡವಸ್ತುಗಳೆಂದು ಕೆಲವು ಕಡೆ ಹೇಳಲ್ಪಟ್ಟಿರುವುವು. ದೇವಾಗ್ನಿಯೇ ಸೃಷ್ಟಿಕಾರ್ಯದಲ್ಲಿ ಪ್ರವೇಶಿಸಿ ಕ್ರಮ ಕ್ರಮವಾಗಿ ತನ್ನ ಶುದ್ಧಸತ್ವದಲ್ಲಿ ತಾರತಮ್ಯವನ್ನು ಹೊಂದಿ ಆಯಾಯಾ ಪ್ರಸ್ಥಾನಕ್ಕನುಸಾರವಾದ ವಸ್ತುವರ್ಗಗಳನ್ನು ಉಂಟುಮಾಡುವುದು. ಜಡವಸ್ತುವರ್ಗದಲ್ಲಿ ಮೂಲತತ್ವ ಕೇವಲ ಅಜ್ಞಾನದಿಂದಲೋ ಎಂಬಂತೆ ಅರ್ಥರಹಿತವಾಗಿ ಕ್ರಿಯಾಕಾರಿತ್ವವನ್ನು ಪ್ರದರ್ಶಿಸುವುದು. ಸಸ್ಯವರ್ಗದಲ್ಲಿ ಅಜ್ಞಾನರೀತಿಯಲ್ಲಾದರೂ ಅರ್ಥಸಹಿತವಾಗಿ—ಪ್ರಯೋಜನಪೂರ್ವಕವಾಗಿ—ಕಾರ್ಯವನ್ನೆಸಗುವುದು. ಪ್ರಾಣಿವರ್ಗದಲ್ಲಿ ಆಲೋಚನೆಗಳಿಂದ ಕೆಲಸ ನಡಸಲು ಅನುಕೂಲವಿದ್ದರೂ, ಉದ್ದೇಶಪೂರ್ವಕವಾಗಿ ಚಲನೆ

ಗಳನ್ನುಂಟುಮಾಡಲು ಅವಕಾಶವಿದ್ದರೂ, ಕೇವಲ ಇಂಗಿತ ಜ್ಞಾನದಿಂದ, ಸಂಜ್ಞೆಯ ಬಲದಿಂದ, ಜೀವಿಸಲಾಗುವಷ್ಟು ಶಕ್ತಿಯನ್ನು ಮಾತ್ರ ಪ್ರಯೋಗಿಸಿ ಸೃಷ್ಟಿಮಾಡುವುದು. ಮನುಷ್ಯವರ್ಗದಲ್ಲಿಯೇ ಮೂಲ ತತ್ವ ತನ್ನ ಪರಮೋತ್ಕೃಷ್ಟವಾದ ಸತ್ವವನ್ನು ಪ್ರಕಾಶಿಸಿ ಜ್ಞಾನಚೇತನ ಗಳಿಂದೊಡಗೂಡಿ ಫಲಪ್ರದವಾದ ಧ್ಯೇಯಗಳನ್ನಿಟ್ಟುಕೊಂಡು ಮಾನ ವನು ತನ್ನ ಪುರುಷಾರ್ಥವನ್ನು ಕೈಗೊಳ್ಳಲನುಕೂಲವಾಗುವಂತೆ ಸೃಷ್ಟಿ ಕಾರ್ಯವನ್ನು ನಡಸುವುದು. ಪ್ರಕೃತಿ ವಸ್ತುಗಳಲ್ಲಿ ಕಾಣುವ ಪರಸ್ಪರ ವ್ಯತ್ಯಾಸಗಳಿಗೆ ಅಗ್ನಿ, ವಾಯು, ಪೃಥ್ವಿ, ಅಪ್ಪು—ಇವು ಮಿಶ್ರವಾಗುವ, ಒಂದಕ್ಕೊಂದು ಸೇರುವ, ಪ್ರಮಾಣವ್ಯತ್ಯಾಸವೇ ಕಾರಣ. ಪ್ರಪಂಚ ಪರಿಪೂರ್ಣವಾದ ಗೋಳದಂತಿದ್ದು ಅದರಲ್ಲಡಗಿರುವ ಬ್ರಹ್ಮಬಲದಿಂದ ಏಕವಾಗಿಯೂ ಕ್ರಮಸಮೀಚೀನತೆಗಳಿಂದೊಡಗೂಡಿಯೂ ನಿಂತಿದೆ. ಪ್ರಪಂಚ ಅನಾದಿಯಲ್ಲ. ನಿರ್ಣೀತಕಾಲದಲ್ಲಿ ಸೃಷ್ಟಿಸಲ್ಪಟ್ಟು ನಿರ್ಣೀತ ಕಾಲದವರೆಗೂ ಸ್ಥಿತಿಯನ್ನು ಹೊಂದಿದ್ದು ಕಡೆಗೆ ನಿರ್ಣೀತಕಾಲದಲ್ಲಿ ಲಯ ಹೊಂದುವುದು. (ಆಗ ಪ್ರಪಂಚವೆಲ್ಲವೂ ಭಸ್ಮೀಭೂತವಾಗಿ ಮೂಲತತ್ವವಾದ ದೇವಾಗ್ನಿಗೆ ಹಿಂದಿರುಗುವುದು. ಇದನ್ನೇ ಸ್ಟೋಯಿ ಕರು ಮಹಾಜ್ವಾಲೆಯೆನ್ನುವರು ; ಆರ್ಯಸಿದ್ಧಾಂತದಲ್ಲಿ ಪ್ರಳಯ ವೆನ್ನುವರು). ಮರಳಿ ಸೃಷ್ಟಿಯಾಗಿ ಪೂರ್ವದಲ್ಲಿ ಯಾವ ಪ್ರಕಾರವಾ ಗಿತ್ತೊ, ಚಾಚೂ ತಪ್ಪದಂತೆ ಅದೇ ಪ್ರಕಾರವಾಗಿದ್ದು ಕಡೆಯಲ್ಲಿ ಮರಳಿ ನಾಶವಾಗುವುದು. ಈ ಪ್ರಕಾರವಾಗಿ ಸೃಷ್ಟಿಸ್ಥಿತಿಲಯಗಳು ಒಂದರ ಹಿಂದೆ ಒಂದು ಅನಂತವಾಗಿ ಜರುಗುತಲಿರುವುವು. ಈ ಅರ್ಥದಲ್ಲಿ ಪ್ರಪಂಚವನ್ನು ಅನಾದಿಯೆಂದು ಹೇಳಬಹುದು. ಪ್ರಪಂಚದಲ್ಲಿ ಎಲ್ಲವೂ ಪೂರ್ವಸ್ಥಾಪನೆಯ (Predestination) ಫಲ: ಸಮಸ್ತವನ್ನೂ ಈಶ್ವರನು ಪೂರ್ವವಾಗಿಯೇ ಸಂಕಲ್ಪಿಸಿರುವನು. ಮಾನವಸಂಕಲ್ಪವೂ ಸಹ ಪೂರ್ವಸಂಕಲ್ಪಿತವಾಗಿರುವುದು. ಪ್ರಕೃತಿಯ ಪ್ರತಿಯೊಂದು ಕಾರ್ಯವೂ ಮುನ್ನಿರ್ಣಯವಾಗಿರುವುದು. ಆಕಸ್ಮಿಕ ಅಥವಾ ಅವ್ಯಾಜಸಂಭವಗಳಿಗೆ ಅವಕಾಶವೇ ಇಲ್ಲ. ಪ್ರಪಂಚವೆಲ್ಲವೂ ಅಖಂಡವಾದ ಸರಪಳಿಯಂತೆ ಕಾರ್ಯಕಾರಣಬದ್ಧವಾಗಿರುವುದು. ಮಾನವನಿಗೂ ಸಂಕಲ್ಪಶಕ್ತಿ ಇಲ್ಲವೇ

ಸಂಕಲ್ಪ— ಶ್ರೇಯಗಳಿಗೂ ಯಾವ ವಿಧವಾದ ಹೋರಾಟವೂ ಇರಲಾರದು. ಪರಿಪೂರ್ಣಜ್ಞಾನಿಯಾದ ಮನುಷ್ಯನು ಈಶ್ವರನಂತೆಯೇ ಸ್ವತಂತ್ರಚಿತ್ತನು.

ಆತ್ಮ ನಿತ್ಯವೇ ಎಂಬ ವಿಷಯದಲ್ಲಿ ಸ್ಟೋಯಿಕರು ಏಕಾಭಿಪ್ರಾಯವನ್ನು ಕೊಡುವುದಿಲ್ಲ. ಕೆಲವರು ಸರ್ವಾತ್ಮಗಳೂ ನಿತ್ಯವಾಗಿರುವುವೆಂತಲೂ, ಕೆಲವರು ಧರ್ಮಪುರುಷರ ಆತ್ಮಗಳು ಮಾತ್ರ ಅಮರವೆಂದೂ ವಿಧವಿಧವಾಗಿ ಹೇಳುವರು. ಪರಂತು ಪ್ರಪಂಚದ ಸೃಷ್ಟಿಯಲ್ಲಿ ಆತ್ಮಗಳೆಲ್ಲವೂ ಪುನರ್ಜನ್ಮವನ್ನು ಹೊಂದುವುವೆಂದು ಎಲ್ಲರೂ ಒಪ್ಪಿಕೊಳ್ಳುವರು.

ಸ್ಟೋಯಿಕರ ಮನಶ್ಶಾಸ್ತ್ರದಲ್ಲಿ ಅವರು ಮಾಡುವ ಭಾವರಾಗಗಳ ವರ್ಣನೆ ಪ್ರಾಮುಖ್ಯವಾದುದು ; ಏಕೆಂದರೆ ರಾಗಗಳ ಮತ್ತು ಭಾವಗಳ (passions and emotions) ಯಥಾರ್ಥಜ್ಞಾನ ನೀತಿಶಾಸ್ತ್ರಕ್ಕೆ ಅತ್ಯಂತ ಸಹಕಾರಿ. ಮನುಷ್ಯನ ಚಿತ್ತ ತನ್ನ ಸ್ವಭಾವಕ್ಕೂ ಪ್ರಕೃತಿಗೂ ವಿರೋಧವಾಗಿ ನಡೆಯುವಂತೆ ಪಶುಸಂಸ್ಕಾರಗಳಿಂದೊಯ್ಯಲ್ಪಟ್ಟರೆ ಆಗ ರಾಗದ್ವೇಷಗಳೂ ಕಾಮವೂ ತಲೆದೋರುವುವು. ಪಶುಸ್ವಭಾವದಿಂದ ಹುಟ್ಟುವ ದೋಷಗಳಿಂದ ನಮ್ಮ ಬುದ್ಧಿ ಸ್ವರ್ಣಮಧ್ಯಮವನ್ನು ತೊರೆದು, ತನ್ನ ಸ್ವಭಾವವನ್ನೇ ಮರೆತು, ಅತಿವೇಗವಾಗಿ ಓಡುತ್ತಾ, ಅತ್ಯಾಚಾರಗಳನ್ನು ನಡಸಬೇಕೆಂಬ ಕುತೂಹಲ ಅದಕ್ಕೆ ಬಂದಾಗಲೇ ಕಾಮಗಳೂ ರಾಗದ್ವೇಷಗಳೂ ಪ್ರಕಾಶವಾಗುವುವು. ಎಂದು ಕಲ್ಪನೆ (Imagination) ಬುದ್ಧಿಗೆ ತತ್ಸಂಬಂಧವಾದ ವಸ್ತುಗಳನ್ನು ತೋರಿಸಿ ಅದನ್ನು ತನ್ನ ಹಾದಿಗೆ ಎಳೆಯುವುದೋ ಅಂದು ಭಾವಗಳು ಪ್ರಜ್ವಲಿತವಾಗುವುವು. ಅಲ್ಲದೆ ನಮ್ಮ ನಿಜವಾದ ಶ್ರೇಯೋರಿಷ್ಟಗಳ ವಿಷಯದಲ್ಲಿ ತಪ್ಪು ತಿಳಿವಳಿಕೆಯನ್ನು ಹೊಂದುವುದರಿಂದಲೂ ಭಾವಗಳು ಜನಿಸುವುವು. ಪರಂತು ಎರಡು ವಿಧದಲ್ಲಿಯೂ ನಮ್ಮ ಬುದ್ಧಿ ತನ್ನ ಸ್ವಭಾವಕ್ಕೆ ವಿರೋಧವಾಗಿ ನಡೆಯುವುದರಿಂದ —ಆತ್ಮಸಂಯಮವಿಲ್ಲದೆ ಹೋಗುವುದರಿಂದ—ನಾವು ಕಾಮಗಳ ಪಾಶಕ್ಕೆ ಒಳಗಾಗುತ್ತೇವೆ.

ಇಂಥ ಕಾಮಗಳು ಅಥವಾ ಭಾವಗಳು ನಾಲ್ಕು ವಿಧವಾಗಿರುವುವು. ನಮ್ಮ ವರ್ತಮಾನ ಶ್ರೇಯದ ವಿಚಾರದಲ್ಲಿ ತಪ್ಪು ತಿಳಿವಳಿಕೆಯನ್ನು

ಹೊಂದುವುದರಿಂದ ಸುಖವೆಂಬುದೂ, ಭಾವೀಶ್ರೇಯದ ವಿಚಾರದಲ್ಲಿ ಬುದ್ಧಿ ವಿಕಲ್ಪವಾಗುವುದರಿಂದ ಆಶೆಯೆಂಬುದೂ, ನಮ್ಮ ವರ್ತಮಾನ ಅರಿಷ್ಟದ ವಿಷಯದಲ್ಲಿ ತಪ್ಪು ಪ್ರಮೇಯಗಳನ್ನು ಅನುಮೋದಿಸುವುದ ರಿಂದ ದುಃಖ ಅಥವಾ ನೋವು ಎಂಬುದೂ, ಭಾವೀಕಷ್ಟದ ವಿಚಾರವಾಗಿ ಚಿತ್ತಭ್ರಮೆಯುಂಟಾಗುವುದರಿಂದ ಭಯವೆಂಬುದೂ, ಉತ್ಪನ್ನವಾಗು ವುವು. ಇವುಗಳೂ ಮತ್ತು ಇವುಗಳಿಗೆ ಸಂಬಂಧಿಸಿದ ಇತರ ರಾಗ ದ್ವೇಷಾದಿಗಳೆಲ್ಲವೂ ಆತ್ಮರೋಗಗಳೆಂದು ಸ್ಟೋಯಿಕರು ಹೇಳುತ್ತಾರೆ. ಇವು ಅಜ್ಞಾನಜನ್ಯವಾದುವು; ಉತ್ಪ್ರೇಕ್ಷೆಮಾಡಲ್ಪಟ್ಟ ಚಿತ್ತವೃತ್ತಿಗಳು; ದುರಭಿಪ್ರಾಯಗಳು. ಆದುದರಿಂದ ವಿವೇಕಿಯಾದವನು ಇವುಗಳನ್ನು ಮೂಲೋತ್ಪಾಟನಮಾಡಲು ಪ್ರಯತ್ನಿಸಬೇಕು.

## ಅಧ್ಯಾಯ ೨೨

## ಸ್ಟೋಯಿಕರ ನೀತಿಶಾಸ್ತ್ರ

ಸ್ಟೋಯಿಕರ ದರ್ಶನದಲ್ಲೆಲ್ಲಾ ಅವರ ನೀತಿವಿಚಾರವೇ ಅತ್ಯಂತ ಸ್ವಾರಸ್ಯವಾದುದು. ಮೇಲೆ ವಿವರಿಸಿದ ಅಧ್ಯಾತ್ಮಶಾಸ್ತ್ರ ಮತ್ತು ಮನ ಶ್ಶಾಸ್ತ್ರಗಳಿಗನುನಯವಾಗಿಯೇ ಅವರ ನೀತಿಶಾಸ್ತ್ರವೂ ಸಜ್ಜುಗೊಳಿಸ ಲ್ಪಟ್ಟಿರುವುದು. ಸ್ಟೋಯಿಕರು ಪ್ರಪಂಚವನ್ನು ಸ್ವಭಾವವಾದಿಗಳಂತೆ ಶುದ್ಧ ಜಡಯಂತ್ರವೆಂದು ತಿಳಿಯಲಿಲ್ಲ. ಪ್ರಪಂಚವೆಂಬುದು ಕ್ರಮ ಸಮೀಚೀನತೆಗಳಿಂದ ತುಂಬಿದ ಕಲಾಕಾರ್ಯವಿಶೇಷ; ಅವಯವಗಳೆಲ್ಲವೂ (members, parts) ಏಕಮಾತ್ರ ಪ್ರಯೋಜನಕ್ಕಾಗಿ ಸಮ್ಮೇಲನ ಹೊಂದಿ ಕೆಲಸಮಾಡುವುದರಿಂದ ಫಲಿತವಾಗುವ ಪರಿಪೂರ್ಣ ಅವಯವಿ (whole); ಸೌಂದರ್ಯದಿಂದಲೂ ಶೋಭಾತಿಶಯದಿಂದಲೂ ತುಂಬಿ ತುಳುಕಾಡುತ್ತಿರುವ ಅಸಮತೇಜೋರಾಶಿ; ಅಣುರೇಣುತೃಣಕಾಷ್ಠ ಗಳಲ್ಲಿಯೂ ಮೂರ್ತೀಕರಿಸಿರುವ ಚಿತ್ಪ್ರಕಾಶದ ಅಪಾರವಾರಿಧಿ; ಜೀವ ಚೇತನಯುತವಾದ, ಭಕ್ತಿ ಗೌರವಗಳನ್ನುಂಟುಮಾಡುವ, ಪೂಜಿಸಲ ರ್ಹವಾದ, ಈಶ್ವರನ ಸಾಕ್ಷಾತ್ಕಾರ! ಪ್ರಕೃತಿಯಲ್ಲೆಲ್ಲಾ ಪರಿಶುದ್ಧ

ಜ್ಞಾನ ತುಂಬಿರುವುದರಿಂದ ವಸ್ತುತಃ ಪ್ರಪಂಚ ಶುಭಕರ, ಶ್ರೇಯಃಪ್ರದವಾದುದು. ಪ್ರಕೃತಿನಿಯಮಗಳಲ್ಲೆಲ್ಲಾ ದೈವಸಂಕಲ್ಪ ಪ್ರಕಾಶಿಸುತ್ತಿರುವುದು. ಮಾನವನೂ ಸಹ ಇಂಥ ಪ್ರಕೃತಿಯ ಒಂದು ಅವಯವ; ಪ್ರಕೃತಿಗೆ ಮೀರಿದ ಪುರುಷನಲ್ಲ. ಅವಯವವಾದಮೇಲೆ, ಇತರ ಅವಯವಗಳೆಲ್ಲವೂ ಅವಯವಿಯ ಪೂರ್ಣತ್ವಕ್ಕೋಸ್ಕರ ಹೇಗೆ ಶ್ರಮಪಡುವುವೋ ಹಾಗೆಯೇ ಮಾನವನೂ ಬ್ರಹ್ಮಾಂಡದ ಉದ್ದೇಶಸಂಪೂರ್ತಿಗೋಸ್ಕರ ಕೆಲಸಮಾಡಬೇಕು. ಅಂದರೆ ಜಗತ್ತಿನ ಉದ್ದೇಶಸಂಪೂರ್ತಿಗೆ ಅಡಚಣೆಯಾಗದಂತೆ ತನ್ನ ಪ್ರಯೋಜನವನ್ನೂ ಜಗತ್ತಿನ ಪ್ರಯೋಜನವನ್ನೂ ಏಕೀಕರಿಸಿ, ಜಗತ್ತಿನ ಫಲಪೂರ್ತಿಯಲ್ಲಿಯೇ ತನ್ನ ಪರಮಶ್ರೇಯವನ್ನು ಕಂಡುಕೊಂಡು, ಬ್ರಹ್ಮಾಂಡದ ಪರಿಪೂರ್ಣತೆಗೆ ಕೆಲಸಮಾಡುವುದರಲ್ಲಿಯೇ ತನ್ನ ಪರಮಪುರುಷಾರ್ಥವನ್ನು ಸಾಧಿಸಿಕೊಂಡು, ಜನ್ಮ ಸಾರ್ಥಕ್ಯಗೊಳಿಸಬೇಕು. ಈ ಮಾರ್ಗವನ್ನನುಸರಿಸಬೇಕಾದರೆ ಮಾಡಬೇಕಾದುದೇನು? ಚಿತ್ತು ಪ್ರಪಂಚವನ್ನು ಆಳುವಂತೆ ಮಾನವನ ಆತ್ಮವನ್ನೂ ಜೀವನವನ್ನೂ ವಿಜ್ಞಾನ (Reason) ಆಳಬೇಕು. ಮಾನವನ ಆತ್ಮವೂ ಪ್ರಪಂಚದ ಪರಮಾತ್ಮವೂ ಸತ್ವದಲ್ಲಿ ಒಂದೇ: ಆತ್ಮ ದೇವಾಗ್ನಿಯ ಒಂದು ಕಿಡಿ; ಜ್ಯೋತಿ ಸಮಷ್ಟಿ, ಕಿಡಿ ವ್ಯಷ್ಟಿ. ಆದುದರಿಂದ ಮಾನವನು ದೈವಸಂಕಲ್ಪಕ್ಕನುಗುಣವಾಗಿ ನಡೆಯಲು ಸಿದ್ಧನಾಗಬೇಕು: ಜಗತ್ತಿನ ಧರ್ಮಕ್ಕೆ ತಲೆವಾಗಬೇಕು: ಬ್ರಹ್ಮಾಂಡದಲ್ಲಿ ತಾನು ಒಂದು ಪಿಂಡಾಂಡವೆಂದು ತಿಳಿದು ಜ್ಞಾನಪೂರ್ವಕವಾಗಿಯೂ ಪೂರ್ಣಮನಸ್ಸಿನಿಂದಲೂ ತನ್ನ ನಿಯಮಿತ ಕರ್ತವ್ಯವನ್ನು ನಡಸಲು ಇಷ್ಟಪಡಬೇಕು.

"ಪ್ರಕೃತಿಗನುಸಾರವಾಗಿ ನಡೆ" ಎಂಬ ಸ್ಟೋಯಿಕರ ಪ್ರಸಿದ್ಧವಾದ ನಿಯೋಗದ ತಾತ್ಪರ್ಯವಿದೇ. ಪ್ರಕೃತಿ ಬ್ರಹ್ಮಮಯ, ಜ್ಞಾನಪರಿಪೂರ್ಣ. ಪ್ರಕೃತಿಯಲ್ಲಿ ಅವ್ಯವಸ್ಥೆ— ಅನಾಯಕತ್ವ— ಒಂದೂ ಇಲ್ಲ: ಎಲ್ಲ ವ್ಯಾಪಾರಗಳೂ ದಿವ್ಯಜ್ಞಾನ (Devine Reason) ಬಲದಿಂದ ಕ್ರಮಬದ್ಧವಾಗಿರುವುವು. ಆ ಬ್ರಹ್ಮವೇ ತನ್ನಲ್ಲಿ ಆತ್ಮನಾಗಿರುವುದು; ಆ ಚಿತ್ತೇ ತನ್ನಲ್ಲಿ ವಿಜ್ಞಾನವಾಗಿ ಮೂರ್ತೀಕರಿಸಿರುವುದು. ಆದುದರಿಂದ ಪ್ರಕೃತಿಗನುಸಾರವಾಗಿ ನಡೆಯುವುದೆಂದರೆ, ಈಶ್ವರನ ಧರ್ಮಕ್ಕನು

ಸಾರವಾಗಿ, ತನ್ನ ಪರಮೋತ್ಕೃಷ್ಟವಾದ ಜ್ಞಾನಕ್ಕನುಸಾರವಾಗಿ, ನಡೆದು ಕೊಳ್ಳುವುದೆಂದರ್ಥ.

ಮಾರ್ಕಸ್ ಆರೀಲಿಯಸ್ ಎಂಬ ಸ್ಟೋಯಿಕ ರೋಮ್ ಚಕ್ರಾಧಿಪತಿ ಹೀಗೆಂದು ಪ್ರಕೃತಿಗನುಸಾರವಾಗಿ ನಡೆಯುವುದನ್ನು ವರ್ಣಿಸುತ್ತಾನೆ: "ನಿನಗೆ ವಿಹಿತವಾದುದು ಯಾವುದೋ ಅದೆಲ್ಲವೂ ನನಗೂ ವಿಹಿತವಾದುದೇ, ಓ ವಿಶ್ವವೆ; ನಿನಗೆ ಕಾಲಕ್ಕೆ ಸರಿಯಾದುದೊಂದೂ ನನಗೆ ಕಾಲಪೂರ್ವವೂ ಅಲ್ಲ, ಕಾಲಾತೀತವೂ ಅಲ್ಲ. ನಿನ್ನ ಋತುಗಳು ತರುವುದೆಲ್ಲಾ ನನಗೆ ಶುಭಫಲಗಳೇ, ಓ ಪ್ರಕೃತಿಯೆ, ನಿನ್ನಿಂದಲೇ ಸಮಸ್ತ ವಸ್ತುಗಳ ಉತ್ಪತ್ತಿ, ನಿನ್ನಲ್ಲಿಯೇ ಸಮಸ್ತ ವಸ್ತುಗಳ ಸ್ಥಿತಿ, ನಿನ್ನಲ್ಲಿಗೇ ಸಮಸ್ತ ವಸ್ತುಗಳ ಅಂತ್ಯಗತಿ. ಅಥೇನ್ಸ್‌ನಗರದ ಪುರನಿವಾಸಿ ತನ್ನ ಪಟ್ಟಣದ ಸೊಬಗನ್ನು ನೋಡಿ, 'ಓ, ನನ್ನ ಪ್ರಿಯ ಪಟ್ಟಣವೇ!' ಎಂದು ಹಾತೊರೆಯುವನು; ನಿನ್ನನ್ನು ನೋಡಿ ನಾನು, 'ಈಶ್ವರನ ಪ್ರೇಮ ನಗರವೇ!' ಎಂದು ಹೇಳಲಾರೆನೇ!"

ಇದೇ ಮಾನವನ ನೀತಿಸೂತ್ರದ ರಹಸ್ಯ. ಪ್ರಕೃತಿಗನುಸಾರವಾಗಿ ನಡೆಯುವುದೇ ಮಾನವನ ಪರಮ ಶ್ರೇಯ. ಇಂಥ ಸದ್ಗುಣವೇ ನಮಗೆ ಪರಮಸೌಖ್ಯಪ್ರದ; ಏಕೆಂದರೆ ಸದ್ಗುಣಿಯೇ ಸುಖಿಯಾಗಿರಬಲ್ಲನು. ಇಂಥ ಧರ್ಮ ಜೀವನವನ್ನು ಗಳಿಸಿಕೊಳ್ಳುವುದರಿಂದಲೇ ನಮ್ಮ ಆತ್ಮ ಸಂಸಿದ್ಧಿ ಲಭಿಸುವುದು; ಪ್ರಪಂಚ ಧರ್ಮಕ್ಕೋಸ್ಕರವೂ ಸಾರ್ವತ್ರಿಕ ಪ್ರಯೋಜನಕ್ಕೂ ಕರ್ಮವನ್ನೆಸಗುವುದೇ ಆತ್ಮಸಿದ್ಧಿ.

ಪ್ರತಿಯೊಂದು ಪ್ರಾಣಿಯೂ ತನ್ನ ಕ್ಷೇಮವನ್ನು ಕೋರುವುದು ಸ್ವಾಭಾವಿಕವಾಗಿರುವುದು. ಆದರೆ ಸ್ವಲ್ಪಮಟ್ಟಿಗೆ ವಿಮರ್ಶ ಬುದ್ಧಿಯಿಂದ ನೋಡಿದರೆ ವ್ಯಕ್ತಿಕ್ಷೇಮವೇ ಪ್ರಾಣಿಯ ಅಂತ್ಯಗುರಿಯಲ್ಲ: ವ್ಯಕ್ತಿಕ್ಷೇಮದ ಮುಖಾಂತರ ಜಾತಿರಕ್ಷಣೆಯೇ ಪ್ರತಿಪ್ರಾಣಿಯ ಪರಮ ಪ್ರಯೋಜನ. ಪಶು ತನ್ನ ಕರುವಿನ ಯೋಗಕ್ಷೇಮವನ್ನು ನೋಡುವುದೇ ಹೊರತು ತನ್ನ ಸೌಖ್ಯವನ್ನೇ ಮುಂದಿಡುವುದಿಲ್ಲ. ತಂದೆ ಪುತ್ರನ ಮೂಲಕ ತನ್ನ ವಂಶಾಭಿವೃದ್ಧಿಯನ್ನು ಬಯಸುವನೇ ಹೊರತು ತನ್ನ ಸ್ವಂತಸೌಖ್ಯ ಪ್ರಾಥಮಿಕವೆಂದೆಣಿಸುವುದಿಲ್ಲ. ಹೀಗೆ ಜಾತಿ

ರಕ್ಷಣೆಯ ಕಡೆಗೆ ಗಮನ ಕೊಡುವುದು ಎಲ್ಲಾ ಪ್ರಾಣಿಗಳಿಗೂ ಸಹಜವಾದ ಬುದ್ಧಿ. ಮಾನವನು ತನ್ನ ವಿಜ್ಞಾನವನ್ನು ವೃದ್ಧಿಮಾಡಿ ಪರಿಪಾಕಗೊಳಿಸಿದರೆ ಆಗ ತನ್ನ ವಂಶಕ್ಕೋಸ್ಕರ ತನ್ನ ಸ್ವಕ್ಷೇಮವನ್ನೂ, ತನ್ನ ದೇಶಕ್ಕೋಸ್ಕರ ತನ್ನ ಮನೆತನದ ಕ್ಷೇಮವನ್ನೂ, ಕಡೆಯಲ್ಲಿ ಅಖಿಲ ಮಾನವಕೋಟಿಯ ಪ್ರಯೋಜನಕ್ಕೋಸ್ಕರ, ಸಮಗ್ರ ಜಗತ್ತಿನ ಉದ್ದೇಶ ಸಂಪೂರ್ತಿಯ ಸಲುವಾಗಿ, ತನ್ನ ದೇಶಕ್ಷೇಮವನ್ನೇ ಆಹುತಿಕೊಡಲು ಸಿದ್ಧನಾಗುವನು. ತನ್ನ ಆತ್ಮವೂ ಇತರರ ಆತ್ಮವೂ ಒಂದೇ, ಕಡೆಯಲ್ಲಿ ಎಲ್ಲವೂ ಪರಮಾತ್ಮನಿಗೇ ಸೇರಿದುದು, ಎಂದು ತಿಳಿದವನು ಆ ಪರಮಾತ್ಮನ ಸಂತೃಪ್ತಿಯಲ್ಲಿಯೇ ತನ್ನ ಆತ್ಮಸಂಸಿದ್ಧಿಯನ್ನೂ ಪಡೆಯುವನು. "ಹೆಂಡತಿ ಗಂಡನನ್ನು ಗಂಡನಿಗೋಸ್ಕರ ಪ್ರೀತಿಸುವುದಿಲ್ಲ; ಗಂಡನಲ್ಲಿರುವ ಆತ್ಮನಿಗೋಸ್ಕರ ಪ್ರೀತಿಸುವಳು. ಗಂಡನು ಹೆಂಡತಿಯನ್ನು ಹೆಂಡತಿಗೋಸ್ಕರ ಪ್ರೀತಿಸುವುದಿಲ್ಲ ; ಆಕೆಯಲ್ಲಿರುವ ಆತ್ಮನಿಗೋಸ್ಕರ ಪ್ರೀತಿಸುವನು" ಎಂಬ ಉಪನಿಷತ್ತಿನ ಮಹಾವಾಕ್ಯ ಇಲ್ಲಿ ಜ್ಞಾಪಕಕ್ಕೆ ಬರುವುದಲ್ಲವೆ? ಪ್ರಕೃತಿಯಲ್ಲಿರುವ ಪರಮಾತ್ಮನಿಗೋಸ್ಕರ, ಆತನ ಧರ್ಮವನ್ನು ಕಾಪಾಡುವುದಕ್ಕೋಸ್ಕರ, ನಾವು ಜಗತ್ತಿನ ಸೇವೆಯನ್ನು ಮಾಡಬೇಕು. "ದೇವ ದೇವರ ತುಷ್ಟಿಯೇ ಜೀ | ವಾವಳಿಯ ಸಂತುಷ್ಟಿ ತರುಮೂ | ಲಾವಸೇಚನ ತುಷ್ಟಿಕರವಾಶಾಖೆಗಳಿಗಲ್ತೆ" (ಹರಿಭಕ್ತಿಸಾರ).

ಪ್ರಕೃತಿಗನುಸಾರವಾಗಿ ನಡೆಯುವುದೇ, ಜ್ಞಾನಬದ್ಧವಾದ ಜೀವನವೇ, ಧರ್ಮ ಜೀವನ; ಇದೇ ನಮ್ಮ ಸಚ್ಛೀಲಸಂಪತ್ತು. ಸಚ್ಛೀಲವೆಂಬುದು ಎರಡು ವಿಧವಾಗಿರುವುದು. ಭಾವಾರ್ಥದಲ್ಲಿ(positive sense) ಪುನಃ ಜ್ಞಾನಮೂಲವೆಂದೂ ಕರ್ಮಮೂಲವೆಂದೂ ಎರಡು ಬಗೆಯಾಗಿರುವುದು. ನಮ್ಮ ಪರಮಧನವಾದ ವಿಜ್ಞಾನವನ್ನು ಪರಿಪಾಕಗೊಳಿಸಿ ಎಲ್ಲ ವಿಚಾರದಲ್ಲಿಯೂ 'ಸಮ್ಯಗ್‌ಜ್ಞಾನವನ್ನು ಪಡೆಯುವುದೇ ಸಚ್ಛೀಲ. ಜ್ಞಾನಪೂರ್ವಕವಾದ ಕರ್ಮಕ್ಕೆಲ್ಲಾ ಸಮ್ಯಗ್‌ಜ್ಞಾನವೇ ಮೂಲಾಧಾರ, ಸಮ್ಯಗ್‌ಜ್ಞಾನವೇ ಸಚ್ಛೀಲ. ಆದರೂ ಈ ಸಮ್ಯಗ್‌ಜ್ಞಾನ ಜ್ಞಾನಪೂರ್ವಕವಾದ ಕರ್ಮದಲ್ಲಿ — ಸುಚರಿತ್ರದಲ್ಲಿ — ಸಮೀಚೀನವಾದ ನಡತೆಯಲ್ಲಿ — ಫಲಿಸಬೇಕು. ಸುಚರಿತ್ರವೇ ಜ್ಞೇಯ

ಪದಾರ್ಥ. ಒಟ್ಟಿನಲ್ಲಿ ಸಮ್ಯಗ್‌ಜ್ಞಾನದಿಂದೊಡಗೂಡಿದ ಸಂಕಲ್ಪ ಶಕ್ತಿಯೇ ಸದ್ಗುಣ. ಕರ್ಮವನ್ನೆಸಗುವಾಗ ನಮ್ಮ ಪರಮಶ್ರೇಯದ ವಿಚಾರದಲ್ಲಿ ಪೂರ್ಣಜ್ಞಾನವನ್ನು ಪಡೆದಿದ್ದು ಆ ಶ್ರೇಯವನ್ನು ಸಾಧಿಸಿಕೊಳ್ಳಲೋಸುಗ ಕರ್ಮವನ್ನು ಆಚರಿಸುತ್ತಿದ್ದೇವೆಂಬ ಭಾವನೆ ತಲೆದೋರಿದರೆ ಆಗ ಆ ಕರ್ಮ ನಿಜವಾದ ಸುಕರ್ಮವೆನಿಸುವುದು. ಸ್ವಾಭಾವಿಕ ಇಂಗಿತಗಳಿಂದ ಪ್ರೇರಿತವಾಗಿ ನಮ್ಮ ಪರಮಶ್ರೇಯದ ಜ್ಞಾನವಿಲ್ಲದೆ ಮಾಡಿದ ಕರ್ಮ ಒಳ್ಳೆಯದಾದರೂ ಸುಕರ್ಮವೆನಿಸಲಾರದು. ಈ ಅರ್ಥದಲ್ಲಿ ನೋಡಿದರೆ ಸುಗುಣಗಳನೇಕವಿಲ್ಲ. ಸುಗುಣವೆಂಬುದೊಂದೇ, ಏಕೆಂದರೆ ಎಲ್ಲಾ ಕರ್ಮದ ಶೀಲತೆ ಅಧಿಕಾರಿಯ ಚಿತ್ತಸ್ಥಿತಿಯನ್ನು, ಸಂಕಲ್ಪವನ್ನು, ಉದ್ದೇಶವನ್ನು, ಅವಲಂಬಿಸಿರುವುದು. ಒಳ್ಳೆಯದು ಮಾಡಬೇಕೆಂಬ ಉದ್ದೇಶವಿಲ್ಲದಿದ್ದರೆ ಕರ್ಮ ಒಳ್ಳೆಯದೆನಿಸಲಾರದು. ಈ ಉದ್ದೇಶವೂ, ಚಿತ್ತಸಂಕಲ್ಪವೂ ಒಂದೇ—ಇದರಲ್ಲಿ ವೈವಿಧ್ಯವಿರಲಾರದು. ಆದುದರಿಂದ ಪ್ರತಿಯೊಬ್ಬನೂ ಈ ಸಂಕಲ್ಪವನ್ನು ಹೊಂದಿರಬೇಕು, ಇಲ್ಲವೆ ಇಂಥ ಸಂಕಲ್ಪರಹಿತನಾಗಿರಬೇಕು. ಇವೆರಡಕ್ಕೂ ಮಧ್ಯಸ್ಥಾನ ಯಾವುದೂ ಇರಲಾರದು. ಇದರಿಂದ ಸದ್ಗುಣವೆಂಬುದೊಂದೇ ; ಇದರ ಅಭಾವವಾದ ದುರ್ಗುಣವೆಂಬುದೂ ಒಂದೇ; ವಿವೇಕಿ ಅಥವಾ ಅವಿವೇಕಿ ಎಂದು ಮನುಷ್ಯ ಜಾತಿಯಲ್ಲಿ ಎರಡೇ ವಿಧ. ಸದ್ಗುಣ ದುರ್ಗುಣಗಳಲ್ಲಿ ತಾರತಮ್ಯವಿರಲಾರದು. ಸತ್ಕರ್ಮಗಳೆಲ್ಲವೂ ಸಮವಾಗಿಯೇ ಸತ್ಕರ್ಮಗಳು; ದುಷ್ಕರ್ಮಗಳೆಲ್ಲವೂ ಏಕತರನಾಗಿಯೇ ದುಷ್ಟ. ಒಂದು ಸದ್ಗುಣ ಯಾರಲ್ಲಿರುವುದೋ ಅವರಲ್ಲಿ ಎಲ್ಲಾ ಸದ್ಗುಣಗಳೂ ತುಂಬಿರುವುವು. ದಯೆ, ಕ್ಷಮೆ, ಶಾಂತತೆ, ಈ ಮುಂತಾದ ವಿವಿಧ ಸದ್ಗುಣಗಳೆಲ್ಲವೂ ಏಕಮಾತ್ರವಾದ ಸತ್ಸಂಕಲ್ಪದ ವಿಧವಿಧ ವ್ಯಕ್ತಭಾವಗಳು. ಸತ್ವದಲ್ಲಿ ಎಲ್ಲವೂ ಅನನ್ಯವಾಗಿ ಕೂಡಿಕೊಂಡಿರುವುವು: ಸದ್ಗುಣ ಅಭಾಜ್ಯ. ಮನುಷ್ಯನು ಪೂರ್ಣಸದ್ಗುಣಿ, ಇಲ್ಲವೆ ಪೂರ್ಣದುರ್ಗುಣಿ.

ತನ್ನ ಜೀವನದ ಪರಮಸತ್ವವಾದ ವಿಜ್ಞಾನದ ಆಜ್ಞೆಗಳನ್ನು ಶಿರಸಾವಹಿಸಿ ನಡಸುವುದೇ ಸಚ್ಛೀಲದ ಭಾವಾರ್ಥ. ಅಭಾವಾರ್ಥದಲ್ಲಿ (ನಿಷೇಧಾರ್ಥದಲ್ಲಿ) ಸಚ್ಛೀಲವೆಂದರೆ ಕಾಮ ಕ್ರೋಧಾದಿ ಭಾವಗಳೆಂಬ

ಅರಿಷಡ್ವರ್ಗಗಳ ಸೆರೆಯಿಂದ ವಿಮುಕ್ತನಾಗಿ ನಿಶ್ಚಲಚಿತ್ತನಾಗಿರುವುದೆಂದರ್ಥ. ಈ ಭಾವಗಳನ್ನು ಹಿಂದೆಯೇ ವಿವರಿಸಿದ್ದೇವೆ. ಇವು ನಮ್ಮ ಜ್ಞಾನದ ಪ್ರಸಾರಣೆಗೆ ಕಂಟಕಗಳು, ಅದರ ಜ್ಯೋತಿಯನ್ನು ಆವರಣ ಮಾಡುವ ಅಂಧಕಾರ. ಆದುದರಿಂದ ಶೀಲವಂತನು ವಿರಾಗಿಯಾಗಿ ಸಮಸ್ತ ಕಾಮುಗಳನ್ನು ಜಯಿಸಿದ ಯಶೋವಂತನು. ಇಂದ್ರಿಯದಮವೇ, ಪ್ರಪಂಚದ ಭೋಗಭಾಗ್ಯಗಳಲ್ಲಿ ವಿರಕ್ತಿ ಅಥವಾ ವೈರಾಗ್ಯವೇ, ಆತನ ಅದ್ವಿತೀಯ ಭೂಷಣ. ಇಂದ್ರಿಯದಮವೆಂದರೆ ಇಂದ್ರಿಯಗಳನ್ನು ಸಂಪೂರ್ಣವಾಗಿ ನಾಶಗೊಳಿಸುವುದೆಂದಲ್ಲ: ಅವುಗಳಿಂದ ನಮ್ಮ ಆತ್ಮ ಸಂಸಿದ್ಧಿ ಲಭಿಸುವುದಿಲ್ಲವಾದುದರಿಂದ ಅವುಗಳ ವ್ಯಾಪಾರಗಳಿಗೆ ಆಸೆ ಪಡದೆ, ಪ್ರಕೃತಿನಿಯಮಕ್ಕನುಸಾರವಾಗಿ ನಡೆಯಬೇಕಾಗಿ ಬಂದಾಗ ಹಿಂದೆಗೆಯದೆ, ಚಿತ್ತವನ್ನು ಮಾತ್ರ ಇಂದ್ರಿಯಗಳಲ್ಲಿ ಪ್ರವೇಶಿಸದಂತೆ ಸ್ವಾಧೀನದಲ್ಲಿಟ್ಟುಕೊಂಡು, ಆತ್ಮಶ್ರೇಯದಲ್ಲಿಯೇ ಪೂರ್ಣಕಾಮನಾಗುವುದೆಂದರ್ಥ. ಇದೇ ಜ್ಞಾನಕರ್ಮಯೋಗಗಳ ಸಮ್ಮೇಲನ. ಲೋಕಸಂಗ್ರಹಾರ್ಥವಾಗಿ ಕರ್ಮ ನಡೆಯಲಿ; ಆದರ ಫಲಗಳಲ್ಲಿ ಮಾತ್ರ ಮನವಿಡದೆ ಫಲ ಒಳ್ಳೆಯದಾಗಲಿ ಕೆಟ್ಟುದಾಗಲಿ ಮನಸ್ಸಿಗೆ ಹಚ್ಚಿಕೊಳ್ಳದೆ ಸ್ಥಿರಚಿತ್ತನಾಗಿರುವುದೇ ರಾಜಯೋಗದ ರಹಸ್ಯಮಂತ್ರ.

ಈ ಅರ್ಥವನ್ನು ಇಲ್ಲಿ ಸ್ವಲ್ಪವಿವರಿಸಿ ಹೇಳಬೇಕಾಗಿದೆ. ಏಕೆಂದರೆ ಈ ಕಾಲದ ಭಾಷಾರೂಢಿಯಲ್ಲಿ "ಸ್ಟೋಯಿಕ"ನೆಂದರೆ ಹುಬ್ಬುಗಂಟಿಕ್ಕಿ, ಮೋರೆಬಿಗಿದುಕೊಂಡು, ನೀರಸನಾಗಿ ಏಕಾದಶಿಮಾಡಿದವನಂತೆ ಕಾಣಿಸಿಕೊಂಡು ನಡೆಯುವವನೆಂದರ್ಥವಾಗುತ್ತದೆ. ಭೋಗಭಾಗ್ಯಗಳನ್ನೆಲ್ಲಾ ತೊರೆದು ಯಾವಾಗಲೂ ಆತ್ಮಸಂಯಮವನ್ನು ಪ್ರದರ್ಶಿಸುವುದೇ ಸ್ಟೋಯಿಕನ ಮುಖ್ಯ ಲಕ್ಷಣವೆಂದು ಜನರು ತಿಳಿಯುತ್ತಾರೆ. ಇದು ಉತ್ಪ್ರೇಕ್ಷೆಯೇ ಹೊರತು ಮತ್ತೆ ಬೇರೆಯಲ್ಲ. ಚಿತ್ತಸಮಾಧಾನವೇನೋ ಪ್ರಶಂಸನೀಯವಾದ ಗುಣವೇ ಹೌದು; ಆದರೂ ಕಡೆಗೆ ಅದೂ ಒಂದು ಚಿತ್ತವೃತ್ತಿಯೇ — ಭಾವವೇ — ಆಯಿತಲ್ಲವೇ? ಅದನ್ನೇ ಅಟ್ಟಕ್ಕೇರಿಸುತ್ತ ಕೂತರೆ ಎಪಿಕ್ಯೂರಿಯನರೊಡನೆ ಹಸ್ತಲಾಘವವನ್ನು ಕೊಟ್ಟಂತಾಗುವುದಿಲ್ಲವೇ? ಸ್ಟೋಯಿಕರ ವಿಶೇಷವಾದರೂ ಯಾವುದೆಂದರೆ ಕಾರ್ಯ

ದಕ್ಷತೆಯೋ, ಕರ್ಮಚೇತನವನ್ನು (will) ಕಾರ್ಯಗಳಲ್ಲಿ ಪ್ರದರ್ಶಿಸುವುದೇ. ಸ್ಟೋಯಿಕರ ಮನಶ್ಶಾಸ್ತ್ರದ ಪ್ರಕಾರವಾಗಿ ಜ್ಞಾನಚೇತನವೂ ಕರ್ಮ ಚೇತನವೂ ಒಂದೇ ಆದಮೇಲೆ, ಚಿತ್ತು ಪ್ರತ್ಯೇಕವಾಗಿರದೆ ಸ್ಥೂಲದೇಹದ ಮುಖಾಂತರ ನಾವೆಸಗುವ ಕ್ರಿಯೆಗಳಲ್ಲಿಯೇ ಪ್ರಕಾಶಿಸುತ್ತಿರುತ್ತದೆ. ಆತ್ಮಸಂಯಮವೆಂಬುದು ಬರಿಯ ಕರ್ಮಣೀರೂಪವಾದ ನೈಷ್ಕರ್ಮ್ಯ ಸ್ಥಿತಿಯಾದರೆ ಅದರಿಂದೇನೂ ಪ್ರಯೋಜನವಿಲ್ಲ. ಈ ಕಾರಣದಿಂದ ಚಿತ್ತಸ್ವಾಸ್ಥ್ಯವೆಂಬುದು ಕರ್ಮದೊಡನೆ ಸಮೀಕರಿಸಬೇಕು. ಇದೇ ಸ್ಟೋಯಿಕರ ಬೋಧನೆಯ ಪರಮೋನ್ನತವಾದ ಶಿಖರ. ಅವರ ಸಿದ್ಧಾಂತವೆಂಬ ಸಾರ್ವತ್ರಿಕಧರ್ಮಗುರುವಿನ ರತ್ನಖಚಿತವಾದ ಕಿರೀಟ! ಸಮಷ್ಟಿಯಲ್ಲಿ (ಜಗತ್ತಿನಲ್ಲಿ) ಹೇಗೆ ಚಿತ್ತೆಂಬುದು ಸ್ಥೂಲರೂಪದಲ್ಲಿ ಮೂರ್ತೀಕರಿಸಿರುವುದೋ, ಹಾಗೆಯೇ ವ್ಯಷ್ಟಿಯಲ್ಲಿ (ಮಾನವನಲ್ಲಿ) ಕೂಡ ಆಧಾರಭೂತವಾದ ಈ ಚಿತ್ತು ಮನುಷ್ಯನ ಸ್ವಾಭಾವಿಕವಾದ ದೇಹಪ್ರಕೃತಿಯಲ್ಲಿಯೂ ಮತ್ತು ಸ್ವಾಭಾವಿಕವಾದ ಸಮಾಜದ ಸ್ಥಿತಿಗತಿ ಗಳಲ್ಲಿಯೂ ಪ್ರಕಾಶಿಸುವುದು. ಅಂದಮೇಲೆ ಪ್ರಕೃತಿಗನುಸಾರವಾಗಿ ನಡೆಯುವುದೆಂದರೆ ಪ್ರಕೃತಿಮಾಡುವಂತೆ, ಪ್ರಕೃತಿ ತನ್ನಲ್ಲಿ ನಡೆಯು ವಂತೆಯೇ, ಸೂಚಿಸುವಂತೆಯೇ, ನಡೆಯುವುದೆಂದರ್ಥ. ಈ ಕಾರಣ ದಿಂದ ಸ್ಟೋಯಿಕನು ಪ್ರಕೃತಿ ತನ್ನ ದಾರಿಯಲ್ಲಿ ತರುವುದನ್ನೆಲ್ಲಾ ಅಂಗೀ ಕರಿಸುವನು: ಸ್ವಾಭಾವಿಕ ಜೀವನವನ್ನು ಕಂಡು ಹೆದರಿ ಓಡಿಹೋಗು ವುದಿಲ್ಲ. ಎಲ್ಲರಂತೆಯೇ ಆತನೂ ಜೀವಿಸುವನು; ಜೀವನ ತಂದೊಡ್ಡುವ ಕರ್ತವ್ಯ ಕರ್ಮಗಳನ್ನೆಲ್ಲಾ ತಲೆವಾಗಿ ನಡಸುವನು; ವಿಶ್ವದ ಸಾರ್ವತ್ರಿಕ ಚಳವಳಿಯಲ್ಲಿ ತಾನೂ ಭಾಗಿಯಾಗಿ ಸಹಕಾರ ಮಾಡುವನು. ಹೌದು, ಇವೊಂದೂ ನಿಜವಾದ ಶ್ರೇಯವಲ್ಲ! ಚಿತ್ತದ ಸುವ್ಯವಸ್ಥೆಯೇ ನಿಜವಾದ ನಿಶ್ರೇಯಸ! ಒಳ್ಳೆಯದು, ಆ ಪಕ್ಷದಲ್ಲಿ ಅವನ್ನುಶ್ರೇಯವೆಂದು ಆತನು ಕರೆ ಯುವುದಿಲ್ಲ, ಅವುಗಳನ್ನು ಅಪೇಕ್ಷಿಸುವುದಿಲ್ಲ, ಅವುಗಳಿಂದ ತನ್ನ ಮನಸ್ಸು ಯಾವ ವಿಧದಲ್ಲಿಯೂ ಅಲುಗಾಡುವುದಕ್ಕೆ ಅವಕಾಶವೀಯುವುದೂ ಇಲ್ಲ! ಜೀವನಪಥದಲ್ಲಿ ಬರುವ ವಿಧವಿಧವಾದ ಅನುಭವಗಳನ್ನೆಲ್ಲಾ ಹೊಂದಲು ಸಿದ್ಧನಾಗಿರುವನು—ಮಾಡಬೇಕಾದ ಸಮಸ್ತ ವಿಧವಾದ ಕರ್ಮಗಳೆಲ್ಲ

ವನ್ನೂ ಮಾಡಿಯೇ ತೀರುವನು—ಆದರೆ ತನ್ನ ಮನಸ್ಸನ್ನು ಮಾತ್ರ ಈ ಕರ್ಮ–ಈ ಅನುಭವಗಳಲ್ಲಿ — ಸಂಯೋಗಗೊಳಿಸದೆ ತನ್ನ ವಶದಲ್ಲಿಯೇ ಇಟ್ಟುಕೊಳ್ಳುವನು. ನಗರವಾಸಿಯಾದ ಮೇಲೆ, ನಾಗರಿಕನ ಕರ್ತವ್ಯಗಳೆಲ್ಲವನ್ನೂ ಸಲ್ಲಿಸುವನು: ಆದರೆ ದೇಶಾಭಿಮಾನದಿಂದಲ್ಲ—ಹೀಗೆ ಮಾಡುವುದು ನ್ಯಾಯವಾದುದೆಂದೇ. ಗೃಹಸ್ಥನಾದ ಮೇಲೆ ಗೃಹಸ್ಥನ ಧರ್ಮಗಳೆಲ್ಲವನ್ನೂ ಬಿಡದೆ ಆಚರಿಸುವನು—ಹೆಂಡತಿ ಮಕ್ಕಳ ಮೇಲಿನ ಪ್ರೇಮದಿಂದಲ್ಲ, ವಂಶೋದ್ಧಾರಮಾಡುವುದು ಪ್ರಕೃತಿನಿಯಮಕ್ಕನುಸಾರವಾದ ಕಟ್ಟಳೆಯೆಂದೇ. ಒಂದು ಮಾತಿನಲ್ಲಿ ಹೇಳಬೇಕಾದರೆ, ನಾನಿರುವ ಸ್ಥಿತಿಯಲ್ಲಿ, ಸಮಾಜದಲ್ಲಿ ನಾನು ಹೊಂದಿರುವ ಸ್ಥಾನದಲ್ಲಿ, ಈಶ್ವರನು ನನಗೆ ತೋರಿಕೊಟ್ಟಿರುವ ಸನ್ನಿವೇಶದಲ್ಲಿ, ನನಗೆ ಯಾವಯಾವುದು ನಿಯತಕರ್ಮವೋ ಅದೆಲ್ಲವನ್ನೂ ಆಸಕ್ತಿಯಿಲ್ಲದೆ, ದ್ವೇಷವಿಲ್ಲದೆ, ಗೊಣಗುಟ್ಟದೆ, ವಿಮುಖನಾಗದೆ, ಸಾಂಗಗೊಳಿಸುವೆನು. ಆದರೆ ನನ್ನ ಚಿತ್ತ ಪ್ರಶಾಂತತೆಯನ್ನು ಪ್ರೇಮ, ದ್ವೇಷ, ಕಾರುಣ್ಯ, ಪಶ್ಚಾತ್ತಾಪ, ಮೊದಲಾದ ಯಾವ ರಾಗಭಾವಗಳಿಂದಾಗಲಿ ಅಲುಗಗೊಡಿಸಲಾರೆ. ಹೀಗಾಗುವುದು ಹಾಗಾಗಿದ್ದರೆ ಚೆನ್ನಾಗಿತ್ತಲ್ಲಾ, ಎಂಬ ಫಲಾಪೇಕ್ಷೆ ಕೂಡ ನನ್ನ ಮನಸ್ಸನ್ನು ಕದಲಿಸಲಾರದು. ಕರ್ತವ್ಯ ನನ್ನದು—ಅದರ ಫಲಾಫಲಗಳಾದರೋ ಈಶ್ವರನದು. ಈ ವಿಧವಾದ ಅನಾಸಕ್ತಿಯೋಗವನ್ನು ಹಿಡಿದು ಸ್ಟೋಯಿಕನು ಬಹು ನಿಷ್ಕೃಷ್ಟವಾದ ರೀತಿಯಲ್ಲಿ ತನ್ನ ಸ್ಥಿತಪ್ರಜ್ಞತೆಯನ್ನು ಹೋಗಲಾಡಿಸಬಹುದಾದ ಫಲಾಸಕ್ತಿಯಿಂದ ವಿಮುಖನಾಗಿ, ಲೋಕಸಂಗ್ರಹಾರ್ಥವಾಗಿ, ಜಗತ್ಕಲ್ಯಾಣದ ಸಲುವಾಗಿ, ಮಾಡಬೇಕಾದ ಪ್ರಸಂಗಗಳಲ್ಲೆಲ್ಲ ತನ್ನ ಕರ್ತವ್ಯದಕ್ಷತೆಯನ್ನು ತೋರ್ಪಡಿಸುತ್ತಾನೆ.

ಒಟ್ಟಿನಲ್ಲಿ ಧರ್ಮಜೀವನವೇ, ಸದ್ಗುಣಸಂಪತ್ತೇ, ನಮ್ಮ ಪರಮಶ್ರೇಯ. ಸದ್ಗುಣದಲ್ಲಿ ಹೇಗೆ ಭಾಗವಿಭಾಗಗಳಿಲ್ಲವೋ ಹಾಗೆ ಶ್ರೇಯದಲ್ಲಿಯೂ ವೈವಿಧ್ಯವಿಲ್ಲ. ನಿರುಪಾಧಿಕವಾಗಿ, ಕೇವಲಾರ್ಥದಲ್ಲಿ, ಯಾವುದು ಶುಭವೋ ಅದೇ ನಿಜವಾದ ಶ್ರೇಯ; ಪಕ್ಷಾರ್ಥದಲ್ಲಿ ಉಪಯೋಗವಾದುದು ನಿಜವಾದ ಶ್ರೇಯವಲ್ಲ; ಸಚ್ಛೀಲವೊಂದೇ

ಇಂಥ ನಿರುಪಾಧಿಕವಾದ ಮಾನವಕಲ್ಯಾಣ. ಆದುದರಿಂದ ಸಚ್ಛೀಲ ವೊಂದೇ ನಮ್ಮ ಶ್ರೇಯ, ದುಶ್ಶೀಲವೇ ನಮ್ಮ ಅರಿಷ್ಟ. ಸ್ವತಃ ಶುಭ ವಲ್ಲದ್ದು ಯಾವಪಕ್ಷದಲ್ಲಿಯೂ ಶುಭವಾಗುವಹಾಗಿಲ್ಲ; ಸ್ವತಃ ದುಷ್ಟ ವಲ್ಲದ್ದು ಯಾರಪಕ್ಷದಲ್ಲಿಯೂ ದುಷ್ಟವಾಗುವಹಾಗಿಲ್ಲ. ಸಚ್ಛೀಲವೇ ಸ್ವತಶ್ಶುಭ, ದುಶ್ಶೀಲವೇ ಸ್ವತಃದುಷ್ಟ. ಇವೆರಡನ್ನುಳಿದು ಇತರ ಯಾವವಿಧವಾದ ಸ್ಥಿತಿಗತಿಗಳೂ ನಮ್ಮ ಧ್ಯೇಯಸಾಧನೆಗೆ ಸಂಬಂಧಿಸಿ ದುವುಗಳಲ್ಲ; ಅವು ಕೇವಲ ಅನಾವಶ್ಯಕ. ದೇಹಾರೋಗ್ಯ, ಮಾನ, ಧನ, ಪ್ರಾಣ, ಅಂತಸ್ತು, ಶಕ್ತಿ, ಸ್ನೇಹ—ಇವುಗಳಲ್ಲೊಂದೂ ಸ್ವತಃ ಶುಭವಲ್ಲ; ಇದಕ್ಕನುಸಾರವಾಗಿ ರೋಗ, ಅಪಮಾನ, ದಾರಿದ್ರ್ಯ, ನೀಚ ಜನ್ಮ— ಇವೊಂದೂ ಸ್ವತಃ ಅಶುಭವಲ್ಲ. ಧರ್ಮಜೀವನದ ದೃಷ್ಟಿಯಲ್ಲಿ ಇವೆಲ್ಲವೂ ಕೇವಲ ಔಪೇಕ್ಷಿಕ ವಸ್ತುಗಳು (adiaphora, indifferent goods). ಸುಖದುಃಖಗಳೂ ನಮ್ಮ ಕರ್ಮಾಚರಣೆಯ ಫಲಮಾತ್ರ ಗಳಲ್ಲದೆ ಸ್ವತಃ ಶುಭಾಶುಭಗಳಲ್ಲ. ಆದುದರಿಂದ ವಿವೇಕಿಯಾದವನು ಧನ, ಮಾನ, ಮುಂತಾದುವುಗಳನ್ನು ಭೂಷಿಸಿ ಬಯಸುವುದೂ ಇಲ್ಲ; ದಾರಿದ್ರ್ಯ, ದುಃಖ ಮೊದಲಾದುವುಗಳನ್ನು ದೂಷಿಸಿ ನಿರಾಕರಿಸುವುದೂ ಇಲ್ಲ. ನಮ್ಮ ಶಕ್ತಿಗೆ ಒಳಗಾಗಿ ನಮ್ಮ ಕೈಯಲ್ಲಿರುವುದು ಯಾವುದು, ನಮ್ಮ ಶಕ್ತಿಗೆ ಮೀರಿ ನಮ್ಮ ಸ್ವಾಧೀನದಲ್ಲಿಲ್ಲದಿರುವುದು ಯಾವುದು— ಇವೆರಡರ ವಿವೇಚನೆ ಚೆನ್ನಾಗಿ ಮಾಡಬೇಕೆಂದು ಸ್ಟೋಯಿಕರು ಒತ್ತಿ ಹೇಳುವರು. ಐಶ್ವರ್ಯ, ದಾರಿದ್ರ್ಯ—ಈ ಮುಂತಾದುವುಗಳು ನಮ್ಮ ಸ್ವಾಧೀನದಲ್ಲಿಲ್ಲ. ಅವು ನಮ್ಮ ಆತ್ಮಕ್ಕೆ ಕೇವಲ ಬಾಹ್ಯವಸ್ತುಗಳು, ಪರಕೀಯ ಸಾಮಗ್ರಿಗಳು. ಆದುದರಿಂದ ವಿವೇಕಿಯಾದವನು ರವರೇಣು ಸಹಿತ ಅವುಗಳನ್ನು ಅವಲಂಬಿಸದೆ ಸಂಪೂರ್ಣ ಸ್ವಾತಂತ್ರ್ಯದಿಂದ ಜೀವಿಸುವನು. ಬಾಹ್ಯವಸ್ತುಗಳಿಂದ ಬಿಡುಗಡೆಯಾದವನು ಕಷ್ಟ ಒದಗಲಿ, ಸುಖಪ್ರಾಪ್ತಿಯಾಗಲಿ, ಚಳಿಯಾಗಲಿ, ಸೆಕೆಯಾಗಲಿ, ಗೌರವ ಪಡೆಯಲಿ, ನಿರಾಕರಿಸಲ್ಪಡಲಿ, ಪ್ರಾಣವಿರಲಿ, ಹೋಗಲಿ, ಲೇಶ ಮಾತ್ರವಾದರೂ ಮನಸ್ಸಿಗೆ ಹಚ್ಚಿಕೊಳ್ಳದೆ, ದ್ವಂದ್ವಗಳ ಬಂಧನದಿಂದ ಪೂರ್ಣ ವಿಮುಕ್ತನಾಗಿ, ಅವುಗಳ ಶಕ್ತಿಪ್ರಯೋಗದಿಂದ ಸ್ವಲ್ಪವೂ

ಚಿತ್ತಸಂರಂಭವನ್ನು ಹೊಂದದೆ, ಸ್ಥಿತಪ್ರಜ್ಞನಾಗಿ, ಸಚ್ಛೀಲವೊಂದೇ ಸಮಸ್ತ ಧನವೆಂದು ಭಾವಿಸಿ, ಅದರ ಕಟ್ಟಿಗೆ ಒಳಪಟ್ಟು ಬಾಳಲು ಯತ್ನಿಸುವನು. ಜೀವನದ ಬಾಹ್ಯ ಶೃಂಖಲೆಗಳಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿ, ಸ್ವಾಭಾವಿಕ ಸ್ಥಿತಿಗತಿಗಳಿಗೆ ಕಿಂಚಿತ್ತಾದರೂ ಮನ ಗೊಡದೆ, ಸಚ್ಛೀಲದಲ್ಲಿಯೇ ಪರಮಸಂತುಷ್ಟಿಯನ್ನು ಹೊಂದುವವನಾಗಿ, ಪ್ರಪಂಚಧರ್ಮಪರಿಪೂರ್ತಿಗೆ—ದೈವಸಂಕಲ್ಪದ ಸಂಪೂರ್ತಿಗೆ—ಪೂರ್ಣ ದ್ವಾರವಾಗಿ ಬಾಳುವ ಮನುಷ್ಯನನ್ನು ಸ್ಟೋಯಿಕರು ವಿವೇಕಿ ಅಥವಾ ಜ್ಞಾನಿಯೆಂದು ಕರೆದರು; ಇಂಥ ಜೀವನದ ರಹಸ್ಯವನ್ನು ಅನುಷ್ಠಾನದಲ್ಲಿ ಪ್ರಕಾಶಪಡಿಸಿದ ಆರ್ಯರಾದ ನಾವು, ಜೀವನ್ಮುಕ್ತನೆನ್ನಕೂಡದೇಕೆ ?

ಇಷ್ಟು ಹೇಳಿದ ಮೇಲೆ ಇನ್ನು ಸೌಖ್ಯವೆಂಬುದನ್ನು ಸ್ಟೋಯಿಕರು ಯಾವ ರೀತಿಯಲ್ಲಿ ಸಮಾವಲೋಕನ ಮಾಡಿದರೆಂಬುದನ್ನು ವಿಶೇಷ ವಾಗಿ ವಿವರಿಸಬೇಕಾದುದಿಲ್ಲ. ಸೌಖ್ಯವೆಂಬುದು ಕಿಂಚಿತ್ತಾದರೂ ನಮ್ಮ ಶ್ರೇಯವಾಗಲಾರದು ; ನಮ್ಮ ಜೀವನದ ಧ್ಯೇಯವೂ ಅಲ್ಲ. ಇರಲಿ, ಸೌಖ್ಯವೆಂಬುದು ನಮ್ಮ ಪರಮಧ್ಯೇಯದಲ್ಲಿ ಒಂದು ಭಾಗವಾಗಿ ಯಾದರೂ ಸೇರುವುದಿಲ್ಲವೆ, ಕಡೆಗೆ ಸಚ್ಛೀಲದೊಂದಿಗೆ ಅನನ್ಯವಾಗಿ ಸೇರಿದುದಲ್ಲವೆ, ಎಂದರೆ ಹಾಗೂ ಇಲ್ಲ. ಸೌಖ್ಯವೂ, ಸಚ್ಛೀಲವೂ ಸತ್ವತಃ ಬೇರೆ ಬೇರೆ. ಸಚ್ಛೀಲ ಪ್ರದರ್ಶನದ ಫಲರೂಪವಾಗಿ ಸೌಖ್ಯ ದೊರಕಬಹುದು ; ಇದೂ ಸಹ ನಮ್ಮ ಗುರಿಯಲ್ಲ. ಸೌಖ್ಯ ಪಡೆಯುವುದ ಕ್ಕಾಗಿ ನಾವು ಶೀಲವಂತರಾಗುವುದಿಲ್ಲ. ಸೌಖ್ಯದ ಸಮಸ್ತ ಅಂಶಗಳನ್ನೂ ಸಚ್ಛೀಲವೇ ಒಳಗೊಂಡಿದೆ. ಆದುದರಿಂದ ಸಚ್ಛೀಲವೇ ನಮ್ಮ ನಿಜವಾದ ಸೌಖ್ಯ, ಸಚ್ಛೀಲವೇ ತನ್ನ ಫಲ. ಆಯುರ್ವೃದ್ಧಿಯಾಗಲಿ ಇತರ ಯಾವ ವಿಧವಾದ ಸುಸ್ಥಿತಿಯಾಗಲಿ ಈ ಸೌಖ್ಯವನ್ನು ಹೆಚ್ಚಿಸಲಾರದು.

## ರಾಜನೀತಿಶಾಸ್ತ್ರ

ಮೇಲ್ಕಂಡಂತೆ ಸ್ಟೋಯಿಕರ ನೀತಿಶಾಸ್ತ್ರ ಸ್ವಾರ್ಥವಾದವಲ್ಲ. ಪ್ರತಿ ಯೊಂದು ಪ್ರಾಣಿಯಲ್ಲಿಯೂ ಜಾತಿರಕ್ಷಣೆಯೆಂಬ ಅಭಿಮಾನ ಪ್ರಾಥ ಮಿಕವಾಗಿರುವುದೆಂದು ಹಿಂದೆಯೇ ಹೇಳಿದೆಯಷ್ಟೆ. ಈ ಸ್ವಾಭಾವಿಕ

ಇಂಗಿತಪ್ರೇರಣೆ ಶ್ರೇಯಸ್ಕರವಾದುದೆಂದು ಮನುಷ್ಯನ ಜ್ಞಾನವೂ ಬೋಧಿಸುವುದು. ಮನುಷ್ಯರೆಲ್ಲರೂ ತಮಗೆ ಸಾಮಾನ್ಯವಾಗಿರುವ ಜ್ಞಾನದ ಮಹಿಮೆಯಿಂದ ಜಗತ್ತೆಂಬ ಸಮಾಜದ ಸದಸ್ಯರು. ಈ ಸಮಾಜವನ್ನೇ ಒಂದು ಸಾರ್ವತ್ರಿಕ ಸಂಸ್ಥಾನವೆನ್ನಬಹುದು. ಈ ಸಂಸ್ಥಾನದಲ್ಲಿ ಏಕವಿಧವಾದ ಚಿತ್ತು ಪ್ರಕಾಶಿಸುವುದರಿಂದ ಇದರಲ್ಲಿ ಒಂದೇ ಕಾಯಿದೆ, ಒಂದೇ ಹಕ್ಕುಬಾಧ್ಯತೆ (ಸ್ವಾಭಾವಿಕ ಧರ್ಮ, ಸ್ವಾಭಾವಿಕ ಹಕ್ಕು) ಇರುವುದು. ಇಂಥ ಸಮಾಜ—ಸಂಸ್ಥಾನದಲ್ಲಿ ಸಚ್ಛೀಲವೇ ಜನರ ಯೋಗ್ಯತೆಯ ಒರೆಗಲ್ಲು: ಜ್ಞಾನಿಗಳೇ, ದೇವತೆಗಳೇ ಪೂಜಾರ್ಹರು. ಜನರೆಲ್ಲರೂ ಒಡಹುಟ್ಟಿದ ಸಹೋದರರಂತೆ ಬಾಂಧವ್ಯವುಳ್ಳವರು, ಒಂದೇ ತಂದೆಯ ಮಕ್ಕಳು, ಎಲ್ಲರಿಗೂ ಒಂದೇ ವಿಧವಾದ ಪ್ರಯೋಜನ ಕಾದಿರುವುದು; ಎಲ್ಲರಲ್ಲಿಯೂ ಒಂದೇ ವಿಧವಾದ ದೇವವಾಕ್ಯ ಧ್ವನಿಗೈಯುವುದು; ಎಲ್ಲರೂ ಒಂದೇ ಸಂಸ್ಥಾನದ ಪ್ರಜೆಗಳಾಗಿ ಒಂದೇ ಧರ್ಮದಿಂದ ಬಾಳತಕ್ಕವರು. ನಮ್ಮ ಶತ್ರುಗಳೂ ಸಹ ನಮ್ಮ ಕ್ಷಮೆಗೂ ಸಹಾಯಕ್ಕೂ ಹಕ್ಕುಳ್ಳವರು. ಜಗತ್ತಿನ ಕ್ಷೇಮದ ಸಲುವಾಗಿ ಸ್ವಕ್ಷೇಮವನ್ನು ಅರ್ಪಣೆಗೈದು ಜಗತ್ತಿನ ಕಲ್ಯಾಣ ಪರಿಪೂರ್ತಿಗೊಳಿಸುವುದರಲ್ಲಿ ನಮ್ಮ ಜನ್ಮದ ಶ್ರೇಯವನ್ನು ಸಾಧಿಸಿಕೊಳ್ಳಲು ಪ್ರಯತ್ನಪಡಬೇಕು. ಇದೇ ಸ್ಟೋಯಿಕರ ಜಗನ್ನಿವಾಸ ಅಥವಾ ಜಗದ್ರಾಜ್ಯ ಸಿದ್ಧಾಂತ (cosmopolitanism). ಎಪಿಕ್ಯೂರಿಯನರು ಬೋಧಿಸಿದಂತೆ ರಾಜಕೀಯ ವ್ಯಾಪಾರಗಳಲ್ಲಿ ಪುರುಷನು ಸೇರಕೂಡದೆಂದು ಸ್ಟೋಯಿಕರು ಅಭಿಪ್ರಾಯಪಡಲಿಲ್ಲ. ಜಗತ್ತಿಗೋಸ್ಕರ ಹೇಗೆ ಶ್ರಮಪಡಬೇಕೋ ಹಾಗೆಯೇ ಪುರುಷನು ತನ್ನ ಸ್ವದೇಶಕ್ಕೂ ಸ್ವಜನಕ್ಕೂ ಕ್ಷೇಮತರುವುದಕ್ಕಾಗಿ ದುಡಿಯಬೇಕು. ಇದೂ ಆತನ ಕರ್ತವ್ಯ ಕರ್ಮವೇ. ಆದರೆ ಸ್ವದೇಶ ಸ್ವಜನರ ಸಲುವಾಗಿ, ತಮ್ಮ ರಾಜ್ಯವೇ ಪ್ರಬಲವಾಗಬೇಕೆಂಬ ದುರಾಶೆಗೋಸ್ಕರ, ವಿಶ್ವದಕ್ಷೇಮವನ್ನು ಲೆಕ್ಕಿಸದೆ ಬಲಿಕೊಡಲು ಸಿದ್ಧರಾಗಿರುವ ಅನೇಕ ಆಧುನಿಕ ರಾಜ್ಯಪ್ರಜೆಗಳಂತೆ ಸ್ಟೋಯಿಕರು ವರ್ತಿಸಲಿಲ್ಲ. ಇಂಥ ಕನಿಷ್ಠವಾದ ಸಂಕುಚಿತ ಸ್ವಾರ್ಥದೇಶಾಭಿಮಾನ ಅವರದಾಗಿರಲಿಲ್ಲ. ಸಮಗ್ರ ಪ್ರಪಂಚದ ಕ್ಷೇಮವೇ ಸ್ವರಾಜ್ಯಕ್ಷೇಮ: ಅದನ್ನು ಜಾಗರೂಕತೆಯಿಂದ

ಕಾಪಾಡಿದರೆ ಇದು ಸ್ವತಃ ಸುಸ್ಥಿತಿಯಲ್ಲಿರುವುದು. ವೈಯಕ್ತಿಕರಾಜ್ಯಗಳ ಕಾಯಿದೆ, ಕಾನೂನುಗಳೆಲ್ಲವೂ ಪ್ರಪಂಚ ಧರ್ಮವನ್ನು—ಜಗದ್ರಾಜ್ಯದ ನ್ಯಾಯಮಾರ್ಗವನ್ನು—ಅನುಸರಿಸಬೇಕು. ಸ್ನೇಹ, ವಿವಾಹ, ಇತರ ವಿಧವಾದ ಬಾಂಧವ್ಯ—ಎಲ್ಲಾ ವಿಧದ ಸಮಾಜ ಜೀವನವನ್ನೂ ಸ್ಟೋಯಿಕರು ಹೊಗಳಿದರು; ಯಾವ ಯಾವ ಸ್ಥಿತಿಗಳು–ಸಂಸ್ಥೆಗಳು–ಪುರುಷನಿಗೆ ಸಾರ್ವತ್ರಿಕ ಪ್ರಯೋಜನಕ್ಕಾಗಿ ಸ್ವಾರ್ಥಪರಿತ್ಯಾಗ ಮಾಡುವುದನ್ನು ಬೋಧಿಸುವುವೋ ಅವೆಲ್ಲವೂ ಶುಭಕರವಾದುವೆಂದು ಸಾರಿದರು.

ಇಂತಹ ಅಸಾಧಾರಣವಾದ (ಅಮಾನುಷವಾದ ಎಂದೆನ್ನಬೇಕೆಂದೇ ಮನಸ್ಸು ಓಡುವುದು!) ಸ್ಟೋಯಿಕರ ತತ್ತ್ವ–ನೀತಿ–ರಾಜ್ಯಸಿದ್ಧಾಂತವನ್ನು ಕುರಿತು ಕಡೆಯಲ್ಲಿ ನಾವು ಏನು ಹೇಳೋಣ! ಅವರ ಸಿದ್ಧಾಂತವನ್ನು ನಾವು ಯಾವುದಕ್ಕೆ ಹೋಲಿಸೋಣ! ಯೋಚನೆ ಮಾಡಿದಷ್ಟೂ—ಜೀವನದ ಕೊಂಕುಡೊಂಕುಗಳಲ್ಲಿ, ಕಷ್ಟಕಾರ್ಪಣ್ಯಗಳಲ್ಲಿ, ಉಬ್ಬರವಿಳಿತಗಳಲ್ಲಿ, ಓಡುವ ಚಿತ್ತವನ್ನು ಸ್ವಲ್ಪ ತಡೆದು, ಜೀವನದ ರಹಸ್ಯಾರ್ಥವೇನಿರಬಹುದೆಂದು ಚಿಂತಿಸಿದಷ್ಟೂ— ಏಕೋ ನಮ್ಮ ಮನಸ್ಸೆಲ್ಲಾ ಸ್ಟೋಯಿಕರ ಕಡೆಗೇ ಸೆಳೆಯಲ್ಪಡುತ್ತದೆ! ಅವರ ಸಿದ್ಧಾಂತ ಸ್ವಲ್ಪ ಅಮಾನುಷವಾಗಿರಬಹುದು; ಅವರ ಧ್ಯೇಯ ತುಸ ಅಶಕ್ಯವಾಗಿರಬಹುದು. ಆದರೆ ಧ್ಯೇಯದ ಸ್ವಭಾವವೇ ಇದಲ್ಲವೆ? ಜನಸಾಮಾನ್ಯದ ಅನುಷ್ಠಾನದ ನಿಲುಕಿಗೆ ಪೂರ್ಣವಾಗಿ ಸಿಕ್ಕುವುದಾದರೆ, ಅದು ಧ್ಯೇಯವಾಗಿ ಹೇಗೆ ನಿಂತೀತು? ಅಲ್ಲದೆ ಅರಿಸ್ಟಾಟಲನು ಕೇಳಿದಂತೆ, ಮನುಷ್ಯನು ಸದ್ಯದ ಸ್ಥಿತಿಯಲ್ಲಿ ಮನುಷ್ಯನಾಗಿದ್ದ ಮಾತ್ರಕ್ಕೆ ತನ್ನಲ್ಲಿರುವ ದೇವಾಂಶದ ಬೆಳಕನ್ನು ಪ್ರಕಾಶಪಡಿಸಲು ಪ್ರಯತ್ನವೇ ಮಾಡಕೂಡದೇನು? ನಮ್ಮ ಅಪರಿಪೂರ್ಣತೆಯಲ್ಲಿಯೇ, ನಮ್ಮ ಕುಂದುಕೊರತೆಗಳಲ್ಲಿಯೇ, ನಮ್ಮ ನಿರ್ಬಲನಿತ್ರಾಣಗಳಲ್ಲಿಯೇ, ಆಶಾಪಾಶಗಳಲ್ಲಿಯೇ, ಸಿಲುಕಿ ಒದ್ದಾಡುತ್ತ—ನಲಿದು ಹಿಗ್ಗುತ್ತ, ಇದೇ ನಮ್ಮ ಧ್ಯೇಯ—ಇದೇ ನಮ್ಮ ಪ್ರೇಯ—ಇದೇ ನಮ್ಮ ಶ್ರೇಯ—ಮಾನವ ಸ್ವಭಾವದ ನೆಲೆ—ಎಂದು ತಿಳಿದು, ವಿರೋಧವಿಪರ್ಯಾಸಗಳಿಂದಲೂ

ದೋಷನ್ಯೂನತೆಗಳಿಂದಲೂ ತುಂಬಿತುಳುಕಾಡುವ ಈ ಮಾನವ ಸ್ವಭಾವವನ್ನೇ ಅಪ್ಪಿಕೊಂಡು ಆನಂದಿಸುವ ಈ ಕಾಲದ ಮಾನವಶ್ರೇಷ್ಠತಾವಾದವನ್ನು (Humanism) ಏನೆಂದು ಹೇಳೋಣ! ಇಂತಹ ಇರುಕು ಬಿರುಕುಳ್ಳ ಕುಬ್ಜ ಜೀವನದಲ್ಲಿ, ಲಿಲಿಪುಟನರ ಮಾನವತ್ವದಲ್ಲಿ, ಬೇಸರಹೊಂದಿದವರಿಗೆಲ್ಲ, ಮನುಷ್ಯನು ಈಶ್ವರಸ್ವರೂಪನೆಂದೂ, ಪ್ರಕೃತಿಯೆಲ್ಲವೂ ದಿವ್ಯಜ್ಞಾನದ (Divine Reason) ಸಾಕ್ಷಾತ್ಕಾರವೆಂದೂ, ಜ್ಞಾನಪೂರ್ವಕವಾಗಿಯೇ, ಸ್ವಭಾವ ಧರ್ಮಕ್ಕನುಗುಣವಾಗಿಯೇ, ಬ್ರಹ್ಮತೇಜೋಮಯವಾದ ಪ್ರಕೃತಿಯ ನಿಯಮಕ್ಕನುಸಾರವಾಗಿಯೇ, ನಡೆಯುವುದು ಸಚ್ಛೀಲದ ಹೆಗ್ಗುರುತೆಂದೂ, ದ್ವಂದ್ವಾತೀತನಾಗಿ, ಚಿತ್ತವೃತ್ತಿಗಳನ್ನು ನಿರೋಧಮಾಡಿ, ನಿಯತ ಕರ್ಮಗಳನ್ನು ಬಿಡದೆ, ಕರ್ತವ್ಯಪರಾಙ್ಮುಖನಾಗದೆ, ಆವಶ್ಯಕವೆಂದು ತೋರಿದಾಗ ಭೋಗದಿಂದಲೂ ಹಿಮ್ಮೆಟ್ಟದೆ, ಸ್ಥಿತಪ್ರಜ್ಞನಾಗಿ, ಸಂಸಾರಸ್ನೇಹಗಳನ್ನು ಬೆಳಸಿ ಸ್ವದೇಶ-ಸ್ವರಾಜ್ಯ ಕಾರ್ಯಗಳಲ್ಲಿ ಭಾಗಿಯಾದರೂ ಲೋಕಸಂಗ್ರಹವನ್ನು, ಜಗದ್ರಾಜ್ಯದ ಕಲ್ಯಾಣವನ್ನು, ವೃದ್ಧಿಗೊಳಿಸಲು ಪ್ರಯತ್ನಪಡಬೇಕೆಂದೂ, ಬೋಧಿಸಿದ ಸ್ಟೋಯಿಕರ ಯೋಗಭೋಗಗಳ ಸಮ್ಮೇಲನ — ಜ್ಞಾನ ಕರ್ಮಗಳ ಸಮೀಕರಣ-ಧವಳಕೀರ್ತಿಯಿಂದ ಬೆಳಗಿ, ದಿವ್ಯಾಮೃತವಾಗಿ, ಅಮರತ್ವ ಪಡೆಯುವುದರ ಸುಲಭಸೂತ್ರವಾಗಿ, ತೋರುವುದಲ್ಲವೆ! ಗೀತೆಯ ನೀತಿಯಲ್ಲಿಯೂ ಸಹ ಇದಕ್ಕಿಂತ ಹೆಚ್ಚಿನ ತತ್ವ ನಮಗೆ ಸಿಕ್ಕುವುದಾದರೂ ಏನು? ೧

ಸೀನೋವಿನ ಕಾಲಾನಂತರ ಅವನ ಶಿಷ್ಯನಾದ ಕ್ಲಿಯಾಂತೀಸ್ ಎಂಬವನು ಸ್ಟೋಯಿಕರ ಗುರುವಾದನು. ಈತನೇನೂ ಅಷ್ಟು ಪ್ರಖ್ಯಾತಿ

೧. ಇಂತಹ ತತ್ವದಲ್ಲಿ ಮಾನವಪ್ರೇಮಕ್ಕೆ — ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸು ಎಂಬ ವಾಕ್ಕಿಗೆ— ಅವಕಾಶವಿಲ್ಲವೆಂದು ಆಧುನಿಕರ ಖಂಡನೆ. ಇತರ ಭಾವಗಳಂತೆಯೇ ಪ್ರೇಮವೂ ಒಂದು ಭಾವವಾದಮೇಲೆ—ಭಾವಗಳೆಲ್ಲಾ ಆತ್ಮಕ್ಕೆ ರೋಗಗಳೆಂದು ನಿರ್ಣಯಿಸಿದಮೇಲೆ — ಪ್ರೀತಿಯದೇನು ವಿಶೇಷ, ಎಂದು ಸ್ಥಿತಪ್ರಜ್ಞನು ಕೇಳುವನು. ಆದರೂ ಆತನ ಆತ್ಮಕಾಮತತ್ವವನ್ನು ಮರೆಯಬಾರದು.

ಪಡೆಯಲಿಲ್ಲ. ತರುವಾಯ ಸೋಲಿಯದ ಕ್ರಿಸಿಪ್ಪಸ್ ಎಂಬವನು ಆಚಾರ್ಯಪದವಿಗೆ ಬಂದನು. ಈತನು ಬಹು ಛಾತಿವಂತನಾಗಿ ಸ್ಟೋಯಿಕರ ತತ್ವಗಳನ್ನು ಒಂದುಗೂಡಿಸಿ, ಸಿದ್ಧಾಂತರೂಪಕ್ಕೆ ತಂದು ಅವುಗಳಿಗೆ ಒಂದು ವ್ಯಕ್ತಿತ್ವವನ್ನು ಕಲ್ಪಿಸಿದನು. ಇವನ ಕೈಯಿಂದ ಸುಧಾರಣೆ ಹೊಂದಿದ ಸ್ಟೋಯಿಕ್ ಮತ ಕಾಲಕ್ರಮದಲ್ಲಿ ರೋಮನ್ ಚಕ್ರಾಧಿಪತ್ಯದಲ್ಲಿಯೂ ಹರಡಿತು. ಅಲ್ಲಿ ಇದು ಜನಪ್ರಿಯವಾದ ಅಥವಾ ಸಾಮಾನ್ಯವಾದ ರೂಪವೊಂದು, ಪಂಡಿತರಂಜಕವಾದ ಅಥವಾ ಶಾಸ್ತ್ರೀಯವಾದ ರೂಪವೊಂದು—ಈ ರೀತಿ ಎರಡು ರೂಪಗಳನ್ನು ತಾಳಿತು. ಕ್ರಿ. ಶ. ಒಂದನೆಯ ಶತಮಾನದಲ್ಲಿ ಮ್ಯೂಸೋನಿಯಸ್ ರೂಫಸ್, ಸೆನೆಕ ಮತ್ತು ಎಪಿಕ್ಟೆಟಸ್ ಎಂಬವರೂ, ಎರಡನೆಯ ಶತಮಾನದಲ್ಲಿ ರೋಮನ್ ಚಕ್ರವರ್ತಿಯಾದ ಮಾರ್ಕಸ್ ಆರೀಲಿಯಸ್ ಎಂಬ ಮಹಾಪುರುಷನೂ ಮೊದಲನೆಯ ರೂಪವನ್ನು ವಿಶೇಷವಾಗಿ ಪ್ರಚಾರಕ್ಕೆ ತಂದರು. ಕಾರಣವೇನೆಂದರೆ ಇವರು ಕೇವಲ ತತ್ವ ವಿಮರ್ಶಕರಾಗಿರಲಿಲ್ಲ; ಸ್ಟೋಯಿಕ್ ತತ್ವಗಳನ್ನು ತಮ್ಮ ಜೀವನದ ಸೂತ್ರಗಳಾಗೆಣಿಸಿ ಅವುಗಳನ್ನು ತಮ್ಮ ಅನುಷ್ಠಾನದಲ್ಲಿಯೇ ಉದಹರಿಸಿದರು. ತತ್ವಶಾಸ್ತ್ರವೆಂಬುದು ಘಟಪಟನ್ಯಾಯುಗಳ ಪಟುಲ ಪರಾಕ್ರಮವಲ್ಲ, ತರ್ಕವಿತರ್ಕಗಳ ತಾರತಿಗಡಿಯಲ್ಲ, ಶಬ್ದಗಾರುಡಿಯ ಶುಷ್ಕವಿದ್ಯೆಯಲ್ಲ — ದಿನಜೀವನಕ್ಕೂ ಅದಕ್ಕೂ ನಿಕಟವಾದ ಸಂಬಂಧವಿದೆಯೆಂದು ತಮ್ಮ ಜೀವನದಲ್ಲಿಯೇ ತೋರಿಕೊಟ್ಟ ವೀರ ಪುರುಷರಿವರು. ಇವರಲ್ಲಿ ಎಪಿಕ್ಟೆಟಸ್ ಎಂಬವನು ಮೊದಲು ಗುಲಾಮನಾಗಿದ್ದು ಅನಂತರ ಬಿಡುಗಡೆ ಹೊಂದಿದವನು. ಇವನು ಎಂತಹ ಜ್ಞಾನಿ ಮತ್ತು ಸಾಧುವೆಂದೂಹಿಸಬೇಕಾದರೆ—ಚಕ್ರಾಧಿಪತಿಯಾದ ಮಾರ್ಕಸ್ ಆರೀಲಿಯಸ್ ಎಂಬವನೂ ಸಹ ಈತನನ್ನು ತನ್ನ ಗುರುವೆಂದು ಭಾವಿಸಿದ್ದನೆಂಬುದನ್ನು ಸ್ಮರಣೆಗೆ ತಂದುಕೊಂಡರೆ ಈತನ ಮಹಿಮೆ ಸ್ವಲ್ಪಮಟ್ಟಿಗೆ ತೋರಬಹುದು. ಕೆಳಗೆ ಉದ್ಧರಿಸಿರುವ ವಚನಗಳಿಂದ ಈ ಊಹೆ ತಕ್ಕಮಟ್ಟಿಗೆ ದೃಢಪಡಬಹುದು.

## ಅಧ್ಯಾಯ ೨೩

# ಇಬ್ಬರು ಸ್ಟೋಯಿಕ ಗುರುಗಳು

### (೧) ಎಪಿಕ್ಟೆಟಸ್ಸಿನ ಉಪದೇಶಸಾರ

ನಮ್ಮ ಅಧೀನದಲ್ಲಿರತಕ್ಕ ವಸ್ತುಗಳು

ಆದುದರಿಂದ ನಿನ್ನ ಚಿತ್ತಕ್ಕೆ ರಂಜಿಸದ ಪ್ರತಿಯೊಂದು ತೋರಿಕೆಗೂ "ನೀನೊಂದು ತೋರಿಕೆ ಮಾತ್ರ, ನಿನ್ನಲ್ಲಿ ಸತ್ವವೇನೂ ಇಲ್ಲ" ಎಂದು ಹೇಳಲು ನೀನು ಶಕ್ತನಾಗಿರಬೇಕು. ಅನಂತರ ನೀನು ಹೊಂದಿರುವ ಜೀವನ ಸೂತ್ರಗಳಿಂದ ಅದನ್ನು ಪರೀಕ್ಷೆ ಮಾಡಿನೋಡು; ಮೊದಲಲ್ಲಿ ಮತ್ತು ಮುಖ್ಯವಾಗಿ, ಅದು ನಮ್ಮ ಅಧೀನದಲ್ಲಿರತಕ್ಕ ವಸ್ತುಗಳಿಗೆ ಸಂಬಂಧಪಟ್ಟುದೇ ಅಲ್ಲವೆ, ಎಂಬುದನ್ನು ನೋಡು; ಹಾಗೆ ಅದು ನಮ್ಮ ಕೈಯಲ್ಲಿಲ್ಲದ ವಿಷಯವಾದರೆ, ಅದಕ್ಕೂ ನಿನಗೂ ಯಾವ ವಿಧವಾದ ಸಂಬಂಧವೂ ಇಲ್ಲವೆಂದು ಹೇಳಲು ಸಿದ್ಧನಾಗಿರು.

ಮನುಷ್ಯರಿಗೆ ನೋವುತರುವವು ವಸ್ತುಗಳಲ್ಲ, ವಸ್ತುಗಳ ವಿಷಯವಾಗಿ ಅವರು ಹೊಂದಿರುವ ಭಾವನೆಗಳು. ಉದಾಹರಣೆಗೆ, ಸಾವೆಂಬುದೇನೂ ಭಯಂಕರವಾದುದಲ್ಲ, ಹಾಗಿದ್ದಿದ್ದರೆ ಸಾಕ್ರಟೀಸನಿಗೆ ಹಾಗೆಯೇ ಕಾಣುತ್ತಿತ್ತು. ಅದು ಭಯಂಕರವೆಂದು ನಾವು ಭಾವಿಸುತ್ತೇವಲ್ಲ—ಈ ನಮ್ಮ ಭಾವನೆಯಿಂದಲೇ ನಮಗದರ ಹೆದರಿಕೆ. ಇದನ್ನು ಜ್ಞಾಪಕದಲ್ಲಿಟ್ಟುಕೊಂಡು, ನಮಗೆ ತೊಂದರೆಯುಂಟಾದಾಗ, ವಿಘ್ನ ಒದಗಿದಾಗ, ಅಥವಾ ನೋವು ಬಂದಾಗ, ಇತರರಿಂದ ನಮಗದು ಸಂಭವಿಸಿತೆಂದು ಎಂದೂ ಹೇಳದೆ, ನಮ್ಮಿಂದಲೇ, ಅಂದರೆ ನಮ್ಮ ಭಾವನೆಗಳಿಂದಲೇ, ಉಂಟಾದುದೆಂದು ತಿಳಿಯೋಣ. ತನ್ನ ಸ್ವಂತ ದುರಾದೃಷ್ಟಕ್ಕೋಸ್ಕರ ಇತರರನ್ನು ನಿಂದಿಸುವವನು ಶುದ್ಧ ಅಜ್ಞಾನಿ; ತನ್ನನ್ನೇ ಬೈದುಕೊಳ್ಳುವವನು ಉಪದೇಶವನ್ನು ಕೈಗೊಳ್ಳಲು ತೊಡಗಿರುವವನು; ಪೂರ್ಣಜ್ಞಾನಿಯಾದರೋ ಇತರರನ್ನೂ ದೂರುವುದಿಲ್ಲ, ತನ್ನನ್ನೂ ನಿಂದಿಸಿಕೊಳ್ಳುವುದಿಲ್ಲ.

∴

ನಿನ್ನ ಇಷ್ಟದಂತೆ ವ್ಯಾಪಾರಗಳು ನಡೆಯಬೇಕೆಂದು ಕೇಳಿಕೊಳ್ಳಬೇಡ; ಅವುಗಳು ಹೇಗೆ ಸಂಭವಿಸುತ್ತವೆಯೋ ಹಾಗೆಯೇ

ಸಂಭವಿಸಲಿ ಎಂದು ಕೋರು—ಆಗ ನಿನ್ನ ಕೆಲಸಗಳು ಸುಸೂತ್ರವಾಗಿ ನಡೆಯುತ್ತವೆ.

∴

ದೇವತೆಗಳ ವಿಷಯದಲ್ಲಿ ನಿಜವಾದ ಶ್ರದ್ಧೆ ಯಾವುದು ಎಂದು ಕೇಳುತ್ತೀಯೋ–ಅವರಿರುವರೆಂದೂ, ವಿಶ್ವವನ್ನು ಅವರು ಸಮರ್ಪಕವಾಗಿಯೂ ನ್ಯಾಯವಾಗಿಯೂ ಆಳುತ್ತಾರೆಂದೂ ಅವರನ್ನು ಕುರಿತು ಸರಿಯಾದ ನಂಬಿಕೆಗಳನ್ನು ಹೊಂದಿರುವುದೇ. ಮತ್ತು "ಅವರಿಗೆ ವಿಧೇಯನಾಗಿರುವೆನು, ಎಲ್ಲದರಲ್ಲಿಯೂ ಅವರಿಗೆ ಶರಣಾಗತನಾಗಿರುವೆನು, ಎಂತಹ ಕಷ್ಟ ಸಂಭವಿಸಿದಾಗ್ಯೂ ಪೂರ್ಣಪ್ರಜ್ಞರಾದ ಅವರ ಕೈಲಿ ನನ್ನ ಹಣೆಬರಹವಿರುವುದರಿಂದ ನನ್ನ ಮನಃಪೂರ್ವಕವಾಗಿ ಅವರ ಇಚ್ಛೆಯಂತೆ ನಡೆದುಕೊಳ್ಳುವೆನು"–ಈ ವಿಧವಾದ ಸಂಕಲ್ಪದಲ್ಲಿ ನೆಟ್ಟ ಮನಸ್ಸುಳ್ಳವನಾಗಿರು. ಹೀಗೆ ಯೋಚಿಸುವುದರಿಂದ ದೇವತೆಗಳಲ್ಲಿ ನೀನು ದೋಷವನ್ನು ಹುಡುಕಲಾರೆ, ಅವರು ನಿನ್ನನ್ನು ಕೈಬಿಟ್ಟರೆಂದುಕೂಡ ದೂರಲಾರೆ. ಈ ಮನೋಭಾವ ನಿನಗೆ ಬರಬೇಕಾದರೆ ನಿನ್ನ ಸ್ವಾಧೀನದಲ್ಲಿಲ್ಲದ ವ್ಯಾಪಾರಗಳಿಲ್ಲದರಿಂದಲೂ ನಿನ್ನ ಮನಸ್ಸನ್ನು ಹಿಂತಿರುಗಿಸಬೇಕು, ಮತ್ತು ಹಾಗೆ ನಿನ್ನ ಅಧೀನದಲ್ಲಿರುವ ವಸ್ತುಗಳು ಯಾವುವೋ ಅವುಗಳೇ ನಿನಗೆ ಶುಭಾಶುಭದಾಯಕಗಳೆಂದು ತಿಳಿಯಬೇಕು.

∴

## ಶ್ರೇಯದ ಸಾರ

ಈಶ್ವರನು ಮಂಗಳಕರನು. ಶ್ರೇಯವೂ ಕಲ್ಯಾಣಪ್ರದವಾದುದು. ಆದುದರಿಂದ, ದೇವರ ಸತ್ತ್ವವೆಲ್ಲಿರುವುದೋ ಅಲ್ಲಿಯೇ ಶ್ರೇಯದ ಸಾರವೂ ಇರುವುದೆಂದು ತೋರುವುದು ಸಹಜವಲ್ಲವೇ? ಹಾಗಾದಮೇಲೆ ಈಶ್ವರನ ಸತ್ತ್ವ ಯಾವುದು ? ಪ್ರಾಕೃತಿಕ ಶರೀರವೋ? ಎಂದಿಗೂ ಅಲ್ಲ. ಆಸ್ತಿಪಾಸ್ತಿಗಳೋ ? ಕೀರ್ತಿಯೋ ? ಎಂದಿಗೂ ಅಲ್ಲ. ಚಿತ್ತು, ಜ್ಞಾನ, ಬುದ್ಧಿ—ಇವೇ ಈಶ್ವರನ ಸತ್ತ್ವ. ಆದುದರಿಂದ ಇವುಗಳಲ್ಲಿಯೇ ಶ್ರೇಯದ ಸಾರವನ್ನು ಅರಸು. ಜ್ಞಾನವನ್ನಾಗಲಿ ಬುದ್ಧಿಯನ್ನಾಗಲಿ ಗಿಡದಲ್ಲಿ

ಹುಡುಕುತ್ತೀಯೇನು, ಅಥವಾ ಪಶುವಿನಲ್ಲಿ ಹುಡುಕುತ್ತೀಯೇನು? ಇಲ್ಲ, ಜ್ಞಾನಬದ್ಧವಾದ ಕರ್ತೃವಿನಲ್ಲಿಯೇ ಹುಡುಕುತ್ತೀಯೆ. ಅಂದ ಮೇಲೆ ಅಂಥ ಕರ್ತೃವಿಗೂ ಜ್ಞಾನಶೂನ್ಯವಾದ ವಸ್ತುಗಳಿಗೂ ಯಾವ ಅಂತರವುಂಟೋ ಅದರಲ್ಲಿಯೇ ನೀನು ಶ್ರೇಯದ ಸತ್ವವನ್ನು ಕಾಣ ಬೇಕು. ಗಿಡಮರಗಳು ತಮ್ಮ ಸ್ವಂತ ಇಚ್ಛೆಯಿಂದ ಕೆಲಸಮಾಡುವು ದಿಲ್ಲವಾದುದರಿಂದ ಕೆಟ್ಟುದು ಒಳ್ಳೆಯದೆಂಬುದು ಅವುಗಳಿಗೆ ಅನ್ವಯಿಸು ವುದಿಲ್ಲ. ಇಚ್ಛಾಪೂರ್ವಕವಾದ ಪ್ರವೃತ್ತಿ ಇದ್ದೆಡೆಯಲ್ಲಿಯೇ ಒಳ್ಳೆಯ ದೆಂದು ಹೇಳುವುದು. ಆದರೆ ಇಷ್ಟೇ ಅಲ್ಲ—ಆ ಪಕ್ಷದಲ್ಲಿ ಒಳ್ಳೆಯದು, ಸುಖ, ದುಃಖ ಮೊದಲಾದುವು ಕೇವಲ ಪಶುಗಳಿಗೆ ಸೇರಿದುದೆಂದು ಹೇಳಬಹುದಾಗಿತ್ತು. ಹಾಗೆ ಹೇಳಲಾಗದು, ಏಕೆಂದರೆ, ಇಚ್ಛಾಪೂರ್ವಕ ವಾಗಿ ಪಶುಗಳು ಎಷ್ಟೇ ಪ್ರವರ್ತಿಸಿದರೂ ಜ್ಞಾನಪೂರ್ವಕವಾಗಿ ಅವು ನಡೆಯಲಾರವು : ಇತರರ ಪ್ರಯೋಜನಕ್ಕಾಗಿ ಅವು ಸೃಜಿಸಲ್ಪಟ್ಟವೇ ಹೊರತು ಮತ್ತೆಬೇರೆಯಲ್ಲ. ಕತ್ತೆ ಹುಟ್ಟಿದ್ದೇಕೆ? ಅದು ಬಹುಮುಖ್ಯ ವಾದ ಪ್ರಾಣಿಯೆಂದಲ್ಲ; ನಮ್ಮ ಹೊರೆಗಳನ್ನು ಹೊತ್ತುಕೊಂಡು ಹೋಗಲು ಬಲವಾದ ಬೆನ್ನು ಒಂದು ನಮಗೆ ಬೇಕಾಗಿದ್ದುದರಿಂದ. ಅಲ್ಲದೆ ಇಂಥ ಪ್ರಾಣಿ ಸಂಚರಿಸುವುದೂ ಆವಶ್ಯಕವಾಗಿದ್ದುದರಿಂದ ಇಚ್ಛಾಪೂರ್ವಕವಾಗಿ ನಡೆಯಲು ಅದಕ್ಕೆ ಶಕ್ತಿಯೂ ಬಂದಿತು, ಇಲ್ಲದೆ ಹೋಗಿದ್ದರೆ ಅದು ಅಲುಗಾಡುವುದಕ್ಕೂ ಆಗುತ್ತಿರಲಿಲ್ಲ. ಆದರೆ ಇಲ್ಲಿಗೆ ಮುಗಿದುವು ಅದರ ಶಕ್ತಿಸಾಮರ್ಥ್ಯಗಳು. ಜ್ಞಾನಪೂರ್ವಕವಾಗಿ ತನ್ನ ಶಕ್ತಿಯನ್ನು ಉಪಯೋಗಪಡಿಸುವುದೂ ಆ ಕತ್ತೆಗೆ ಗೊತ್ತಿದ್ದಿದ್ದರೆ, ನ್ಯಾಯವಾಗಿ ಅದು ನಮ್ಮ ಸ್ವಾಧೀನದಲ್ಲಿದ್ದು ನಮಗೀ ಚಾಕರಿಗಳನ್ನು ಮಾಡುತ್ತಿತ್ತೆ? ನಮ್ಮ ಹಾಗೆಯೇ ಮತ್ತು ನಮಗೆ ಸರಿಸಮಾನವಾಗಿಯೇ ಇರುತ್ತಿತ್ತು. ಹೀಗಿರುವಲ್ಲಿ ಯಾವುದನ್ನು ಬಿಟ್ಟರೆ ಒಳ್ಳೆಯದು ಕೆಟ್ಟು ದೆಂಬುದೇ ಇಲ್ಲವೋ, ಅಂಥ ಬುದ್ಧಿ ಬಲದಲ್ಲಿ — ಜ್ಞಾನ ಬಲದಲ್ಲಿ— ಶ್ರೇಯದ ಸಾರವನ್ನು ನೀನೇಕೆ ಅರಸಲೊಲ್ಲೆ?

ಹಾಗಂದರೇನು? ಕತ್ತೆ, ಕುರಿ, ಕುದುರೆ—ಇವೆಲ್ಲವೂ ದೇವತೆಗಳ ಸೃಷ್ಟಿಯೇ ಅಲ್ಲವೆ, ಎಂದು ನೀನು ಕೇಳಬಹುದು. ನಿಜ; ಆದರೆ

ಸೃಷ್ಟಿಯ ಮುಖ್ಯ ಗುರಿ ಅವುಗಳಲ್ಲ, ದೈವಾಂಶವೂ ಅವುಗಳಲ್ಲಿಲ್ಲ. ನೀನು ದೇವರ ಸೃಷ್ಟಿಯಲ್ಲಿ ಪ್ರಧಾನವಾದ ವ್ಯಕ್ತಿ. ದೇವರ ಸತ್ವದ ವ್ಯಕ್ತವಾದ ಒಂದಂಶವೇ ನೀನಾಗಿದ್ದೀಯೆ. ಆ ಜ್ಯೋತಿಯ ಒಂದು ಕಿಡಿಯನ್ನೇ ನಿನ್ನಲ್ಲಿ ಇರಿಸಿಕೊಂಡಿದ್ದೀಯೆ. ಅಂಥ ನಿನ್ನ ಶ್ರೇಷ್ಠವಂಶದ ಅರಿವೇ ನಿನಗೇಕೆ ಇಲ್ಲ? ನಿನ್ನ ಮೂಲಸ್ಥಾನ ಯಾವುದೆಂಬುದನ್ನು ನೀನೇಕೆ ವಿಚಾರಮಾಡುವುದಿಲ್ಲ? ನೀನು ಊಟಮಾಡುತ್ತಿರುವಾಗ, ಸ್ತ್ರೀಯರ ಜೊತೆಯಲ್ಲಿರುವಾಗ, ಸಂಭಾಷಣೆಮಾಡುವಂದು, ವ್ಯಾಯಾಮ ತೆಗೆದು ಕೊಳ್ಳುವ ಸಮಯದಲ್ಲಿ, ಚರ್ಚೆಮಾಡುವ ಸಂದರ್ಭದಲ್ಲಿ, ಭುಂಜಿಸುವ ನೀನಾರು, ನೀನು ಆಹಾರ ಕೊಡುವುದು ಯಾರಿಗೆ, ಎಂಬುದನ್ನೇಕೆ ಜ್ಞಾಪಿಸಿಕೊಳ್ಳುವುದಿಲ್ಲ? ಊಟಮಾಡಿ ತುಷ್ಟಿಹೊಂದುವವನು ದೇವರು, ವ್ಯಾಯಾಮದಿಂದ ಪುಷ್ಟಿಹೊಂದುವವನು ದೇವರು — ಸಕಲ ವಿಧ ದಲ್ಲಿಯೂ ವೃದ್ಧಿಹೊಂದಿ ಬೆಳಗುವವನು ದೇವರು—ಇದು ನಿನಗೆ ಗೊತ್ತಿ ಲ್ಲವೇ? ಅಯ್ಯೋ ನಿರ್ಭಾಗ್ಯನೇ, ದೇವರನ್ನೇ ನೀನು ಹೊತ್ತುಕೊಂಡು ಓಡಾಡುತ್ತಿರುವೆ, ಆದರೂ ಅದರ ಪ್ರಜ್ಞೆ ಕೂಡ ನಿನಗಿಲ್ಲವಲ್ಲಾ! ನಿನಗೆ ಬಾಹ್ಯವಾಗಿರುವ ಯಾವುದೋ ಒಂದು ಚಿನ್ನ ಅಥವಾ ಬೆಳ್ಳಿಯ ವಿಗ್ರಹ ವೆಂದು ಹೇಳಿದೆನೆಂದು ಭಾವಿಸುತ್ತೀಯಾ? ಅಲ್ಲ, ಅಲ್ಲ, ನಿನ್ನೊಳಗೇ ನೀನು ದೇವರನ್ನು ಹೊತ್ತುಕೊಂಡು ತಿರುಗುವುದು; ಅಂಥವನನ್ನು ನೀನು ನಿನ್ನ ಅಪವಿತ್ರ ಆಲೋಚನೆಗಳಿಂದಲೂ ಹೊಲಸು ಕೆಲಸಗಳಿಂದಲೂ ಮಲಿನ ಮಾಡುವೆ ಎಂಬುದು ಕೂಡ ಗೋಚರವಿಲ್ಲವಲ್ಲ ನಿನಗೆ! ದೇವರ ಕೇವಲ ಬಾಹ್ಯ ವಿಗ್ರಹವೊಂದು ನಿನ್ನೆದುರಿಗಿದ್ದಿದ್ದರೆ, ನೀನು ಈಗ ಮಾಡುವಂತೆ ಮಾಡಲು ನಿನಗೆ ಎದೆ ಬರುತ್ತಿತ್ತೇನು? ಅಂಥಾದ್ದು ಆ ಸಾಕ್ಷಾತ್ ಈಶ್ವರನೇ ನಿನ್ನೊಳಗಿದ್ದುಕೊಂಡು ಸಕಲವನ್ನೂ ಕೇಳುವ ವನಾಗಿ, ಸಕಲವನ್ನೂ ನೋಡುವವನಾಗಿ, ಇರುವಾಗ, ನಿನ್ನ ಸಹಜ ಗುಣದ ಸ್ಮರಣೆಯೇ ಇಲ್ಲದೆ, ಆತನಿಗೆ ವಿರೋಧಿಯಾಗಿ, ಈ ರೀತಿ ಮನೋವಾಕ್ಕಾಯಗಳಿಂದ ನಡೆಯಲು ನಿನಗೆ ನಾಚಿಕೆಯಾಗುವುದಿಲ್ಲವೆ?

∴

ತನಗೆ ಕೇಡೆಂದು ಕಾಣುವ, ಆದರೂ ತಪ್ಪಿಸಲು ತನ್ನಿಂದಲೇ ಸಾಧ್ಯವಾದ, ವ್ಯಾಪಾರಗಳಿಗೆ ಯಾರಾದರೂ ಭಯಪಡುತ್ತಾರೆಯೆ? ಖಂಡಿತವಾಗಿಯೂ ಇಲ್ಲ.

ಹಾಗಿದ್ದಮೇಲೆ, ನಮ್ಮ ಸಂಕಲ್ಪಶಕ್ತಿಯ ನಿಲುಕಿಗೆ ಸಿಕ್ಕದ ವಸ್ತುಗಳು ಒಳ್ಳೆಯವೂ ಅಲ್ಲ, ಕೆಟ್ಟವೂ ಅಲ್ಲ, ಆದರ ನಿಲುಕಿಗೆ ಸಿಕ್ಕುವ ವಸ್ತುಗಳು ನಮ್ಮ ಸ್ವಾಧೀನದಲ್ಲಿಯೇ ಇವೆ, ಅವುಗಳನ್ನು ಯಾರೂ ನಮ್ಮಿಂದ ಕಿತ್ತುಕೊಳ್ಳಲಾರರು, ಮತ್ತು ನಮ್ಮ ಇಷ್ಟವಿಲ್ಲದೆ ನಮಗೆ ಕೊಡಲೂ ಆರರು, ಎಂದು ಹೇಳಿದ ಮೇಲೆ, ಇನ್ನು ಕಳವಳವೇಕೆ? ಆದರೂ ಬಡವಾದ ಈ ನಮ್ಮ ದೇಹದ ಸಲುವಾಗಿಯೂ, ಸಿಳ್ಳಿಮಿಳ್ಳಿ ಈ ಸೊತ್ತಿನ ಸಲುವಾಗಿಯೂ, ಧಣಿಗಳು ನಮ್ಮ ವಿಚಾರವಾಗಿ ಏನು ತಿಳಿದುಕೊಳ್ಳುವರೋ ಎಂಬುದಕ್ಕೂ, ನಾವು ತಲ್ಲಣಗೊಳ್ಳುತ್ತೇವೆ. ನಮ್ಮ ಅಂತರಾತ್ಮನ ಸುಸ್ಥಿತಿಯ ವಿಚಾರದಲ್ಲಿ ನಾವು ಯೋಚನೆಯೇ ಮಾಡುವುದಿಲ್ಲ.

ಜಲಪ್ರಯಾಣ ಮಾಡಲು ಗಾಳಿ ಅನುಕೂಲವಾಗಿಲ್ಲದಿದ್ದರೆ, ನಾವು ತಲೆಯಮೇಲೆ ಕೈಯಿಟ್ಟುಕೊಂಡು ದಿಗಂತವನ್ನು ನಿರಂತವಾಗಿ ದೃಷ್ಟಿಸುತ್ತಾ ಕೂರುತ್ತೇವೆ. ಗಾಳಿ ಯಾವ ಕಡೆ ಬೀಸುತ್ತದೆ? ಉತ್ತರದ ಕಡೆ. ಆದರಿಂದ ನಮಗೆ ಉಪಯೋಗವೇನು? ಪಶ್ಚಿಮದ ಗಾಳಿ ಯಾವಾಗ ಬೀಸುವುದು? ಅದಕ್ಕೆ ಮನಸ್ಸು ಬಂದಾಗ ಅಪ್ಪಾ, ಇಲ್ಲವೆ ಇಯೋಲಸ್ಸನಿಗೆ ಮನಸ್ಸು ಬಂದಾಗ; ಏಕೆಂದರೆ ವಾಯುರಾಜ್ಯದ ಆಡಳಿತವನ್ನು ಸ್ಯೂಸನು ಇಯೋಲಸ್ಸನಿಗೆ ಕೊಟ್ಟಿರುವನಲ್ಲದೆ ನಿನ್ನ ಕೈಗಲ್ಲ.

ಹಾಗಾದರೆ ಏನುಮಾಡಬೇಕು?

ನಮ್ಮ ಕೈಯಲ್ಲಿರುವುದನ್ನು ಸಡಗರದಿಂದ ಸುಧಾರಿಸಿಕೊಳ್ಳುವುದು, ನಮ್ಮ ಕೈಯಲ್ಲಿ ಇಲ್ಲದುದನ್ನು ನಡೆದಂತೆ ಸುಧಾರಿಸಿಕೊಳ್ಳುವುದು.

ಅದು ನಡೆಯುವುದು ಹೇಗೆ?

ದೇವರ ಚಿತ್ತವಿದ್ದ ಹಾಗೆ.

## ಸಾಕ್ರಟೀಸನು ಮಾಡುತ್ತಿದ್ದಂತೆ

ನೀನು ಯಾರ ಸಂಗಡವಾದರೂ ಮಾತನಾಡಬೇಕೆಂದಿರುವಾಗ—ಅದರಲ್ಲಿಯೂ ನಿನಗಿಂತ ದೊಡ್ಡವರೆಂದು ಕಾಣಿಸಿಕೊಳ್ಳುವವರ ಜೊತೆಯಲ್ಲಿ ಮಾತನಾಡಬೇಕಾದ ಸಂದರ್ಭಬಿದ್ದಾಗ—ಇಂಥ ಸಂದರ್ಭದಲ್ಲಿ ಸಾಕ್ರಟೀಸನಾಗಲಿ ಸೀನೋವಾಗಲಿ ಹೇಗೆ ವರ್ತಿಸುತ್ತಿದ್ದರು ಎಂಬುದನ್ನು ನಿನ್ನ ಮನಸ್ಸಿಗೆ ತಂದುಕೊ. ಆಗ ಏನೇ ಸಂಭವಿಸಲಿ ಅದಕ್ಕನುಗುಣವಾಗಿ ನಡೆದುಕೊಳ್ಳಲು ನಿನಗೆ ಶಕ್ತಿ ಬರುವುದು........ಯಾವ ಕೆಲಸವನ್ನೇ ಆಗಲಿ, ಅದನ್ನು ಮಾಡುವುದು ನಿನ್ನ ಕರ್ತವ್ಯವೆಂದು ನೀನು ನಿರ್ಧರಿಸಿ ಮಾಡುವಾಗ, ಇತರರು ನೋಡಿಯಾರೆಂಬ ಭಯ ನಿನಗೆ ಬೇಡ, ಲೋಕ ನೋಡಿ ತಪ್ಪು ತಿಳಿದುಕೊಂಡರೆ ತಿಳಿದುಕೊಳ್ಳಲಿ; ನೀನು ಮಾಡುವ ಕೆಲಸ ಸರಿಯಲ್ಲದಿದ್ದರೆ ಅದನ್ನು ಮಾಡಲೇಬೇಡ, ಅದು ಸರಿಯಾದುದಾದರೆ ಅನ್ಯಾಯವಾಗಿ ನಿನ್ನನ್ನು ದೂಷಿಸುವವರಿಗೇಕೆ ಭಯಪಡಬೇಕು ?

∴

ಪ್ರತಿ ಒಂದು ವಸ್ತು ವ್ಯಾಪಾರಕ್ಕೂ ಎರಡು ಹಿಡಿಗಳಿರುವುವು : ಒಂದನ್ನು ಹಿಡಿದುಕೊಂಡರೆ ಅದನ್ನು ಸಹಿಸಬಹುದು, ಮತ್ತೊಂದನ್ನು ಹಿಡಿದುಕೊಂಡರೆ ಅದನ್ನು ಸಹಿಸಲಶಕ್ಯವಾಗುವುದು. ನಿನ್ನ ಸಹೋದರನು ನಿನಗೆ ಅನ್ಯಾಯಮಾಡಿದರೆ, ಅವನು ಅನ್ಯಾಯ ಮಾಡಿದನೆಂಬ ತುದಿಯನ್ನು ಹಿಡಿದುಕೊಂಡರೆ, ಅವನ ವರ್ತನವನ್ನು ಸಹಿಸಲಸಾಧ್ಯವಾಗುವುದು ; ಅದಕ್ಕೆ ಬದಲಾಗಿ, ಅವನು ನಿನ್ನ ಸಹೋದರನು, ನಿನ್ನ ಜೊತೆಯಲ್ಲಿ ಹುಟ್ಟಿ ಬೆಳೆದವನು, ಎಂಬ ಈ ತುದಿಯನ್ನು ಹಿಡಿದುಕೊಂಡರೆ ಆಗ ಅದನ್ನು ಸಹಿಸಬಹುದಾದ ರೀತಿಯಲ್ಲಿ ಹಿಡಿದಂತಾಗುವುದು.

∴

ನೀನು ಜ್ಞಾನಿಯೆಂದಾಗಲಿ ವಿವೇಕಿಯೆಂದಾಗಲಿ ಎಂದೂ ಹೇಳಿಕೊಳ್ಳಬೇಡ ; ಮೂಢರೊಂದಿಗೆ ನಿನ್ನ ರೀತಿ ನೀತಿಗಳ ಬಗ್ಗೆ ಹೆಚ್ಚು ಆಡಲೂ ಬೇಡ, ಕಾರ್ಯತಃ ಅವುಗಳನ್ನು ಮಾಡಿ ತೋರಿಸು. ಒಂದು ಔತಣಕ್ಕೆ ನೀನು ಹೋದರೆ, ಅಲ್ಲಿ ಜನರು ಹೇಗೆ ಊಟ ಮಾಡಬೇಕು

ಎನ್ನುವ ಬಗ್ಗೆ ಭಾಷಣ ಮಾಡಬೇಡ; ಮಾಡಬೇಕಾದ ರೀತಿಯಲ್ಲಿ ನಿನ್ನಷ್ಟಕ್ಕೆ ನೀನು ಊಟಮಾಡು. ಸಾಕ್ರಟೀಸನು ಇದೇ ರೀತಿಯಲ್ಲಿ ಸಕಲ ವಿಧವಾದ ಸೋಗನ್ನೂ ಸಾರ್ವತ್ರಿಕವಾಗಿ ವರ್ಜಿಸಿದ್ದನೆಂದು ಜ್ಞಾಪಕದಲ್ಲಿಡು. ಯಾರಾದರೂ ಅವನ ಬಳಿಗೆ ಬಂದು ತತ್ವವೇತ್ತು ಗಳಿಗೆ ತಮ್ಮನ್ನು ಪರಿಚಯ ಮಾಡಿಕೊಡಬೇಕೆಂದು ಕೇಳಿಕೊಂಡಾಗ, ಆತನು ಮರುಮಾತಿಲ್ಲದೆ ಅವರನ್ನು ಜ್ಞಾನಿಗಳ ಬಳಿಗೆ ಕರೆದುಕೊಂಡು ಹೋಗಿ ಅವರವರಿಗೆ ಭೇಟಿಮಾಡಿಸುತ್ತಿದ್ದನು. ಮಧ್ಯೆ ತನ್ನ ಕಂಬಳಿ ಎಲ್ಲಿ ಹಾಸಲಿ ಎಂದು ಕೇಳುತ್ತಿರಲಿಲ್ಲ. ಅದರಂತೆ ಮೂಢರು ಎಂದಾದರೂ ಮೂಲತತ್ವಗಳ ವಿಚಾರವಾಗಿ ಚರ್ಚೆಗೆ ತೊಡಗಿದರೆ, ವಿಶೇಷವಾಗಿ ಮೌನವನ್ನೇ ಧರಿಸು. ಏಕೆಂದರೆ ಅರಗಿಸಿಕೊಳ್ಳದ ಆಹಾರವನ್ನು ಅವಸರ ದಿಂದ ಹೊರಗೆಹಾಕುವುದರಲ್ಲಿ ಅಧಿಕ ಅಪಾಯವೇ ಉಂಟು. ಯಾರಾ ದರೂ ನಿನ್ನನ್ನು ಶುದ್ಧ ಮಂಕನೆಂದು ಕರೆದಾಗ ನಿನಗೆ ರೇಗಹತ್ತದೇ ಇದ್ದರೆ, ಆಗ ನಿನ್ನ ಕೆಲಸ ಪರಿಪಕ್ವವಾಗುತ್ತಿದೆಯೆಂದು ತಿಳಿದುಕೊ. ಕುರುಬನಿಗೆ ತಾವು ಎಷ್ಟು ತಿಂದಿದ್ದೇವೆಂದು ತೋರಿಸುವುದಕ್ಕಾಗಿ ಕುರಿಗಳು ತಾವು ತಿಂದ ಹುಲ್ಲನ್ನು ಹೊರಗೆಹಾಕುತ್ತವೆಯೇನು? ತಾವು ತಿಂದುದನ್ನು ಚೆನ್ನಾಗಿ ಅರಗಿಸಿಕೊಂಡು ಆಮೇಲೆ ಅದನ್ನು ಬಾಹ್ಯದಲ್ಲಿ ಉಣ್ಣೆಯ ರೂಪವಾಗಿಯೂ ಹಾಲಿನ ರೂಪವಾಗಿಯೂ ತೋರಿಸುತ್ತವೆ. ಅದೇ ಪ್ರಕಾರವಾಗಿ ಮೂಢರೆದುರಿಗೆ ನಿನ್ನ ರೀತಿನೀತಿಗಳ ಪ್ರದರ್ಶನ ಮಾಡಬೇಡ; ಅವುಗಳನ್ನು ನಿನ್ನ ಆತ್ಮಜೀವನದಲ್ಲಿ ಜೀರ್ಣಿಸಿಕೊಂಡದ್ದ ರಿಂದ ಫಲಿತವಾಗುವ ಬಾಹ್ಯಕರ್ಮಗಳನ್ನವರಿಗೆ ತೋರಿಸು.

∴

ನೀನು ಯಾವ ಜೀವನ ಸೂತ್ರಗಳನ್ನು ಸ್ವೀಕರಿಸಿದ್ದರೂ ಕಾನೂ ನುಗಳೆಂದು ಭಾವಿಸಿ ಅವುಗಳನ್ನನುಸರಿಸು, ಅವುಗಳನ್ನು ಉಲ್ಲಂಘಿಸು ವುದು ದೈವದ್ರೋಹ ಮಾಡಿದಂತೆ ತಿಳಿ; ಇತರರು ನಿನ್ನನ್ನು ಕುರಿತು ಏನಾದರೂ ಅನ್ನಲಿ, ಅದನ್ನು ಲಕ್ಷಿಸಬೇಡ—ಅದಕ್ಕೂ ನಿನಗೂ ಯಾವ ಸಂಬಂಧವೂ ಇಲ್ಲ. ನಿನ್ನ ಬುದ್ಧಿ ನಿರುಲ್ಲಂಘನೀಯವಾದ ನಿನ್ನ ಶಾಸನವಾಗಿರಲಿ............ಸಾಕ್ರಟೀಸನು ಇದರಂತೆಯೇ ಬುದ್ಧಿಯನ್ನೇ

ಅನುಸರಿಸಿ ಪೂರ್ಣನಾದನು. ನೀನಿನ್ನೂ ಸಾಕ್ರಟೀಸನಾಗದಿದ್ದರೂ ಅವನಂತೆ ಆಗಲು ಸದಾ ಹಂಬಲಿಸಿ ಪ್ರಯತ್ನಪಡುತ್ತಿರಬೇಕು.

**ಈಶ್ವರನೊಡನೆಯೂ ಆತನ ಜಗತ್ತಿನೊಡನೆಯೂ ಮೈತ್ರಿ.**

ಎಲ್ಲಾ ವಸ್ತುಗಳೂ—ಭೂಮಿ, ಸಮುದ್ರ, ಸೂರ್ಯ, ನಕ್ಷತ್ರಗಳು. ಮತ್ತು ಭೂಮಿಯ ಮೇಲಿನ ಗಿಡಮರ ಪ್ರಾಣಿಗಳು—ವಿಶ್ವದ ನಿಯಮಗಳಿಗೆ ತಲೆವಾಗಿ ಅವುಗಳಿಗೆ ಅನುಸಾರವಾಗಿ ನಡೆಯುತ್ತವೆ. ನಮ್ಮ ಶರೀರವೂ ಕೂಡ ರೋಗ, ಆರೋಗ್ಯ, ಪ್ರಾಯ, ಮುದುಕತನ—ಇವೇ ಮೊದಲಾದ ಅನೇಕ ನಿಯಮಿತ ವ್ಯತ್ಯಾಸಗಳನ್ನು ಹೊಂದುವುದರಲ್ಲಿ ಅದೇ ಕಟ್ಟಳೆಗಳನ್ನು ಅನುಸರಿಸುತ್ತದೆ. ಹೀಗಿರುವಲ್ಲಿ ನಮ್ಮ ಸ್ವಾಧೀನದಲ್ಲಿಯೇ ಇರತಕ್ಕ ನಮ್ಮ ಬುದ್ಧಿ ಮಾತ್ರ ಈ ಜಗದ್ರಾಜ್ಯದಮೇಲೆ ದಂಗೆ ಏಳಬೇಕೆನ್ನುವುದು ಯಾವ ನ್ಯಾಯ? ಈ ರಾಜ್ಯಭಾರವಾದರೋ ಬಹಳ ಬಲವುಳ್ಳದ್ದು ಮತ್ತು ಉತ್ತಮವಾದದ್ದು, ಪೂರ್ಣಪ್ರಪಂಚದ ಶ್ರೇಯವನ್ನರಿತು ನಮ್ಮನ್ನಾಳುವುದರಿಂದ ನಮ್ಮ ನಿಜವಾದ ಮೇಲ್ಮೆಯನ್ನು ದೊರಕಿಸಿಕೊಡಬಲ್ಲುದು. ಇಷ್ಟರಮೇಲೆ, ಅದರ ವಿರೋಧವನ್ನು ಕಟ್ಟಿಕೊಂಡರೆ ನಮ್ಮ ವರ್ತನ ಅವಿವೇಕವೆಂದೆನಿಸಿ ವ್ಯರ್ಥ ಹೋರಾಟವನ್ನು ತರುವುದಲ್ಲದೆ, ನಮ್ಮನ್ನು ದುಃಖಕ್ಕೂ ನೋವಿಗೂ ಈಡುಮಾಡುತ್ತದೆ.

∴

ನನ್ನ ಭಾಗಕ್ಕೇನಾದರೂ ಬರಲಿ, ನನಗದು ಒಳ್ಳೆಯದಾಗುವಂತೆ ಮಾಡಿಕೊಳ್ಳುವೆನು. ವ್ಯಾಧಿ ಬರಲಿ, ಸಾವು ಬರಲಿ, ದಾರಿದ್ರ್ಯ ಬರಲಿ, ಅಪವಾದ ಬರಲಿ, ಜೀವನದಲ್ಲಿ ನಿರಂತರವಾದ ಕಷ್ಟನಷ್ಟಗಳು ಬರಲಿ; ದೇವರಾಣೆಗೂ ಇವುಗಳು ಯಾವುದು ಬಂದರೂ ಅದನ್ನು ಸತ್ಪರಿಣಾಮಕಾರಿಯಾಗುವಂತೆ ಮಾಡಿಕೊಳ್ಳುವೆನು. "ಸಾವಿನಿಂದೇನು ಮಾಡುವೆ?" ಅದೇನು ಹಾಗಂದರೆ, ಅದನ್ನು ಒಂದು ಭೂಷಣವನ್ನಾಗಿ ಮಾಡಿಕೊಳ್ಳುವೆನು; ವಿಶ್ವದ ಸಂಕಲ್ಪವನ್ನರಿತ ಮನುಷ್ಯನು—ಅದಕ್ಕನುಸಾರವಾಗಿ ನಡೆಯಬೇಕೆಂದಿರುವ ಪುರುಷನು—ಹೇಗಿರುವನೆಂಬುದನ್ನು ಕಾರ್ಯತಃ

ತೋರಿಸಲು ಅನುಕೂಲವಾದ ಸಂದರ್ಭವಲ್ಲವೇ ಅದು? "ರೋಗ ರುಜಿನಗಳಿಂದೇನು ಮಾಡುವೆ?" ಅದರ ಸ್ವಭಾವವನ್ನು ಪ್ರದರ್ಶಿಸುವೆ. ರೋಗಬಂದರೂ ನಾನು ಎಷ್ಟು ಅಟ್ಟಹಾಸದಿಂದಿರಬಲ್ಲೆ ಎಂದು ತೋರಿಸುವೆ; ಚಿತ್ತಪ್ರಶಾಂತತೆಯಿಂದಲೂ ಆನಂದದಿಂದಲೂ ಕೂಡಿರುವೆ; ನನ್ನ ವೈದ್ಯನಿಗೆ ಮೊರೆಯಿಡುವುದಿಲ್ಲ, ಮರಣ ಬೇಗಬರಲೆಂದು ಹಾರೈಸುವುದೂ ಇಲ್ಲ. ಇನ್ನೂ ಏನಾದರೂ ಕೇಳಬೇಕೋ? ನೀನು ಏನೇ ತಂದುಕೊಡು, ಅದನ್ನು ಸುಖಕರವಾಗಿಯೂ, ಸಂಪತ್ಕರವಾಗಿಯೂ, ಪೂಜ್ಯವಾಗಿಯೂ ಯೋಗ್ಯವಾಗಿಯೂ ಮಾಡಿಕೊಳ್ಳುವೆನು.

"ಹಾಗಲ್ಲ, ಕಾಯಿಲೆ ವಿಚಾರದಲ್ಲಿ ಮಾತ್ರ ಜೋಕೆಯಾಗಿರು--ಅದು ಕೇಡು." "ಮೂರೆಂಬುದು ನಾಲ್ಕರಂತೆ ಕಂಡೀತು, ಜೋಪಾನ, ಅದು ಕೇಡು" ಎಂದು ಎಚ್ಚರಿಕೆ ಕೊಟ್ಟ ಹಾಗಾಯಿತು! ಕೇಡು ಹೇಗಯ್ಯಾ, ಹೇಳು, ನೋಡೋಣ. ನ್ಯಾಯವಾಗಿ ಅದನ್ನು ಯಾವ ರೀತಿಯಲ್ಲಿ ಭಾವಿಸಬೇಕೋ ಹಾಗೆ ಭಾವಿಸಿದ ಮೇಲೆ ಅದರಿಂದ ನನಗೇನಪಾಯ ತಟ್ಟುವುದು—ಅದರಿಂದ ನನಗೆ ಅನುಕೂಲವೇ ಅಲ್ಲವೆ? ಆದುದರಿಂದ ದಾರಿದ್ರ್ಯ, ರೋಗ, ರಾಜಕೀಯ ಅವ್ಯವಸ್ಥೆ—ಇವುಗಳ ವಿಚಾರವಾಗಿ ನಾನು ನ್ಯಾಯವಾದ ರೀತಿಯಲ್ಲಿ ಎಣಿಕೆ ಹೊಂದಿದ್ದರೆ ಸಾಲದೇ? ಅಂದಮೇಲೆ ಬಾಹ್ಯವಸ್ತುಗಳಲ್ಲಿ ಶುಭಾಶುಭಗಳನ್ನೇಕೆ ಅರಸಬೇಕು?[೧]

∴

ನಿನಗೆ ಉಳಿದ ಯಾವ ಸುಖಗಳಿಲ್ಲದಿದ್ದರೂ ಚಿಂತೆಯಿಲ್ಲ; ಈಶ್ವರನ ಅಡಿಯಾಳಾಗಿ, ಮಾತಿನಲ್ಲಿ ಮಾತ್ರವಲ್ಲ,—ಕಾರ್ಯರಂಗದಲ್ಲಿ—

೧. ಇವುಗಳೆಲ್ಲವೂ--ಹಾಗೆಯೇ ಐಶ್ವರ್ಯ, ಆರೋಗ್ಯ, ಸನ್ಮಾನ ಮುಂತಾದುವುಗಳೊಂದಿಗೆ— ಧರ್ಮಜೀವನದೃಷ್ಟಿಯಲ್ಲಿ ಕೇವಲ ಔಪೇಕ್ಷಿಕ ವಸ್ತುಗಳು (adiaphora, indifferent goods) ಎಂದು ಸ್ಟೋಯಿಕರು ಭಾವಿಸಿದರೆಂಬುದನ್ನು ಮರೆಯಕೂಡದು., ಚಿತ್ತಸ್ವಾಸ್ಥ್ಯತೆಯೇ—ಅದರ ಅನುವಾದವಾದ ಸಚ್ಛೀಲವೇ— ನಮ್ಮ ಪರಮಶ್ರೇಯ.

ಉತ್ತಮ ಪುರುಷನಾಗಿ, ವಿವೇಕಿಯಾಗಿ, ಬಾಳುವ ಆನಂದವೇ ಸಾಕು. ಇಂತಹ ಜೀವನವನ್ನು ಗಳಿಸಿರುವುದೆಂದರೆ ಯಾರಿಗೆ ತಾನೇ ಹೆಮ್ಮೆಯಾಗದು! ಇತರರು ತಮ್ಮ ಪಂಥಗಳಲ್ಲಿ ಗಂಭೀರವಾಗಿ ತರ್ಕಮಾಡಿ ಸಮಸ್ಯೆಗಳ ರೂಪದಲ್ಲಿ ಹೇಳುತ್ತಿರುವುದನ್ನು ನಾನು ಅನುಷ್ಠಾನದಲ್ಲಿ ಉದಹರಿಸುತ್ತಿದ್ದೇನೆ. ಅವರು ಪ್ರಸಂಗಮಾಡಿ, ವಾದಜಲ್ಪಗಳನ್ನು ಹೂಡಿ, ಕೊಂಡಾಡುತ್ತಿರುವ ಗುಣಾತಿಶಯಗಳನ್ನು ನಾನು ನನ್ನ ಜೀವನದಲ್ಲೇ ಅನುಸಂಧಾನ ಮಾಡಿದ್ದೇನೆ. ನನ್ನ ಜೀವನ ಹೀಗೆ ಸುಷ್ಠುಗೊಂಡಿರುವುದನ್ನು ಸ್ಯೂಸನ ಕೃಪೆಯಿಂದ ನಾನೇ ತಿಳಿದುಕೊಳ್ಳಬಲ್ಲೆ; ಮತ್ತು ಆತನ ದಯೆಯಿಂದ ನಾನು ಯೋಗ್ಯನಾದ ಬಂಟನಾಗಿರುವೆನೆ, ಪಟ್ಟಣಿಗನಾಗಿರುವೆನೆ; ಮನಸ್ಸಿಗೆ ಅಜೇಯವಾದ ವಸ್ತುಗಳು ಯಾವುವೂ ಇಲ್ಲವೆಂದು ಇತರರಿಗೆ ತೋರಿಸಿಕೊಡಲು ಅರ್ಹನಾದ ಸಾಕ್ಷಿಯಾಗಿರುವೆನೆ—ಎಂಬುದನ್ನು ಸ್ಯೂಸನೇ ಕಂಡುಕೊಂಡಿದ್ದಾನೆ. ನಮ್ಮ ಭಯಭ್ರಾಂತಿಗಳೆಲ್ಲಾ ನಿರಾಧಾರವಾದುವು, ನಮ್ಮ ಆಶಾಪಾಶಗಳೆಲ್ಲಾ ನಿರರ್ಥಕವಾದುವು. ಬಾಹ್ಯವಸ್ತುಗಳಲ್ಲಿ ನಮ್ಮ ಶ್ರೇಯವಿಲ್ಲ, ನಮ್ಮ ಆತ್ಮೀಯ ಜೀವನದಲ್ಲೇ ನಾವದನ್ನು ಅರಸಬೇಕು — ಅಲ್ಲಿಯೇ ಸಿಕ್ಕದಿದ್ದರೆ ನಮಗದು ಮತ್ತೆಲ್ಲಿಯೂ ಸಿಕ್ಕದು. ಇದನ್ನು ಮನಗಾಣಿಸುವುದಕ್ಕೋಸ್ಕರ ಸ್ಯೂಸನು ನನ್ನನ್ನು ಇಂದು ಇಲ್ಲಿಗೆ ಕರಸುವನು, ನಾಳೆ ಅಲ್ಲಿಗೆ ಕಳುಹಿಸುವನು; ಜನರು ನೋಡಿ ತಿಳಿದುಕೊಳ್ಳಲಿ ಎಂದು ನನ್ನನ್ನು—ಬಡವನಾದ, ಅಬಲನಾದ, ರೋಗಪೀಡಿತನಾದ ನನ್ನನ್ನು—ಮುಂದಿಯ ಮುಂದೆ ಕೂರಿಸುವನು; ಗಯರಾಸಿಗೆ ಗಡೀಪಾರು ಮಾಡುವನು; ಸೆರೆಮನೆಗೆ ಕರೆದೊಯ್ಯುವನು: ನನ್ನನ್ನು ಕಂಡರೆ ಆತನಿಗೆ ಆಗದೆಂತಲ್ಲ—ರಾಮ ರಾಮ, ಸ್ವಾಮಿನಿಷ್ಠೆಯೇ ಜೀವನಸೂತ್ರವೆಂದು ನಂಬಿರುವ ದಾಸಾನುದಾಸನನ್ನು ಯಾವ ದಣಿ ತಾನೆ ದ್ವೇಷಿಸುವನು ?—ನನ್ನನ್ನು ಉಪೇಕ್ಷೆಮಾಡುತ್ತಾನೆಂತಲೂ ಅಲ್ಲ, ತನಗೆ ಸೇರಿದ ಅಣುರೇಣುತೃಣಕಾಷ್ಠವನ್ನೂ ಆತನು ಉಪೇಕ್ಷೆಮಾಡುವವನಲ್ಲ — ನನ್ನ ಆತ್ಮಸಾಧನೆಯಾಗಲೆಂದೇ, ಇತರರಿಗೆ ನನ್ನ ಸಾಕ್ಷಿಕೊಡಬೇಕೆಂದೇ, ಆತನು ಹೀಗೆ ಮಾಡುವುದು. ಇಂಥಾ ಸೇವೆಗೆ ನನ್ನನ್ನು ನೇಮಿಸಿರಲಾಗಿ, ಆ ನನ್ನ ದೇವ

ದೇವನ ಆಣತಿ ಅಪ್ಪಣೆಗಳಿಗೇ ನನ್ನ ತನುಮನವನ್ನೆಲ್ಲಾ ಧಾರೆಯೆರೆಯದೆ, ನಾನೆಲ್ಲಿದ್ದೇನೆ, ಯಾರೊಡನಿದ್ದೇನೆ, ನನ್ನನ್ನು ಕುರಿತು ಜನರೇನೆಂದು ಕೊಳ್ಳುತ್ತಾರೆ, ಎಂಬ ಈ ಅಲ್ಪವಿಚಾರಗಳಿಗೆ ನಾನು ಕಿವಿಗೊಡಲೆ?

## ೨ ಚಕ್ರವರ್ತಿ ಮಾರ್ಕಸ್ ಆರೀಲಿಯುಸ್ಸಿನ ಧ್ಯಾನಕುಸುಮಾಂಜಲಿ

ಎಪಿಕ್ಟೆಟಸ್ಸನೇನೋ ಗುಲಾಮನಾಗಿ ಹುಟ್ಟಿ ಬಿಡುಗಡೆಹೊಂದಿದವನಾದುದರಿಂದ ಪ್ರಪಂಚದ ಹಂಬಲನ್ನು ತೊರೆದು ಸ್ಟೋಯಿಕ್ ಸನ್ನ್ಯಾಸಿಯಾಗಿ ಆತ್ಮೋನ್ನತಿಯನ್ನು ಪಡೆಯುವುದರ ಮೂಲಕ ತನ್ನ ಕೀಳು ಜನ್ಮದ ಸ್ಮರಣೆಯನ್ನು ತೊಡೆದುಹಾಕಲು ಪ್ರಯತ್ನಪಟ್ಟನೆಂದು ಊಹಿಸಬಹುದು. ಇದಕ್ಕನುಸಾರವಾಗಿ ಇವನ ಉಪದೇಶದಲ್ಲಿ ಒಂದು ವಿಧವಾದ ಕರ್ಕಶವಾಣಿ ಕೇಳಿಬರದೇ ಇರುವುದಿಲ್ಲ. ಆದರೆ ವಿಶಾಲವಾದ ರೋಮ್ ಚಕ್ರಾಧಿಪತ್ಯಕ್ಕೆ ಚಕ್ರವರ್ತಿಸಾರ್ವಭೌಮನೆನಿಸಿದ ಮಾರ್ಕಸ್ ಆರೀಲಿಯುಸ್ಸನು ತನ್ನ ಭೋಗಭಾಗ್ಯಗಳನ್ನೆಲ್ಲಾ ಮಾನಸಿಕವಾಗಿ ತ್ಯಜಿಸಿ, ನಿಷ್ಕಾಮಕರ್ಮನಾಗಿ, ಜನಕರಾಜನಂತೆ ಯಥಾರ್ಥ ವೈರಾಗಿಯಾದುದು ಪರಮಾಶ್ಚರ್ಯಜನಕವಾದ ವಿಷಯವಲ್ಲವೇ? ಪ್ರಪಂಚ ತ್ಯಾಗವೆಂದರೆ ಹೆಂಡತಿ ಮಕ್ಕಳನ್ನು ಬಿಟ್ಟು ಕಾಡಿಗೆ ಓಡಿಹೋಗಿ ಗುಹೆಯಲ್ಲಿ ಕುಳಿತುಕೊಳ್ಳುವುದೆಂದು ಸಾಮಾನ್ಯವಾಗಿ ಜನರು ತಿಳಿಯುವರು. ಆ ವಿಧವಾದ ತ್ಯಾಗಮಾಡುವವರೂ ಮಹಾತ್ಮರೇ — ಅವರನ್ನು ಅಲ್ಲಗಳೆಯುವ, ನಾವೇ ಬಹುಬುದ್ಧಿವಂತರೆಂದು ತಿಳಿದುಕೊಂಡಿರುವ, ನಮ್ಮಂಥವರಲ್ಲಿ ಎಷ್ಟು ಜನ ಒಪ್ಪೊತ್ತಿನ ಊಟವನ್ನು ತ್ಯಾಗಮಾಡಿರಲಾಪೆವು? ಆದರೂ ಶ್ರೀಕೃಷ್ಣನು ಹೇಳಿದಂತೆ, ಸ್ಟೋಯಿಕರು ಹೇಳಿದಂತೆ, ಪ್ರಪಂಚದಲ್ಲೇ ಇದ್ದು, ಸಂಸಾರದಲ್ಲೇ ಇದ್ದು, ಅದರ ವ್ಯಸನಗಳಲ್ಲಿ ನಮ್ಮಲ್ಲಿರಬಹುದಾದ ಅಲ್ಪಸ್ವಲ್ಪ ಪಾರಮಾರ್ಥಿಕ ಬುದ್ಧಿಯನ್ನೂ ಪೂರ್ಣವಾಗಿ ಅಳಿಸಗೊಡಿಸದೆ, ಅದನ್ನು ವೃದ್ಧಿಪಡಿಸಿಕೊಂಡು, ಕರ್ತವ್ಯಕರ್ಮವನ್ನು ಮಾಡುತ್ತಾ, ಫಲಭೋಗವಿರಾಗರಾಗಿ, ಆತ್ಮಪ್ರಕರ್ಷವನ್ನು ಹೊಂದುವವರು ಕೇವಲ ವಿರಳರೆಂದೇ ಹೇಳಬೇಕು. ಅದರಲ್ಲಿಯೂ ಪ್ರಭುಗಳಾದವರು ಇಂತಹ ಮಾರ್ಗವನ್ನು ಹಿಡಿಯುವುದೆಂದರೆ ಅವರನ್ನು ಅಂಶ

ಪುರುಷರೆಂದೇ ಭಾವಿಸಬೇಕು. ಅಂತಹ ಮಹಾನುಭಾವರಲ್ಲಿ ಮಾರ್ಕಸ್ ಆರೀಲಿಯಸ್ ಚಕ್ರವರ್ತಿ ಒಬ್ಬನು. ಈತನು ತನ್ನ ಆಧ್ಯಾತ್ಮಿಕ ಅನುಭವಗಳನ್ನೂ ಆಲೋಚನೆಗಳನ್ನೂ ತನ್ನಂತಹ ಇತರ ಮುಮುಕ್ಷುಗಳ ಉಪಯೋಗಾರ್ಥವಾಗಿ ಬರೆದಿಟ್ಟಿದ್ದಾನೆ. "ಧ್ಯಾನಮಂಜರಿ" (Meditations) ಎಂದು ಈತನ ಪುಸ್ತಕಕ್ಕೆ ಹೆಸರು. ಆ ಧ್ಯಾನಕುಸುಮಗಳಲ್ಲಿ ಕೆಲವನ್ನು —ವಾಚಕರೂ ಅವುಗಳ ಕಂಪನ್ನು ಆಘ್ರಾಣಿಸಿ ಆನಂದಪಡಲಿ ಎಂಬ ಉದ್ದೇಶದಿಂದ—ಕೆಳಗೆ ಕೊಟ್ಟಿದೆ.

### ಪ್ರಕೃತಿಗನುಸಾರವಾಗಿ ನಡೆ

ನಿನ್ನ ಪರಮಶ್ರೇಯ ಯಾವುದೋ ಅದನ್ನು ಪೂರ್ಣ ಮನಸ್ಸಿನಿಂದ ಸ್ವೀಕರಿಸಿ ಭದ್ರವಾಗಿ ಹಿಡಿದುಕೊ. ಪರಮಶ್ರೇಯ ಯಾವುದು? ಯಾವುದು ಅತ್ಯಂತ ಹಿತಕರವಾದುದೋ ಅದೇ ಪರಮಶ್ರೇಯವೆಂದು ಲೋಕರೂಢಿ ಇದೆ. ಹಿತಕರವೆಂದರೆ ಜ್ಞಾನಬದ್ಧನಾದ ಪುರುಷನಿಗೆ ಲಾಭದಾಯಕವಾದುದೆಂದು ಅರ್ಥಮಾಡುವುದಾದರೆ ಅದನ್ನು ಅಂಗೀಕರಿಸು, ಬಿಡಬೇಡ; ಅದುಬಿಟ್ಟು ಮಾನವನ ಪಶುಸ್ವಭಾವಕ್ಕೆ ಹಿತಕರವಾದುದೆಂದು ಹೇಳುವುದಾದರೆ ಅದನ್ನು ತಿರಸ್ಕರಿಸು. ಈ ಸಿದ್ಧಾಂತವನ್ನು ಹಿಡಿದಮೇಲೆ ಅದನ್ನು ಕೆಡಿಸುವ ಬಾಹ್ಯಪ್ರಪಂಚದ ಎಂತಹ ರಂಗು ಮಾಯೆ ಮರುಳು ಮೋಹಗಳು ಕಣ್ಮನಗಳನ್ನು ಸೆಳೆದರೂ ಅವುಗಳನ್ನೆಲ್ಲಾ ದೂರವಾಗಿಡು; ಆಗಲೇ ಸತ್ಯವನ್ನು ಸಮೀಕ್ಷಿಸಲು ನಿನಗೆ ಶಕ್ತಿ ಬರುವುದು.

∴

ಜ್ಞಾನಬದ್ಧನಾದ ಪುರುಷನ ಜೀವನದ ಗುರಿಯೆಂದರೆ—ಯಾವುದನ್ನೂ ದುಡುಕಿಮಾಡದಿರುವುದು, ಎಲ್ಲರಲ್ಲಿಯೂ ದಯಾರ್ದ್ರಹೃದಯನಾಗಿರುವುದು, ಮತ್ತು ಸಕಲ ವಿಚಾರಗಳಲ್ಲಿಯೂ ದೈವೇಚ್ಛೆಗೆ ಅಧೀನನಾಗಿರುವುದು. ಆದುದರಿಂದ ಉಳಿದ ಧರ್ಮಗಳೆಲ್ಲವನ್ನೂ ಪರಿತ್ಯಜಿಸಿ ಈ ಒಂದೆರಡು ಜೀವನ ಸೂತ್ರಗಳನ್ನು ಬಿಗಿಯಾಗಿ ಹಿಡಿದುಕೊ. ಇವೆಲ್ಲಕ್ಕೂ ಮೊದಲು ಯಾವ ಮನುಷ್ಯನೂ ನ್ಯಾಯವಾಗಿ ಬದುಕುವುದೆಂದರೆ ವರ್ತಮಾನದಲ್ಲಿಯೇ ಎಂಬುದನ್ನು ಮರೆಯಬೇಡ—ಆ ವರ್ತಮಾನವೋ

ಒಂದೇ ಒಂದು ಕ್ಷಣ. ಉಳಿದುದೆಲ್ಲವೂ ಆಗಲೇ ಕಳೆದು ಹೋದದ್ದು, ಇಲ್ಲವೆ ಅನಿಶ್ಚಯವಾದದ್ದು. ಹೀಗೆ ಬದುಕುವ ಕಾಲದ ಅವಧಿ ಬಹು ಕೊಂಚ; ಸ್ಥಾನ, ಪೃಥ್ವಿಯ ಎಲ್ಲಿಯೋ ಒಂದು ಮೂಲೆ; ಇನ್ನು ಸತ್ತ ಮೇಲೆ ಮನುಷ್ಯನಪಾಲಿಗೆ ನಿಲ್ಲುವ ಯಶಸ್ಸೋ ಅಂದರೆ ಅದೂ ಬಹಳ ಕೊಂಚವೇ. ಅದು ಬರುವುದೇ ಬಹಳ ಕೊಂಚ—ಇನ್ನು ಬುದ್ಧಿಯಿಲ್ಲದ ಮರ್ತ್ಯಮಾನವರು ಪರಂಪರೆಯಾಗಿ ಅದನ್ನು ಕಾದಿಡಲು ಪ್ರಯತ್ನಪಡುತ್ತಾರೆ! ತಾವು ಜಾಗ್ರತೆಯಾಗಿಯೇ ಸಾಗಿಹೋಗುವರೆಂಬು ಗೊತ್ತಿಲ್ಲವೇನೋ, ಪಾಪ! ತಾವೇ ಬದುಕಿರುವಾಗ ವಾಸ್ತವಿಕವಾಗಿ ತಾವು ಯಾರೆಂಬುದು ತಮಗೆ ಗೊತ್ತಿಲ್ಲ, ಇನ್ನು ಎಲ್ಲಿಯೋ ಜನ್ಮಾಂತರದಲ್ಲಿ ಯಾವಾಗಲೋ ಆಗಿಹೋದವನ ವಿಚಾರ ಎಷ್ಟುಮಾತ್ರ ಬಲ್ಲರಿವರು!

∴

ನಿನಗೆ ವಿಹಿತವಾದುದೆಲ್ಲವೂ ನನಗೂ ವಿಹಿತವೇ, ಓ ವಿಶ್ವವೇ! ನಿನಗೆ ಸಕಾಲವಾದುದೊಂದೂ ನನಗೆ ಅಕಾಲವಾದುದಲ್ಲ. ನಿನ್ನ ಋತುಗಳು ತರುವುದೆಲ್ಲಾ ನನಗೆ ಶುಭಫಲಗಳೇ, ಓ ಜಗವೇ! ನಿನ್ನಿಂದಲೇ ಸಮಸ್ತ ವಸ್ತುಗಳ ಉತ್ಪತ್ತಿ, ನಿನ್ನಲ್ಲಿಯೇ ಸಮಸ್ತ ವಸ್ತುಗಳ ಸ್ಥಿತಿ, ನಿನ್ನಲ್ಲಿಗೇ ಸಮಸ್ತವಸ್ತುಗಳ ಗತಿ! ಅಥೇನ್ಸ್ ನಗರದ ಪುರನಿವಾಸಿ ತನ್ನ ಪಟ್ಟಣದ ಸೊಬಗನ್ನು ನೋಡಿ, "ಓ ನನ್ನ ಪ್ರಿಯಪಟ್ಟಣವೇ!" ಎಂದು ಹಾತೊರೆಯುವನು; ನಿನ್ನನ್ನು ನೋಡಿ ನಾನು "ಈಶ್ವರನ ಪ್ರೇಮನಗರವೇ!" ಎಂದು ಹೇಳಲಾರೆನೆ?

∴

ಅದೃಷ್ಟದಿಂದ ನಿನಗೆ ವಿಧಿಸಿರುವ ಸ್ಥಿತಿಗತಿಸಂಭವಗಳಿಗನುಸಾರವಾಗಿ ನಡೆದುಕೊ; ದೈವಘಟನೆಯಿಂದ ನೀನು ಯಾರೊಡನೆ ವಾಸಮಾಡಬೇಕಾಗಿದೆಯೋ ಅವರನ್ನು ಪ್ರೀತಿಸು—ಹೃದಯ ಪೂರ್ವಕವಾಗಿಯೂ ಪ್ರೀತಿಸು. ಒಂದು ಆಯುಧ, ಒಂದು ಉಪಕರಣ, ಒಂದು ಪಾತ್ರೆ—ಯಾವುದೇ ಜಡಪದಾರ್ಥವಾಗಲಿ ಅದನ್ನು ರಚಿಸಿ ಸಜ್ಜುಗೊಳಿಸಿದ ಬುದ್ಧಿಮಹಿಮೆ ಈಗ ಅದೃಶ್ಯವಾಗಿ ಕಡೆಗೆ ನಾಶವಾಗಿದ್ದರೂ, ಅದನ್ನು ಮಾಡಿದ ಉದ್ದೇಶವನ್ನು ಸಾಧಿಸಲು ಉಪಯುಕ್ತವಾಗಿದ್ದರೆ

ಅದು ಸರಿಯಾದ ಸ್ಥಿತಿಯಲ್ಲಿಯೇ ಇದೆ ಎಂದು ಹೇಳಬೇಕು. ಸ್ವಾಭಾವಿಕ ವಸ್ತುಗಳಲ್ಲಿಯೋ ಅಂದರೆ ಅವುಗಳನ್ನು ರಚಿಸಿ ಹೊಂದಿಸಿದ ಚೈತನ್ಯ ಅವುಗಳಲ್ಲಿಯೇ ಇನ್ನೂ ನೆಲಸಿರುತ್ತದೆ. ಈ ಕಾರಣದಿಂದ ಆ ಚೈತನ್ಯ ವನ್ನು ನಾವು ಹೆಚ್ಚು ಗೌರವಿಸಬೇಕು, ಮತ್ತು ಅದರ ಉದ್ದೇಶಕ್ಕನುಸಾರ ವಾಗಿ ನಾವು ನಡೆಯುವವರಾದರೆ ಸಕಲವೂ ನಮಗನುಕೂಲವಾಗಿಯೇ, ನಮ್ಮ ಇಷ್ಟದಂತೆಯೇ, ಏರ್ಪಟ್ಟಿದೆಯೆಂದು ಭಾವಿಸಲು ಕಾರಣ ದೊರೆಯುವುದು........

∴

ಜೀವನದಲ್ಲಿ ನನಗೆ ಪ್ರಾಪ್ತವಾಗುವ ಕಷ್ಟಸುಖಗಳನ್ನು ಪ್ರತ್ಯೇಕ ವಾಗಿ ದೇವತೆಗಳು ಮೊದಲೇ ಆಲೋಚನೆಮಾಡಿ ನಿಷ್ಕರ್ಷಿಸಿದ್ದಾರೆಂದು ಊಹಿಸುವುದಾದರೆ, ಅವರ ನಿಷ್ಕರ್ಷೆ ಪೂರ್ವಾಪರವಿವೇಕಯುಕ್ತವಾದು ದೆಂದೂ ನ್ಯಾಯವಾದುದೆಂದೂ ನಂಬಿ ಅದಕ್ಕೆ ನಾನು ಸಮ್ಮತಿಸಬೇಕು. ದೇವತೆಗಳು ಅವಿವೇಕಿಗಳೆಂದು ಊಹಿಸುವುದುತಾನೆ ಹೇಗೆ? ಇಲ್ಲ ನನಗೆ ಅನ್ಯಾಯಮಾಡಬೇಕೆಂದು ಅವರೇಕೆ ಸಂಕಲ್ಪಮಾಡಬೇಕು? ಅದರಿಂದ ಅವರಿಗಾಗಲಿ, ಅವರು ವಿಶೇಷ ಗಮನಕೊಟ್ಟು ರಕ್ಷಿಸುವ ಪ್ರಪಂಚಕ್ಕಾಗಲಿ, ಏನು ಲಾಭ? ನನ್ನ ಒಬ್ಬನ ವಿಷಯವನ್ನೇ ಕುರಿತು ಅವರು ಪ್ರತ್ಯೇಕವಾಗಿ ಆಲೋಚನೆಮಾಡಿರಲಾರರೆಂದು ಹೇಳುವೆಯೋ? ಹಾಗಾದರೆ ಆದ್ಯಂತಜಗತ್ತಿನ ಕ್ಷೇಮಲಾಭಗಳನ್ನು ಕುರಿತು ಅವರು ವಿಚಾರಮಾಡಿಯೇ ಇರಬೇಕು; ಅಲ್ಲಿಗೂ ಅದಕ್ಕನುಸಾರವಾಗಿ ನನ್ನ ಪಾಲಿಗೆ ಒದಗಬಹುದಾದ ಸಂಭವಗಳನ್ನು ನಾನು ನ್ಯಾಯವಾದುವೆಂದು ನಂಬಿ ಮನಃಪೂರ್ವಕವಾಗಿ ಅಂಗೀಕರಿಸಿಯೇ ತೀರಬೇಕು. ಕಡೆಗೆ ಆದ್ಯಂತಜಗತ್ತಿನ ವಿಚಾರವಾಗಿಯೂ ಯೋಚಿಸಿರಲಾರರು, ಪ್ರತ್ಯೇಕ ವ್ಯಕ್ತಿಗಳ ವಿಷಯವಾಗಿ ಮೊದಲೇ ಇಲ್ಲ, ಎಂದು ಹೇಳುವುದಾದರೆ, ಹೋಗಲಿ, ನನಗೆ ಸಂಬಂಧಪಟ್ಟ ವಿಷಯಗಳನ್ನು ಕುರಿತು ನಾನೇ ಆಲೋಚನೆಮಾಡಲು ನನಗೆ ಬಾಧ್ಯವಿದೆಯಲ್ಲಾ — ಅದಕ್ಕಾದರೂ ನಾನು ದೇವರನ್ನು ವಂದಿಸಬೇಕು. ನಾನು ವಿಚಾರಮಾಡುವುದೆಲ್ಲಾ ನನಗೆ ಅತ್ಯಂತ ಲಾಭಕರವಾದುದು ಯಾವುದು ಎಂಬುದನ್ನು ಕುರಿತದ್ದು.

ಪ್ರತಿಯೊಬ್ಬನಿಗೂ ಅವನವನ ಪ್ರಕೃತಿ—ಸ್ವಭಾವ—ಧರ್ಮಗಳಿಗನು ಸಾರವಾದುದು ಯಾವುದೋ ಅದೇ ಅವನಿಗೆ ಅತ್ಯಂತ ಲಾಭಕರ. ನನ್ನ ಸ್ವಭಾವವೆಂದರೆ—ನನ್ನ ಕರ್ಮಗಳಲ್ಲೆಲ್ಲಾ ಬುದ್ಧಿಬದ್ಧನಾಗಿರ ತಕ್ಕದ್ದು, ಮತ್ತು ಪಟ್ಟಣಿಗರಲ್ಲಿ ಒಬ್ಬನಾಗಿ ಯೋಗ್ಯನಾಗಿರಬೇಕಾದುದ ರಿಂದ ಇತರ ಪುರನಿವಾಸಿಗಳೊಡನೆ ಸ್ನೇಹಭಾವದಿಂದಲೂ ಸಹೃದಯ ನಾಗಿಯೂ ವರ್ತಿಸತಕ್ಕದ್ದು. ಹಾಗಾದರೆ ನನ್ನ ಪುರ ಯಾವುದು? ನಾನು ಆಂಟೋನಿಯಸ್ ಎನ್ನುವ ದೃಷ್ಟಿಯಲ್ಲಿ ನನ್ನ ನಗರವೂ ದೇಶವೂ ರೋಮ್; ಒಬ್ಬ ಮಾನವನೆನ್ನುವ ದೃಷ್ಟಿಯಲ್ಲಿ ಸಮಗ್ರಪ್ರಪಂಚವೇ ನನ್ನ ವಾಸಸ್ಥಳ. ಆದುದರಿಂದ ಸಮಗ್ರಪ್ರಪಂಚಕ್ಕೂ ಹಿತವಾದುದೂ ಅನುಕೂಲವಾದುದೂ ಲಾಭದಾಯಕವಾದುದೂ ಯಾವುದೋ ಅದೇ ನನಗೂ ಒಳ್ಳೆಯದು ಮತ್ತು ಯುಕ್ತವಾದದ್ದು.

∴

ವಿಶ್ವವೆಂಬ ಜೀವಿಯ ಒಂದವಯವ ನಾನು. ಆದುದರಿಂದ ಸಾಮಾ ನ್ಯವಾಗಿ ಸಮಗ್ರ ಪ್ರಪಂಚಕ್ಕೂ ಪ್ರಾಪ್ತವಾಗುವ ಅದೃಷ್ಟದಲ್ಲಿ ನನ್ನ ಪಾಲಿಗೆ ಬಂದದ್ದನ್ನು ಕುರಿತು ನಾನು ಗೊಣಗುಟ್ಟುವುದಿಲ್ಲ. ಏಕೆಂದರೆ ಸಮಷ್ಟಿಗೆ ಆದಾಯಕರವಾಗಿರುವುದೊಂದೂ ಯಥಾರ್ಥವಾಗಿಯೂ ಅದರ ಅವಯವವಾದ ವ್ಯಷ್ಟಿಗೆ ಅಪಾಯಕರವಾಗಿರಲಾರದು-ಈ ಕಾರಣ ದಿಂದ ನನಗೇನು ಸಂಭವಿಸಿದರೂ ನಾನು ಅಸಂತುಷ್ಟನಾಗುವುದಿಲ್ಲ. ಇದಲ್ಲದೆ ನನ್ನ ಜಾತಿಗೇ ಸೇರಿ ನನ್ನ ಸ್ವಭಾವವನ್ನೇ ಹೊಂದಿರತಕ್ಕ ಇತರ ಅವಯವಗಳಿಗೂ ನನಗೂ ಕೇವಲ ಸಮೀಪಬಾಂಧವ್ಯವಿರುವುದರಿಂದ ಸಮಾಜಕ್ಕೆ ಕೆಡುಕಾದುದೆಂದೂ ನಾನು ಮಾಡದಂತೆ ಜಾಗರೂಕನಾಗಿರು ವೆನು; ನನ್ನ ಆಲೋಚನೆಪ್ರಯತ್ನಗಳಲ್ಲೆಲ್ಲಾ ನನ್ನ ಬಂಧುಗಳಿಗೆ ಸಂಬಂಧಿ ಸಿದ ಸೂಚನೆಯೊಂದು ಇದ್ದೇ ಇರುವುದು. ಜನಸಾಮಾನ್ಯದ ಹಿತವೇ ನನ್ನ ಸಕಲಸಂಕಲ್ಪದ ಉದ್ದೇಶ ಮತ್ತು ಫಲ; ಅದಕ್ಕೆ ವಿರೋಧವಾದುದೆಲ್ಲ ವನ್ನೂ ನಿವಾರಿಸಲು ನನ್ನ ಸಾಮರ್ಥ್ಯವಿದ್ದಷ್ಟೂ ಪ್ರಯತ್ನಪಡುವೆನು. ಈ ವಿಷಯಗಳಲ್ಲೆಲ್ಲಾ ಈ ತೆರನಾದ ಸ್ಥಿರವಾದ ಒಂದು ನಿರ್ಧಾರಕ್ಕೆ ಬಂದ ಮೇಲೆ—ನಿನ್ನ ಜೀವನ ಸೌಖ್ಯವಾಗಿರುವುದೆಂಬುದಕ್ಕೆ ಸಂದೇಹವೇನು?

∴

ಪ್ರಪಂಚವೆಲ್ಲಾ ಒಂದೇ ಒಂದು ಸಚೇತನವಸ್ತುವೆಂದೂ ಒಂದೇ ಒಂದು ಆತ್ಮವುಳ್ಳುದೆಂದೂ ಸದಾ ಭಾವಿಸು; ಸಕಲ ಪದಾರ್ಥಗಳೂ ಏಕಮಾತ್ರ ಅಂತಃಕರಣದಲ್ಲಿ ಕೊನೆಗಂಡಿರುವುವೆಂದೂ, ಆ ಏಕಾತ್ಮದ ಚಿಂತನೆಗನುಸಾರವಾಗಿ ಅದರ ಶಕ್ತಿವಿಶೇಷದಿಂದ ಚಲಿಸುವುವೆಂದೂ ತಿಳಿ; ಪ್ರತಿಯೊಂದು ವಸ್ತುವಿನ ಸ್ಥಿತಿಗತಿಗಳಿಗೂ ಉಳಿದ ವಸ್ತುಗಳೆಲ್ಲವೂ ಕಾರಣಭೂತಗಳೆಂಬುದನ್ನೂ, ವಸ್ತುಗಳ ಪರಸ್ಪರ ಸಂಬಂಧ ಅನುಬಂಧ ಗಳಿಲ್ಲದೆ ಯಾವ ಕಾರ್ಯವೂ ಸಂಭವಿಸುವುದಿಲ್ಲವೆಂಬುದನ್ನೂ ಗ್ರಹಿಸು.

ಆತ್ಮವೆಂಬ ನಿನ್ನ ದೈವಿಕಾಂಶವನ್ನು ಬಿಟ್ಟರೆ, ಉಳಿದ ನೀನೆಂಬು ದೇನು? ಎಪಿಕ್ಟೆಟಸ್ಸನು ಸೊಗಸಾಗಿ ಹೇಳಿದಂತೆ, ಶರೀರವೆಂಬ ಶವವನ್ನು ಹೊತ್ತುಕೊಂಡು ತಿರುಗಾಡಲು ನೇಮಿಸಿರುವ ಒಂದು ನಿರ್ಭಾಗ್ಯ ಜೀವವೇ ಅಲ್ಲವೆ?

∴

ನೀನು ಸಂತೋಷಚಿತ್ತನಾಗಿ ಬದುಕಬೇಕಾದರೆ ಹತ್ತೆಂಟು ವಿಧವಾದ ವ್ಯಸನಗಳನ್ನು ಕಟ್ಟಿಕೊಳ್ಳಬೇಡ, ಎಂದು ಲೋಕರೂಢಿಯು ಮಾತಿದೆ. ಆವಶ್ಯಕವಾದ ಕೆಲಸಗಳನ್ನು ಮಾತ್ರ ಇಟ್ಟುಕೊಳ್ಳುವುದು ಪರಮಸುಖವೆಂಬುದೇನೋ ನಿಜ; ಆವಶ್ಯಕವಾದುವೆಂದರೆ ಸಮಾಜದಲ್ಲಿ ಬದುಕಬೇಕಾದ ಮನುಷ್ಯನು ಮಾಡಲೇಬೇಕಾದ್ದೆಂದು ಆತನ ಬುದ್ಧಿ ತಿಳಿಸುವ ಕರ್ಮಗಳು. ಹೀಗೆ ಮಾಡುವುದರಿಂದ ಸತ್ಕರ್ಮ ಗಳನ್ನು ನೆರವೇರಿಸುವುದರಿಂದ ಉಂಟಾಗುವ ಶಾಂತಿಯೊಂದೇ ಅಲ್ಲ, ಹತ್ತಾರುಚಿಂತೆಗಳನ್ನು ಹಚ್ಚಿಕೊಳ್ಳದೆ ಇರುವುದರಿಂದ ಫಲಿಸುವ ಸಮಾ ಧಾನವೂ ದೊರೆಯುತ್ತದೆ. ಸಾಮಾನ್ಯವಾಗಿ ನಾವು ಮಾತಾಡುವ ಅಥವಾ ಮಾಡುವ ವಿಷಯಗಳಲ್ಲಿ ಬಹುಭಾಗ ಅನವಶ್ಯಕವಾದುದು; ಇದನ್ನು ವರ್ಜಿಸಿಬಿಟ್ಟರೆ ನಮಗೆ ಬೇಕಾದಷ್ಟು ವಿರಾಮ ದೊರೆಯುವು ದಲ್ಲದೆ ತೊಂದರೆಯೂ ಬಹಳ ಕಡಮೆಯಾಗುತ್ತದೆ. ಆದುದರಿಂದ ನಾವು ಪ್ರತಿಯೊಂದು ಕೆಲಸವನ್ನು ಮಾಡುವಾಗಲೂ, ಏನಿದು, ನಾನೀಗ ತೊಡಗಿರುವ ಕೆಲಸ ಅನವಶ್ಯಕವಾದ ಕೆಲಸಗಳಲ್ಲಿ ಸೇರಿರಲಾರದೇ,

ಎಂದು ನಮಗೆ ನಾವೇ ಎಚ್ಚರಿಕೆ ಕೊಟ್ಟುಕೊಳ್ಳಬೇಕು. ಈ ರೀತಿಯಾಗಿ ಅನಾವಶ್ಯಕವಾದ ಕೆಲಸಗಳನ್ನೊಂದೇ ಅಲ್ಲ, ಅನುಪಯೋಗವಾದ ಆಲೋಚನೆಗಳನ್ನೂ ಕಲ್ಪನೆಗಳನ್ನೂ ಸಹ ಬಿಟ್ಟುಬಿಡಲು ಪ್ರಯತ್ನ ಪಡಬೇಕು. ಹಾಗೆ ಮಾಡುವುದರಿಂದ ಅವುಗಳಿಂದ ಹುಟ್ಟುವ ಅನಾವಶ್ಯಕ ವಾದ ಕರ್ಮಗಳು ತಮಗೆತಾವೇ ಬಿಟ್ಟುಹೋಗುತ್ತವೆ.

## ವಿಶ್ವದ ಸಾಮರಸ್ಯ

ಪ್ರಪಂಚದಲ್ಲಿ ಏನೇ ಘಟಿಸಲಿ, ಅದು, ವಸಂತಋತುವಿನ ಗುಲಾಬಿ ಹೂವಿನಂತೆಯೂ ಗ್ರೀಷ್ಮಋತುವಿನ ಪಕ್ವಫಲದಂತೆಯೂ, ಸರ್ವ ಸಾಧಾರಣವಾದ, ನಿರರ್ಗಳವಾದ ಪ್ರಕೃತಿವ್ಯಾಪಾರದಲ್ಲುಂಟಾಗುವ, ಒಂದು ಸಂಭವ................ಯಾವುದೇ ಆಗಲಿ ಒಂದು ಕಾರಣ ಮುಂದೆ ಹೋದರೆ ಅದರ ಹಿಂದೆ ಸ್ವಾಭಾವಿಕವಾಗಿ ಮತ್ತು ಕಂಡಹಾಗೆ, ಒಂದು ಕಾರ್ಯ ಹಿಂಬಾಲಿಸಿಕೊಂಡೇ ಹೋಗುತ್ತದೆ. ಪ್ರಪಂಚ ವೆಂಬುದು ಒಂದಕ್ಕೊಂದು ಸಂಬಂಧವಿಲ್ಲದ ಸ್ವತಂತ್ರವಾದ ವಸ್ತು ವ್ಯಾಪಾರಗಳಿಂದೊಡಗೂಡಿದ ರಾಶಿಮಾತ್ರವಲ್ಲ: ಇವುಗಳಲ್ಲೆಲ್ಲಾ ಬುದ್ಧಿವಂತಿಕೆಯಿಂದ ಹೊಂದಿಸಿರುವ ಒಂದು ವಿಧವಾದ ಸಂಬಂಧ, ಒಂದು ಕ್ರಮ, ಸುವ್ಯವಸ್ಥೆ, ಸಮತೋಲನ, ಉಂಟು. ಪಾರಂಪರ್ಯವಾದ ಘಟನೆಯೇ ಪ್ರಪಂಚದ ವಸ್ತುಗಳ ವಿಶೇಷಣವಲ್ಲ, ಆಶ್ಚರ್ಯಜನಕವಾದ ಸಮತಾಳ--ಪರಸ್ಪರ ಹೊಂದಾಣಿಕೆ--ಇದೇ ಅವುಗಳ ಮುಖ್ಯಲಕ್ಷಣ.

∴

ನಾವು ಸಾಧಾರಣವಾಗಿ ವೈದ್ಯನು ಇವನಿಗೆ ಕುದುರೆ ಸವಾರಿ ಮಾಡುವುದನ್ನೂ, ಅವನಿಗೆ ತಣ್ಣೀರು ಸ್ನಾನವನ್ನೂ, ಮತ್ತೊಬ್ಬನಿಗೆ ಬರಿಯಕಾಲಿನಲ್ಲಿ ನಡೆಯುವುದನ್ನೂ, ವಿಧಿಸಿದ್ದಾನೆಂದು ಹೇಳುವೆವಲ್ಲವೇ? ಅದರಂತೆಯೇ ಪ್ರಕೃತಿಧರ್ಮ ಇವನಿಗೆ ಬೇನೆಯನ್ನೂ, ಅವನಿಗೆ ಕುರುಡು ತನವನ್ನೂ, ಮತ್ತೊಬ್ಬನಿಗೆ ಮತ್ತಾವುದೋ ಒಂದು ವಿಧದ ನ್ಯೂನ ಅಥವಾ ನಷ್ಟವನ್ನೂ ವಿಧಿಸಿದೆ ಎಂದು ಹೇಳಕೂಡದೇಕೆ? ವೈದ್ಯನು ಒಂದು ಪಥ್ಯವನ್ನು ನೇಮಕ ಮಾಡಿದರೆ, ರೋಗಿ ಆರೋಗ್ಯವನ್ನು ಹೊಂದಲೆಂಬ

ಉದ್ದೇಶದಿಂದ ತಾನೆ ಹಾಗೆಮಾಡುವುದು? ಅದರಂತೆಯೇ ಪ್ರಪಂಚದಲ್ಲಿಯೂ ಯಾರಿಗೆ ಏನು ಸಂಭವಿಸಿದರೂ ಅದು ಅವರ ಮೇಲ್ಮೆಗಾಗಿಯೇ ವಿಧಿಯಿಂದ ನಿಯಾಮಕವಾಗಿದೆ ಎಂದು ತಿಳಿಯುವುದು ಒಳ್ಳೆಯದಲ್ಲವೆ?...........ವೈದ್ಯನ ಪಥ್ಯಗಳಲ್ಲಿಯೂ ಕಠಿಣವಾದುವೂ ಕಹಿಯಾದುವೂ ಅನೇಕವಿರುತ್ತವೆ, ಆದರೂ ಬೇನೆ ತೊಲಗಿ ಆರೋಗ್ಯವನ್ನು ಹೊಂದುವೆವೆಂಬ ಭರವಸೆಮೇಲೆ ಅವುಗಳನ್ನೆಲ್ಲಾ ನಾವು ಅಂಗೀಕಾರಮಾಡುತ್ತೇವೆ. ವಿಶ್ವಧರ್ಮ ನಿನಗೆ ವಿಧಾಯಕ ಮಾಡಿರುವುದನ್ನೆಲ್ಲಾ ನಿನ್ನ ಆರೋಗ್ಯಕ್ಕೆಂದು ತಿಳಿದು ಪೂರ್ತಿಗೊಳಿಸು. ಎಷ್ಟೇ ಕಠಿಣವಾದ, ಕಷ್ಟತರವಾದ, ಪ್ರಸಂಗಗಳು ಒದಗಲಿ, ಅವು ನಿನ್ನ ಮೇಲ್ಮೆಗೆ, ವಿಶ್ವದ ಆರೋಗ್ಯ ಕ್ಷೇಮಗಳಿಗೆ, ಜ್ಯೂಪಿಟರನ (Jupiter) ಕೀರ್ತಿ ಕಲ್ಯಾಣ ವಿಜಯಗಳಿಗೆ, ಸಹಾಯಕವಾದುವೆಂದು ನಂಬಿ ಸಂತುಷ್ಟನಾಗಿ, ಹಸನ್ಮುಖಿಯಾಗಿ ಅವುಗಳನ್ನು ಸ್ವೀಕರಿಸು. ಏಕೆಂದರೆ, ಈರೀತಿ ಆಲೋಚನೆಮಾಡು, ನನ್ನ ಮಾತಿನ ವಿವೇಕ ನಿನಗೆ ಗೊತ್ತಾಗುತ್ತದೆ. ಯಾವುದೇ ಪ್ರಾಪ್ತವಾಗಲಿ, ಜಗತ್ಕಲ್ಯಾಣಕ್ಕೆ ಅದು ಉಪಯೋಗವಾಗದೆ ಇದ್ದಿದ್ದರೆ, ಅದು ಸಂಭವಿಸುತ್ತಲೇ ಇರಲಿಲ್ಲ. ಸಾಧಾರಣವಾಗಿ ಒಂದು ಅಲ್ಪ ವಸ್ತುವಿನ ಬೆಳವಣಿಗೆ ಕ್ರಮವನ್ನು ಪರೀಕ್ಷಿಸಿದರೂ ಅದು ತನ್ನ ಆಡಳಿತ ಅಭಿವೃದ್ಧಿಗಳಿಗೆ ಅಡಚಣೆಯನ್ನುಂಟುಮಾಡುವ ವ್ಯಾಪಾರವನ್ನು ಒಂದೂ ತಾನೇ ತಂದುಕೊಳ್ಳುವುದಿಲ್ಲ. ಇನ್ನು ಕೇವಲ ನಿನ್ನ ಜೀವನದಲ್ಲಿಮಾತ್ರ ಸಂಭವಿಸುವ ವ್ಯಾಪಾರಗಳಿಗೆ ಏನು ವಿವರಣೆ ಎನ್ನುವೆಯೋ? ಅವು ಮೊದಲಿಂದಲೂ ಮೂಲಕಾರಣಗಳ ಮುಖಾಂತರವಾಗಿ ನಿನ್ನನ್ನು ಉದ್ದೇಶಿಸಿಯೇ ಉತ್ಪನ್ನವಾಗಿವೆ, ನಿನಗೋಸ್ಕರವಾಗಿಯೇ ಗೊತ್ತುಮಾಡಲ್ಪಟ್ಟು, ನಿನ್ನ ಅದೃಷ್ಟದ ಭಾಗವಾಗಿಯೇ ಪ್ರಾಪ್ತವಾಗುತ್ತವೆ. ಎರಡನೆಯದಾಗಿ, ಈ ಚತುರ್ದಶಮಂಡಲಗಳ ಅಧಿನಾಯಕನಾದ ಆ ಸಾಕ್ಷಾತ್ ಪರಮೇಶ್ವರನ ವೈಭವ ಕ್ಷೇಮವಿಜಯಗಳೇ, ಅಷ್ಟೇನು, ಆತನ ಶಾಶ್ವತ ಪದವಿಯೇ, ಒಂದು ರೀತಿಯಲ್ಲಿ ನಿನ್ನ ಅದೃಷ್ಟದಮೇಲೆ ನೆಲಸಿರುತ್ತದೆ.

## ಮನುಷ್ಯನ ಅಲ್ಪತ್ವ ಮತ್ತು ಮಹತ್ವ.

ಅಗಾಧವಾದ ಅಪಾರವಾದ ಕಾಲಸಮುದ್ರದ ಎಷ್ಟೊಂದು ಅಲ್ಪ ಭಾಗ ಪ್ರತಿಯೊಬ್ಬ ಮಾನವನ ಪಾಲಿಗೂ ಬಂದಿರುತ್ತದೆ! ಎಷ್ಟು ಜಾಗ್ರತೆಯಾಗಿ ಅದು ಪ್ರಪಂಚದ ಯುಗವಾಹಿನಿಯಲ್ಲಿ ಅದೃಶ್ಯವಾಗುತ್ತದೆ! ಪ್ರಪಂಚದ ಮೂಲವಸ್ತುವಿನ, ಮತ್ತು ಲೋಕಾತ್ಮನ, ಎಷ್ಟೊಂದು ಅಲ್ಪ ಭಾಗ ಪ್ರತಿಯೊಬ್ಬ ಮಾನವನಿಗೂ ಹಂಚಲ್ಪಟ್ಟಿರುತ್ತದೆ! ಮತ್ತು ಪೃಥ್ವಿಯ ಎಷ್ಟು ಸಣ್ಣ ಹೆಂಟೆಯಮೇಲೆ ನೀನು ಸರಿದಾಡುತ್ತಿರುವೆ! ಇದೆಲ್ಲವನ್ನೂ ನೀನು ಸಾವಧಾನವಾಗಿ ಆಲೋಚಿಸಿದಮೇಲೆ, ನಿನ್ನ ಸ್ವಭಾವಕ್ಕನುಸಾರವಾಗಿ ನಡೆಯುವುದು, ಮತ್ತು ವಿಶ್ವಧರ್ಮಕ್ಕನುಗುಣವಾಗಿ ನಿನ್ನ ಸ್ವಭಾವವನ್ನು ಹೊಂದಿಸುವುದು- ಇದಕ್ಕಿಂತಲೂ ಹೆಚ್ಚಿನದು ಪ್ರಪಂಚದಲ್ಲಿ ಯಾವುದೂ ಇಲ್ಲವೆಂದು ತಿಳಿ.

ನನ್ನ ತಿಳಿವಳಿಕೆಯ ಈಗಿನ ಸ್ಥಿತಿಯೇನು? ಇದೇ ಮುಖ್ಯವಾದ ಪ್ರಶ್ನೆ—ಇದರಲ್ಲಿಯೇ ನನ್ನ ಸಮಸ್ತ ಆಸ್ತಿಯೂ ಇರತಕ್ಕುದು. ಉಳಿದ ವಿಚಾರಗಳೆಲ್ಲವೂ ನನ್ನ ಚಿತ್ತದ ನಿಲುಕಿಗೆ ಎಟುಕದೆ ಹೊರಗಿರತಕ್ಕುದಾದುದರಿಂದ ನನ್ನ ದೃಷ್ಟಿಗೆ ಅವುಗಳೆಲ್ಲವೂ ಸತ್ತಂತೆಯೇ ಲೆಖ್ಖ— ಬರಿಯ ಹೊಗೆ, ಧೂಳಿ, ಅಷ್ಟೆ.

ಸಾವನ್ನು ತುಚ್ಛೀಕಾರಮಾಡುವಂತೆ ಒಬ್ಬ ಮನುಷ್ಯನನ್ನು ಹುರಿದುಂಬಿಸಬೇಕಾದರೆ ಇತರ ವಿಚಾರಗಳೊಂದಿಗೆ ಬಲವಾದ, ತೂಕವಾದ ಈ ಅಂಶವನ್ನೂ ಪರಾಮರ್ಶಿಸುವಂತೆ ಹೇಳಬಹುದು: ಭೋಗವೇ ಸುಖ, ನೋವೇ ದುಃಖ, ಎಂದು ನಂಬಿದವರೂ ಕೂಡ ಅನೇಕರು ಇತರರಂತೆಯೇ ಸಾವನ್ನು ತಾತ್ಸಾರ ಮಾಡಿದರು. ಹೀಗಿರುವಲ್ಲಿ ಪ್ರಕೃತಿಯ ಕಾಲ ನಿಯಮಗಳಿಗನುಸಾರವಾಗಿ ನಡೆಯುವುದು ಯಾವುದೋ ಅದೇ ಶುಭವೆಂದು ನಂಬಿರತಕ್ಕವರಿಗೆ ಸಾವು ಘೋರವಾಗಿ ಕಾಣಿಸುವುದೇನು? ತನ್ನ ಜೀವನದ ಬದುಕು ಹೆಚ್ಚೇ ಇರಲಿ, ಕಡಮೆಯೇ ಇರಲಿ, ಒಳ್ಳೆಯದಾಗಿದ್ದರೆ ಸರಿ, ಪ್ರಪಂಚದ ವಸ್ತುಗಳು ಪರಿಣಾಮಹೊಂದದೆ ಬಹು ಕಾಲ ನಿಲ್ಲಲಿ, ಕೊಂಚಕಾಲ ನಿಲ್ಲಲಿ—ಎಲ್ಲವೂ ಒಂದೇ ಎಂದು ಉಪೇಕ್ಷೆ ಮಾಡಿರುವವನಿಗೆ ಸಾವಿನ ಅಂಜಿಕೆ ಇರುವುದೇನು? ಮರುಳೇ!

ಪ್ರಪಂಚವೆಂಬ ಈ ದೊಡ್ಡ ಪಟ್ಟಣದಲ್ಲಿ ನೀನು ನಾಗರಿಕನಾಗಿ ಬದುಕಿ ಬಾಳಿದ್ದೀಯೆ—ಇಷ್ಟೇ ವರುಷ ಲೆಖ್ಖವಾಯಿತೋ ಇಲ್ಲವೋ ಅದನ್ನು ಕಟ್ಟಿಕೊಂಡು ನಿನಗೇನು? ನಗರದ ಕಾನೂನು ನಿಯಮಗಳ ಪ್ರಕಾರ ನೀನು ಎಷ್ಟುಕಾಲವಿರಬೇಕಾಗಿತ್ತೊ ಅಷ್ಟುಕಾಲ ಇದ್ದಿರುವೆ-ಈ ವಿಚಾರ ದಲ್ಲಿ ನಿನಗೆ ಸಂಶಯಬೇಡ, ಇದೇ ಎಲ್ಲರೂ ತೆಗೆದುಕೊಳ್ಳಬೇಕಾದ ಸಮಾಧಾನ. ಅಂದಮೇಲೆ, ದುಷ್ಟ ಪ್ರಭುವಲ್ಲ, ದುಷ್ಟನ್ಯಾಯಾಧಿಪತಿಯಲ್ಲ, ನಿನ್ನನ್ನು ಈ ಲೋಕದೊಳಕ್ಕೆ ತಂದ ಪ್ರಕೃತಿ ಮಾತೆಯೇ ಈಗ ನಿನ್ನನ್ನು ಈ ಲೋಕದಿಂದ ಹೊರಕ್ಕೆ ಕಳುಹಿದರೆ ಅದಕ್ಕೆ ನೀನೇಕೆ ವ್ಯಸನಪಡ ಬೇಕು? ನಾಟಕದ ಯಜಮಾನನು ನಾಟ್ಯಗಾರನೊಬ್ಬನನ್ನು ಸ್ವಲ್ಪ ಹೊತ್ತು ಅಭಿನಯಿಸುವುದಕ್ಕೋಸ್ಕರ ಇಟ್ಟುಕೊಂಡು ಅನಂತರ ಅವನನ್ನು ಕಳುಹಿಸಿಬಿಟ್ಟ ಹಾಗೆ! ಹೌದು, ನಾಟಕ ಇನ್ನೂ ಮುಗಿದಿಲ್ಲವಲ್ಲ, ಮೂರೇ ಅಂಕಗಳಾಗಿರುವುದು ಇದುವರೆಗೆ, ಎನ್ನುವೆಯೋ? ಯಥಾರ್ಥವನ್ನೇ ನುಡಿದಿರುವೆ, ಈ ಬಾಳುವೆಯ ವಿಚಾರದಲ್ಲಿ ಮೂರಂಕಗಳಾದರೆ ಪೂರ್ತಿ ನಾಟಕವಾಯಿತೆಂದೇ ಲೆಖ್ಖ! ಇನ್ನು ಅದರಲ್ಲಿ ಪ್ರತಿ ಒಬ್ಬನೂ ಎಷ್ಟು ಕಾಲ ಪಾತ್ರ ವಹಿಸಬೇಕೆನ್ನುವುದು ನಿನ್ನ ಜನನಕ್ಕೆ ಕಾರಣನಾದ ಹಾಗೆಯೇ ಈಗ ನಿನ್ನ ಮರಣಕ್ಕೂ ಕಾರಣನಾಗಿರುವ ಆ ವಿಶ್ವನಾಟಕ ಸೂತ್ರಧಾರಿಯೇ ನಿರ್ಣಯಿಸಬೇಕಾದ ವಿಷಯ. ನಿನಗೋ ಅದೂ ಸಂಬಂಧಪಟ್ಟುದಲ್ಲ, ಇದೂ ಸಂಬಂಧಪಟ್ಟುದಲ್ಲ. ನಿನ್ನಷ್ಟಕ್ಕೆ ನೀನು ಸಂತುಷ್ಟನಾಗಿ ತೃಪ್ತನಾಗಿ ಹೋಗು—ನಿನ್ನನ್ನು ಸಾಗಕಳುಹಿಸುತ್ತಿರುವ ಯಜಮಾನನೂ ತೃಪ್ತನಾಗಿ ಹರ್ಷಚಿತ್ತನಾಗಿಯೇ ಇದ್ದಾನೆ.

∴

ಸಂತೋಷದಿಂದ ಬದುಕುವುದು ಆತ್ಮದ ಒಂದು ಆಂತರಿಕ ಶಕ್ತಿ; ತಮ್ಮ ಸ್ವಭಾವದಲ್ಲಿ ಒಳ್ಳೆಯವೂ ಅಲ್ಲ, ಕೆಟ್ಟವೂ ಅಲ್ಲ—ಹೀಗಿರುವ ನಿರರ್ಥಕ ಐಹಿಕ ಸಾಮಗ್ರಿಗಳ (adiaphora) ವಿಚಾರದಲ್ಲಿ ಉಪೇಕ್ಷೆ ಹೊಂದಿರುವ ಆತ್ಮಕ್ಕೇ ಈ ಶಕ್ತಿ ಬರುವುದು.

∴

ಮನಸ್ಸನ್ನು ಹುಯ್ದಾಟಕ್ಕೊಡ್ಡುವ, ಇಂದ್ರಿಯಜನ್ಯವಾದ, ಚಿತ್ತವಿಕಾರಗಳನ್ನೂ ಕಲ್ಪನೆಗಳನ್ನೂ ದೂರಮಾಡಿ ಕೂಡಲೇ ಪೂರ್ಣ ಶಾಂತಿಸಮಾಧಾನಗಳನ್ನು ಹೊಂದುವುದು ಮನುಷ್ಯನಿಗೆ ಎಷ್ಟು ಸುಲಭ !

⁘

ಎಲ್ಲ ವಿಧವಾದ ಅಭಿಮತವನ್ನೂ ಹೊರಗೆ ತಳ್ಳು, ನೀನು ಕ್ಷೇಮ ವಾಗಿರುವೆ. ಅದನ್ನು ಹೊರಗೆ ತಳ್ಳಲು ಅಭ್ಯಂತರವೇನು? ಯಾವ ವಿಷಯಕ್ಕಾದರೂ ನೀನು ದುಃಖಪಡುತ್ತಿರುವಾಗ, ಸಕಲವೂ ಪ್ರಕೃತಿಯ ಸಹಜಧರ್ಮಕ್ಕನುಸಾರವಾಗಿ ನಡೆಯುವುದೆಂಬುದನ್ನೂ, ಆ ಸಹಜ ಧರ್ಮವನ್ನು ನಿರಾಕರಿಸುವವನಿಗೇ ಚಿಂತೆ ಎಂಬುದನ್ನೂ ಮರೆತೆಯಾ? ಹಾಗೆ ಯಾರು ಎಂದೂ ಕಂಡು ಕೇಳದ್ದು ನಿನಗಾಗಿರುವುದು ತಾನೇ ಏನು? ಪ್ರಪಂಚದಲ್ಲಿ ಅನಾದಿಯಿಂದ ನಡೆದುಬಂದದ್ದೇ ಈಗ ನಡೆದಿರು ವುದು, ಮುಂದೆಯೂ ಸದಾ ನಡೆಯತಕ್ಕದ್ದು, ಈಗಲೂ ಎಲ್ಲಾ ಕಡೆ ಯಲ್ಲಿಯೂ ನಡೆಯುತ್ತಿರುವುದು. ಮಾನವರೆಲ್ಲಾ ಹೇಗೆ ಸಮೀಪ ಬಂಧುಗಳಾಗಿದ್ದಾರೆ—ರಕ್ತ ಬೀಜಸಂಬಂಧದಿಂದಲ್ಲ—ಚಿತ್ತಬುದ್ಧಿಜ್ಞಾನ ಸಂಬಂಧದಿಂದ, ಎಂಬುದನ್ನು ಮರೆತುಬಿಟ್ಟೆಯಾ? ಅಲ್ಲದೆ, ಪ್ರತಿಯೊಬ್ಬನ ಚಿತ್ತವೂ ದೈವವೆಂಬ ಮೂಲಸ್ಥಾನದಿಂದ ಹೊರಟು ದೈವಿಕಾಂಶವನ್ನು ಳ್ಳದ್ದು; ಯಾರೂ ಯಾವುದನ್ನೂ—ತನ್ನ ಮಕ್ಕಳನ್ನಾಗಲಿ, ಶರೀರ ವನ್ನಾಗಲಿ, ಕಡೆಗೆ ತನ್ನ ಪ್ರಾಣವನ್ನೇ ಆಗಲಿ—ತನ್ನದೆಂದು ಹೇಳಿ ಕೊಳ್ಳುವಹಾಗಿಲ್ಲ, ಏಕೆಂದರೆ ಇವೆಲ್ಲವೂ ಸಕಲವರದನಾದ ಆ ಏಕಮಾತ್ರ ಪುರುಷನ ಕೃಪೆಯಿಂದಲೇ ಬರತಕ್ಕುವು; ನಾವೀಗ ಬೆಲೆಕಟ್ಟುವ ಕೀರ್ತಿಗೌರವ ಪೂಜ್ಯಸ್ಥಾನ ಮುಂತಾದುವೆಲ್ಲಾ ಕೇವಲ ಅಭಿಮತ ಜನ್ಯವಾದುವು; ಯಾವನೂ ತಾನೀಗ ಅನುಭವಿಸುತ್ತಿರುವ ವರ್ತಮಾನ ವೆಂಬ ಒಂದು ಕ್ಷಣಕಾಲವನ್ನು ಬಿಟ್ಟರೆ ಉಳಿದಕಾಲಗಳಲ್ಲಿ ನ್ಯಾಯ ವಾಗಿ ಬದುಕಿರುವುದಿಲ್ಲ, ಆಪಕಾರಣ ಯಾವನು ಸತ್ತರೂ ಒಂದು ಕ್ಷಣಕಾಲಕ್ಕಿಂತ ಹೆಚ್ಚಾಗಿ ಹೋಗಲಾಡಿಸಿಕೊಳ್ಳುವ ಹಾಗಿಲ್ಲ;—ಈ ಅಂಶಗಳನ್ನೆಲ್ಲಾ ನೀನು ಮರೆತೇ ಇರಬೇಕು.

## ಗ್ರೀಕ್ ನೀತಿಶಾಸ್ತ್ರದ ಉಪಸಂಹಾರ

ಕ್ರಮ, ಸಮೀಚೀನತೆ, ಪರಿಮಾಣ, ಸಮತಾಳ, ಈ ಭಾವಗಳು ಗ್ರೀಕ್ ತತ್ವಜ್ಞಾನಿಗಳೆಲ್ಲರಲ್ಲಿಯೂ ಕಂಡು ಬರುವುವು. ಪುರುಷನು ಜೀವನವನ್ನು ಕ್ರಮಗೊಳಿಸಬೇಕು. ತನ್ನ ಪ್ರವೃತ್ತಿಗಳೆಲ್ಲವನ್ನೂ ಪುರುಷಾರ್ಥವನ್ನು ಸಾಧಿಸಿಕೊಳ್ಳಲು ಅನುಕೂಲವಾಗುವಂತೆ ಸಮತೋಲನಗೊಳಿಸಬೇಕು; ಪ್ರತಿಯೊಂದು ಕೆಲಸದಲ್ಲಿಯೂ ಕ್ರಮುವನ್ನೂ, ದಮವನ್ನೂ, ಮಿತವನ್ನೂ ತೋರ್ಪಡಿಸಬೇಕು. ಜ್ಞಾನದ ಮಹಿಮೆಯನ್ನು ಎಲ್ಲರೂ ಹೊಗಳುವರು: ಮಿತಾಚರಣೆಗೆ ಸಮ್ಯಗ್ಜ್ಞಾನವೂ ಅತ್ಯಾಜ್ಯವಾದುದು. ಸದ್ವರ್ತನ ಮಾರ್ಗಗಳನ್ನು ನಿಯೋಜಿಸುವುದರಲ್ಲಿಯೂ ಎಲ್ಲರೂ ಏಕಮತವನ್ನು ಅವಲಂಬಿಸಿರುವರು: ಜ್ಞಾನ ಅಥವಾ ವಿವೇಕ, ದಮ ಅಥವಾ ಆತ್ಮಸಂಯಮ, ಧೃತಿ ಅಥವಾ ಧೈರ್ಯ, ನ್ಯಾಯ ಅಥವಾ ಧರ್ಮ—ಈ ಸದ್ಗುಣಚತುಷ್ಟಯವೇ ಮಾನವನನ್ನು ಶೀಲವಂತನನ್ನಾಗಿ ಮಾಡಿ ಆತನ ಪರಮ ಪುರುಷಾರ್ಥ ಈಡೇರುವಂತೆ ಸಹಾಯಮಾಡುವುದು. ಇವುಗಳ ಆಚರಣೆಯಿಂದಲೇ ಮಾನವನು ಸೌಖ್ಯವನ್ನೂ ಚಿತ್ತಸ್ವಾಸ್ಥ್ಯವನ್ನೂ ಪಡೆಯುವನು. ಭೋಗಿಗಳಿಗೂ ಯೋಗಿಗಳಿಗೂ ಇರುವ ಪ್ರಬಲವಾದ ಭೇದವೇನೆಂದರೆ, ಸೌಖ್ಯವೇ ನಮ್ಮ ಪರಮ ನಿಶ್ರೇಯಸವೆಂದೂ ಸಚ್ಛೀಲವೆಂಬುದು ಸೌಖ್ಯಸಂಪಾದನೆಗೆ ಸಹಕಾರಿ ಮಾತ್ರವೆಂದೂ ಎಪಿಕ್ಯೂರಿಯನರು ಹೇಳುವರು; ಸ್ಟೋಯಿಕರಾದರೋ ಧರ್ಮೋತ್ತರವಾದ ಜೀವನವೇ ನಮ್ಮ ಉತ್ಕೃಷ್ಟಕಲ್ಯಾಣ; ಸಚ್ಛೀಲಭೂಷಿತವಾದ ಸೌಂದರ್ಯ ಜೀವನ ಸೌಖ್ಯವನ್ನು ತರದಿದ್ದರೂ ಸ್ವತಃ ಶುಭ, ಅದನ್ನು ಅನುಭವಿಸಲು ನಾವು ಸರ್ವಾತ್ಮನಾ ಪ್ರಯತ್ನಪಡಬೇಕು, ಎಂದು ಅಭಿಪ್ರಾಯಪಡುವರು. ಸ್ನೇಹ, ಪರಹಿತಾಸಕ್ತಿ, ದಯೆ, ಸಾರ್ವತ್ರಿಕ ಭ್ರಾತೃಭಾವ—ಇವುಗಳನ್ನು ದ್ವಿಮತಸ್ಥರೂ ಪ್ರಶಂಸನೀಯವಾದುವೆಂದು ಭಾವಿಸುವರು; ಆದರೆ ಎಪಿಕ್ಯೂರಿಯನರು ಸ್ವಾರ್ಥವನ್ನೇ ಮುಂದಿಟ್ಟುಕೊಂಡು ನಮ್ಮ ಸ್ವಾರ್ಥಸಾಧನದೃಷ್ಟಿಯಲ್ಲಿ ಅವು ಉಪಯೋಗಕರಗಳಾದುವೆಂದೂ, ನಮ್ಮ ಸ್ವಾರ್ಥಕ್ಕೆ ವಿರುದ್ಧಗಳಾದರೆ ಅವುಗಳನ್ನು ತ್ಯಜಿಸಬೇಕೆಂದೂ ವಾದಿಸುವರು. ಸ್ಟೋಯಿಕರು ಹಾಗಲ್ಲ. ಪ್ರತಿಯೊಬ್ಬನೂ

ಮಾನವ ವ್ಯಕ್ತಿಯಾದುದರಿಂದಲೇ ಗೌರವಾರ್ಹನು, ನಮ್ಮ ಪ್ರೀತಿಗೂ, ಸಹಾಯಕ್ಕೂ ಪಾತ್ರನು; ಪ್ರತಿಯೊಬ್ಬನಿಗೂ ಆತ್ಮಸಂಸಿದ್ಧಿ—ಆತ್ಮ ಲಾಭ—ಎಂಬ ಪುರುಷಾರ್ಥವಿದ್ದೇ ಇರುವುದು. ಆದುದರಿಂದ ಯಾವನನ್ನೂ ನಮ್ಮ ಪ್ರಯೋಜನಕ್ಕಾಗಿ ಒಂದು ಸಲಕರಣೆಯಂತೆ ಭಾವಿಸಕೂಡದು ಎಂದು ಬೋಧಿಸುವರು.[೧]

ಮನುಷ್ಯತ್ವವನ್ನೇ—ಹಿಂದೆ ವಿವರಿಸಿದ ಅರ್ಥದಲ್ಲಿ, ಮಾನವರೆಲ್ಲರೂ ದಿವ್ಯಜ್ಞಾನಜ್ಯೋತಿಯ ಸಮಭಾಗಿಗಳೆಂಬರ್ಥದಲ್ಲಿ—ಸ್ಟೋಯಿಕರು ಬೆಲೆಮಾಡಿದಷ್ಟು ಪ್ರಸಿದ್ಧ ಮತಸ್ಥಾಪಕರಾದ ಪ್ಲೇಟೊ, ಅರಿಸ್ಟಾಟಲ್ ಇವರುಕೂಡ ಲೆಕ್ಕಿಸಲಿಲ್ಲ. ಮನುಷ್ಯರಲ್ಲಿ ಸಮಭಾವನೆ, ಸಹೋದರ ಭಾವ, ಪರೋಪಕಾರಕ್ಕಾಗಿ ಸ್ವಾರ್ಥತ್ಯಾಗ—ಈ ಸದ್ಗುಣಗಳನ್ನೇನೋ ಪ್ಲೇಟೋವೂ ಅರಿಸ್ಟಾಟಲನೂ ಶ್ಲಾಘಿಸಿ ಜನರೆಲ್ಲರೂ ಇದನ್ನು ವ್ಯವಸಾಯ ಮಾಡಬೇಕೆಂದು ಹೇಳಿದರು; ಆದರೆ ಅವರರ್ಥದಲ್ಲಿ ಜನರೆಂದರೆ "ನಾಗರಿಕರು" ಅಥವಾ ಗ್ರೀಸಿನ ನಗರಸಂಸ್ಥಾನಗಳ ಸ್ವತಂತ್ರನಿವಾಸಿಗಳೆಂದು ತಿಳಿಯಬೇಕು. ತಮ್ಮ ದೇಶದಲ್ಲಿಯೇ ತಮಗೆ ಊಳಿಗವನ್ನು ಮಾಡುತ್ತಿದ್ದ ಗುಲಾಮರನ್ನು ಅವರು ತಮ್ಮ ಗಣನೆಗೆ ತರಲಿಲ್ಲ. ಗುಲಾಮಗಿರಿ ನ್ಯಾಯವಾದುದೆಂದೂ ಆವಶ್ಯಕವಾದುದೆಂದೂ ಗುಲಾಮರಿಗೆ ಯಾವ ವಿಧವಾದ ಹಕ್ಕುಬಾಧ್ಯತೆಗಳಿರಕೂಡದೆಂದೂ ವಾದಿಸಿದರು. ಪರದೇಶದವರನ್ನಂತೂ ಅವರು ನಾಗರಿಕರಲ್ಲದ ಕಾಡುಜನರು ಅಥವಾ ಕಿರಾತರೆಂದು ಕರೆದರು. ತಮ್ಮ ದೇಶದ ಸ್ವಾತಂತ್ರ್ಯ ಕೈತಪ್ಪಿ ಗ್ರೀಕರು ಮೊದಲು ಅಲೆಗ್ಸಾಂಡರನ, ತದನಂತರ ರೋಮನರ, ಪ್ರಜೆಗಳಾಗಿ

---

೧. ಇದೇ ಅರ್ಥವನ್ನೇ ಆಧುನಿಕತಾತ್ತ್ವಿಕರಲ್ಲಿ ಪ್ರಸಿದ್ಧನಾದ ಕಾಂಟ್ ಎಂಬ ತತ್ತ್ವವೇತ್ತನು ಈ ಕೆಳಗೆ ಕಂಡ ಮಹಾವಾಕ್ಯಗಳಲ್ಲಿ ಹೇಳಿರುವನು: "ನಿನ್ನ ವ್ಯಕ್ತಿತ್ವದಲ್ಲಾಗಲಿ ಪರರ ವ್ಯಕ್ತಿತ್ವದಲ್ಲಾಗಲಿ ಅಡಗಿರುವ ಮಾನವತ್ವವನ್ನು ಎಂದೂ ಕೇವಲ ಒಂದು ಸಲಕರಣೆಯಂತೆ ಉಪಯೋಗಿಸಬೇಡ; ಮಾನವತೆಯೇ ಒಂದು ಗುರಿ, ಅದೇ ಪುರುಷಾರ್ಥ, ಎಂದು ಸದಾ ಭಾವಿಸು" (Treat humanity whether in thine own person or in that of others always as an end, and never as a means). "ಪ್ರತಿಒಬ್ಬನನ್ನೂ ಪುರುಷಾರ್ಥರಾಜ್ಯದ ಒಂದು ಅಂಗವನ್ನಾಗಿ ಭಾವಿಸು" (Treat everyone as a member of a kingdom of ends).

ಆಮೂಲಕ ಮೇಲ್ಕಂಡ 'ಕಿರಾತ'ರೊಡನೆ ಪರಾಧೀನತೆಯಲ್ಲಿ ಒಂದು ಗೂಡಿದಾಗಲೇ ಸಾರ್ವತ್ರಿಕ ಸಹೋದರಭಾವವೂ, ಮನುಷ್ಯರೆಲ್ಲರಿಗೂ ಸಮನಾದ ಹಕ್ಕುಬಾಧ್ಯತೆಗಳಿರುವುವೆಂಬುದೂ, ಗ್ರೀಕರಲ್ಲಿ ತಲೆದೋರಿದುವು. ಸ್ಟೋಯಿಕರು ಈ ಭಾವವನ್ನು ತಮ್ಮ ನೀತಿಶಾಸ್ತ್ರದ ಮೂಲವನ್ನಾಗಿಮಾಡಿ ಅದಕ್ಕೆ ತಮ್ಮ ಅಧ್ಯಾತ್ಮಶಾಸ್ತ್ರದಲ್ಲಿ ಆಧಾರವನ್ನು ಕಲ್ಪಿಸಿ ತನ್ಮೂಲಕ ಈ ಸಮಸಹೋದರಭಾವಗಳು ಪ್ರಪಂಚದಲ್ಲೆಲ್ಲಾ ಹರಡುವಂತೆ ಮಾಡಿದರು. ಮಾನವಜಾತಿಯೆಂಬುದು ದಿವ್ಯಜ್ಞಾನದ ಕೇಂದ್ರಸ್ಥಾನವಾದುದರಿಂದಶ್ರೇಷ್ಠವಾದುದು; ಮನುಷ್ಯರೆಲ್ಲರೂ ಒಬ್ಬನೇ ತಂದೆಯ ಪುತ್ರರು, ಏಕಸಂಸ್ಥಾನದ ನಾಗರಿಕರು, ಏಕವಿಧವಾದ ಜ್ಞಾನವನ್ನುಳ್ಳವರು, ಏಕವಿಧವಾದ ಹಕ್ಕುಗಳನ್ನುಳ್ಳವರು, ಏಕಧರ್ಮಕ್ಕೊಳಪಟ್ಟವರು. ಮನುಷ್ಯನ ಉತ್ಕೃಷ್ಟತೆಗೆ ಧನ, ಮಾನ, ಜಾತಿ, ಗೋತ್ರ—ಇವು ಕಾರಣಗಳಲ್ಲ; ಸಚ್ಛೀಲವೇ, ಪರಹಿತಕ್ಕಾಗಿ ಆತ್ಮಯಜ್ಞವನ್ನು ಮಾಡಲು ಸಿದ್ಧಗೊಳಿಸುವ ಸೇವಾಧುರೀಣತೆಯೇ, ಕಾರಣ. ಶೀಲವೇ ನಮ್ಮ ಬೆಲೆಯಿಲ್ಲದ ಸಂಪದ; ಶೀಲವನ್ನು ಯಾರೂ ಕೊಡುವ ಹಾಗೂಇಲ್ಲ, ತೆಗೆದುಕೊಳ್ಳುವ ಹಾಗೂಇಲ್ಲ.

## ಅಧ್ಯಾಯ ೨೪

## ಸಂದೇಹಸೂತ್ರವೂ (Scepticism) ಸಮ್ಮಿಶ್ರಣಸಿದ್ಧಾಂತವೂ (Eclecticism)

ಸ್ಟೋಯಿಕರೂ ಎಪಿಕ್ಯೂರಿಯನರೂ ನೀತಿಶಾಸ್ತ್ರವನ್ನು ಸುಧಾರಣೆ ಮಾಡುವುದೇ ತಮ್ಮ ಅಂತ್ಯಗುರಿಯನ್ನಾಗಿಟ್ಟುಕೊಂಡಿದ್ದರೂ ಅದರ ತಳಹದಿಯ ರೂಪವಾಗಿ ಅಖಿಲ ಜಗತ್ತಿನ ಉತ್ಪತ್ತಿ, ಸ್ವಭಾವ ಇವೇ ಮೊದಲಾದ ಅಧ್ಯಾತ್ಮ ಶಾಸ್ತ್ರದ ಪ್ರಶ್ನೆಗಳನ್ನೂ ಹಾಕಿ ಅವುಗಳಿಗೆ ಸಮಂಜಸವಾದ ಉತ್ತರಗಳನ್ನಿತ್ತು ಮನುಷ್ಯನ ವಿಜ್ಞಾನ ಪ್ರಪಂಚ ಸ್ವರೂಪವನ್ನು ವಿಮರ್ಶೆಮಾಡಲು ಶಕ್ತಿಯುಳ್ಳುದೆಂದೂ, ಚಿಂತನೆಯ ಮೂಲಕ ಸತ್ಯಜ್ಞಾನ ದೊರೆಯಬಹುದೆಂದೂ ಸೂಚಿಸಿದ್ದರು. ಪ್ರಸಿದ್ಧ ಜ್ಞಾನಿಯಾದ ಸಾಕ್ರಟೀಸನೂ ವಿಜ್ಞಾನದ ಯೋಗ್ಯತೆಯನ್ನು ಸರ್ವರಿಗೂ ಪ್ರಚುರಪಡಿಸಿ ಅದರ ಮೂಲಕ ಸಮ್ಯಗ್‌ಜ್ಞಾನವನ್ನು ಪಡೆಯ

ಬಹುದೆಂಬುದನ್ನು ದೃಷ್ಟಾಂತ ಪೂರ್ವಕವಾಗಿಯೇ ತೋರಿಕೊಟ್ಟು ಶೂನ್ಯವಾದಿಗಳಾದ ಚಾರ್ವಾಕರ ಮತವನ್ನು ಖಂಡಿಸಿದ್ದನು. ಪ್ಲೇಟೋವೂ ಅರಿಸ್ಟಾಟಲನೂ ಸಾಕ್ರಟೀಸಿನ ಮಾರ್ಗದಲ್ಲಿಯೇ ನಡೆದಿದ್ದರು. ಹೀಗಿದ್ದರೂ ಅರಿಸ್ಟಾಟಲನ ಕಾಲಾನಂತರ ಶೂನ್ಯವಾದವನ್ನು ಪುನರುತ್ಥಾನ ಮಾಡಲು ಸುಸಮಯ ದೊರಕಿತೆಂದು ಕೆಲವು ವಿದ್ವಾಂಸರು ತಮ್ಮ ಸಂದೇಹಸೂತ್ರವನ್ನು ಬೋಧಿಸಲಾರಂಭಿಸಿದರು.

ಪಿರ್ರೊ ಎಂಬಾತನೇ ಈ ಮತದ ಪ್ರಥಮ ಶಿಷ್ಯನು. ಈತನು ಡೆಮಾಕ್ರಿಟಸ್ಸಿನ ಬರವಣಿಗೆಗಳೆಲ್ಲವನ್ನೂ ಅಭ್ಯಸಿಸಿ ಪರಮಾಣುವಾದದಲ್ಲಿ ಪಾರಂಗತನಾಗಿದ್ದನು. ಈತನು ಗ್ರಂಥಯಾವುದನ್ನೂ ಬರೆಯದೆ ವಾಙ್ಮೂಲಕ ತನ್ನ ಬೋಧನೆಯನ್ನು ಹರಡಿದನು. ಕ್ರಿ. ಪೂ. ೨೩೦ರಲ್ಲಿ ಈ ಸಂದೇಹ ಸಿದ್ಧಾಂತ ಪ್ಲೇಟೋವಿನ ಅಕೆಡಮಿಯಲ್ಲಿಯೇ ಮಿಳಿತವಾಗಿ ಅಲ್ಲಿನ ವಿದ್ವಾಂಸರಿಂದಲೇ ಪೋಷಿಸಲ್ಪಡಲಾರಂಭವಾಯಿತು. ಈ ಕಾಲದಲ್ಲಿ ಕಾರ್ನಿಯಾಡಿಸ್ ಎಂಬವನೇ ಪ್ರಸಿದ್ಧನಾದ ಸಂದೇಹ ಸಿದ್ಧಾಂತದ ದಾರ್ಶನಿಕನಾಗಿದ್ದನು. ಕಡೆಯಲ್ಲಿ ಅಕೆಡಮಿಯುವರು ಈ ಸಿದ್ಧಾಂತಿಗಳನ್ನು ದುರ್ಮತ ಬೋಧಕರೆಂದು ತಮ್ಮ ಶಾಲೆಯಿಂದ ಓಡಿಸಿದಮೇಲೆ ಸಂದೇಹಿಗಳು ತಮ್ಮ ಬೋಧನೆಗಳನ್ನು ಸ್ವತಂತ್ರದರ್ಶನವನ್ನಾಗಿಮಾಡಿ ಸ್ವತಂತ್ರವಾಗಿ ಜನರಿಗೆ ಬೋಧಿಸಹತ್ತಿದರು. ಸಂದೇಹವಾದ ಸುಮಾರು ಕ್ರಿ. ಶ. ೨೧೦ ರ ವರೆಗೂ ಗ್ರೀಸ್‌ದೇಶದಲ್ಲಿಯೂ ರೋಮ್ ಚಕ್ರಾಧಿಪತ್ಯದಲ್ಲಿಯೂ ತಲೆಯೆತ್ತಿಕೊಂಡಿತ್ತು.

## ಪೂರ್ವ ಸಂದೇಹಿಗಳು

ಸಂದೇಹವಾದದ ಮುಖ್ಯ ತತ್ವವೇನೆಂದರೆ :— ವಸ್ತುಗಳ ಯಥಾರ್ಥ ಸ್ವರೂಪವನ್ನು ತಿಳಿಯಲು ನಮಗೆ ಶಕ್ತಿ ಇಲ್ಲ. ಪ್ರತ್ಯಕ್ಷದಿಂದ ನಾವು ವಸ್ತುಗಳು ನಮಗೆ ಹೇಗೆ ತೋರುತ್ತವೆ ಎಂಬುದನ್ನು ಗೊತ್ತುಮಾಡಬಹುದೇ ಹೊರತು ಅವುಗಳ ಒಳ ಸತ್ವವೇನೆಂಬುದನ್ನು ತಿಳಿಯಲಾರೆವು. ಉಳಿದ ಪ್ರಮಾಣಗಳೆಲ್ಲವೂ ಪ್ರತ್ಯಕ್ಷದ ಮೇಲೆಯೇ ನಿಂತಿರುವುದರಿಂದ ಅವೂ ಸಹ ವಸ್ತುಗಳ ನಿಜಸ್ಥಿತಿಯನ್ನು ನಮಗೆ

ಹೇಳಲಾರವು. ಅವಗ್ರಹವೇ ಸಮಸ್ತ ಜ್ಞಾನದ ಆಧಾರವಾದರೆ ಅವಗ್ರಹ ಭ್ರಾಂತವೋ ಅಭ್ರಾಂತವೋ, ಸತ್ಯವೋ ಅಸತ್ಯವೋ, ವಿಕಲ್ಪವೋ ನಿರ್ವಿಕಲ್ಪವೋ, ಕಂಡುಹಿಡಿಯುವುದು ಹೇಗೆ? ಅವಗ್ರಹವೇ ನಮ್ಮ ಜ್ಞಾನದ ಪರತತ್ವ(ultimate principle)ವಾದರೆ ಈ ಅವಗ್ರಹವನ್ನು ದಾಟಿ ನಾವು ವಸ್ತುವನ್ನು–ಪ್ರತ್ಯಕ್ಷಿತ ಪದಾರ್ಥವನ್ನು–ಸೇರುವುದೆಂತು? ಹಾಗೆ ವಸ್ತುವಿನ ಸ್ವಲಕ್ಷಣವನ್ನು ಸೇರಲಾಗದ ಬಳಿಕ ನಮ್ಮ ಅವಗ್ರಹ ಬಾಹ್ಯವಸ್ತುವನ್ನು ಪ್ರತಿಬಿಂಬಿಸುವುದೆಂದು ಏನು ನಂಬುಗೆ? ಅಲ್ಲದೆ ಅನೇಕವೇಳೆ ನಮ್ಮ ಭಾವಗಳೂ ಅವಗ್ರಹಗಳೂ ಪರಸ್ಪರ ವಿರೋಧವಾಗಿ ರುವುವು. ಆಗ ಸತ್ಯವನ್ನು ಕಂಡುಹಿಡಿಯಲು ಪ್ರಮಾಣವೇನು? ಎಪಿಕ್ಯೂರಿಯನರು ಅವಗ್ರಹಗಳೆಲ್ಲವೂ ಸತ್ಕಲ್ಪ ಅಥವಾ ಸತ್ಯವೆನ್ನುತ್ತಾರೆ; ಸ್ಟೋಯಿಕರು ಸ್ವತಃಪ್ರಾಮಾಣ್ಯಗಳಾಗಿರುವ ಅವಗ್ರಹಗಳೇ ಸತ್ಯವೆನ್ನುತ್ತಾರೆ. ವಸ್ತುತಃ ಇವೆರಡೂ ತಪ್ಪು ಮಾರ್ಗಗಳು. ಕೆಲವು ಅವಗ್ರಹಗಳು ಸಾಕಾದಷ್ಟು ಸ್ಫುಟವಾಗಿಯೂ ಪ್ರತ್ಯೇಕವಾಗಿಯೂ ಇರುತ್ತವೆ. ಆದರೂ ಅವುಗಳಿಗೆ ತಾಳೆಯಾಗುವ (ಒಪ್ಪುವ) ವಸ್ತುಗಳು ಬಾಹ್ಯಪ್ರಪಂಚದಲ್ಲಿ ಇರುವುದೇ ಇಲ್ಲ. ಅವಗ್ರಹ ವಸ್ತುವಿನೊಡನೆ ಒಪ್ಪುತ್ತದೆಯೋ ಎಂದು ಹೇಳುವುದಕ್ಕಾಗುವುದಿಲ್ಲ, ಏಕೆಂದರೆ ಹೋಲಿಸಲು ಬಾಹ್ಯವಸ್ತು ನಮಗೆ ದೊರೆಯುವ ಹಾಗೇ ಇಲ್ಲ. ಮತ್ತು ಭಾವಗಳನ್ನು ನಾವು ಅನುಮೋದಿಸುವುದೆಂದರೆ ಅರ್ಥವೇ ಆಗುವುದಿಲ್ಲ; ಪ್ರಮೇಯಗಳಿಗೆ ನಾವು ನಮ್ಮ ಸಮ್ಮತಿ ಕೊಡಬಹುದು ಅಥವಾ ಕೊಡದಿರಬಹುದು. ಆದರೆ ಪ್ರಮೇಯವೆಂದಾಗಲೇ ಚಿಂತೆಯ ವ್ಯಾಪಾರ ಪ್ರವೇಶವಾಯಿತು; ಈ ಚಿಂತನೆಗೆ ಸರಿಯಾದ ಒರೆಗಲ್ಲು ನಮ್ಮಲ್ಲಿಲ್ಲ. ಇನ್ನೊಂದು ವಿಶೇಷವೇನೆಂದರೆ; ನಾವು ಯಾವ ಪ್ರಮೇಯವನ್ನಾಗಲಿ ಸಿದ್ಧಾಂತವನ್ನಾಗಲಿ ಸಮರ್ಥಿಸಲಾಗುವುದಿಲ್ಲ. ಹೇಗೆಂದರೆ ವಿಷಯವೊಂದನ್ನು ಸಮರ್ಥಿಸಬೇಕಾದರೆ ನಾವು ಯಾವುದಾದರೂ ಒಂದು ಪಕ್ಷವನ್ನು ಅಥವಾ ಪ್ರಮೇಯವನ್ನು ಸಾಧನರಹಿತವಾಗಿ ನಿಜವೆಂದು ನಂಬಲೇಬೇಕು, ಇಲ್ಲವೆ ಇದನ್ನು ಸಾಧಿಸಿಕೊಡೋಣವೆಂದರೆ ಇದಕ್ಕಾಗಿ ಮತ್ತೊಂದು ಪ್ರಮೇಯವನ್ನಾದರೂ ನಿರಾಕ್ಷೇಪಣೀಯವಾಗಿ ತೆಗೆದು

ಕೊಳ್ಳಲೇಬೇಕು. ಈ ರೀತಿಯಲ್ಲಿ ಪ್ರಕರಣಸಮ (Begging the Question) ತಪ್ಪಿದರೆ ಅನವಸ್ಥ (ad infinitum)---ಇಷ್ಟರಲ್ಲಿ ನಮ್ಮ ಪ್ರಯತ್ನ ಕೊನೆಗಾಣುವುದೇ ಹೊರತು ನಾವು ಯಾವುದನ್ನೂ ಪ್ರಮಾಣಿಸಿದಂತಾಗಲಿಲ್ಲ.

ವಸ್ತುಸ್ವರೂಪವನ್ನು ತಿಳಿಯಲಾಗದಿದ್ದರೆ ನಾವು ಮಾಡಬೇಕಾದ ಕರ್ತವ್ಯವೇನು? ಅದರ ವಿಷಯವಾಗಿ ನಮ್ಮ ನಿರ್ಣಯಾಭಿಪ್ರಾಯ ಪ್ರತಿಪಾದನೆಯನ್ನು ನಿಲ್ಲಿಸಬೇಕು. ನಮಗೆ ಇಂತಿಂತಹ ಅವಗ್ರಹಗಳ ಅನುಭವ ಆಗುತ್ತದೆ, ಅಥವಾ ವಸ್ತುಗಳು ನಮಗೆ ಹೀಗೆಹೀಗೆ ತೋರುತ್ತವೆ, ಎಂದು ನಾವು ಹೇಳಬಲ್ಲೆವೇ ಹೊರತು ವಸ್ತುಗಳು ಹೀಗೆಯೇ ಇವೆ ಎಂದು ನಿರ್ಧರವಾದ ಅಭಿಪ್ರಾಯಗಳನ್ನು ಕೊಡಕೂಡದು. ಗೋಡೆ ಬೆಳ್ಳಗೆ ಕಾಣಿಸುತ್ತದೆ ಎಂದು ಹೇಳಬಹುದೇ ಹೊರತು ಅದು ಬೆಳ್ಳಗಿದೆ ಎಂದು ಹೇಳಲಾಗದು. ಪ್ರಕೃತದಲ್ಲಿ ನಮ್ಮ ಪ್ರಪಂಚವ್ಯವಹಾರಗಳಿಗೆಲ್ಲಾ ಇಷ್ಟು ಹೇಳಿದರೆ ಸಾಕು. ನೀತಿಧರ್ಮವಿಚಾರಗಳಲ್ಲಿಯೂ ಕೂಡ ನಿಶ್ಚಯಜ್ಞಾನ ದೊರೆಯುವುದು ದುರ್ಲಭ. ಆದುದರಿಂದ ಇಲ್ಲಿಯೂ ಸಹ ನಮ್ಮ ಧರ್ಮಾಧರ್ಮವಿವೇಚನೆಯನ್ನು ನಿಲ್ಲಿಸುವುದು ಉತ್ತಮ. ಧ್ಯೇಯಗಳಿಗೂ ಶ್ರೇಯಗಳಿಗೂ ಬಡಿದಾಡುವುದು ವೃಥಾ ದೇಹಶ್ರಮ ಮತ್ತು ಮನೋವ್ಯಾಕುಲಗಳಿಗೆ ಕಾರಣ. ನಿಷ್ಫಲವಾದ ಈ ಪ್ರಯತ್ನವನ್ನು ಬಿಟ್ಟುಬಿಟ್ಟರೆ ಚಿತ್ತಶಾಂತಿಯೂ ನೈರ್ಮಲ್ಯವೂ ದೊರೆಯುವುವು.

ಈ ರೀತಿಯಾಗಿ ಪಿರ್ರೊ ಎಂಬಾತನು ತನ್ನ ಸಂದೇಹಸೂತ್ರವನ್ನು ಜನರಿಗೆ ಬೋಧಿಸಿದನು. ಕಾರ್ನಿಯಾಡಿಸ್ ಎಂಬವನು ವಸ್ತುವಿಚಾರದಲ್ಲಿ ನಿರಭಿಪ್ರಾಯವುಳ್ಳವರಾಗಿರಬೇಕೆಂಬುದನ್ನು ಮಾತ್ರ ಒಪ್ಪಲಿಲ್ಲ. ವಸ್ತುಲಕ್ಷಣವನ್ನು ನಿರ್ಧರಿಸುವುದಕ್ಕೆ ನಮಗೆ ಸರಿಯಾದ ಪ್ರಮಾಣವಿಲ್ಲವೆಂಬುದೇನೋ ನಿಜ, ಆದರೂ ವಸ್ತುವಿನ ವಿಚಾರದಲ್ಲಿ ನಮ್ಮ ಪ್ರಕೃತವ್ಯವಹಾರಗಳಿಗೆ ಸಾಕಾದಷ್ಟು ನಿಶ್ಚಯಜ್ಞಾನವನ್ನು ಪಡೆಯಬಹುದು. ನಮ್ಮ ಅವಾಯ ಅಥವಾ ನಿಶ್ಚಯ ತಕ್ಕಮಟ್ಟಿಗೆ ಸ್ಫುಟವಾಗಿಯೂ ಪ್ರತ್ಯೇಕವಾಗಿಯೂ ಇದ್ದರೆ ಸಾಕು. ವಸ್ತುಗಳ ಸತ್ಯಪರವಾಗಿ ಸತ್ಯಜ್ಞಾನ ಲಭಿಸುವುದಿಲ್ಲವಾದರೂ ಸಂಭಾವನಾರೂಪದಲ್ಲಿ (Probability)

ಅನೇಕ ತಾರತಮ್ಯಗಳುಂಟು. ಪ್ರಾಯಶಃ ಗೋಡೆ ಬೆಳ್ಳಗಿದೆ ಎಂದು ಹೇಳುವುದರಲ್ಲಿ ತಪ್ಪೇನೂ ಇರಲಾರದು. ಈ ಪ್ರಾಯಿಕಮತ ನಿರ್ಣಯ ಏಕಾಭಿಪ್ರಾಯವಾಗಿರದೆ ಅನೇಕಾಂತವಾಗಿರುವುದು. ಪ್ರಾಯಶಃ ಗೋಡೆ ಬೆಳ್ಳಗಿದೆ, ಪ್ರಾಯಶಃ ಬೂದುಬಣ್ಣವಾಗಿದೆ, ಪ್ರಾಯಶಃ ಬೂದುಬಣ್ಣದ ಮೇಲೆ ಹಳದಿಯಾಗಿದೆ. ಈ ತೆರನಾಗಿ ಅನೇಕ ಪ್ರಾಯಿಕ ಪ್ರಮೇಯಗಳನ್ನು ಹೇಳಬಹುದು; ಬುದ್ಧಿವಂತನಾದವನು ಇವುಗಳಲ್ಲೆಲ್ಲಾ ಯಾವುದು ಅತ್ಯಂತ ಪ್ರಾಯಿಕವಾಗಿದೆಯೋ ಅದನ್ನು ಒಪ್ಪುವನು. ಆದುದರಿಂದ ನಾವು ಯಾವ ವಿಷಯದಲ್ಲಿಯೂ ನಿರಭಿಪ್ರಾಯವುಳ್ಳವರಾಗಿರಬೇಕೆಂಬ ಅಗತ್ಯವೇನೂ ಇರುವುದಿಲ್ಲ. ಆದರೂ ಅತ್ಯಂತ ಪ್ರಾಯಿಕವಾದುದೂ ಕೂಡ ಸತ್ಯಕ್ಕೆ ಸಮವಾಗುವುದಿಲ್ಲವೆಂಬುದನ್ನೇನೋ ಮರೆಯಕೂಡದು. ಒಂದರ್ಥದಲ್ಲಿ ಕಾರ್ನಿಯಾಡಿಸ್ಸಿನ ಈ ಸಿದ್ಧಾಂತವನ್ನು ಸ್ಯಾದ್ವಾದ ಅಥವಾ ಅನೇಕಾಂತವಾದವೆಂದು ಹೇಳಬಹುದು.

ಸ್ಟೋಯಿಕರ ಸಿದ್ಧಾಂತಗಳನ್ನು ಖಂಡಿಸಿ ಅವುಗಳಲ್ಲಿರುವ ನ್ಯೂನಾತಿರೇಕಗಳನ್ನೂ ವಿರುದ್ಧಭಾವನೆಗಳನ್ನೂ ಹೊರಗೆಳೆಯಬೇಕೆಂದು ಕಾರ್ನಿಯಾಡಿಸ್ಸನು ಬಹು ಶ್ರಮಪಡುವನು. ಪ್ರಪಂಚ ನೈಗಮಪೂರ್ವಕವಾದುದೆಂದೂ, ಅದರಲ್ಲಿ ಕ್ರಮ, ಸಮೀಚೀನತೆ, ಸಮ್ಮೇಲನ, ಸೌಂದರ್ಯ, ಸುಜ್ಞಾನ, ಇವು ತುಂಬಿ ತುಳುಕುತ್ತಿರುವುವೆಂದೂ, ಈ ಕಾರಣಗಳಿಂದ ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನೊಬ್ಬನು ಪ್ರಪಂಚವನ್ನು ಸೃಷ್ಟಿಸಿರಬೇಕೆಂದೂ ಸ್ಟೋಯಿಕರು ವಾದಿಸುತ್ತಾರೆ. ಇದು ಶುದ್ಧ ಅಸಂಬದ್ಧಪ್ರಲಾಪ. ಪ್ರಪಂಚ ಅವರ ವರ್ಣನೆಯಂತಿರುವುದೆಂಬುದಕ್ಕೆ ಪ್ರಮಾಣವೇನು? ಒಂದು ಪಕ್ಷದಲ್ಲಿ ಹಾಗಿರುವುದೆಂದು ಒಪ್ಪಿಕೊಂಡರೂ ಅದನ್ನು ದೇವರೊಬ್ಬನು ಸೃಷ್ಟಿಸಿದನೆಂಬುದು ಹೇಗೆ ವ್ಯಕ್ತಪಡುತ್ತದೆ? ಈ ಈಶ್ವರಭಾವ ಸ್ವವಿರುದ್ಧವಾದುದು. ಈಶ್ವರನಿಗೆ ನಮ್ಮಂತೆಯೇ ಭಾವಗಳೂ (ಕಾಮಗಳೂ) ಅವಗ್ರಹಗಳೂ ಇರುವುವೆಂದಿಟ್ಟುಕೊಳ್ಳೋಣ. ಆ ಪಕ್ಷಕ್ಕೆ ಆತನು ವಿಕಾರಾಸ್ಪದನು: ವಿಕಾರವಸ್ತು ಎಂದಿಗೂ ನಿತ್ಯವಾದುದಲ್ಲ. ಇಲ್ಲವೆ ಈಶ್ವರನು ಭಾವಾವಗ್ರಹರಹಿತನಾಗಿರುವನೆಂದರೆ ಅಲ್ಲಿಗೆ ಆತನು ಜೀವಚೇತನರಹಿತವಾದ

ಜಡವಸ್ತುವೆಂದು ಹೇಳಿದಹಾಗಾಯಿತು. ಈಶ್ವರನು ಅಮೂರ್ತನಾದರೆ ಆತನಿಗೆ ಅವಗ್ರಹಗಳೂ ಭಾವಗಳೂ ಇರಲಾರವು; ಮೂರ್ತನಾದರೆ ವಿಕಾರಾಸ್ಪದನು, ನಶ್ವರನು. ಆತನು ಶಿವ(ಮಂಗಳ)ಸ್ವರೂಪನೆಂದರೆ, ನೀತಿ ಧರ್ಮನಿಬದ್ಧನೆಂದಾಯಿತು, ಸ್ವತಂತ್ರಚಿತ್ತತೆ ಹಾರಿಹೋಯಿತು; ಶುಭ ಸ್ವರೂಪನಲ್ಲವಾದರೆ ಮಾನವನಿಗಿಂತಲೂ ಕೀಳೆನಿಸಿದನು. ಈಪರಿ ಯಾಗಿ ಈಶ್ವರಭಾವ ವಿರೋಧಗಳಿಂದ ಪೂರಿತವಾಗಿರುವುದು; ನಮ್ಮ ವಿಜ್ಞಾನ ಆತನನ್ನು ಗ್ರಹಿಸಲಾರದು. ಹೀಗಿರುವಲ್ಲಿ ಆತನನ್ನು ಕುರಿತು ಜ್ಞಾನವಿದೆಯೆಂಬುದು ಕೂಡ ಅತಿರೇಕ.

## ಉತ್ತರ ಸಂದೇಹಿಗಳು

ಈನೆಸಿಡೀಮಸ್, ಸೆಕ್ಸ್ಟಸ್ ಎಂಪಿರಿಕಸ್ ಎಂಬವರು ಈ ಶಾಖೆಗೆ ಸೇರಿದವರು. ಇವರು ಸಂದೇಹಸೂತ್ರವನ್ನು ಸವಿಸ್ತಾರವಾಗಿ ಎಳೆದು ಮಾನವನಿಗೆ ಸಂಬಂಧಿಸಿದ ಯಾವ ವ್ಯಾಪಾರಗಳಲ್ಲಿಯೂ ಜ್ಞಾನ ವೆಂಬುದು ದುಸ್ಸಾಧ್ಯವೆಂದು ತೀರ್ಮಾನಿಸಿದರು. ಜ್ಞಾನ ಅಸಾಧ್ಯ ವೆಂಬುದಕ್ಕೆ ಇವರು ತೋರಿಸಿದ ಹಲವು ಕಾರಣಗಳು ಇವು: ಒಂದೇ ಪದಾರ್ಥ ವಿಧ ವಿಧ ಜನರಿಗೆ ವಿಧ ವಿಧವಾಗಿ ಕಾಣುವುದು; ಒಬ್ಬ ನಿಗೂ ಕೂಡ ಪ್ರತ್ಯೇಕ ಕಾಲಗಳಲ್ಲಿ ಪ್ರತ್ಯೇಕವಾಗಿ ಕಾಣಿಸುವುದು; ಬೇರೆ ಬೇರೆ ಜ್ಞಾನೇಂದ್ರಿಯಗಳಿಗೆ ಬೇರೆಬೇರೆಯಾಗಿ ತೋರುವುದು; ಏಕೇಂದ್ರಿ ಯಕ್ಕೂ ಕೂಡ ಬೇರೆ ಬೇರೆ ಕಾಲಗಳಲ್ಲಿ ವ್ಯತ್ಯಸ್ತವಾಗಿ ಗೋಚರಿಸು ವುದು. ಪ್ರತಿ ಒಂದು ಅವಗ್ರಹದಲ್ಲಿಯೂ ಕರ್ತೃಭಾಗ ಕರ್ಮಭಾಗವೆಂದು ಪ್ರತ್ಯೇಕವಾದ ಎರಡು ಅಂಶಗಳಿರುತ್ತವೆ; ಆದುದರಿಂದ ಅವಗ್ರಹ ಒಂದೇ ಎಂದು ಹೇಳುವುದಕ್ಕಾಗುವುದೇ ಇಲ್ಲ. ಇಷ್ಟೇ ಅಲ್ಲದೆ ಇವರು ಪ್ರಮಾಣ ಸಮರ್ಥನಗಳೆಂಬವು ಅಸಾಧ್ಯವೆಂದೂ, ಕಾರ್ಯಕಾರಣಭಾವ ಅಸಂಗತ ವಾದುದೆಂದೂ, ಈಶ್ವರವಾದ ವಿರುದ್ಧವಾದುದೆಂದೂ ಅನೇಕ ಬಗೆಗಳಲ್ಲಿ ತೋರಿಕೊಟ್ಟರು.

ಸಂದೇಹವಾದ ತತ್ವಶಾಸ್ತ್ರ ಚರಿತ್ರೆಯಲ್ಲಿ ನಿರುಪಯೋಗವಾದು ದೆಂದೂ ಕೇವಲ ವಿತಂಡವಾದವೆಂದೂ ಭಾವಿಸಕೂಡದು. ಅನೇಕ

ವಿಧಗಳಲ್ಲಿ ಇತರ ದರ್ಶನಗಳಲ್ಲಿದ್ದ ಕುಂದುಕೊರತೆಗಳನ್ನೂ ವಿರೋಧ ಗಳನ್ನೂ ಹೊರಗೆಳೆದುದರಿಂದ ದಾರ್ಶನಿಕರಲ್ಲಿ ಹಠವಾದ (Dogmatism) ಕಡಮೆಯಾಗಿ ಉತ್ತರೋತ್ತರ ಸಿದ್ಧಾಂತಸ್ಥಾಪನೆ ಅಷ್ಟು ಮುಖ್ಯವಲ್ಲ ವೆಂದೂ ಮತವಿಮರ್ಶೆ ಪ್ರಧಾನವೆಂದೂ ಬೋಧಿಸಿದಂತಾಯಿತು. ಈ ಮೂಲಕ ಅನೇಕ ಮತಗಳು ತಮ್ಮ ಸಿದ್ಧಾಂತಗಳನ್ನು ಸಮಾಕರಿಸಲು ಅವಕಾಶವುಂಟಾಯಿತು. ಅಲ್ಲದೆ ಸಂದೇಹಿಗಳು ಮತಗಳಲ್ಲಿದ್ದ ಪರಸ್ಪರ ವ್ಯತ್ಯಾಸಗಳನ್ನೂ ವಿರೋಧಗಳನ್ನೂ ವಿಶೇಷವಾಗಿ ಒತ್ತಿ ಹೇಳಿದುದರಿಂದ ಕೆಲವರು ಅವುಗಳಲ್ಲಿ ಕಂಡುಬಂದ ಪರಸ್ಪರ ತಾಳೆ ಹೋಲಿಕೆಗಳನ್ನೂ ಸಾಮರಸ್ಯಗಳನ್ನೂ ಆಯ್ದುಕೊಂಡು ಅವುಗಳನ್ನೇ ಅನುನಯವಾದ ರೀತಿಯಲ್ಲಿ ಪೋಣಿಸಿ ಪ್ರತ್ಯೇಕವಾದ ಸಮ್ಮಿಶ್ರಣ ಸಿದ್ಧಾಂತಗ ಳನ್ನೇರ್ಪಡಿಸುವುದಕ್ಕೆ ದಾರಿಯಾಯಿತು.

ಗ್ರೀಕರಿಗೂ ರೋಮನರಿಗೂ ಪರಿಚಯ ಹೆಚ್ಚಾಗುತ್ತಾ ಬಂದ ಹಾಗೆಲ್ಲ ಈ ಮಿಶ್ರಸಿದ್ಧಾಂತಗಳು ವಿಶೇಷ ಪ್ರಚಾರಕ್ಕೆ ಬಂದುವು. ರೋಮ್ ಜನರು ತತ್ವ ಶಾಸ್ತ್ರದಲ್ಲಿ ಅಭಿರುಚಿಯುಳ್ಳವರಲ್ಲ. ತತ್ವ ವಿವೇಚನೆಗೆ ಅವರಿಗೆ ಬುದ್ಧಿಶಕ್ತಿಯೂ ಕಡಮೆ, ಪ್ರಪಂಚ ಜೀವನ ಗಳನ್ನು ಕುರಿತು ಸಿದ್ಧಾಂತಗಳನ್ನು ಕೇಳುವುದಕ್ಕೆ ಅವರಿಗೆ ಇಷ್ಟವೂ ಇರಲಿಲ್ಲ. ಆದರೂ ಕ್ರಿ. ಪೂ. ೧೪೬ರಲ್ಲಿ ಗ್ರೀಸ್‌ದೇಶ ರೋಮ್ ಚಕ್ರಾಧಿಪತ್ಯಕ್ಕೆ ಸೇರಿಹೋದಮೇಲೆ ಗ್ರೀಕ್ ವಿದ್ವಾಂಸರೂ ಜ್ಞಾನಿಗಳೂ ಚಕ್ರಾಧಿಪತ್ಯದಲ್ಲೆಲ್ಲಾ ಸುತ್ತುತ್ತಾ ರೋಮನರಿಗೆ ತಮ್ಮ ವಿದ್ಯೆಯನ್ನೂ ಜ್ಞಾನವನ್ನೂ ಬೋಧಿಸುವುದಕ್ಕೆ ತೊಡಗಿದರು. ಅನೇಕ ರೋಮ್ ಯುವಕರು ತತ್ವಶಾಲೆಗಳನ್ನು ಪ್ರವೇಶಿಸಿ ಗ್ರೀಕ್ ವಿದ್ವಾಂಸರ ಮುಖ ದಿಂದ ಅವರ ತತ್ವಶಾಸ್ತ್ರಗಳನ್ನು ಕಲಿಯುವುದಕ್ಕೆ ಪ್ರಾರಂಭಿಸಿದರು. ಬರ ಬರುತ ಈ ಬಗೆಯ ವಿದ್ಯೆ ಜನಸಮ್ಮತವಾಗಿ ಕಡೆಯಲ್ಲಿ ತತ್ವಶಾಸ್ತ್ರ ವ್ಯಾಸಂಗವಾದ ಹೊರತು ಪ್ರೌಢವಿದ್ಯಾಭ್ಯಾಸ ಸಂಪೂರ್ಣವಾಗಲಿಲ್ಲ ವೆನ್ನುವವರೆಗೂ ವೃದ್ಧಿಯಾಯಿತು. ಏನಾದರೂ ರೋಮನರಿಗೂ ತತ್ವ ಶಾಸ್ತ್ರಕ್ಕೂ ಗಾಢಸ್ನೇಹವೇನೂ ಕಾಣೆವು : ರೋಮನರು ಗ್ರೀಕರ ದರ್ಶನಗಳಿಂದ ತಮಗೆ ರಮ್ಯವಾದ ಸಿದ್ಧಾಂತಗಳನ್ನು ಆರಿಸಿಕೊಂಡರೇ

ಹೊರತು ಯಾವ ಸ್ವತಂತ್ರದರ್ಶನಗಳನ್ನೂ ಸ್ಥಾಪಿಸಲಿಲ್ಲ. ಗ್ರೀಕರ ದರ್ಶನವೊಂದನ್ನು ಅವಲಂಬಿಸಿದಾಗಲೂ ಅದರಲ್ಲಿ ತಮಗೆ ಅನುಕೂಲವಾಗುವಂತೆ ಹೇರಳವಾಗಿ ಬದಲಾವಣೆಗಳನ್ನು ತಂದರು. ಒಳಮರ್ಮವೇನೆಂದರೆ: ರೋಮನರು ಸಿದ್ಧಾಂತಪ್ರಿಯರಲ್ಲ. ಸಮಸ್ಯೆಗಳಲ್ಲಿಯೂ, ಸೂಕ್ಷ್ಮಭಾವಗಳಲ್ಲಿಯೂ, ಗುಂಭ ಗಾಂಭೀರ್ಯಗಳಲ್ಲಿಯೂ ಅವರಿಗೆ ತಾಳ್ಮೆಯೇ ಇಲ್ಲ. ವಾದ ಜಲ್ಪಗಳಂತೂ ಅವರಿಗೆ ಬಹು ಅಪ್ರಿಯ. ರೋಮನರು ಕೇವಲ ವ್ಯವಹಾರಪ್ರಿಯರು: ಪ್ರಾಪಂಚಿಕ ವ್ಯವಹಾರಗಳಲ್ಲಿ ಅವರಿಗೆ ಮಮತೆಯಿದ್ದಷ್ಟು ಪಾರಲೌಕಿಕ ವಿಚಾರಗಳಲ್ಲಿರಲಿಲ್ಲ. ಆದರಲ್ಲಿಯೂ ಜನಸಾಮಾನ್ಯವಾದ ಬುದ್ಧಿಯನ್ನು ಮೆಚ್ಚುವರೆ ಹೊರತು ಶಾಸ್ತ್ರೀಯ ಅಥವಾ ತಾತ್ವಿಕ ವಿವೇಚನೆಗಳು ಅವರಿಗೆ ದೂರವಾದುವು. ಚಕ್ರಾಧಿಪತ್ಯದ ಹವಣೇ ವಿಶೇಷವಾಗಿದ್ದುದರಿಂದ ಅವರಿಗೆ ರಾಜ್ಯದಾಡಳಿತಕ್ಕೆ ಸಂಬಂಧಿಸಿದ ಶಾಸ್ತ್ರಗಳಲ್ಲಿ ರುಚಿ ಅತಿಶಯವಾಗಿತ್ತು.

## ಅಧ್ಯಾಯ ೨೫

## ಯೆಹೂದ್ಯ-ಗ್ರೀಕ್ ತತ್ವಶಾಸ್ತ್ರ : ಫೈಲೊ

ಇದುವರೆಗೂ ನಾವು ಸಾಕ್ರಟೀಸ್, ಪ್ಲೇಟೊ, ಅರಿಸ್ಟಾಟಲ್— ಇಂತಹವರ ಅಸಾಧಾರಣ ಪ್ರಪಂಚತತ್ವಶಾಸ್ತ್ರಗಳನ್ನೂ, ಎಪಿಕ್ಯೂರಿಯನರು, ಸ್ಟೋಯಿಕರು — ಇಂತಹವರ ಅಮೋಘವಾದ ನೀತಿ ಸಿದ್ಧಾಂತಗಳನ್ನೂ ಪರಿಶೀಲಿಸಿದ್ದೇವೆಯಷ್ಟೆ. ಗ್ರೀಕ್‌ತತ್ವಶಾಸ್ತ್ರದ ಪ್ರಸ್ಥಾನ ಚತುಷ್ಟಯದಲ್ಲಿ ಸುಮಾರು ಕ್ರಿ. ಪೂ. ೩೨೦ ರಿಂದ ಕ್ರಿ.ಶ. ೫೨೯ರ ವರೆಗೂ ಇರುವ ಕಾಲವೇ ನಾಲ್ಕನೆಯ ಪ್ರಸ್ಥಾನವೆಂದೂ ಗ್ರೀಕ್ ತತ್ವಶಾಸ್ತ್ರದ ಅಂತ್ಯಭಾಗವೆಂದೂ ಹಿಂದೆಯೇ ತಿಳಿಸಿದೆ. ಸ್ಟೋಯಿಕರ ಮತ್ತು ಎಪಿಕ್ಯೂರಿಯನರ ನೀತಿಸುಧಾರಣೆ ಈ ಅವಧಿಯ ಪೂರ್ವ ಭಾಗದಲ್ಲಿ ನಡೆಯಿತು; ಉತ್ತರಭಾಗವೇ ಈಗ ನಾವು ಗಮನಿಸಬೇಕಾದುದು. ಈ ಕಾಲದಲ್ಲಿ ಜನರಿಗೆ ತತ್ವಶಾಸ್ತ್ರಗಳಿಂದಲೂ ನೀತಿಸಿದ್ಧಾಂತಗಳಿಂದಲೂ ಆತ್ಮತೃಪ್ತಿ ಲಭಿಸದೆ ಮತಮುಖಾಂತರವಾಗಿಯಾದರೂ ತಪಿಸುತ್ತಿರುವ ತಮ್ಮಾತ್ಮಕ್ಕೆ ಶಾಂತಿಯನ್ನು ತಂದುಕೊಳ್ಳಬೇಕೆಂಬ ಹಂಬಲು ಹೆಚ್ಚಿತು. ಪ್ರಪಂಚ ಒಂದು ಜಡಯಂತ್ರವೆಂದೂ ಅದರಲ್ಲಿ ಸಿಕ್ಕಿಬಿದ್ದಿರುವ ಮನುಷ್ಯನು ತನ್ನ ಸ್ವಸೌಖ್ಯವನ್ನು ಗಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಆತನ ಪುರುಷಾರ್ಥವೆಂದೂ ಸಾರಿ ಎಪಿಕ್ಯೂರಿಯನರು ನಿರೀಶ್ವರವಾದಿಗಳಾದರು. ಪ್ರಪಂಚವೆಲ್ಲಾ ಪರಮಾಣುಗಳ ಪರಸ್ಪರ ಸಂಘರ್ಷಣೆಯ ಫಲಮಾತ್ರವೆಂದೂ, ದೇವರ ವಿಷಯದಲ್ಲಿ ನಾವು ಹಂಬಲಿಸಬೇಕಾದುದಿಲ್ಲವೆಂದೂ ಬೋಧಿಸುವ ಸಿದ್ಧಾಂತ ಎಷ್ಟು ಜನಕ್ಕೆ ಎಷ್ಟು ಕಾಲದವರೆಗೂ ಚಿತ್ತಶಾಂತಿಯನ್ನು ಕೊಡಬಲ್ಲುದು? ಇಲ್ಲವೆ ಪ್ರಪಂಚದಲ್ಲೆಲ್ಲಾ ಅದೃಷ್ಟವೆಂಬುದೊಂದಿದೆ, ಅದು ದುರ್ಭೇದ್ಯವಾಗಿ ತನ್ನ ಧರ್ಮವನ್ನು ನಿರರ್ಗಳವಾಗಿ ನಡಸುತ್ತದೆ; ಮನಃಪೂರ್ವಕವಾಗಿ ನಾವು ತಲೆವಾಗಿ ಅದರ ಉದ್ದೇಶಸಂಪೂರ್ತಿಗೆ ಶ್ರಮೆಪಡುವುದರಲ್ಲಿಯೇ ನಮ್ಮ ಜಾಣತನವನ್ನು ತೋರಿಸಬೇಕೆಂದು ಬೋಧಿಸಿದರೂ ಕೂಡ ಎಷ್ಟು ಜನರಿಗೆ ಇದು ಆನಂದಪ್ರದವಾಗುವುದು? ಜ್ಞಾನವೆಂಬುದೇ ಇಲ್ಲ, ಯಾವ ವಿಷಯದಲ್ಲಿಯೂ ನಾವು ಯಥಾರ್ಥ

ಜ್ಞಾನವನ್ನು ಪಡೆಯುವುದು ಅಸಂಭವವೆಂದು ಪ್ರತಿಪಾದಿಸುವ ಸಂದೇಹ ಸೂತ್ರವಂತೂ ಜನರನ್ನು ಸಂದೇಹದಲ್ಲಿ ಕೆಡವಿತೇಹೊರತು ಅವರ ಸ್ವಭಾವ ಜನ್ಯವಾದ ಜ್ಞಾನದಾಹವನ್ನು ಅಡಗಿಸಲಿಲ್ಲ. ಮುಖ್ಯವಾಗಿ ಜನರಿಗೆ ಈ ನೀರಸವಾದ ಸಿದ್ಧಾಂತಗಳಲ್ಲೆಲ್ಲಾ ಬೇಸರ ಹತ್ತಿ, ತಮ್ಮ ಸ್ವಾನುಭವ ದಲ್ಲಿಯೇ ತತ್ವವನ್ನು ನಿಶ್ಚೈಸಿಕೊಳ್ಳಬೇಕೆಂಬ ಕುತೂಹಲ ಬಲವಾ ಯಿತು. ದೇವರನ್ನು ಅರಿಯುವುದು ಮಾತ್ರವಲ್ಲ: ಸ್ವತಃ ಕಣ್ಣುಗಳಿಂದ ನೋಡಿ ಅನುಭವಪಡೆಯಬೇಕು; ಬ್ರಹ್ಮದರ್ಶನದಿಂದಲೇ ತತ್ವಸ್ಥಾಪನೆ ಮಾಡಬೇಕೆಂಬ ಆಕಾಂಕ್ಷೆ ತಲೆದೋರಿತು. ಇಂಥ ಬ್ರಹ್ಮದರ್ಶನಕ್ಕೆ ಕೇವಲ ಮಾನವವಿಜ್ಞಾನ—ತಾತ್ವಿಕಬುದ್ಧಿ—ಸಾಕಾದ ಸಾಧನವಾಗ ಲಾರದು; ಮತಾಚಾರಣೆಯಿಂದಲೋ, ಯೋಗಪ್ರಯೋಗಗಳ ಬಲ ದಿಂದಲೋ, ಇತರ ವಿಧವಾದ ಸಾಧನವನ್ನು ಹುಡುಕಿಕೊಳ್ಳಬೇಕು.

ಬ್ರಹ್ಮದರ್ಶನಕ್ಕೆ ಸಹಕಾರಿಯಾದ, ಮತಸಂಬಂಧವಾದ ರಹ ಸ್ಯೋಪದೇಶ, ರಹಸ್ಯಸಾಧನ, ಇವುಗಳಿಂದೊಡಗೂಡಿದ ತತ್ವಜಿಜ್ಞಾ ಸೆಯೇ ಈ ಕಾಲದಲ್ಲಿ ನಾವು ಗಮನಿಸಬೇಕಾದ ವಿಶೇಷ. ಹಾಗೂ ಗ್ರೀಕರ ಇಂದಿನ ಜಿಜ್ಞಾಸೆ ಈಜಿಪ್ಟಿನ, ಚಾಲ್ಡಿಯನರ, ಅದರಲ್ಲಿಯೂ ಯೆಹೂ ದ್ಯರ, ಮತಗಳೊಡನೆ ಸಂಘರ್ಷಿಸಿದುದರಿಂದ ತತ್ವಶಾಸ್ತ್ರ ಮತಸಂಸ್ಕಾರ ವನ್ನು ಹೊಂದಲು ಹೆಚ್ಚಿನ ಅವಕಾಶ ದೊರೆಯಿತು. ಈ ವಿಧವಾದ ಮತ ಜಿಜ್ಞಾಸೆಯಲ್ಲಿ ನಾವು ಮೂರು ಪ್ರಸ್ಥಾನಗಳನ್ನು ಕಾಣಬಹುದು. (೧) ಪೌರ್ವಾತ್ಯರಾದ ಯೆಹೂದ್ಯರ ಮತವನ್ನು ಗ್ರೀಸ್‌ದೇಶದ ತತ್ವಶಾಸ್ತ್ರ ದೊಂದಿಗೆ ಬೆರಸಬೇಕೆಂಬ ಪ್ರಯತ್ನ ಒಂದು. (೨) ಪೈಥಗೋರಿಯನ್ನರ ಸಿದ್ಧಾಂತಗಳ ಆಶ್ರಯದಮೇಲೆ ಪ್ರಪಂಚಕ್ಕೆಲ್ಲಾ ಒಂದೇ ಮತವನ್ನು ಸ್ಥಾಪಿಸಬೇಕೆಂಬ ಪ್ರಯತ್ನ ಒಂದು. (೩) ಪ್ಲೇಟೋವಿನ ಬೋಧನೆ ಗಳನ್ನೇ ನೂತನವಾದ ರೀತಿಯಲ್ಲಿ ಅರ್ಥಮಾಡಿ ಅದಕ್ಕನುಗುಣವಾದ ಮತವನ್ನು (Neo-Platonism) ಸ್ಥಾಪಿಸಬೇಕೆಂಬ ಪ್ರಯತ್ನ ಒಂದು. ಇವುಗಳಲ್ಲೆಲ್ಲಾ ಸರ್ವಸಾಮಾನ್ಯವಾಗಿ ಕಂಡುಬರುವ ಕೆಲವು ಭಾವ ವಿಶೇಷಗಳುಂಟು. ಈಶ್ವರನು ಪ್ರಪಂಚಾತೀತನು (Transcendental); ಈಶ್ವರನೂ ಪ್ರಪಂಚವೂ ಪರಸ್ಪರ ಭಿನ್ನತತ್ವಗಳು; ಈಶ್ವರನನ್ನು

ಕುರಿತ, ಆತನಿಂದಲೇ ಋಷಿಗಳಿಗೂ ಜ್ಞಾನಿಗಳಿಗೂ ಬೋಧಿಸಲ್ಪಟ್ಟ, ರಹಸ್ಯಜ್ಞಾನವೆಂಬುದುಂಟು; ತಪಶ್ಚರ್ಯ, ಪ್ರಪಂಚವೈರಾಗ್ಯ, ದೇವರಿಗೂ ಮಾನವನಿಗೂ ಮಧ್ಯೆ ಇತರ ದೇವತೆಗಳೆಂಬವರೂ ರಾಕ್ಷಸರೆಂಬವರೂ ಇದಾರೆಂಬ ನಂಬಿಕೆ -- ಇವೆಲ್ಲವೂ ಈ ಕಾಲದ ಮತತತ್ವಶಾಸ್ತ್ರಗಳಲ್ಲಿ ಸಾಮಾನ್ಯ ಭಾವಗಳು. ಒಟ್ಟಿನಲ್ಲಿ ಪೌರ್ವಾತ್ಯರ ಮತ್ತು ಪಾಶ್ಚಾತ್ಯರ (ಗ್ರೀಕರ) ನಾಗರಿಕತೆಗಳ ಸಂಕರದ ಫಲವೆಂಬುದೇ ಈ ಕಾಲದ ತತ್ವ ಶಾಸ್ತ್ರವೆಂದೆನಿಸುವುದು. ಯೆಹೂದ್ಯ—ಗ್ರೀಕರ ತತ್ವಶಾಸ್ತ್ರದಲ್ಲಿ ಪೌರ್ವಾ ತ್ಯರ ಸಂಸ್ಕಾರ ಪ್ರಬಲವಾಗಿರುವುದು ; ನವೀನ ಪ್ಲೇಟೊ ಸಿದ್ಧಾಂತದಲ್ಲಿ (Neo-Platonism) ಗ್ರೀಕರ ಭಾವಬಲ ಪೂರ್ಣ ಕಳೆಯನ್ನು ಹೊಂದಿರು ವುದು.೧

ಅಲೆಕ್ಸಾಂಡರ್ ಮಹಾಶಯನ ಕಾಲವಾದ ಬಳಿಕ ಆತನ ಸೇನಾ ಪತಿಯಾದ ಟೋಲೆಮಿ ಎಂಬವನ ಸಂತತಿಯವರ ಆಳಿಕೆಯಲ್ಲಿ (೩೨೩-೧೮೧) ಈಜಿಪ್ಟ್ ದೇಶದಲ್ಲಿರುವ ಅಲೆಕ್ಸಾಂಡ್ರಿಯಾ ಪಟ್ಟಣ ವ್ಯಾಪಾರದಲ್ಲಿಯೂ ಸರ್ವವಿಧವಾದ ಶಾಸ್ತ್ರ ಕಲಾಭ್ಯಾಸಗಳಲ್ಲಿಯೂ ಪ್ರಥಮ ಪಟ್ಟಣವಾದುದಲ್ಲದೆ ಗ್ರೀಕರ ಮತ್ತು ಪೌರ್ವಾತ್ಯರ ನಾಗರಿ ಕತೆಗಳು ಪರಸ್ಪರ ಸಂಧಿಸಲು ಅನುಕೂಲವಾದ ಕೇಂದ್ರಸ್ಥಾನವಾಯಿತು. ಟೋಲೆಮಿ II ಎಂಬವನ ಕಾಲದಲ್ಲಿ ಇಲ್ಲಿ ೭,೦೦,೦೦೦ ಪುಸ್ತಕಗಳುಳ್ಳ ಪುಸ್ತಕಭಂಡಾರವೊಂದನ್ನು ಒಳಗೊಂಡಿದ್ದ ದರ್ಶನಶಾಲೆಯೊಂದು ಸ್ಥಾಪಿಸಲ್ಪಟ್ಟಿತು. ಇದರ ಮಹಿಮೆಯಿಂದ ಅಲೆಕ್ಸಾಂಡ್ರಿಯಾ ಪಟ್ಟಣ ಕ್ಕುಂಟಾದ ಪ್ರಾಶಸ್ತ್ಯವನ್ನೆಷ್ಟೆಂದು ಹೇಳೋಣ! ಪ್ರತಿ ರಾಜ್ಯದಲ್ಲಿಯೂ ಪ್ರಸಿದ್ಧರಾದ ಕವಿಗಳು, ಭೌತಶಾಸ್ತ್ರ ಪಾರಂಗತರು, ತತ್ವಜಿಜ್ಞಾಸು ಗಳು, ಸಂಗೀತ ಕಲಾಕೋವಿದರು—ಒಟ್ಟೇನು, ವಿದ್ಯಾವೈಭವವುಳ್ಳ ಮಹಾಶಯರೆಲ್ಲರೂ ಆ ಪಟ್ಟಣದ ಮಹತ್ವಕ್ಕೆ ಬೆರಗಾಗಿ ಆ ಪುಸ್ತಕ ಭಂಡಾರದ ಸುಧಾರಸವನ್ನನುಭವಿಸುವುದಕ್ಕಾಗಿ ಅಲ್ಲಿ ಬಂದು ನೆರೆ ದವರಾದರು. ಅದೇ ಟೋಲೆಮಿ ದೊರೆ ಉತ್ತೇಜನದಿಂದ ಯೆಹೂದ್ಯರ

---

೧. ಹೀಗೆಂದು ಹಲವು ಪಾಶ್ಚಾತ್ಯ ತತ್ವವಿಮರ್ಶಕರ ಅಭಿಪ್ರಾಯ. ಆದರೂ ಕಡೆಯ ಪುಟಗಳನ್ನು ನೋಡಿ.

ಪರಿಶುದ್ಧಗ್ರಂಥಗಳೆಲ್ಲಾ ಮಾತೃಭಾಷೆಯನ್ನು ಮರೆತಿದ್ದ ಯೆಹೂದ್ಯರ ಸಲುವಾಗಿ ಗ್ರೀಕ್ ಭಾಷೆಗೆ ಪರಿವರ್ತಿಸಲ್ಪಟ್ಟುವು.

## ಫೈಲೊ

ಈತನು ಕ್ರಿ.ಪೂ. ೩೦ ರಲ್ಲಿ ಜನಿಸಿ ಕ್ರಿ.ಶ. ೫೦ ರಲ್ಲಿ ಮೃತಿಹೊಂದಿದನು. ಯೆಹೂದ್ಯರ ಸದ್ವಂಶದಲ್ಲಿ ಹುಟ್ಟಿ, ಆ ಮತದ ಪರಿಶುದ್ಧ ಗ್ರಂಥಗಳನ್ನೆಲ್ಲಾ ಪರಿಶೀಲಿಸಿ, ಗ್ರೀಕರ ತತ್ವಶಾಸ್ತ್ರಕ್ಕನುಗುಣವಾಗಿ ಆ ಗ್ರಂಥಗಳಿಗೆ ಭಾಷ್ಯವನ್ನು ಬರೆದನು. ಅಲ್ಲದೆ ನೈತಿಕ, ರಾಜಕೀಯ, ಇತಿಹಾಸ ಮತ್ತು ಮತಸಂಬಂಧವಾದ ಗ್ರಂಥಗಳನ್ನು ತಾನೇ ರಚಿಸಿ ಪ್ರಸಿದ್ಧಿ ಹೊಂದಿದನು. ಮಾನವ ತತ್ವವಿವೇಕವೆಲ್ಲಾ ಯೆಹೂದ್ಯಮತದಲ್ಲಿ ಅಡಗಿದೆಯೆಂದು ಈತನ ನಂಬುಗೆಯಿದ್ದಿತು. ಪ್ಲೇಟೊ, ಅರಿಸ್ಟಾಟಲ್ ಮೊದಲಾದ ಗ್ರೀಕ್ ತತ್ವಜ್ಞಾನಿಗಳ ಸಿದ್ಧಾಂತಗಳೇ ಯೆಹೂದ್ಯಮತದ ಪ್ರಮುಖ ಗುರುಗಳಾದ ಮೋಸೆಸ್ ಮತ್ತು ಪ್ರವಾದಿಗಳೆಂಬವರ ಅಪೌರುಷೇಯುವಾದ ಬೋಧನೆಗಳೆಂದು ಸಾರಿ, ಯೆಹೂದ್ಯಮತದ ಶಾಸ್ತ್ರಗಳಲ್ಲಿರುವ ಆಡಂ ಎಂದರೆ ಆತ್ಮವೆಂದೂ, ಈವ್ ಎಂದರೆ ವಿಷಯಲೋಲುಪತೆಯೆಂದೂ, ಜೇಕಬ್ ಎಂದರೆ ತಪಶ್ಚರ್ಯವೆಂದೂ, ಈ ರೀತಿಯಲ್ಲಿ ತನ್ನ ಮತಪುರಾಣಗಳಿಗೆ ಅಧ್ಯಾತ್ಮರೂಪಕವಾದ ಅರ್ಥವನ್ನು ತೋರಿಸಲು ಪ್ರಯತ್ನಪಟ್ಟನು.

ಫೈಲೋವಿನ ದರ್ಶನದಲ್ಲಿ ಬ್ರಹ್ಮವೇ (the Absolute) ಸೂತ್ರಧಾರಸಮಾನವಾದ ಭಾವ. ಪರಬ್ರಹ್ಮನು ಪ್ರಪಂಚಾತೀತನು; ಮಾನವನ ಬುದ್ಧಿಗೆ ಅಗ್ರಾಹ್ಯನು, ಅಜ್ಞೇಯನು, ಅಲಕ್ಷಣನು—ಇಂಥಾ ಅಪಾರ ಮಹಿಮೆಯುಳ್ಳವನು; ಜ್ಞಾನ, ಶೀಲ, ಧರ್ಮ ಇವೆಲ್ಲವನ್ನೂ ದಾಟಿದವನು; ಅನಿರ್ವಚನೀಯನು. ಆತನಿದ್ದಾನೆಂದು ನಮ್ಮ ಶುದ್ಧ ಚೇತನದಿಂದ—ಪರಮಜ್ಞಾನದಿಂದ—ನಾವು ತಿಳಿಯಬಲ್ಲೆವೇ ಹೊರತು ಆತನ ಸತ್ವವೇನೆಂಬುದಾಗಲಿ, ಆತನು ಹೇಗಿದ್ದಾನೆಂಬುದಾಗಲಿ ತಿಳಿಯಲಾರೆವು. ಆದರೂ ಅನುಮಾನದಿಂದ ಆತನ ಇರುವಿಕೆಯನ್ನು ಸಮರ್ಥಿಸಬಹುದು. ಆತನು ಯಾವಜ್ಜಗತ್ತಿನ ಅಧಿಷ್ಠಾನ ಅಥವಾ ಆಧಾರ ರೂಪನು,

ಸರ್ವವೂ ಆತನಲ್ಲಿದೆ. ಆತನು ಸರ್ವಶಕ್ತನು, ಸ್ವತಂತ್ರನು, ಪರಿಪೂರ್ಣನು, ಶುದ್ಧ ಶುಭಾನಂದರೂಪನು, ಶುದ್ಧ ಚಿದ್ರೂಪನು; ಆತನು ಪರಿಶುದ್ಧಾತ್ಮನಾದುದರಿಂದ ಕನಿಷ್ಠವಾದ, ಅಪರಿಶುದ್ಧವಾದ, ಪ್ರಧಾನದೊಂದಿಗೆ ಬೆರೆಯಲಾರನು. ಹಾಗಾದರೆ ಪ್ರಪಂಚ ಉತ್ಪತ್ತಿಯಾಗುವ ಬಗೆ ಹೇಗೆ ಎಂದರೆ, ಮಧ್ಯಸ್ಥರಾದ ಶಕ್ತಿಗಳ ಅಥವಾ ದೇವತೆಗಳ ಸಹಾಯದಿಂದ ಪರಬ್ರಹ್ಮನು ಕೆಲಸಮಾಡುವನೆಂದು ಫೈಲೊ ಉತ್ತರಕೊಡುವನು. ಯೆಹೂದ್ಯರ ಮತದಲ್ಲಿ ದೇವತೆಗಳೆಂಬ ಮತ್ತು ರಾಕ್ಷಸರೆಂಬ ವ್ಯಕ್ತಿಗಳಿದಾರೆಂದು ಹೇಳಿದೆ; ಪ್ಲೇಟೋವಿನ ತತ್ವಶಾಸ್ತ್ರದಲ್ಲಿ ಸಾಮಾನ್ಯಭಾವಗಳೆಂಬ ಮೂಲಪ್ರತಿಗಳಿಗನುಸಾರವಾಗಿ ಪ್ರಪಂಚವಸ್ತುಗಳು ಪ್ರತಿಕೃತಿಯಾಗಿರುವುವೆಂಮೂ ಲೋಕಾತ್ಮ ಅಥವಾ ಸೂತ್ರಾತ್ಮನ ವಿಚಾರವಾಗಿಯೂ ಹೇಳಿದೆ. ಫೈಲೊ ಕೆಲವುವೇಳೆ ತನ್ನ ಮಧ್ಯಶಕ್ತಿಗಳು ದೇವಗಣಗಳೆಂದೂ ಮತ್ತೆ ಕೆಲವೆಡೆಗಳಲ್ಲಿ ಪ್ಲೇಟೋವಿನ ಸಾಮಾನ್ಯಗಳೆಂದೂ ಸಂದರ್ಭಾನುಸಾರ ಅರ್ಥಹೇಳುವನು. ಸಾಮಾನ್ಯಗಳೆಂದರೆ ಪರಬ್ರಹ್ಮನ ವಿಭೂತಿಗಳು ಅಥವಾ ಆತನ ವಿಧವಿಧ ಗುಣಗಳು ಎಂದರೂ ಆಗಬಹುದು. ಈ ವಿಭೂತಿಗಳ ಸಂಯುಕ್ತರೂಪವೇ ಈಶ್ವರ, ಲೋಕಾತ್ಮ (ಹಿರಣ್ಯಗರ್ಭ, ಚತುರ್ಮುಖಬ್ರಹ್ಮ) ಅಥವಾ ದೈವಚಿತ್ತ (the Logos) ಎಂಬ ತತ್ವವಿಶೇಷ (ಮಾನವನಲ್ಲಿಯೂ ಶುದ್ಧಚೇತನದಿಂದ ವ್ಯತ್ಯಸ್ತವಾದ, ದ್ವಿತೀಯ ಜ್ಞಾನದ್ವಾರವಾದ, ಸೂತ್ರಾತ್ಮ ಅಥವಾ ವಿವೇಕವೆಂಬುದಿದೆ). ಈ ಸೂತ್ರಾತ್ಮವೇ (ಪ್ರತಿಮೆಯ ಚಿತ್ರ ಶಿಲ್ಪಿಯ ಮನದಲ್ಲಿರುವಂತೆ) ಸಮಸ್ತಭಾವಗಳನ್ನೂ ಒಳಗೊಂಡಿರುವುದು; ಇದೇ ಸರ್ವಶ್ರೇಷ್ಠವಾದ ಪರಬ್ರಹ್ಮನ ಶಕ್ತಿ; ದೇವತೆಗಳ ದೇವತೆ; ಪರಬ್ರಹ್ಮನ ಪ್ರಥಮಸಂಭವನು, ಆತನ ಪ್ರತಿಕೃತಿ; ದ್ವಿತೀಯ ಪರಬ್ರಹ್ಮನು; ದೇವಮಾನವನು, ದಿವ್ಯ ಆಡಮನು. ಒಟ್ಟೀನು, ಪ್ರಪಂಚಕರ್ತೃವಾದ, ಪ್ರಪಂಚದ ಮೂಲಪ್ರತಿಯಾದ, ಸ್ಟೋಯಿಕರ ಈಶ್ವರನೇ, ಪ್ಲೆಟೋವಿನ ಸಾಮಾನ್ಯಲೋಕವೇ, ಫೈಲೋವಿನ ಲೋಕಾತ್ಮನು, ಪರಬ್ರಹ್ಮನಿಗೂ ಮಾನವನಿಗೂ ಮಧ್ಯೆ ಇರುವ ದಿವ್ಯತತ್ವ. ಕೆಲವು ವೇಳೆ ಈ ತತ್ವ ಪರಬ್ರಹ್ಮವೆಂಬ ದಿವ್ಯಜ್ಯೋತಿಯ ಕಾಂತಿಯೆಂದು ಫೈಲೊ ಅಭಿಪ್ರಾಯ

ಪಡುತ್ತಾನೆ. ಲೋಕಾತ್ಮನು ಪುರುಷನೇ ಅಲ್ಲವೇ ಎಂಬ ವಿಚಾರವನ್ನು ಫೈಲೊ ಚರ್ಚಿಸುವುದಿಲ್ಲ.

ಪರಬ್ರಹ್ಮನ ದಿವ್ಯಶಕ್ತಿ, ದಿವ್ಯ ಗುಣಗಳ ಮೂರ್ತಿಕಾರವೇ ಲೋಕಾತ್ಮನೆಂಬುದು ಸ್ಪಷ್ಟವಾಯಿತಷ್ಟೆ. ಈ ತತ್ವ ಕರ್ತೃವಾಗಬೇಕಾದರೆ ಕರ್ಮಣೀರೂಪವಾದ ಮತ್ತೊಂದು ತತ್ವ ಅವಶ್ಯಕವೆಂಬುದು ಸ್ಪಷ್ಟ ವಾಗಿಯೇ ಇದೆ: ಇದೇ ನಿರ್ಗುಣವಾದ, ಆಕಾಶವನ್ನೆಲ್ಲಾ ತುಂಬಿ ಕೊಂಡಿರುವ ಪ್ರಧಾನ. ಪರಬ್ರಹ್ಮನೇ ಇದರ ಕಾರಣನು. ಈ ಪ್ರಧಾನ ದಿಂದಲೇ ಲೋಕಾತ್ಮನಮೂಲಕ ಪರಬ್ರಹ್ಮನು ಪ್ರಪಂಚವನ್ನು ಸೃಷ್ಟಿಸಿ ದನು. ಆದುದರಿಂದ ಪ್ರಧಾನವನ್ನು ಉಪಾದಾನಕಾರಣವೆಂದೂ ಪರ ಬ್ರಹ್ಮನನ್ನು ನಿಮಿತ್ತಕಾರಣವೆಂದೂ ಹೇಳಬಹುದು. ನಮ್ಮ ತೃತೀಯ ಜ್ಞಾನದ್ವಾರವಾದ ಇಂದ್ರಿಯಾವಲೋಕನದ ಅಥವಾ ಪ್ರತ್ಯಕ್ಷದ ಮೂಲಕ ನಾವು ಲೋಕಾತ್ಮನ ಭೌತ ಚಿತ್ರವನ್ನು (ಭೌತ ಪ್ರಪಂಚ ವನ್ನು) ನೋಡಬಹುದು. ದೇಶಕಾಲಗಳೆಂಬುವೂ ಸಹ ಪ್ರಪಂಚ ಸೃಷ್ಟಿಯಾದಾಗಲೆ ಸೃಜಿಸಲ್ಪಟ್ಟುವು. ಪ್ರಪಂಚಕ್ಕೆ ಆದಿಯುಂಟು, ಅಂತ್ಯ ಮಾತ್ರವಿಲ್ಲ. ಲೋಕಾತ್ಮನು ಪರಿಪೂರ್ಣನೂ, ಮಂಗಳರೂಪನೂ ಆದುದ ರಿಂದ ಪ್ರಪಂಚದ ನ್ಯೂನಾತಿರೇಕಗಳೆಲ್ಲವೂ ಅಶುದ್ಧವಾದ ಪ್ರಧಾನಕ್ಕೆ ಸಂಬಂಧಪಟ್ಟುವು.

ಪ್ರಪಂಚದಂತೆ ಮನುಷ್ಯನೂ ಆತ್ಮ ಪ್ರಧಾನಗಳ ಸಂಯೋಗ ಫಲ. ಆತನು ವ್ಯಷ್ಟಿಯಾದರೂ ಸೃಷ್ಟಿಯ ಅತ್ಯಂತ ಉತ್ಕೃಷ್ಟವಾದ ಫಲ. ಶುದ್ಧ ಚೇತನವೇ ಆತನ ಶ್ರೇಷ್ಠತತ್ವ. ಆತನ ದೇಹವೂ ಅಜ್ಞಾನವೂ ಪ್ರಾಪಂಚಿಕವಾದುವು, ಪ್ರಧಾನ ಮೂಲವು. ಈ ಶುದ್ಧ ಚೇತನ ಅಥವಾ ಆತ್ಮನು ಈಶ್ವರಾಂಶವಾದುದರಿಂದ ಮಾನವನನ್ನು ಈಶ್ವರನ ಪ್ರತಿಚಿತ್ರವೆಂದು ಹೇಳಬಹುದು. ಆದರೂ ಸ್ವಯಂ ಶುದ್ಧ ವಾದ ಆತ್ಮ ಅಪರಿಶುದ್ಧವಾದ ಶರೀರದೊಂದಿಗೆ ಕಲೆಯುವುದರಿಂದ ದುರ್ವರ್ತನೆಗೂ ಅರಿಷ್ಟಗಳಿಗೂ ಕಾರಣವಾಗುವುದು. ದೇಹಿಯಾ ಗುವುದೇ ಆತ್ಮನ ಅಧೋಗತಿ, ಭ್ರಷ್ಟತೆ. ತನ್ನ ಪೂರ್ವಪಾರಿಶುದ್ಧ್ಯವನ್ನು ಆತ್ಮನು ಪುನಃ ಪಡೆಯಬೇಕಾದರೆ ಮಾನವನು ಸರ್ವವಿಧದಲ್ಲಿಯೂ

ಇಂದ್ರಿಯಸಂಸ್ಕಾರದಿಂದ, ಶರೀರವಾಸನೆಯಿಂದ, ಬಿಡುಗಡೆ ಹೊಂದಲು ಪ್ರಯತ್ನಪಡಬೇಕು. ಈ ರೀತಿಯಲ್ಲಿ ಕಾಮಕ್ರೋಧಾದಿ ರಾಗಭಾವಗಳನ್ನು ಸುಟ್ಟು, ದುಷ್ಟಹೇತುವೂ ವಿಷಯಲೋಲುಪತೆಗೆ ಕಾರಣವೂ ಆದ ಶರೀರದ ವಾಸನೆಯಿಂದ ನಿವೃತ್ತನಾಗಿ ಆತ್ಮಸಂಸಿದ್ಧಿಯನ್ನು ಪಡೆಯಬೇಕಾದರೆ, ನಾವು ತಪಶ್ಚರ್ಯವನ್ನೂ ಜ್ಞಾನಮಾರ್ಗವನ್ನೂ ಕೈಗೊಳ್ಳಬೇಕು. ಆದರೆ ಈಶ್ವರನ ಕೃಪೆಯಿಲ್ಲದೆ ನಾವು ಈ ಮಹತ್ಕಾರ್ಯವನ್ನು ಮಾಡಲಾರೆವು. ಮಾನವನು ದುರ್ಬಲನು, ಅತಿಪಾಪಿ. ಪರಮೇಶ್ವರನು ಕೃಪೆಗೈದು ನಮ್ಮಲ್ಲಿ ಭಕ್ತಿರಸವನ್ನು ತುಂಬಿ ಉನ್ಮತ್ತರನ್ನಾಗಿ ಮಾಡಿ ನಮ್ಮ ಜ್ಞಾನಪ್ರಪಂಚವನ್ನು ವಿಕಸನಗೊಳಿಸಬೇಕು. ಅಂದು ನಮ್ಮ ಚಿತ್ತವೂ ಬಾಹ್ಯಪ್ರಪಂಚದ ವೃತ್ತಿಗಳನ್ನೆಲ್ಲಾ ನಿರೋಧಿಸಿ ಏಕಾಗ್ರಚಿತ್ತತೆಯನ್ನು ಹೊಂದಿ ಈಶ್ವರನಲ್ಲಿಯೇ ಲಯವಾಗುವುದು. ಇದೇ ಸಮಾಧಿ. ಈ ಸಮಾಧಿ ಅಥವಾ ತುರೀಯಾವಸ್ಥೆಯಲ್ಲಿ ನಾವು ಈಶ್ವರನನ್ನು ಪ್ರತ್ಯಕ್ಷವಾಗಿ ಕಾಣಬಹುದು. ಆತನ ದಿವ್ಯದರ್ಶನವನ್ನು ಹೊಂದಿ, ಆತನ ಸ್ವರೂಪವನ್ನರಿತವರಾಗಿ, ಅತನಲ್ಲಿಯೇ ಲಯವಾಗಬಹುದು (ಲಯಯೋಗ, ಸಮಾಧಿಯೋಗ).

ಫೈಲೊ ನೆಟ್ಟುಹೋಗಿದ್ದ ಬೀಜಾಂಕುರವನ್ನು ಆತನ ಶಿಷ್ಯಂದಿರು ವೃದ್ಧಿಪಡಿಸಿ ದೊಡ್ಡ ವೃಕ್ಷವನ್ನಾಗಿ ಮಾಡಿದರು. ಇದು ಬಹು ದೀರ್ಘಕಾಲ ಕ್ರೈಸ್ತಮತವೆಂಬ ಸಸಿಯೊಡನೆ ಹೋರಾಡಿ ಅದನ್ನು ತಲೆಯೆತ್ತಲು ಕೊಡದೆ ತನ್ನ ನೆರಳಿನಿಂದ ಅದನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟಿತ್ತು. ಕಡೆಯಲ್ಲಿ ಆತನ ಬೋಧನೆಯ ಮುಖ್ಯ ಮುಖ್ಯವಾದ ಅಂಶಗಳನ್ನೆಲ್ಲಾ ಕ್ರಿಸ್ತಮತದ ಗುರುಗಳು ತಮ್ಮ ಮತತತ್ವಗಳೊಂದಿಗೆ ಬೆರಸಿಕೊಂಡುಬಿಟ್ಟು, ರಾಜಕೀಯ ಮಾರ್ಗಗಳನ್ನನುಸರಿಸಿ, ಆ ಕಾಲದ ಪದವೀಧರರ ಆಶ್ರಯವನ್ನು ಕೋರಿ, ಫೈಲೋವಿನ ಸಿದ್ಧಾಂತ ಪ್ರತ್ಯೇಕವಾಗಿ ಜೀವಿಸಿರಲು ಅವಕಾಶಕೊಡದೆ ನಿರ್ನಾಮವಾಗುವಂತೆ ಮಾಡಿಬಿಟ್ಟರು. ಆದರೂ ಗ್ರೀಕ್ ತತ್ವಶಾಸ್ತ್ರದ ಹಾಗೂ ಕ್ರೈಸ್ತಮತ ತತ್ವಗಳ ಸಮ್ಮಿಶ್ರಣರೂಪವಾದ "ಗ್ನಾಸ್ಟಿಸಿಸಂ" (gnosticism) ಎಂಬ ಜ್ಞಾನಯೋಗ ತತ್ವವೇತ್ತುಗಳಿಂದಲೂ ಪಂಡಿತೋತ್ತಮರಿಂದಲೂ

ಪಾಲಿಸಲ್ಪಟ್ಟು ಬಹುಕಾಲ ಕ್ರೈಸ್ತಧರ್ಮದಮೇಲೆ ತನ್ನ ಸಂಸ್ಕಾರವನ್ನು ಬೀರುತ್ತಿತ್ತು. ಇದರಲ್ಲಿ ಪ್ಲೇಟೋವಿನ ಸಿದ್ಧಾಂತಗಳು ಮಾತ್ರವಲ್ಲದೆ ಹೆಚ್ಚಾಗಿ ಪೌರ್ವಾತ್ಯರ ಅಂದರೆ ಪರ್ಷಿಯನರ ಮತ್ತು ಹಿಂದೂಗಳ ತತ್ವಸಾರವೂ ಬೆರೆದು ಕ್ರೈಸ್ತಧರ್ಮದಲ್ಲಿ ಗುಪ್ತವಿದ್ಯೆ ಅಥವಾ "ಪರ"ವಿದ್ಯೆಯೊಂದು ಪ್ರವೇಶಿಸಲು ಮಾರ್ಗವಾಯಿತು. ಈಗಲೂ ಸಹ ಯೂರೋಪಿನಲ್ಲಿ ಅನೇಕರು ಈಗ ಪ್ರಚಾರದಲ್ಲಿರುವ ಕ್ರೈಸ್ತಧರ್ಮವನ್ನು ನಿಜವಾದ ಕ್ರಿಸ್ತನ ಬೋಧನೆಯೆಂದೊಪ್ಪುವುದಿಲ್ಲ. ಕ್ರೈಸ್ತರ ಬೈಬಲ್ ಮೊದಲು ಹೀಬ್ರೂ (ಯೆಹೂದ್ಯರ)ಭಾಷೆಯಲ್ಲಿ ಬರೆಯಲ್ಪಟ್ಟು ಅದರಿಂದ ಗ್ರೀಕ್ ಭಾಷೆಗೆ ಅನುವಾದಮಾಡಲ್ಪಟ್ಟು ಗ್ರೀಕಿನಿಂದ ಈಗಿನ ಕಾಲದ ಐರೋಪ್ಯಭಾಷೆಗಳಿಗೆ ಪರಿವರ್ತಿಸಲ್ಪಟ್ಟದೆ. ಈಗ ಅನೇಕರು ಹೇಳುವುದೇನೆಂದರೆ, "ಈ ಭಾಷಾಂತರಗಳು ನಡೆಯುವಾಗ ಕ್ರೈಸ್ತನ ಬೋಧನೆ ಗುರುತಿಸಲಾರದ ರೀತಿಯಲ್ಲಿ ಮಾರ್ಪಾಡಾಗಿಹೋಗಿದೆ. ಆದಿ ಕ್ರೈಸ್ತಮತಾಧಿಪತಿಗಳು (Early Church Fathers) ಒಟ್ಟುಗೂಡಿ ಪೌರ್ವಾತ್ಯರ ಹಾಗೂ ಪ್ರಾಚೀನರ ಮತತತ್ವಗಳನೇಕವನ್ನು ಒಳಗೊಂಡಿದ್ದ ಕ್ರಿಸ್ತನ ಬೋಧನೆಯನ್ನು ತಮಗೆಲ್ಲರಿಗೂ ಸೂಕ್ತವಾಗಿ ಕಂಡರೀತಿಯಲ್ಲಿ ಬದಲಾಯಿಸಿಬಿಟ್ಟದ್ದಾರೆ." ಇದರ ನಿಜಾಂಶವನ್ನು ಇಲ್ಲಿ ಚರ್ಚಿಸಲು ಅವಕಾಶವಿಲ್ಲವಾದರೂ ಕ್ರೈಸ್ತರ ಬೈಬಲ್ಲಿಗೆ ಆದ್ಯಂತವಾಗಿ ಬೇರೆವಿಧದಲ್ಲಿ ಅಂದರೆ ಆರ್ಯರ ಗುಪ್ತವಿದ್ಯೆಗನುಸಾರವಾಗಿ ಅರ್ಥಮಾಡಬಹುದೆಂಬ ವಿಷಯವನ್ನು ಗಮನದಲ್ಲಿಟ್ಟರೆ ಈ ಆಧುನಿಕ ಐರೋಪ್ಯಪಂಡಿತರ ಅಭಿಪ್ರಾಯ ತೀರ ಅಸಂಗತವಾದುದಲ್ಲವೆಂದು ಭಾಸವಾಗುವುದು. ಈ ವಿಷಯವನ್ನು ಹೆಚ್ಚುತಿಳಿಯಲಪೇಕ್ಷಿಸುವವರು "Mystic Christianity", "The Kabbalah" ಮುಂತಾದ ಗ್ರಂಥಗಳನ್ನು ನೋಡಬಹುದು.

## ಅಧ್ಯಾಯ ೨೬

## ನವೀನ ಪ್ಲೇಟೊ ಸಿದ್ಧಾಂತ (Neo-Platonism) : ಪ್ಲೊಟೀನಸ್

ಯೆಹೂದ್ಯ-ಗ್ರೀಕರ ತತ್ತ್ವಶಾಸ್ತ್ರ ಪ್ರಚಾರವಾಗುತ್ತಿದ್ದ ತರುಣದಲ್ಲಿಯೇ ಮತಸಂಪರ್ಕವನ್ನು ಅಧಿಕವಾಗಿ ಸ್ವೀಕರಿಸಿದ ಪ್ರತ್ಯೇಕ ದರ್ಶನಗಳೆರಡು ತಲೆಯೆತ್ತುತ್ತಿದ್ದುವು. ನವಪೈಥಗೋರಿಯನರ ಸಿದ್ಧಾಂತ ಮೊದಲನೆಯದು. ಪೈಥಾಗೊರಾಸನು ಕ್ರಿ. ಪೂ. ೬ನೆಯ ಶತಮಾನದಲ್ಲಿ ಜೀವಿಸಿ ನೈತಿಕ, ರಾಜಕೀಯ ಮತ್ತು ಮತವಿಚಾರಗಳನ್ನು ಸುಧಾರಣೆ ಮಾಡಿದ್ದನಷ್ಟೆ. ಆತನ ಕಾಲಾನಂತರ ಶಿಷ್ಯರು ಆತನು ವಿಧಿಸಿದ್ದ ಕರ್ಮಾಚರಣೆಗಳನ್ನು ಪ್ರಸಿದ್ಧಪಡಿಸಿದರೇ ಹೊರತು ಆತನ ಸಿದ್ಧಾಂತಗಳನ್ನು ಬೋಧಿಸುವುದಾಗಲಿ, ಬೆಳಸುವುದಾಗಲಿ ಮಾಡಲಿಲ್ಲ. ಪ್ಲೇಟೊ ತನ್ನ ಅಂತ್ಯಕಾಲದಲ್ಲಿ ಪೈಥಾಗೊರಾಸಿನ ಸಾಂಖ್ಯಸಿದ್ಧಾಂತವನ್ನೂ ಮತಯೋಗ ವಿಚಾರಗಳನ್ನೂ ಒಪ್ಪಿ ತನ್ನ ದರ್ಶನದಲ್ಲಿಯೇ ಅವುಗಳನ್ನು ಬೋಧಿಸಿದನು.[೧] ಅವನ ಶಿಷ್ಯರು ಕೆಲಕಾಲ ಈ ಭಾಗವನ್ನೇ ವಿಶೇಷ ಪ್ರಚಾರಕ್ಕೆ ತಂದರು. ಅರಿಸ್ಟಾಟಲನೂ ಆತನ ಹಿಂದೆ ಬಂದ ದಾರ್ಶನಿಕರೂ ಪೈಥಾಗೊರಾಸಿನ ಬೋಧನೆಗಳೊಂದನ್ನೂ ಅನುಮೋದಿಸದಿದ್ದುದರಿಂದ ಅಕೆಡಮಿಯಲ್ಲಿ ಆತನ ಸಿದ್ಧಾಂತ ಮಾಯವಾಗಿಹೋಯಿತು. ಆದರೂ ಪೈಥಗೋರಿಯನರ ಗುಪ್ತಸಂಘಗಳು ಮಾತ್ರ ಗ್ರೀಸ್‌ದೇಶದಲ್ಲಿ ಅಲ್ಲಲ್ಲಿ ಹಬ್ಬುತ್ತಿದ್ದು ತಮ್ಮ ರಹಸ್ಯಕರ್ಮಾಚರಣೆಗಳನ್ನೂ ರಹಸ್ಯೋಪದೇಶಗಳನ್ನೂ ಜನಸಮ್ಮತಗೊಳಿಸುತ್ತಿದ್ದುವು. ಕ್ರಿ. ಪೂ. ಒಂದನೆಯ ಶತಮಾನದಲ್ಲಿ ಗ್ರೀಸಿನಲ್ಲಿಯೂ ರೋಮಿನಲ್ಲಿಯೂ ತಲೆದೋರಿದ ಮತೋತ್ಸಾಹ ಪೈಥಗೋರಿಯನರು ಪುನಃ ಪ್ರಖ್ಯಾತಿಗೆ ಬರುವುದಕ್ಕೆ ಸುಸಮಯವನ್ನು ತಂದಿತು. ಒಣಸಿದ್ಧಾಂತಗಳಲ್ಲಿ ಜನರು ಜುಗುಪ್ಸೆಯನ್ನು ಹೊಂದಿ ಆಚರಣೆಯಮೂಲಕ—ಅನುಷ್ಠಾನದ್ವಾರಾ—ದೇವದರ್ಶನವನ್ನು ಪಡೆಯುವುದಕ್ಕೆ ತವಕಿಸುತ್ತಿದ್ದರು. ಪೈಥಾಗೊರಾಸಿನ ದರ್ಶನ ತನ್ನ ರಹಸ್ಯೋಪದೇಶಗಳಿಂದಲೂ ರಹಸ್ಯಕರ್ಮವಿಧಿಗಳಿಂದಲೂ ಜನರ ದಾಹವನ್ನು ತೃಪ್ತಿಗೊಳಿಸುವ ಸುಸ್ಥಿತಿಯಲ್ಲಿದ್ದಿತು. ಆದರೂ ಪೈಥಾಗೊರಾಸಿನ

---

೧ "ಟಿಮೇಯಸ್" ಎಂಬ ಸಂವಾದವನ್ನು ನೋಡಿ.

ಸಿದ್ಧಾಂತವೇ ಈಗ ಶುದ್ಧರೂಪದಲ್ಲಿ ಬೋಧಿಸಲ್ಪಟ್ಟಿತೆಂದು ಹೇಳಲಾಗುವುದಿಲ್ಲ. ಈ ನವಸಿದ್ಧಾಂತದ ಪ್ರಮುಖರು ಪ್ಲೇಟೊ, ಅರಿಸ್ಟಾಟಲ್, ಸ್ಟೋಯಿಕರು--ಈ ತಾತ್ವಿಕರಲ್ಲಿ ತಮಗೆ ಸಮ್ಮತವಾದುದೆಂದು ತೋರಿಬಂದುದನ್ನೆಲ್ಲಾ ಆಯ್ದುಕೊಂಡು ಪೈಥಾಗೊರಾಸಿನ ಸಿದ್ಧಾಂತಗಳಿಗೆ ಸೇರಿಸಿ ಅವುಗಳಿಗೆಲ್ಲಾ ಒಂದು ನೂತನಲೇಪವನ್ನು ಹಚ್ಚಿ ಪ್ರತ್ಯೇಕ ದರ್ಶನವನ್ನಾಗಿ ಮಾಡಿದರು.

ಪೈಥಾಗೊರಾಸಿನ ಸಿದ್ಧಾಂತ ನೂತನರೀತಿಯಲ್ಲಿ ಮಾರ್ಪಾಡಾದಂತೆಯೇ ಪ್ಲೇಟೋವಿನ ತತ್ವಶಾಸ್ತ್ರವೂ ಸಹ ಮತಾಚರಣೆಗೆ ಅನುಕೂಲವಾದ ರೀತಿಯಲ್ಲಿ ಪರಿಣಮಿಸಿತು. ಈ ಪರಿಣಾಮದಲ್ಲಿ ಅರಿಸ್ಟಾಟಲನ ಮತ್ತು ಸ್ಟೋಯಿಕರ ಸಿದ್ಧಾಂತಗಳೂ ಗುರುತಿಸಲಾಗದಂತೆ ಮಿಳಿತವಾದುವು. ಪರಮಾತ್ಮನೇ ಸರ್ವಪ್ರಪಂಚದಮೂಲ, ಆಧಾರ; ಪರಮಾತ್ಮನಲ್ಲಿಗೇ ಎಲ್ಲವೂ ಹಿಂತಿರುಗುವುದು. ಸರ್ವಕ್ಕೂ ಆತನೇ ಆದಿ, ಮಧ್ಯ ಮತ್ತು ಅಂತ್ಯ: ಆತನನ್ನುಳಿದ ವಸ್ತುವೇ ಇಲ್ಲ. ಆತನ ಸಂಗವೇ, ಆತನೊಡನೆ ಬಳಸುವ ವ್ಯವಹಾರವೇ, ಆತನಲ್ಲಿ ಲಯವಾಗುವ ಸಾಯುಜ್ಯವೇ, ಸರ್ವಮತಧರ್ಮಗಳ--ಸಕಲ ಕರ್ಮಾಚರಣೆಗಳ—ಅಂತ್ಯಗುರಿ. ಇಂಥ ಮೋಕ್ಷ ಮತಸಾಧನಗಳಿಂದಲ್ಲದೆ ಕೇವಲ ಜ್ಞಾನದಿಂದ ಲಭಿಸಲಾರದು.

ಅಮ್ಮೋನಿಯಸ್ ಸೆಕ್ಕಾಸ್ (ಕ್ರಿ. ಶ. ೧೭೫-೨೪೨), ಪ್ಲೊಟೀನಸ್ (ಕ್ರಿ. ಶ. ೨೨೪-೨೭೯), ಜಾಂಬ್ಲಿಕಸ್, ಪ್ರಾಕ್ಲಸ್—ಈ ಜ್ಞಾನಿಗಳೇ ನೂತನ ಪ್ಲೇಟೊ ಸಿದ್ಧಾಂತದ ಮುಖ್ಯ ಪ್ರತಿಪಾದಕರು. ಇಲ್ಲಿ ಅವರ ಮುಖಂಡನಾದ ಪ್ಲೊಟೀನಸ್ ಎಂಬ ಜ್ಞಾನಿಯ ತತ್ವಶಾಸ್ತ್ರವನ್ನು ಸ್ವಲ್ಪಮಟ್ಟಿಗೆ ಅವಲೋಕಿಸುವ ಪ್ರಯತ್ನಮಾಡಿದೆ.

## ಪ್ಲೊಟೀನಸ್

ಪ್ಲೊಟೀನಸ್ ಎಂಬವನು ಕ್ರಿ. ಶ. ೨೦೪ ರಲ್ಲಿ ಈಜಿಪ್ಟಿನ ಲೈಕೋಪೋಲಿಸ್ ಎಂಬ ನಗರದಲ್ಲಿ ಜನಿಸಿದನು. ಪ್ರಸಿದ್ಧಜ್ಞಾನಿಯೂ, ಮಂತ್ರತಂತ್ರವಿಶಾರದನೂ, ಗುಪ್ತವಿದ್ಯಾಪ್ರವೀಣನೂ, ಆದ ಅಮ್ಮೋನಿಯಾಸ್

ಸೆಕ್ಕಾಸ್ ಎಂಬ ಗುರುವಿನ ಬಳಿ ತತ್ವಶಾಸ್ತ್ರಾಭ್ಯಾಸಮಾಡಿ ರೋಮ್ ನಗರಕ್ಕೆ ಹೋಗಿ ಅಲ್ಲಿ ತನ್ನ ತತ್ವಶಾಲೆಯನ್ನು ಏರ್ಪಡಿಸಿದನು. ಈತನು ಕೇವಲ ಅನುಭವಯೋಗಿಯಾದುದರಿಂದ ಬರವಣಿಗೆಗಳಲ್ಲಿ ಅಭಿರುಚಿ ಯಿಲ್ಲದೆ ತನ್ನ ೫೦ನೆಯ ವರುಷದವರೆಗೂ ಯಾವ ಗ್ರಂಥವನ್ನೂ ಬರೆಯು ಲಿಲ್ಲ. ಕ್ರಿ.ಶ. ೨೭೦ರಲ್ಲಿ ಈತನು ಮೃತಿಹೊಂದಲು ಶಿಷ್ಯನಾದ ಪಾರ್ಫಿರಿ ಎಂಬಾತನು ಗುರುವಿನ ಬರವಣಿಗೆಗಳನ್ನೆಲ್ಲಾ ಪರಿಶೋಧಿಸಿ ಪ್ರಚುರ ಪಡಿಸಿದನು.

ಬ್ರಹ್ಮನು (the Absolute) ಸಮಸ್ತ ಭೂತಗಳ ಆವಾಸಸ್ಥಾನನು; ಸರ್ವ ದ್ವಂದ್ವವ್ಯತ್ಯಾಸ ಕಾರಣನು ; ಚೇತನಾಚೇತನ—ರೂಪಪ್ರಧಾನ —ಗಳಿಗೆಲ್ಲಾ ಮೂಲನು; ಆದರೂ ತಾನೋ ಎಂಪರೆ ಸರ್ವದ್ವಂದ್ವ ವ್ಯತ್ಯಾಸರಹಿತನು, ಸರ್ವ ವೈವಿಧ್ಯಬಹುತ್ವವಿದೂರನಾದ ಅದ್ವೈತನು, ಅದ್ವಿತೀಯನು; ಸರ್ವವನ್ನೂ ಒಳಗೊಂಡಿರುವವನು ಯಾವನೋ, ಯಾವ ನಿಂದ ಸರ್ವವೂ ಕ್ರಮವಾಗಿ ವಿಕಸನವಾಗುವುದೋ, ಅಂಥ ಸ್ವಯಂ ನಿರುತ್ಪನ್ನನಾದ ಪ್ರಥಮ ಕಾರಣನಾದ ಏಕನು. ವೈವಿಧ್ಯಕ್ಕೆ ಮೊದಲು ಏಕವಿದ್ದೇ ಇರಬೇಕು. ಏಕವೆಂಬುದು ಸರ್ವಸತ್ತಿಗೂ ಪೂರ್ವವಾದುದು, ಸರ್ವಸತ್ತಿಗೂ ಮೂಲವಾದುದು. ಬ್ರಹ್ಮನು ಸರ್ವಗುಣಾತೀತನು, ನಿರಾ ಖ್ಯಾತನು ; ಆತನನ್ನು ಕುರಿತು ನಾವು ಯಾವ ಪ್ರಮೇಯವನ್ನೂ ಉಪ ಯೋಗಿಸಲಾರೆವು. ನಾವು ಆತನಿಗೆ ಯಾವ ಗುಣವನ್ನಾರೋಪಿಸಿದರೂ ಆ ಗುಣದಿಂದ ಆತನನ್ನು ಬಂಧಿಸಿದಂತಾಗುವುದು, ಆ ಗುಣ ಆತನಿಗೆ ಮೇರೆಯಾಗಿ ಪರಿಣಮಿಸುವುದು ; ಬ್ರಹ್ಮನೋ ಭೂಮನು, ನಿರುಪಾಧಿ ಕನು, ಮೇರೆಗಳನ್ನೆಲ್ಲಾ ಮೀರಿದವನು; ಪರಿಪೂರ್ಣನು, ಏಕನು. ಮೇರೆ ಇದ್ದೆಡೆಯಲ್ಲಿ ಅಪೂರ್ಣತೆ ಇದ್ದೇ ಇರುವುದು : ಈ ಕಾರಣದಿಂದ ಸೌಂದರ್ಯ, ಸೌಜನ್ಯ, ಚೈತನ್ಯ, ಸಂಕಲ್ಪ, ಜ್ಞಾನ-ಇವೊಂದನ್ನೂ ನಾವು ಬ್ರಹ್ಮನಲ್ಲಿ ಆರೋಪಿಸಲಾರೆವು; ಬ್ರಹ್ಮನು ಸರ್ವಗುಣಪರಿಪೂರ್ಣನಾದುದ ರಿಂದಲೇ ಸರ್ವಗುಣಾತೀತನು. ಆತನು ಸತ್ತೆಂದು ನಾವು ಲಕ್ಷಣ ಹೇಳ ಲಾರೆವು , ಏಕೆಂದರೆ ಸತ್ತು ಚಿಂತ್ಯವಾದುದು, ಚಿಂತ್ಯವಾದುದೆಲ್ಲಾ ಕರ್ತೃ ಕರ್ಮಸ್ವರೂಪವಾಗಿರುವುದು; ಕರ್ತೃ ಕರ್ಮರೂಪವಾದುದೆಲ್ಲಾ

ಪಾರವುಳ್ಳದ್ದು, ಅಪರಿಪೂರ್ಣ. ಸತ್ಯ, ಸೌಜನ್ಯ, ಸೌಂದರ್ಯ, ಸಂಕಲ್ಪ, ಚೈತನ್ಯಗಳೆಲ್ಲಾ ಆತನನ್ನೇ ಆಶ್ರಯಿಸಿರುವುದರಿಂದ ಬ್ರಹ್ಮನು ನಿರಾಧಾರನು. ಬ್ರಹ್ಮನು ಚಿತ್ತೆಂದು ಹೇಳಲಾಗದು; ಏಕೆಂದರೆ ಚಿಂತನೆಯೆಲ್ಲಾ ಕರ್ತೃಕರ್ಮದ್ವಿರೂಪವಾದುದು, ಜ್ಞಾನಜ್ಞೇಯದ್ವಂದ್ವವುಳ್ಳದ್ದಾಗಿರುವುದು. ಬ್ರಹ್ಮನು ಆತ್ಮಚೇತನವುಳ್ಳ (self-conscious) ಪುರುಷನೆಂದೂ ಹೇಳಕೂಡದು; ಏಕೆಂದರೆ ಆತ್ಮಚಿಂತನೆಯಲ್ಲಿಯೂ ಸಹ ಚಿಂತಕ ಚಿಂತಿತವೆಂಬ, ಜ್ಞಾನಿಜ್ಞೇಯವೆಂಬ, ದ್ವಂದ್ವವಿದ್ದೇ ಇರುವುದು. ಸರ್ವತಂತ್ರ ಸ್ವತಂತ್ರನಾದ ಬ್ರಹ್ಮನಿಗೆ ಯಾವ ವಿಧವಾದ ಗುಣಾರೋಪಣೆಯೂ ಸಹ ಆತನ ಸ್ವಾತಂತ್ರ್ಯಕ್ಕೆ ಭಂಗತರುವುದು.

ಪ್ರಪಂಚವೆಲ್ಲಾ ಬ್ರಹ್ಮಸಮುದ್ಭವವಾದರೂ ಬ್ರಹ್ಮನು ಪ್ರಪಂಚವನ್ನು ಸೃಷ್ಟಿಸಲಿಲ್ಲ; ಕಾರಣ, ಸೃಷ್ಟಿಯೆಂದರೆ ಪ್ರಜ್ಞೆ ಮತ್ತು ಸಂಕಲ್ಪವೆಂದರ್ಥವಾಗುವುದು — ಪ್ರಜ್ಞೆ ಸಂಕಲ್ಪಗಳೆಂದರೆ ಪಾರವುಳ್ಳದ್ದೆಂದು ಹೇಳಬೇಕಾಗುವುದು. ಪ್ರಪಂಚ ಬ್ರಹ್ಮಪರಿಣಾಮ ಅಥವಾ ಬ್ರಹ್ಮವಿಕಸನವೆಂದೂ ಹೇಳಲಾಗುವುದಿಲ್ಲ: ಬ್ರಹ್ಮನು ಪರಮಪರಿಪೂರ್ಣನು. ಆತನು ಪರಿಣಾಮ ಹೊಂದಬೇಕಾದ ಅಗತ್ಯವೇನೂ ಇರುವುದಿಲ್ಲ. ಪ್ರಪಂಚ ಬ್ರಹ್ಮಶಕ್ತಿಯಿಂದ ನೈಸರ್ಗಿಕವಾಗಿ ಹೊರಹೊರಟ ಅದೊಂದು ಕಳಾವಿಶೇಷ; ಅಪಾರವಾದ ಬ್ರಹ್ಮತೇಜದಿಂದ ಅನಿರ್ವಾಹ್ಯವಾಗಿ ಹೊರಸೂಸಿದ ಅದೊಂದು ಕಾಂತಿವಿಶೇಷ. ಇದರರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಪ್ಲೋಟೀನಸ್ಸನು ಕೆಲವು ದೃಷ್ಟಾಂತಗಳನ್ನು ಹೇಳುವನು. ಬ್ರಹ್ಮನು ಅನಂತವಾದ ಒಂದು ಬುಗ್ಗೆ ಅಥವಾ ಊಟೆ, ಪ್ರಪಂಚ ಸ್ವಾಭಾವಿಕವಾಗಿ ಊಟೆಯಿಂದ ಹರಿಯುತ್ತಿರುವ, ಸದಾ ಹರಿಯುತ್ತಿದ್ದರೂ ಆ ಬುಗ್ಗೆಯನ್ನು ಶೋಷಿಸಲಾರದಂಥ, ಒಂದು ಪ್ರವಾಹ; ಬ್ರಹ್ಮನು ಅನಂತಜ್ಯೋತಿಯಾದ ಸೂರ್ಯನು; ಪ್ರಪಂಚ ಸೂರ್ಯನಿಂದ ಹೊರಸೂಸುತ್ತಿರುವ, ಸೂರ್ಯನ ಜ್ಯೋತಿಯನ್ನೆಂದಿಗೂ ಕಡಮೆಮಾಡಲಾರದಂಥ, ಒಂದು ಕಾಂತಿ ಅಥವಾ ಕಿರಣ. ಈ ವಿಧವಾದ ದೃಷ್ಟಾಂತಗಳಿಂದ ಬ್ರಹ್ಮನ—ಮೂಲತತ್ವದ–ನಿರ್ವಿಶಿಷ್ಟವಾದ ಸ್ಥಿತಿಶಕ್ತಿಗಳನ್ನೂ ಪರಿಪೂರ್ಣಸ್ವಾತಂತ್ರ್ಯವನ್ನೂ ನಿರೂಪಿಸಬೇಕೆಂಬುದೇ ಪ್ಲೋಟೀನಸ್ಸಿನ

ಉದ್ದೇಶ. ಬ್ರಹ್ಮನಿಗೂ ಪ್ರಪಂಚಕ್ಕೂ ಯಾವ ವಿಧವಾದ ಅಂತರ್ವ್ಯಾಪ್ತಿಯೂ ಇಲ್ಲ; ಕಾರ್ಯದಲ್ಲಿ ಕಾರಣ ಪ್ರವೇಶಿಸುವುದೂ ಇಲ್ಲ, ಕಾರ್ಯದಿಂದ ಕಾರಣ ಕರಗುವುದೂ ಇಲ್ಲ, ಕಾರ್ಯ ಯಾವ ವಿಧವಾಗಿಯೂ ಕಾರಣವನ್ನು ಬಂಧಿಸುವುದೂ ಇಲ್ಲ. ಬ್ರಹ್ಮನ ದೃಷ್ಟಿಯಲ್ಲಿ ಪ್ರಪಂಚ (ಕಾರ್ಯ) ಅಪ್ರಾಧಾನ್ಯ. ಪ್ರಪಂಚ ಬ್ರಹ್ಮನಿಗೆ ಪರತಂತ್ರವಾದುದು, ಪ್ರಪಂಚಕ್ಕೆ ಬ್ರಹ್ಮನೇ ಆಧಾರಭೂತನು. ಬ್ರಹ್ಮನಿಗೆ ಪ್ರಪಂಚದ ಸ್ಥಿತಿಗತಿಗಳಿಂದ ಆಗಬೇಕಾದುದೇನೂ ಇಲ್ಲ: ಆತನು ಸ್ವತಂತ್ರನು, ಪ್ರಪಂಚ ಆತನ ತೇಜದಿಂದ ಹೊರಸೂಸುತ್ತಿದ್ದರೂ ಆತನು ಅವ್ಯಯನು, ಭೂಮನು (unconditioned), ಸೀಮಾತೀತನು.

ಬ್ರಹ್ಮಜ್ಯೋತಿಯಿಂದ ನಾವು ದೂರ ಬಂದಷ್ಟೂ ಅಂಧಕಾರತತ್ತ್ವವಾದ ಪ್ರಧಾನಕ್ಕೆ ಸಮೀಪಗತರಾಗುವೆವು. ಆದುದರಿಂದ ಬ್ರಹ್ಮನನ್ನು ಬಿಟ್ಟು ಬಂದ ಪ್ರಪಂಚ (ಸೃಷ್ಟಿ) ಅಧೋಗತಿಯನ್ನು ಹೊಂದಿರುವುದು, ಅಪರಿಪೂರ್ಣ. ಸೃಷ್ಟಿಕ್ರಮದಲ್ಲಿ ನಾವು ಕೆಳಗೆ ಹೋದಷ್ಟೂ ವೈವಿಧ್ಯವೂ, ಬಹುತ್ವವೂ, ಪರಿಣಾಮವೂ, ಅನ್ಯತ್ವವೂ, ಅಪರಿಪೂರ್ಣತೆಯೂ ಹೆಚ್ಚುವುವು. ಪ್ರತಿ ಒಂದು ಸ್ಥಿತಿಯೂ ಅದಕ್ಕೆ ಹಿಂದಿನ ಸ್ಥಿತಿಯ ಆವಶ್ಯಕವಾದ ಫಲ—ಅದರ ಪ್ರತಿ, ಛಾಯೆ, ಉಪಲಕ್ಷಣ. ಹೀಗಿದ್ದರೂ ಪ್ರತಿ ಒಂದು ಸ್ಥಿತಿಯೂ ಹಿಂದಿರುಗಿ ಹೋಗಿ ಉತ್ಕೃಷ್ಟತರವಾದ ಸ್ಥಿತಿಯನ್ನು ಪಡೆಯಲು ಪ್ರಯತ್ನಿಸುವುದು; ಬ್ರಹ್ಮನನ್ನು ಬಿಟ್ಟು ಬಂದ ಮಾನವನು ಎಷ್ಟು ಅಧೋಗತಿಯನ್ನು ಹೊಂದಿದ್ದರೂ ಪುನಃ ತನ್ನ ಸ್ವಸ್ಥಾನವನ್ನು, ತನ್ನ ಆಶ್ರಯವನ್ನು, ಪರಮಪದವನ್ನು, ಸೇರಲು ಪ್ರಯತ್ನಪಡುವನು.

ಸೃಷ್ಟಿಕ್ರಮದಲ್ಲಿ ಅಥವಾ ಬ್ರಹ್ಮಜ್ಯೋತಿಯ ಹೊರಸೂಸುವಿಕೆಯಲ್ಲಿ ಪ್ರಸ್ಥಾನತ್ರಯಗಳನ್ನು ನಾವು ಕಾಣಬಹುದು: ಶುದ್ಧಚಿತ್ತ ಅಥವಾ ನಿರತಿಶಯಚೇತನ, ಆತ್ಮ ಮತ್ತು ಪ್ರಧಾನ. ಮೊದಲನೆಯ ಪ್ರಸ್ಥಾನದಲ್ಲಿ ಬ್ರಹ್ಮನು ಸಾಮಾನ್ಯಲೋಕವನ್ನು ಸಮೀಕ್ಷಿಸುವನು. ದೃಷ್ಟಪ್ರಪಂಚದಲ್ಲಿ ಎಷ್ಟು ವಿಧವಾದ ವಸ್ತು ಪ್ರತ್ಯೇಕಗಳಿರುವುವೋ ಬ್ರಹ್ಮಪ್ರಪಂಚದಲ್ಲಿ ಅಷ್ಟು ಸಾಮಾನ್ಯಗಳುಂಟು. ಈ ಶುದ್ಧಸಾಮಾನ್ಯ

ಪ್ರಪಂಚವೇ ಬ್ರಹ್ಮಚಿಂತನೆಗೆ ವಿಷಯವಾಗಿರುವುದು. ಆದರೂ ಬ್ರಹ್ಮನ ಚಿಂತನೆಯಲ್ಲಿ ಜ್ಞಾನ, ಜ್ಞೇಯ; ಚೇತನ, ಚಿಂತನೆಗಳು—ಈ ವಿಧವಾದ ದ್ವಂದ್ವ ವಿವಕ್ಷೆಗಳಿರುವುದಿಲ್ಲ. ಬ್ರಹ್ಮನು ಏಕನೂ ದೇಶಕಾಲಾತೀತನೂ ಆದುದರಿಂದ ಆತನಲ್ಲಿ ಚಿಂತಕನೂ ಚಿಂತನೆಯೂ, ಕರ್ತೃವೂ ಕರ್ಮವೂ, ಒಂದೇ ಆಗಿರುವುದು. ಸತ್ಯಜ್ಞಾನದಲ್ಲಿ ಚಿಂತನೆಯೂ ಅದರ ವಿಷಯವೂ ಏಕವಾಗಿರುವುದರಿಂದ ಬ್ರಹ್ಮಚಿಂತನೆ ಸತ್ಯಜ್ಞಾನವನ್ನು ಸ್ಥಾಪಿಸುವುದು. ಬ್ರಹ್ಮನು ಪರಿಪೂರ್ಣನೂ ಸಿದ್ಧಕಾಮನೂ ಆದುದರಿಂದ ಆತನು ಸ್ವವಿಷಯಕವಾದ ಚಿಂತನೆಯುಳ್ಳವನೇ ಹೊರತು ಪರವಿಷಯವನ್ನು ಚಿಂತಿಸಲು ಅವಕಾಶವೇ ಇಲ್ಲ. ಮಾನವನ ಚಿಂತನೆ ವಿಜ್ಞಾನರೂಪವಾದುದು (discursive): ಒಂದು ಯೋಚನೆಯಿಂದ ಮತ್ತೊಂದು ಯೋಚನೆಗೂ, ಪಕ್ಷದಿಂದ ಅನುಮೇಯಕ್ಕೂ, ಪ್ರವಹಿಸುವ ವಿಚ್ಛಿನ್ನ—ವಿಭಿನ್ನ—ಸ್ಥಿತಿಯುಳ್ಳದು ; ಬ್ರಹ್ಮನ ಚಿಂತನೆಯಾದರೋ, ಅವಿಚ್ಛಿನ್ನವಾಗಿ, ಏಕವಾಗಿ, ಸಾಮಾನ್ಯ ಲೋಕವನ್ನೆಲ್ಲಾ ಸಮಗ್ರ ದೃಷ್ಟಿಯಲ್ಲಿ ಏಕಕಾಲದಲ್ಲಿ ಅವಲೋಕಿಸಿ ಗ್ರಹಿಸುವ ಜ್ಞಾನರೂಪವಾದುದು (intuitive). ಸಾಮಾನ್ಯಗಳು ಅಸಂಖ್ಯಾತಗಳಾಗಿ ಪರಸ್ಪರ ವ್ಯತ್ಯಸ್ತಗಳಾಗಿದ್ದರೂ ಮೂಲತತ್ವ ಏಕರೂಪವಾಗಿರುವಂತೆ ತಾವೂ ಕ್ರಮಬದ್ಧವಾಗಿ ಸಮಾಕಾರವನ್ನು ಹೊಂದಿರುವುವು.

ರೂಪಪ್ರಪಂಚದಲ್ಲಿರುವ ಪ್ರತಿ ಒಂದು ಪ್ರತ್ಯೇಕಕ್ಕೂ ಸರಿಸಮಾನವಾದ ಸಾಮಾನ್ಯವೊಂದು ಬ್ರಹ್ಮನ ಚಿತ್ತದಲ್ಲುಂಟು. ಆದುದರಿಂದ ಶುದ್ಧಚೇತನವೇ ಭವಪ್ರಪಂಚದ ಮಾದರಿ, ಮೂಲಪ್ರತಿ : ದೇಶಕಾಲರಹಿತವಾದ, ಪರಿಪೂರ್ಣವಾದ, ನಿತ್ಯವಾದ, ಸಮಾಕಾರವಾದ ಬ್ರಹ್ಮನ ಜ್ಞಾನಪ್ರಪಂಚವೇ ಸಾಮಾನ್ಯಲೋಕವೆನಿಸುವುದು. ಸಾಮಾನ್ಯಗಳು ಮಾದರಿ ಮಾತ್ರಗಳಲ್ಲ; ಸೃಷ್ಟಿಕ್ರಮದಲ್ಲಿ ಪ್ರತಿ ಒಂದು ಪ್ರಸ್ಥಾನವೂ ತವನಂತರ ಬರುವ ಪ್ರಸ್ಥಾನದ ಕಾರಣವಾಗಿರುವುದರಿಂದ ಸಾಮಾನ್ಯಗಳನ್ನು ನಿಮಿತ್ತಕಾರಣಗಳೆಂದೂ ಹೇಳಬಹುದು.

ದೈವಪ್ರಕಾಶದಲ್ಲಿ ಆತ್ಮವೇ ಎರಡನೆಯ ಪ್ರಸ್ಥಾನ. ಪ್ರಥಮ ಪ್ರಸ್ಥಾನದ ಶುದ್ಧ ಚೇತನ ಸಾಮಾನ್ಯಲೋಕವನ್ನು ಒಳಗೊಂಡಿರು

ವುದು ಸರಿಯಷ್ಟೆ; ಈ ಸಾಮಾನ್ಯಗಳು ಕರ್ತೃತ್ವವನ್ನು ಅಥವಾ ಕ್ರಿಯಾಕಾರಿತ್ವವನ್ನು ಪಡೆದಿರುವುದರಿಂದ ಇವುಗಳ ಕರ್ತೃತ್ವ ಕ್ರಿಯೆಯೊಂದರಲ್ಲಿ ಫಲಿತವಾಗಬೇಕು. ಆತ್ಮವೇ ಇಂಥ ಕಾರ್ಯ; ಆತ್ಮವನ್ನು ಶುದ್ಧಚಿತ್ತದ ಪ್ರತಿಬಿಂಬ, 'ನಕಲು' ಅಥವಾ ಕಾರ್ಯವೆನ್ನಬಹುದು. ಕಾರ್ಯ ಅಥವಾ ನಕಲಿನಂತೆ ಶುದ್ಧಚಿತ್ತಕ್ಕಿಂತಲೂ ಪರಿಪೂರ್ಣತೆಯಲ್ಲಿ ಕೀಳಾದುದು. ಆತ್ಮ ಅತೀಂದ್ರಿಯವಾಗಿ ಜ್ಞಾನಮೂಲವಾದುದು; ಕರ್ತೃವಾಗಿ ಭಾವನೆಗಳನ್ನು ಪಡೆದಿರುವುದು; ಚೇತನಯುತವಾದುದು. ಆದರೂ ಶುದ್ಧಚಿತ್ತದಷ್ಟು ಪರಿಪೂರ್ಣವಾದ ಚಿಂತನೆಯನ್ನು ಆತ್ಮ ಹೊಂದಿರುವುದಿಲ್ಲ. ಆತ್ಮಚಿಂತನೆ ವಿಜ್ಞಾನವಾದುದು, ವಿಚ್ಛಿನ್ನರೂಪವಾದುದು. ಆತ್ಮಕ್ಕೆ ಎರಡುವಿಧವಾದ ಪ್ರವರ್ತನೆಗಳುಂಟು. ನಿರತಿಶಯಚೇತನದ ಕಡೆಗೆ ತಿರುಗಿದಾಗ ಶುದ್ಧಚಿತ್ತದಂತೆ ವರ್ತಿಸಿ ಸಾಮಾನ್ಯಗಳನ್ನು ಅವಲೋಕಿಸುವುದು ಒಂದು; ಇಂದ್ರಿಯಲೋಕದ ಕಡೆ ದೃಷ್ಟಿಸಿದಾಗ ಪ್ರಧಾನದಲ್ಲಿ ಕ್ರಮವನ್ನೂ ರೂಪವನ್ನೂ ತರಲೆಳಸುವುದು, ಕಾಮಬದ್ಧವಾಗುವುದು ಮತ್ತೊಂದು. ಚೇತನಾಭಿಮುಖವಾದಾಗ ಲೋಕಾತ್ಮವೆಂದೂ, ಪ್ರಧಾನೋನ್ಮುಖವಾದಾಗ ಪ್ರಕೃತಿಯೆಂದೂ ಕರೆಯಲ್ಪಡುವುದು. ಕೆಲವುಕಡೆ ಪ್ಲೊಟಿನಸ್ಸನು ಚೇತನ ಲೋಕಾತ್ಮ ಮತ್ತು ಪ್ರಕೃತಿ ಲೋಕಾತ್ಮ ಎಂಬುದಾಗಿ ಲೋಕಾತ್ಮಗಳು ಎರಡಿವೆ ಎಂದೂ ಪ್ರಕೃತಿ ಲೋಕಾತ್ಮವೆಂಬುದು ಚೇತನ ಲೋಕಾತ್ಮದಿಂದ ಕಿರಣರೂಪದಲ್ಲಿ ಹೊರಹೊರಡುವುದೆಂದೂ ಬರೆಯುತ್ತಾನೆ. ಚೇತನ ಲೋಕಾತ್ಮ ಅಖಂಡವಾದುದು, ಅವಿಭಾಜ್ಯ; ಭವಪ್ರಪಂಚದ ಪ್ರತ್ಯೇಕಗಳನ್ನು ಸ್ಫೂರ್ತಿಗೊಳಿಸಲೆಳಸುವ ಆತ್ಮಾಂಶವಾದರೋ ಖಂಡರೂಪವಾಗಿರುವುದು.

ಆತ್ಮಕ್ಕೆ ಕರ್ತೃತ್ವವಿದ್ದರೂ ತನ್ನ ಶಕ್ತಿಯನ್ನು ಪ್ರಯೋಗಿಸಲು ತಕ್ಕ ವಸ್ತುವೊಂದಿಲ್ಲದಿದ್ದರೆ ನಿಷ್ಫಲವಾಗುವುದು. ಪ್ರಧಾನವೇ ಆತ್ಮ ಕರ್ತೃತ್ವಕ್ಕೊಳಪಟ್ಟ ಕರ್ಮಣೀರೂಪವಾದ ವಸ್ತುವಿಶೇಷ. ಪ್ರಧಾನ ರೂಪರಹಿತವೂ, ಗುಣರಹಿತವೂ, ಶಕ್ತಿರಹಿತವೂ, ಅಯುತಸಿದ್ಧವೂ (inchoerent) ಆಗಿರುವುದು; ಅದು ಶುದ್ಧ ಶೂನ್ಯ, ನಿರ್ಜೀವ,

ದುರ್ಬಲ; ಅದರಲ್ಲಿ ಕಿಂಚಿತ್ತಾದರೂ ಬ್ರಹ್ಮನ ಗುರುತಾಗಲಿ, ಸಂಸ್ಕಾರವಾಗಲಿ ಇರುವುದಿಲ್ಲ. ಬ್ರಹ್ಮನಿಗೂ ಪ್ರಧಾನಕ್ಕೂ ಬಹುದೂರ; ಪ್ರಧಾನ ಅಪ್ಪಟ ಅರಿಷ್ಟತತ್ತ್ವ: ಅಂಧಾಕಾರಪೂರಿತವಾದುದು. ಅದು ಅಚಿಂತ್ಯ, ಅವಿಶೇಷ್ಯ, ಅಭಾವ್ಯ, ಕ್ಷಣಕ್ಷಣವೂ ಪರಿಣಾಮ ಹೊಂದುತ್ತಿರುವ ಭವಲೋಕದ ಪ್ರತ್ಯೇಕ ವಸ್ತುಗಳ ಅಧಿಷ್ಠಾನತತ್ತ್ವವಾಗಿರಬೇಕೆಂದು ಮಾತ್ರ ತಿಳಿಯಬಲ್ಲೆವು. ಇಂಥಾ ಪ್ರಧಾನದ ಮೇಲೆ ನಿಮಿತ್ತಕಾರಣಗಳಾದ ಆತ್ಮತತ್ತ್ವಗಳು ತಮ್ಮ ಶಕ್ತಿಯನ್ನು ಪ್ರಯೋಗಿಸಿ ದೈವಚಿತ್ತದಲ್ಲಿರುವ ಸಾಮಾನ್ಯಗಳಿಗನುಸಾರವಾಗಿ ಅವುಗಳ ಪ್ರತಿಬಿಂಬ ಅಥವಾ ಪ್ರತಿಕೃತಿ ರೂಪಗಳಾದ ಇಂದ್ರಿಯಲೋಕದ ಪ್ರತ್ಯೇಕವಸ್ತುಗಳನ್ನು ಸೃಷ್ಟಿಸುವುವು. ಪ್ರತ್ಯೇಕಗಳು ದೇಶಕಾಲನಿಬದ್ಧವಾದುವು; ಇವುಗಳನ್ನು ಚಿತ್ರಿಸುವ ಸಾಮಾನ್ಯಗಳಾದರೋ ಲೋಕಾತ್ಮನೊಂದಿಗೆ ದೇಶಕಾಲಾತೀತವಾದುವು. ಆದುದರಿಂದ ದೇಶಕಾಲಗಳ ಉತ್ಪತ್ತಿಗೆ ಪ್ರಧಾನವೇ ಆಶ್ರಯರೂಪವಾದ ಕಾರಣ. ಇಂದ್ರಿಯಪ್ರಪಂಚದಲ್ಲಿ ತೋರುವ ಸೌಂದರ್ಯ, ಸುಕ್ರಮ, ಸಮತೆ, ಏಕತೆಗಳಿಗೆಲ್ಲಾ ಬ್ರಹ್ಮಸಮುದ್ಭವವಾದ ಲೋಕಾತ್ಮನೇ ಮೂಲ.

ಈರೀತಿಯಾಗಿ ಮಾರ್ಗತ್ರಯಗಳಲ್ಲಿ ಸೃಷ್ಟಿಕಾರ್ಯ ಪ್ರಕಾಶಿಸುವುದು. ಇಂಥ ಜ್ಯೋತಿಪ್ರಕಾಶಕ್ಕೆ ಸೃಷ್ಟಿಯೆಂಬ ಪದವೇ ಅನನ್ವಯವಾಗಿರುವುದು: ಬ್ರಹ್ಮನ ನೈಜಶಕ್ತಿಯಿಂದಲೇ --ಸ್ವಭಾವಬಲವಿಶೇಷದಿಂದಲೇ—ತತ್ತ್ವಗಳೂ ಲೋಕಗಳೂ ಹೊರಸೂಸುವುವಲ್ಲದೆ ಆತನ ಇಚ್ಛೆ ಅಥವಾ ಸಂಕಲ್ಪದಿಂದಲ್ಲ. ಮೇಲೆ ವಿವರಿಸಿದ ಸ್ಥಾನತ್ರಯಗಳು ವಿಜ್ಞಾನಪೂರ್ವಕವಾಗಿ ನಾವು ವಿವಕ್ಷೆ ಮಾಡಬಹುದಾದ ಮೆಟ್ಟಿಲುಗಳೇ ಹೊರತು ಯಥಾರ್ಥವಾಗಿ ಪರಸ್ಪರ ಪ್ರತ್ಯೇಕವಲ್ಲ: ಸೃಷ್ಟಿಕಾರ್ಯ ಏಕವಾದುದು, ಅಖಂಡವಾದುದು, ನಿತ್ಯವಾದುದು. ಅರಿಸ್ಟಾಟಲನು ಹೇಳಿದಂತೆ ಪ್ಲೋಟೀನಸ್ಸನೂ ಜಗತ್ತು ನಿತ್ಯವೆಂದೊಪ್ಪುವನು. ಲೋಕಾತ್ಮ ದೇಶಕಾಲಾತೀತವಾದರೂ ಪ್ಲೋಟೀನಸ್ಸನು ಕೆಲವು ಕಡೆ ಕಾಲ ಲೋಕಾತ್ಮನಿಂದ ಉತ್ಪತ್ತಿಯಾಯಿತೆಂದೂ, ಕಾಲದಿಂದ ಜಗತ್ತು ಸೃಷ್ಟಿಯಾಯಿತೆಂದೂ ಹೇಳುವನು. ಜಗತ್ತು ನಿತ್ಯವಾದರೂ ಪ್ರಳಯಸೃಷ್ಟಿಗಳು ಒಂದರ

ಹಿಂದೆ ಒಂದು ಸಂಭವಿಸುತ್ತಿರುವುವೆಂದು ಹೇಳಿದ ಸ್ಟೋಯಿಕರ ಮತ ವನ್ನು ಪ್ಲೋಟೀನಸ್ಸನು ಅನುಮೋದಿಸುವನು. ಪ್ರಪಂಚದ ಕೆಲಭಾಗಗಳು ಕೆಲವೆಡೆಯಲ್ಲಿ ಪರಿಣಾಮ ಹೊಂದುತ್ತಿದ್ದರೂ ಆದ್ಯಂತ ದೃಷ್ಟಿಯಲ್ಲಿ ಜಗತ್ತು ಅನಾದಿ, ಅದು ಹಿಂದೆ ಇಲ್ಲದೆ ಇದ್ದುದಿಲ್ಲ, ಈಗ ಇರುವುದು, ಮುಂದೆಯೂ ಇಲ್ಲದೆ ಇರುವುದಿಲ್ಲ.

ಮಾನವಾತ್ಮ (ಜೀವಾತ್ಮ) ಲೋಕಾತ್ಮದ ಒಂದಂಶವಿಶೇಷ. ಪ್ರಥಮದಲ್ಲಿ ಜೀವಾತ್ಮ ಬ್ರಹ್ಮನಕಡೆ ದೃಷ್ಟಿ ಇಟ್ಟು ಶುದ್ಧಸಾಮಾನ್ಯ ಗಳನ್ನು ಸಮೀಕ್ಷಿಸುತ್ತಾ ಅವುಗಳ ಧ್ಯಾನದಿಂದ ಮುಕ್ತವಾಗಿತ್ತು. ಪ್ರಪಂಚದಕಡೆ ತಿರುಗಿದೊಡನೆಯೇ ಅಧಃಪತನವಾಗಿ ದೇಹಿಯಾಗಿ ಬಂಧನವನ್ನು ತಂದುಕೊಂಡಿತು. ಈ ವಿಧವಾದ ಅಧೋಗತಿಗೆ ಪ್ರಧಾನ ಮನ್ನರೂಪು ಗೊಳಿಸಬೇಕೆಂದು ಈಶ್ವರನ (ಲೋಕಾತ್ಮದ) ಇಚ್ಛೆಯೂ, ವಿಷಯಸುಖವನ್ನು ಸವಿನೋಡಬೇಕೆಂಬ ಅಂಶಾತ್ಮದ ಕಾಮವೂ ಕಾರಣ ವೆಂದು ಪ್ಲೋಟೀನಸ್ಸನು ಅಭಿಪ್ರಾಯಪಡುವನು. ದೇಹಿಯಾದೊಡ ನೆಯೇ ಆತ್ಮದ ಸ್ವಾತಂತ್ರ್ಯ ತಪ್ಪಿತು ; ಏಕೆಂದರೆ ಕಾಮಪಾಶಗಳಿಂದ ಬಿಡುಗಡೆಯಾಗಿ ಊರ್ಧ್ವಮುಖವಾಗಿ ಬ್ರಹ್ಮತತ್ವವನ್ನು ನಿಧಿಧ್ಯಾಸನ ಮಾಡುವುದೇ ಆತ್ಮಸ್ವಾತಂತ್ರ್ಯದ ಹೆಗ್ಗುರುತು, ಆತ್ಮದ ಪರಮಶ್ರೇಯ. ಹೀಗೆ ವಿಮುಕ್ತವಾಗಲು ಪ್ರಯತ್ನಪಡದೆ ಇಂದ್ರಿಯೋಪಭೋಗ ಗಳಲ್ಲಿಯೇ ನೆಟ್ಟ ಮನಸ್ಸುಳ್ಳುದಾದರೆ ಆತ್ಮ ದೇಹದ ಅವಧಿ ತೀರಿದೊಡ ನೆಯೇ ಮರಳಿ ಪ್ರತ್ಯೇಕ ಮಾನವದೇಹವನ್ನೋ, ಇಲ್ಲವೆ ಅದರ ಪಾಪ ಕರ್ಮಕ್ಕನುಸಾರವಾದ ಪ್ರಾಣಿವರ್ಗದ, ಕಡೆಗೆ ಸಸ್ಯವರ್ಗದ, ದೇಹ ವನ್ನೋ, ಧರಿಸುವುದು. ಆದರೆ ಹೀಗೆ ದೇಹಾಂತರಗಳನ್ನು ಹೊಂದುವ ತತ್ವ ಆತ್ಮನ ಛಾಯಾಮಾತ್ರವಾದ, ಅಜ್ಞಾನಪೂರ್ವಕವಾದ, ಪಾಪ ಪುಣ್ಯಕರ್ಮಾಶಯವಾದ, ಕಾಮರಾಗಾದಿಗಳ ಮೂಲವಾದ, ಪಶು ಭಾಗವೇ ಅಲ್ಲದೆ ನಿಜವಾದ ಆತ್ಮವಲ್ಲ. ನಿಜಾತ್ಮನು ಶುದ್ಧ ಚಿತ್ತ ಸ್ವರೂಪನು : ಚೇತನ ಮುಖಾಂತರ ಬಹ್ಮನನ್ನು ಅರಿತು ನಿಧಿ ಧ್ಯಾಸನದ ಮೂಲಕ ಬ್ರಹ್ಮನನ್ನು ಸೇರುವುದೇ ಈ ಆತ್ಮನ ನಿಜವಾದ ಕಲ್ಯಾಣ.

ಮುಕ್ತಿಯನ್ನು ಹೊಂದಲು ಹಲವು ಮಾರ್ಗಗಳುಂಟು. ಪ್ರಥಮದಲ್ಲಿ ಮಾನವನು ತನ್ನ ಶರೀರವನ್ನೂ ಇಂದ್ರಿಯಗಳನ್ನೂ ವಶಪಡಿಸಿಕೊಂಡು ಕಾಮರಾಗಾದಿಗಳ ಸಂಸ್ಕಾರದಿಂದ ಸಂಪೂರ್ಣವಾಗಿ ನಿವೃತ್ತನಾಗಿ ಜಿತೇಂದ್ರಿಯನೆನಿಸಿಕೊಳ್ಳಬೇಕು. ಜಿತೇಂದ್ರಿಯತ್ವದಿಂದ ದೇಹವೂ ಮನಸ್ಸೂ ಪರಿಶುದ್ಧವಾಗುವುವು. ದೇಹ ಪಾರಿಶುದ್ಧ್ಯ ಲಭಿಸಿದ ಬಳಿಕ ಮನೋಪರಿಪಾಕಕ್ಕೆ ಪ್ರಯತ್ನಪಡಬೇಕು. ಜಿಜ್ಞಾಸೆಯಿಂದಲೂ ಮನನದಿಂದಲೂ ಯಥಾರ್ಥ ತತ್ವವನ್ನು ಗ್ರಹಿಸಲು ಪ್ರಯತ್ನಪಟ್ಟು ಸಾಮಾನ್ಯಗಳನ್ನು ಕುರಿತು ಚಿಂತಿಸಬೇಕು. ಸಾಮಾನ್ಯಲೋಕ ಬ್ರಹ್ಮಸಾನ್ನಿಧ್ಯವನ್ನು ತರುವುದರಿಂದ ಸಾಮಾನ್ಯಗಳ ಚಿಂತನೆ ಬಹು ಶ್ರೇಯಸ್ಕರವಾದುದು. ಆದರೆ ಈ ವಿಧವಾದ ಧ್ಯಾನಕ್ಕಿಂತಲೂ ಅತಿಶಯತರವಾದ ಪ್ರಸ್ಥಾನವೊಂದುಂಟು; ಇದೇ ಸಮಾಧಿ (Ecstasy) ಎನಿಸುವುದು. ಈ ಸಮಾಧಿಸ್ಥಿತಿಯಲ್ಲಿ ಆತ್ಮನು ಧ್ಯಾನಲೋಕವನ್ನೂ ದಾಟಿದವನಾಗಿ ಸಮಸ್ತವಿಧವಾದ ಚಿತ್ತವೃತ್ತಿಗಳನ್ನೂ ನಿಲ್ಲಿಸಿದವನಾಗಿ, ಅಂಶಭೇದಗಳನ್ನೆಲ್ಲಾ ಮರೆತವನಾಗಿ, ಅನಿರ್ವಚನೀಯವಾದ ಆನಂದಸಾಗರದಲ್ಲಿ ಮುಳುಗಿದವನಾಗಿ, ಸರ್ವಂ, ಶುಭಂ, ಶಾಂತಂ ಎನಿಸಿಕೊಂಡ ಆ ಬ್ರಹ್ಮನಲ್ಲಿ ಐಕ್ಯವಾಗಿ ಬ್ರಹ್ಮಸಾಯುಜ್ಯವನ್ನು ಪಡೆಯುವನು. ಇದೇ ಆತ್ಮಕಲ್ಯಾಣದ ಪರಮಾವಧಿ; ಇದನ್ನು ಪಡೆಯುವುದಕ್ಕೋಸ್ಕರವೇ ಜೀವನು ಸಂಸಾರಸಾಗರದಲ್ಲಿ ಮುಳುಗಿ ತೇಲಿ ಒದ್ದಾಡಿ ಶ್ರಮಪಡುವುದು; ಈ ಸಮಾಧಿಯೋಗವೇ ಸಕಲ ಸದ್ಗುಣ ಸದಾಚಾರಗಳ ಅಂತ್ಯ ಫಲ. ಯಮ ನಿಯಮಗಳಿಂದ ಜೀವನು ದಮೆಯನ್ನು ಸಂಪಾದಿಸಿ, ದೈಹಿಕ-ಪ್ರಾಪಂಚಿಕ-ವಿಷಯ ಲಾಲಸೆಗಳಿಂದ ಬಿಡುಗಡೆಯನ್ನು ಹೊಂದಿ, ಮುಕ್ತಿಹೊಂದಲು ಅಧಿಕಾರಿಯಾಗುವನು; ಪ್ರತ್ಯಾಹಾರ ಧಾರಣ ಧ್ಯಾನಗಳಿಂದ ಚಿತ್ತವನ್ನು ಒಮ್ಮುಖಕ್ಕೆ ತಂದು, ಬ್ರಹ್ಮನ ಕಲ್ಯಾಣಗುಣಕಥನದಿಂದ ಅದನ್ನು ಪರಿಪಕ್ವಗೊಳಿಸುವನು; ಸಮಾಧಿ ಅಥವ ತುರೀಯಾವಸ್ಥೆಯಲ್ಲಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಸರ್ವವೆನಿಸಿಕೊಂಡ ಆ ತತ್ತ್ವನಲ್ಲಿಯೇ ಸೇರಿಹೋಗುವನು.

ಈ ಸಮಾಧಿ (ecstasy) ಅಥವಾ ಲಯಯೋಗ (merger) ಎಂಬುದು ಪಾಶ್ಚಾತ್ಯರ ಸಾಧಾರಣವಾದ ಭಾಷಾಪ್ರಯೋಗಗಳಲ್ಲಾಗಲಿ ಅವರ ದಿನಚರಿಯ ಆಚಾರ ವ್ಯವಹಾರಗಳಲ್ಲಾಗಲಿ, ಕಂಡುಬರುವುದಿಲ್ಲ: ಅಷ್ಟೇಕೆ, ಈ ಅಭಿಪ್ರಾಯವೇ ಅವರ ಚಿತ್ತಪ್ರಪಂಚಕ್ಕೆ ಪರಕೀಯವಾದುದು. ಅವರು ಇದರ ತತ್ವವನ್ನು ಸಂಪೂರ್ಣವಾಗಿ ಗ್ರಹಿಸಿದಾರೆಂದೂ ಹೇಳುವುದಕ್ಕಾಗುವುದಿಲ್ಲ. ಇದಕ್ಕೆ ನಿದರ್ಶನವಾಗಿ ಆಧುನಿಕ ಪಾಶ್ಚಾತ್ಯ ತತ್ವವಿವೇಚನೆಯಲ್ಲಿ ಒಂದು ಬಾರಿಯಾದರೂ ಸಮಾಧಿ ಎನ್ನುವ ಅಭಿಪ್ರಾಯದ ಸೂಚನೆಯನ್ನಾದರೂ ನಾವು ಕಾಣಲಾರೆವು. ಪುರಾತನ ಗ್ರೀಕರಲ್ಲಿಯೂ ಈ ಭಾವನೆ—ಪೈಥಗೋರಿಯನರನ್ನೂ ಅವರ ಅನುಯಾಯಿಯಾದ ಸಾಕ್ರಟೀಸನನ್ನೂ ಬಿಟ್ಟರೆ—ಅತಿವಿರಳವೆಂದೇ ಹೇಳಬಹುದು. ಪರಂತು ಅವರ ತತ್ವಶಾಸ್ತ್ರಗಳನ್ನು ಕುರಿತು ಪಾಶ್ಚಾತ್ಯರು ಬರೆದಿರುವ ಗ್ರಂಥಗಳಿಂದ ಹೀಗೆಂದು ವ್ಯಕ್ತಪಡುವುದು. ಈಗ ನಾವು ವಿಮರ್ಶಿಸುತ್ತಿರುವ ಸಂಧಿಕಾಲದಲ್ಲಿಯೂ, ಈ ಕಾಲದ ತತ್ವಶಾಸ್ತ್ರವಾಸನೆಯಿಂದ ಸಂಸ್ಕೃತವಾಗಿ ಮುಂದೆ ಹರಡಿದ "ಅಂಧಕಾರಯುಗ"ದ (Dark Ages) ತತ್ವಶಾಸ್ತ್ರಗಳಲ್ಲಿಯೂ ಮಾತ್ರ ಈ ಅರ್ಥವನ್ನು ಪದೇ ಪದೇ ನಾವು ಕಾಣುವೆವು. ಈ ಕಾರಣಗಳಿಂದಲೂ ಮತ್ತು ಈ ಕಾಲದಲ್ಲಿ ಪೌರ್ವಾತ್ಯಮತಗಳು ಗ್ರೀಸ್‌ದೇಶದಲ್ಲೆಲ್ಲಾ ವೇಷಾಂತರ ಮೂಲಕ ಹರಡಿದ್ದುವೆಂದು ಚರಿತ್ರಕಾರರಿಂದ ತಿಳಿದುಬರುವುದರಿಂದಲೂ, ಗ್ರೀಕ್ ಅಥವಾ ಪಾಶ್ಚಾತ್ಯ ತತ್ವಶಾಸ್ತ್ರದಲ್ಲಿ ಆಗಾಗ್ಗೆ ಕಂಡುಬರುವ ಸಮಾಧಿಯೋಗದ ವಿವರ ಪೌರ್ವಾತ್ಯ ಅದರಲ್ಲಿಯೂ ಹಿಂದೂ ದೇಶದ ಮತಗಳ ಪ್ರಸಾರಣೆಯಿಂದ ಅರಿತುಕೊಂಡ ತತ್ವವೆಂದು ಧಾರಾಳವಾಗಿ ಹೇಳಬಹುದು.೧

ಪ್ಲೋಟೀನಸ್ಸಿನ ತತ್ವಶಾಸ್ತ್ರ ಪೌರ್ವಾತ್ಯಮತಗಳ ಮತ್ತು ಗ್ರೀಕ್ ತತ್ವಶಾಸ್ತ್ರದ ಸಮ್ಮಿಶ್ರಣಫಲ. ಲೋಕನಾಯಕನಾದ ಈಶ್ವರನನ್ನು,

೧. ಇದಕ್ಕೆ ಆಧಾರವಾಗಿ ಒಂದು ವಿಷಯವನ್ನು ಇಲ್ಲಿ ಹೇಳಬಹುದು. ನವೀನ ಪ್ಲೇಟೋ ಸಿದ್ಧಾಂತವನ್ನೇ—ಅದರಲ್ಲಿ ಪ್ಲೋಟೀನಸ್ಸಿನ ಮತವನ್ನೇ—ಗ್ರೀಕ್ ಸಂಸ್ಕಾರಕ್ಕೆ ವಿರೋಧವಾದುದೆಂದೂ ಅಗ್ರೀಕವಾದುದೆಂದೂ (un-Greek) ಸ್ಟೇಸ್

ಸ್ತುತಿಸುವುದರಿಂದ ಈ ತತ್ವಶಾಸ್ತ್ರವನ್ನು ವಿಶ್ವೇಶ್ವರವಾದವೆಂದೂ, ಜಗತ್ತಿನಲ್ಲಿ ಸರ್ವವೂ ಬ್ರಹ್ಮಸಾಕ್ಷಾತ್ಕಾರವೆಂದು ಬೋಧಿಸುವುದರಿಂದ ವಿಶ್ವಬ್ರಹ್ಮವಾದವೆಂದೂ ಹೇಳಬಹುದು. ಇದರ ಪ್ರಧಾನತತ್ವವಾದ ಸಮಾಧಿಯೋಗ ಒಂದೇ ಜೀವಮಾನದಲ್ಲಿ ಸರ್ವರಿಗೂ ಲಭ್ಯವಲ್ಲ ದಿದ್ದರೂ, ಸರ್ವರೂ ಅದನ್ನು ಗಳಿಸಿಕೊಳ್ಳುವ ಉದ್ದೇಶದಿಂದ ಆತ್ಮ ಸಂಯಮವನ್ನೂ, ಸದ್ಗುಣಸಂಪತ್ತಿಯನ್ನೂ ಚಿತ್ತಪ್ರಶಾಂತತೆಯನ್ನೂ ಪಡೆಯಲು ಪ್ರಯತ್ನಪಡಬೇಕು.

ಟೈರ್‌ದೇಶದ ಪಾರ್ಫಿರಿ ಎಂಬವನೂ, ಛಾಲ್ಸಿಸ್‌ನಗರದ ಜಾಂಬ್ಲಿ ಕಸ್ ಎಂಬಾತನೂ ಪ್ಲೋಟೀನಸ್ಸಿನ ಮುಖ್ಯಶಿಷ್ಯರೆನಿಸಿ ಆತನ ಮತವನ್ನು ಗ್ರೀಸ್‌ದೇಶದಲ್ಲೂ ರೋಮ್ ಚಕ್ರಾಧಿಪತ್ಯದಲ್ಲಿಯೂ ಹರಡಲುಜ್ಜುಗಿಸಿ ದರು. ಕ್ರಿ. ಶ. ೫ನೆಯ ಶತಮಾನದಲ್ಲಿ ಪ್ರಾಕ್ಲಸ್ ಎಂಬವನಿಂದ ನವೀನ ಪ್ಲೇಟೊ ಸಿದ್ಧಾಂತ ಅಥೇಸ್‌ನಗರದ ಅಕೆಡಮಿಯಲ್ಲಿ ಪುನರ್ಜೀವ ವನ್ನು ಹೊಂದಿತು. ಆದರೆ ಕ್ರಿ. ಶ. ೫೨೯ರಲ್ಲಿ ಕ್ರಿಸ್ತಮತಾವಲಂಬಿಯಾದ ಜಸ್ಟೀನಿಯನ್ ಎಂಬ ರೋಮನ್ ಚಕ್ರಾಧಿಪತಿ ಅಥೇನ್ಸ್ ನಗರದ ವಿದ್ಯಾ ಪೀಠವನ್ನೂ ದೇಶದಲ್ಲೆಲ್ಲಿಯೂ ತತ್ವಶಾಸ್ತ್ರಶಾಲೆಗಳನ್ನೂ ಸಂಪೂರ್ಣ ವಾಗಿ ಮುಚ್ಚಿಬಿಡಬೇಕೆಂದು ಶಾಸನ ಮಾಡಿದಂದಿನಿಂದ ಗ್ರೀಕ್ ತತ್ವ ಶಾಸ್ತ್ರ ಮುಕ್ತಾಯಕ್ಕೆ ಬಂದಿತು. ತದನಂತರ ಪ್ಲೇಟೊ ಅರಿಸ್ಟಾಟಲ್

ಮೊದಲಾದ ಹಲವು ಆಧುನಿಕ ಪಾಶ್ಚಾತ್ಯ ಪಂಡಿತರು ಅಲ್ಲಗಳೆಯುವರು. ಪ್ಲೇಟೋ ವಿನ "ಟಿಮೇಯುಸ್" ಸಂವಾದದಲ್ಲಿ ಅನೇಕ ರಹಸ್ಯ ವಿಷಯಗಳು ಅಡಗಿರುವು ವೆಂಬುದನ್ನು ನಾವು ಮರೆಯಬಾರದು. ಇದರ ತಳಹದಿಯಮೇಲೆ ನಿಂತಿರುವುದ ರಿಂದಲೇ ನಾವು ವಿಮರ್ಶಿಸುತ್ತಿರುವ ಸಿದ್ಧಾಂತಕ್ಕೆ "ನವೀನಪ್ಲೇಟೊ" ಸಿದ್ಧಾಂತ ಎಂದು ಹೆಸರು ಬಂದಿರುವುದು. "ಟಿಮೇಯುಸ್" ಗ್ರಂಥವೂ ಕೂಡಾ ಆರ್ಯಗುಪ್ತವಿದ್ಯೆ ಯನ್ನು (Secret Doctrine) ಅನುಸರಿಸಿರುವುದೆಂದು ಕೆಲವರ ಮತ. ಅದು ಹೇಗಿ ದ್ದರೂ ನವೀನ ಪ್ಲೇಟೊ ಸಿದ್ಧಾಂತದಲ್ಲಂತೂ ನಾವು ಕಾಣುವ ಅನೇಕ ವಿಷಯಗಳು ಮತ್ತು ಭಾವಗಳು ಹಿಂದೂ ವೇದಾಂತ ಗ್ರಂಥಗಳನ್ನು ಬಿಟ್ಟರೆ ಮತ್ತೆಲ್ಲಿಯೂ ಇಷ್ಟು ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಈ ಕಾರಣಗಳಿಂದ ಪ್ಲೋಟೀನಸ್ಸಿನ ಸಿದ್ಧಾಂತ ಅದ ಕ್ಕಿಂತಲೂ ಹೆಚ್ಚು ಪ್ರಾಚೀನವಾದ ಹಿಂದೂ ವೇದಾಂತವನ್ನು ಅವಲಂಬಿಸಿದೆ ಎಂದು ಹೇಳಲು ಸಾಕಾದಷ್ಟು ಆಧಾರಗಳಿವೆ.

ಮೊದಲಾದ ಪ್ರಮುಖ ತತ್ತ್ವವೇತ್ತೃಗಳ ಶಾಸ್ತ್ರಗಳಮೇಲೆ ಭಾಷ್ಯ, ಟೀಕೆ ಮೊದಲಾದ ಉದ್ಗ್ರಂಥಗಳು ಬರೆಯಲ್ಪಟ್ಟರೂ, ದರ್ಶನಸ್ಥಾಪಕದೃಷ್ಟಿಯಲ್ಲಿ ಗ್ರೀಕ್ ತತ್ತ್ವಶಾಸ್ತ್ರ ಇಲ್ಲಿಗೆ ಮುಗಿಯಿತೆಂದೇ ಹೇಳಬೇಕು. ಅದರ ಅಧಿಕಾರ, ವ್ಯಾಪ್ತಿಪ್ರಾಶಸ್ತ್ಯ, ಸನ್ಮಾನಗಳನ್ನೆಲ್ಲಾ, ಆಗಾಗಲೇ ತಲೆಯೆತ್ತಿ ಮುಂದೆ ವಿಶಾಲಪ್ರಪಂಚವನ್ನೆಲ್ಲಾ ಆಕ್ರಮಿಸುವುದರಲ್ಲಿದ್ದ ನೂತನ (ಕ್ರೈಸ್ತ)ಮತ ಕಿತ್ತುಕೊಂಡಿತು. ಆದರೂ ಅದೃಷ್ಟದ ಕುಚೋದ್ಯವೋ ಎಂಬಂತೆ ಜ್ಞಾನಪ್ರಪಂಚವನ್ನೆಲ್ಲಾ ಗೆಲ್ಲಲು ಪ್ರಯತ್ನಿಸಿದ ಈ ನೂತನ ಮತ ಗ್ರೀಕರ ತತ್ತ್ವಶಾಸ್ತ್ರದೊಡನೆ ಸ್ನೇಹಬೆಳಸಿ ಅದರ ಮುಖ್ಯ ತತ್ತ್ವಗಳನ್ನೆಲ್ಲಾ ತನ್ನಲ್ಲಿಯೇ ಮಿಳಿತಮಾಡಿಕೊಂಡು ತನ್ನ ದಿಗ್ವಿಜಯ ಕಾರ್ಯಕ್ಕೆ ಅದನ್ನು ಪ್ರಧಾನ ದಳಪತಿಯನ್ನಾಗಿ ಮಾಡಿಕೊಂಡಿತು.

# ಪರಿಸಮಾಪ್ತಿ

ಪುರಾತನ ಗ್ರೀಕರ ತತ್ತ್ವಶಾಸ್ತ್ರಚರಿತ್ರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದಾಯಿತು. ಈ ಚರಿತ್ರೆಯಲ್ಲಿ ಪ್ರಧಾನ ಪ್ರಸ್ಥಾನಗಳನ್ನು ಪ್ರಸ್ತಾಪಿಸಿದ್ದೇವೆಯೇ ಹೊರತು ಹೆಚ್ಚು ವಿವರಗಳಿಗೆ ಹೋಗಿಲ್ಲ. ತಾತ್ತ್ವಿಕ ದೃಷ್ಟಿಯಲ್ಲಿ ಗೌಣರಾದವರ ಸಿದ್ಧಾಂತಗಳನ್ನೂ ವಿಮರ್ಶಿಸಿಲ್ಲ. ಪಾಶ್ಚಾತ್ಯತತ್ತ್ವಶಾಸ್ತ್ರವೆಂದರೆ ಗ್ರೀಕರ ತತ್ತ್ವಶಾಸ್ತ್ರ ಒಂದೇ ಎಂದು ತಿಳಿಯಕೂಡದು. ಗ್ರೀಕರ ತತ್ತ್ವಶಾಸ್ತ್ರಕ್ಕೆ ವಾಡಿಕೆಯಲ್ಲಿ "ಪ್ರಾಚೀನ ತತ್ತ್ವಶಾಸ್ತ್ರ" (Ancient Philosophy) ಎಂದು ಹೆಸರು. ಗ್ರೀಕರ ಕಾಲವಾದ ಮೇಲೆ ಕ್ರೈಸ್ತಮತ ತಲೆಯೆತ್ತಿ ಯೂರೋಪಿನಲ್ಲೆಲ್ಲಾ ಹರಡಿದ ಮೇಲೆ ಈ ಮತವನ್ನು ತಾತ್ತ್ವಿಕ ರೀತಿಯಲ್ಲಿ ಸಂಸ್ಕರಣಗೊಳಿಸಲು, ಸಮರ್ಥನೆಗೊಳಿಸಲು, ಮತಬೋಧಕರು ಕ್ರಿ. ಶ. ಮೊದಲನೆಯ ಶತಮಾನದಿಂದ ಹಿಡಿದು ಹೆಚ್ಚು ಕಡಮೆ ಕ್ರಿ. ಶ. ೧೫೦೦ರವರೆಗೂ ಪ್ರಯತ್ನಪಟ್ಟರು. ಈ ಅವಧಿಯಲ್ಲಿ ನಡೆದ ಉದ್ಯಮಕ್ಕೆ "ಮಧ್ಯಯುಗದ ತತ್ತ್ವಶಾಸ್ತ್ರ" (Medieval Philosophy) ಎಂದು ಹೆಸರು. ಇದರಲ್ಲಿ ಅನೇಕ ಶಾಖೋಪಶಾಖೆಗಳು ಆಗಿಹೋದುವು. ಕ್ರಿ. ಶ. ಆರು, ಏಳು, ಎಂಟನೆಯ ಶತಮಾನಗಳನ್ನು "ಅಂಧಕಾರಯುಗ" (Dark Ages) ಎಂದು ಕರೆಯುವುದು ರೂಢಿ. ನಾಲ್ಕೈದು ಶತಮಾನಗಳ ಕಾಲದಲ್ಲಿ ಪಡುವಣ ಯೂರೋಪನ್ನೆಲ್ಲಾ ಆವರಿಸಿ ಕ್ರೈಸ್ತಮತ ಬೇರೂರಿದ ಮೇಲೆ ಗ್ರೀಕ್ ತತ್ತ್ವಶಾಸ್ತ್ರ ಮಾಯವಾಯಿತಲ್ಲದೆ ಗ್ರೀಕ್ ಸಂಸ್ಕೃತಿಯನ್ನೇ ಕ್ರಿಶ್ಚಿಯನ್ನರು ಮರೆತುಬಿಟ್ಟರು. ಮತಪ್ರಾಬಲ್ಯವೇ ಅಧಿಕವಾಗಿ ಕಲೆ, ವಿಜ್ಞಾನ, ತತ್ತ್ವಶಾಸ್ತ್ರ, ಸಾಹಿತ್ಯ, ಒಂದೂ ಏಳಿಗೆ ಹೊಂದಲಿಲ್ಲ. ಈ ಕಾರಣದಿಂದ ಈ ಯುಗಕ್ಕೆ ಅಂಧಕಾರಯುಗವೆಂದು ಹೆಸರಾಯಿತು. ಆದರೆ ಅದೃಷ್ಟದ ವ್ಯಂಗ್ಯವರ್ತನೆಯೋ ಎಂಬಂತೆ ಆರು ಮತ್ತು ಏಳನೆಯ ಶತಮಾನಗಳಲ್ಲಿ ಇಸ್ಲಾಂ ಮತ ತಲೆಯೆತ್ತಿ ಪ್ರಪಂಚವನ್ನೇ ಜಯಿಸಲೆಳಸಿ ಕಿ. ಶ. ೭೧೧ರಲ್ಲಿ ಸಿರಿಯಾ, ಈಜಿಪ್ಟ್, ಪರ್ಷಿಯಾ, ಆಫ್ರಿಕಾ ಮತ್ತು ಸ್ಪೈಯಿನ್ ದೇಶಗಳನ್ನೆಲ್ಲಾ ವಶಪಡಿಸಿಕೊಂಡಿತು. ಸಿರಿಯಾದಲ್ಲಿ

ಅರಿಸ್ಟಾಟಲನ ತತ್ವಶಾಸ್ತ್ರ ಪ್ರಚಾರದಲ್ಲಿತ್ತು. ಇಸ್ಲಾಮಿನ ಪಂಡಿತರು ಈ ಸಿದ್ಧಾಂತವನ್ನು ಮೆಚ್ಚಿ ಅದರ ಮೂಲಕ ಗ್ರೀಕ್ ತತ್ವಶಾಸ್ತ್ರವನ್ನೆಲ್ಲಾ ಅಭ್ಯಾಸಮಾಡಿದ್ದಲ್ಲದೆ ಅದರ ಪ್ರಮುಖಭಾಗಗಳನ್ನೆಲ್ಲಾ ಅರಾಬಿಕ್ ಭಾಷೆಗೆ ಪರಿವರ್ತನೆ ಮಾಡಿದರು. ಇಷ್ಟೇ ಅಲ್ಲದೆ ಅವರು ಗ್ರೀಕರ ಗಣಿತ, ಜ್ಯೋತಿಷ, ವೈದ್ಯ ಮತ್ತು ಪ್ರಕೃತಿಶಾಸ್ತ್ರಗಳನ್ನೂ ಕಲಿತು ಇವುಗಳ ಮೇಲೆಲ್ಲಾ ಉದ್ಗ್ರಂಥಗಳನ್ನೂ ರಚಿಸಿದರು. ಇವರು ತಮ್ಮ ವಶವಾಗಿದ್ದ ಸ್ಪೈಯಿನಿನಲ್ಲಿ ತತ್ವಶಾಲೆಗಳನ್ನೇರ್ಪಡಿಸಿ ಅವುಗಳ ಮುಖಾಂತರ ಗ್ರೀಕ್‌ಸಂಸ್ಕೃತಿಯನ್ನು ಯೂರೋಪಿನಲ್ಲಿ ಪುನರುಜ್ಜೀವನ ಗೊಳಿಸಿದರು. ಅಲ್ಲಿಂದ ಈ ಸಂಸ್ಕೃತಿ ಯೂರೋಪಿನ ಇತರ ಭಾಗಗಳಿಗೆ ಹರಡಿತು. ಈ ಸಂಸ್ಕೃತಿಯ ಗ್ರಂಥಗಳು ಮೊದಲು ಅರಾಬಿಕ್ಕಿನಿಂದ ಲ್ಯಾಟಿನ್ ಭಾಷೆಗೆ ಅನುವಾದ ಮಾಡಲ್ಪಟ್ಟಮೇಲೆ, ವಿದ್ವಾಂಸರು ಅನುವಾದಗಳಿಂದ ಗ್ರೀಕಿನಲ್ಲಿದ್ದ ಮೂಲಗ್ರಂಥಗಳಿಗೇ ಹಿಂತಿರುಗಿ ಅವುಗಳನ್ನು ಪಠಣೆಮಾಡಲು ತೊಡಗಿದರು. ಈ ರೀತಿ ಯೂರೋಪಿನಲ್ಲಿ ಹುಟ್ಟಿ ಬೆಳೆದ ಗ್ರೀಕ್‌ಸಂಸ್ಕೃತಿ ಮರಳಿ ಯೂರೋಪಿಯನ್ನರಿಗೆ ದೊರೆಯಬೇಕಾದರೆ ಪರಕೀಯರಾದ ಅರಬ್ಬರ ಕೈಯಿಂದ ಬರ ಬೇಕಾಯಿತು.

ಕ್ರಿ. ಶ. ೧೧೦೦ ಸುಮಾರಿನಲ್ಲಿ ಇದು ನಡೆದದ್ದು. ಅಲ್ಲಿಂದಾಚೆ ನಾಲ್ಕುನೂರು ವರುಷಗಳ ಕಾಲ ಕ್ರೈಸ್ತತತ್ವಶಾಸ್ತ್ರ ಪ್ರಬಲವಾಗಿ ಬೆಳೆ ದರೂ ಗ್ರೀಕ್‌ತತ್ವಶಾಸ್ತ್ರದ ಪ್ರಭಾವದಿಂದಲೇ ಪುಷ್ಟಿಹೊಂದಿ ಮುಂದು ವರಿಯಿತು. ಅರಿಸ್ಟಾಟಲನೇ ಕ್ರೈಸ್ತ ವಿದ್ವಾಂಸರಿಗೆ ಎರಡನೆಯ ಬೈಬಲ್ ಆದನು. ಬೈಬಲ್ಲಿನಲ್ಲಿಯೂ ಅರಿಸ್ಟಾಟಲನಲ್ಲಿಯೂ ಇಲ್ಲದ್ದು ವಿಜ್ಞಾನ ಹೇಳಿದರೂ ಕೂಡ ನಿಜವಲ್ಲ—ಎನ್ನುವ ಮಟ್ಟಿಗೆ ಅರಿಸ್ಟಾಟಲನ ಸಂಸ್ಕಾರ ಕ್ರೈಸ್ತತತ್ವಶಾಸ್ತ್ರದ ಮೇಲೆ ಆಗಿತ್ತು.

ಕ್ರಿ. ಶ. ೧೪೦೦ ರಿಂದ ಯೂರೋಪಿನಲ್ಲಿ "ರಿನೇಸಾನ್ಸ್" ಎಂಬ ನವಯುಗ ಪ್ರಾರಂಭವಾಯಿತು. ಈ ಪ್ರಬೋಧಕಾಲದಲ್ಲಿ ಬೈಬಲ್ಲಿನ ಅಧಿಕಾರವಾಣಿ ಕಡಮೆಯಾಗಿ ವಿಜ್ಞಾನಶಾಸ್ತ್ರಗಳು ಪ್ರಾಮುಖ್ಯತೆಗೆ ಬಂದುವು. ಕ್ರಿ. ಶ. ೧೫೬೧ ರಿಂದ ೧೬೮೦ರ ವರೆಗೂ ನಡೆದ ತತ್ವಶಾಸ್ತ್ರ

ಪ್ರಗತಿಗೆ "ಆಧುನಿಕ ತತ್ತ್ವಶಾಸ್ತ್ರ" (Modern Philosophy) ಎಂದು ಹೆಸರು. ಡೆಕಾರ್ಟ್, ಸ್ಪಿನೋಸ, ಲೀಬ್‌ನಿಟ್ಸ್, ಲಾಕ್, ಬಾರ್ಕ್ಲೆ, ಹ್ಯೂಂ, ಕ್ಯಾಂಟ್, ಫಿಷ್ಟೆ, ಷೆಲ್ಲಿಂಗ್, ಹೆಗೆಲ್, ಷೋಪೆನ್‌ಹಾರ್, ಲಾಟ್ಸೆ, ಸ್ಪೆನ್ಸರ್,—ಈ ವಿದ್ವಾಂಸರೇ ಈ ತತ್ತ್ವಶಾಸ್ತ್ರದ ಪ್ರಮುಖಪುರುಷರು. ಇವರ ಸಿದ್ಧಾಂತಗಳಲ್ಲಿಯೂ ಪ್ಲೇಟೋ, ಅರಿಸ್ಟಾಟಲ್, ಇವರ ದರ್ಶನಗಳ ಪ್ರಭಾವವಿಲ್ಲದೇ ಇಲ್ಲ. ೧೮೮೦ ರಿಂದ ಈಚೆಗೆ ಪಶ್ಚಿಮದೇಶಗಳಲ್ಲಿ ನಡೆಯುತ್ತಿರುವ ತತ್ತ್ವಶಾಸ್ತ್ರದ ಉದ್ಯಮಗಳಿಗೆ "ಸಾಂಪ್ರತಕಾಲದ ತತ್ತ್ವಶಾಸ್ತ್ರ" (Contemporary Philosophy) ಎಂದು ಹೇಳುತ್ತಾರೆ. ಇದರಲ್ಲಿ ಬ್ರಾಡ್‌ಲೆ, ವಿಲಿಯಂ ಜೇಮ್ಸ್, ಬರ್ಗ್‌ಸನ್, ಡ್ಯೂಯಿ, ಅಲೆಗ್ಸಾಂಡರ್, ರಸೆಲ್, ಮೂರ್, ವೈಟ್‌ಹೆಡ್ ಮುಂತಾದ ಮಹಾನುಭಾವರು ಈಗಾಗಲೇ ಪ್ರಖ್ಯಾತರಾಗಿದ್ದಾರೆ. ಈ ಪ್ರಯತ್ನ ಇನ್ನೂ ನಡೆಯುತ್ತಲೇ ಇದೆ.

ಅಂತು ಒಟ್ಟಿನಲ್ಲಿ ಪಾಶ್ಚಾತ್ಯ ತತ್ತ್ವಶಾಸ್ತ್ರದಲ್ಲಿ ಪ್ರಾಚೀನ ತತ್ತ್ವಶಾಸ್ತ್ರ, ಮಧ್ಯಯುಗದ ತತ್ತ್ವಶಾಸ್ತ್ರ, ಆಧುನಿಕ ತತ್ತ್ವಶಾಸ್ತ್ರ, ಸಾಂಪ್ರತಕಾಲದ ತತ್ತ್ವಶಾಸ್ತ್ರ, ಎಂಬದಾಗಿ ಅಚ್ಚುಕಟ್ಟಾದ ನಾಲ್ಕು ಭಾಗಗಳುಂಟು. ಮೇಲೆ ವಿವರಿಸಿದಂತೆ ಈ ತತ್ತ್ವಶಾಸ್ತ್ರಪ್ರಯತ್ನ ಪಾಶ್ಚಾತ್ಯ ಪ್ರಪಂಚದಲ್ಲಿ ಅವಿಚ್ಛಿನ್ನವಾಗಿ ನಡೆಯುತ್ತಲೇ ಇದೆ. ನಮ್ಮ ಭಾರತದಲ್ಲಿಯಾದರೋ ತತ್ತ್ವವಿವೇಚನೆ ನಿಂತು ಹೋಗಿ ಸುಮಾರು ಐದು ನೂರು ವರ್ಷಗಳು ಆಗಿಹೋದುವು. ವಿಜ್ಞಾನವಂತೂ ನಮ್ಮಲ್ಲಿ ಈಗ ತಾನೇ ಕಣ್ಣು ಬಿಡುತ್ತಿದೆ. ಅಮೋಘವಾದ ದರ್ಶನಗಳನ್ನೇರ್ಪಡಿಸಿದ ಭಾರತೀಯರಾದ ನಾವು ನಮ್ಮ ದೀರ್ಘನಿದ್ರೆಯಿಂದ ಇನ್ನೂ ಎಚ್ಚರಗೊಂಡೇ ಇಲ್ಲ! ಈಗಲಾದರೂ ಎಚ್ಚರ ಬರುವುದೆ?

**ಸಂಪೂರ್ಣಂ**

*

# ಶಬ್ದ ಕೋಶ

(ಗ್ರಂಥದಲ್ಲಿ ಉಪಯೋಗಿಸಿರುವ ಇಂಗ್ಲಿಷ್-ಕನ್ನಡ ಪಾರಿಭಾಷಿಕ ಪದಗಳ ಪಟ್ಟಿ)

## A

Absolute .. ನಿರ್ವಿಶಿಷ್ಟ

Absolute change .. ಅವಿಶಿಷ್ಟ ರೂಪಾಂತರ

Absolute, the . ಪರಬ್ರಹ್ಮ

Abstraction, power of .. ವಿಕಲ್ಪಶಕ್ತಿ

Acquired character ಸ್ವಯಾರ್ಜಿತ ಗುಣ ಅಥವಾ ಸಾಮರ್ಥ್ಯ

Actuality, principle of ಸಿದ್ಧಿತತ್ವ

Adiaphora ...ಔಪೇಕ್ಷಿಕ (ನಿರರ್ಥಕ) ಐಹಿಕ ಸಾಮಗ್ರಿ

*Ad infinitum* . ಅನವಸ್ಥೆ

Analysis . ವಿಭಜನೆ

Ancient Philosophy ಪ್ರಾಚೀನ ಗ್ರೀಕರ ತತ್ವಶಾಸ್ತ್ರ

Anthropomorphism . ದೈವಮಾನವಾಧ್ಯಾರೋಪ

Anti-hedonistic . ಭೋಗವಿರೋಧವಾದ

Anti-materialistic . ಚಾರ್ವಾಕಖಂಡನಾರೂಪವಾದ

*Apology* . ಪ್ಲೇಟೋವಿನ "ಸಮರ್ಥನೆ" ಎಂಬ ಸಂವಾದ

*A priori* . ಬುದ್ಧ್ಯಾರೂಢವಾದ, ನಿಶ್ಚಯಾರೂಢವಾದ

Aristocracy (of Birth) ಕುಲೀನರ ಪ್ರಭುತ್ವ, ಮಹಾಜನ ಪ್ರಭುತ್ವ

Aristocracy (of Intellect) ...ಜ್ಞಾನಕುಲೀನರ ಪ್ರಭುತ್ವ

Aristocracy (of Wealth) . ಶ್ರೀಮಂತರ ಪ್ರಭುತ್ವ

Asceticism .. ತಾಪಸಯೋಗ, ವೈರಾಗ್ಯ

Astrology ...ಜ್ಯೋತಿಷ

Atomic Theory ...ಪರಮಾಣು ಸಿದ್ಧಾಂತ

Atomists ...ವೈಶೇಷಿಕರು

Aversion....ದ್ವೇಷ

## B

Barbarians .. ಕಿರಾತರು, ಕಾಡುಮನುಷ್ಯರು, ಅಡನಾಡಿಗಳು, ಅನಾಗರಿಕರು

Basis .. ಅಧಿಷ್ಠಾನ

Becoming . ಗತಿತತ್ವ, ಗತಿ

Begging the question .. ಪ್ರಕರಣಸಮ

Being .. ಸ್ಥಿತಿ, ಇರುವಿಕೆ

Being, principles of ...ಸ್ಥಿತಿ ತತ್ವಗಳು

Bloodless Revolution ...ರಕ್ತಪಾತವಿಲ್ಲದ ರಾಜ್ಯಕ್ರಾಂತಿ

## C

Cardinal Virtues....ಪ್ರಮುಖ ಗುಣಗಳು

Categories . .ಪದಾರ್ಥಗಳು

C(K)atharsis ...ಭಾವಸತ್ವಶುದ್ಧಿ

Cause...ಕಾರಣ

Censorship...ಸಾಧುತ್ವ ಸಮಿತಿ

Centre of force . .ಶಕ್ತಿ ಪ್ರಯೋಗದ ಕೇಂದ್ರ

City-states .. ನಗರ ಸಂಸ್ಥಾನಗಳು

Class-concept .. ಜಾತೀಯ ಭಾವ

Classic ...ಸುಸಂಸ್ಕೃತವಾದದ್ದು, ಶುದ್ಧವಾದದ್ದು

*Clouds, the*...."ಮೇಘಗಳು" ಎಂಬ ನಾಟಕ

Cognition ...ಜ್ಞಾನಚೇತನ

Commonsense ...ನೈಜಬುದ್ಧಿ, ಸ್ವಭಾವಜನ್ಯ ತಿಳಿವಳಿಕೆ

Complex .. ಸಂಕೀರ್ಣವಾದ

Conation ...ಕರ್ಮಚೇತನ

Concept....ಭಾವ, ಸಂತಾನ

Conclusion ...ಅನುಮಿತಿ, ನಿಗಮನ, ಸಿದ್ಧಾಂತ

Condènsation.. .ಘನೀಭವನ

Contemporary Philosophy....ಸಾಂಪ್ರತಕಾಲದ ತತ್ವಶಾಸ್ತ್ರ

Conduct....ನಡೆವಳಿ, ಚರಿತ್ರ
Convention ...ಸಂಪ್ರದಾಯ
Corporeal ...ಮೂರ್ತ, ಭೌತ, ಪ್ರಾಕೃತ
Cosmology . ವಿಶ್ವಶಾಸ್ತ್ರ, ವಿಶ್ವಸಿದ್ಧಾಂತ
Cosmopolitanism ...ಜಗದ್ರಾಜ್ಯ (ಜಗನ್ನಿವಾಸ) ಸಿದ್ಧಾಂತ
Critical....ವಿಮರ್ಶಪೂರ್ವಕವಾದ
*Critique of Pure Reason, the*...ಶುದ್ಧ ಬುದ್ಧಿಯ ಮೀಮಾಂಸೆ
Crooked ...ಓರೆ
Cyclic alternation of worlds . ವ್ಯತ್ಕ್ರಮಸೃಷ್ಟಿಲಯ

## D

Dark Ages . ಅಂಧಕಾರ ಯುಗ
Deductive Inference....ಪರಾಮರ್ಶ, ನ್ಯಾಯ, ಅನುಮಾನ
Definition . ಲಕ್ಷಣ
Demonstration ...ಪರೀಕ್ಷಾಕ್ರಮ, ನಿದರ್ಶನ
Desire . ಇಚ್ಛೆ
Dialectic .. ತತ್ವಜ್ಞಾನ
Dialectics ನ್ಯಾಯಶಾಸ್ತ್ರ
Dialogue . .ಸಂವಾದ
Dictatorship . .ದಬ್ಬಾಳಿಕೆ, ಸರ್ವಾಧಿಕಾರಿಪ್ರಭುತ್ವ
Differentia ...ವಿಶೇಷ
"Dike" ...ಧರ್ಮ, "ನ್ಯಾಯ"
Direct Democracy . ನೇರವಾದ ಪ್ರಜಾಪ್ರಭುತ್ವ
Direct Perception . ವೀತದರ್ಶನ
Direct Principles . ವೀತ (ಅಪರೋಕ್ಷ) ತತ್ವಗಳು
Discursive ..ವಿಜ್ಞಾನರೂಪವಾದ, ಪರೋಕ್ಷವಾದ
Dispositions ...ವಾಸನೆಗಳು
Divine Reason....ದಿವ್ಯಜ್ಞಾನ, ದೈವಿಕಚಿತ್

## E

Earlier Doctrine ...ಪ್ಲೇಟೋವಿನ ಸಂವಾದಗಳಲ್ಲಿ ಪೂರ್ವಸಿದ್ಧಾ

Early Church Fathers....ಆದಿಕ್ರೈಸ್ತ ಮಠಾಧಿಪತಿಗಳು

Ecclesia . .ಅಥೆನ್ಸಿನ ರಾಜಕೀಯ ಸಭೆ

Eclecticism ...ಸಮ್ಮಿಶ್ರಣ ಸಿದ್ಧಾಂತ

Ecstasy .. ಸಮಾಧಿಯೋಗ

Effect . ಕಾರ್ಯ, ಫಲ

Effusions .. ಸೂಕ್ಷ್ಮವಾಹಿನಿಗಳು

Elixir of Life....ಜೀವಾಮೃತ

Emotional appeal... ಭಾವಬಲ

Emotionless .. ಭಾವಶೂನ್ಯವಾದ

Empiricism . .ಅನುಭವವಾದ

Empty Space ...ಶೂನ್ಯದೇಶ

End . ಜೀವನದ ಗುರಿ, ಪುರುಷಾರ್ಥ, ಉದ್ದೇಶ

Enlightened Self-interest .. ವಿಚಾರಯುತವಾದ ಸ್ವಾರ್ಥತೆ

Epic .. ವೀರಕಾವ್ಯ

Epicurean ...ಸುಖಾಕಾಂಕ್ಷಿ, ಭೋಗಾಭಿಲಾಷಿ

Ethics . ನೀತಿಶಾಸ್ತ್ರ, ಧರ್ಮಸಿದ್ಧಾಂತ

Evil....ಕೇಡು, ಅರಿಷ್ಟ, ಕೆಡುಕು

Evolution, theory of . ಪರಿಣಾಮವಾದ, ಲೋಕವಿಕಸನ ಸಿದ

Experience ...ಅನುಭವ

Explanation, Principles of ...ಜ್ಞಾನತತ್ವಗಳು

Expression .. ವ್ಯಕ್ತರೂಪ, ಅಭಿವ್ಯಕ್ತಿ

Extension . ಪರಿಮೇಯತ್ವ

Extremes... ವೈಪರೀತ್ಯಗಳು

## F

Facts....ಪ್ರತ್ಯೇಕ ಸಂಗತಿಗಳು

Fatalism ...ಅದೃಷ್ಟವಾದ

Federation ...ಸಂಯುಕ್ತ ರಾಜ್ಯಾಂಗ
Feeling ...ಭಾವಚೇತನ, ಸಂವೇದನೆ, ವೇದನೆ
Final cause ...ಪ್ರಯೋಜನಕಾರಣ, ಅಂತಿಮ ಪ್ರಯೋಜನ ಕಾರಣ
Fine Arts ...ಲಲಿತಕಲೆಗಳು
First Philosophy ...ಪ್ರಥಮ ತತ್ವಶಾಸ್ತ್ರ
Force...ಶಕ್ತಿ
Formal cause...ಸಾಮಾನ್ಯಕಾರಣ, ರೂಪಕಾರಣ
Forms...ರೂಪಗಳು, ಸಾಮಾನ್ಯಗಳು
Freedom...ಮುಕ್ತಿ, ಪೂರ್ಣಮುಕ್ತಿ, ಸ್ವಾತಂತ್ರ್ಯ
French Revolution, the...ಫ್ರಾನ್ಸಿನ ರಾಜ್ಯಕ್ರಾಂತಿ
Future possibilities...ಸಂಭಾವ್ಯ ಬೀಜಗಳು

## G

Gadfly .. ತೊಣಚಿ
Geometry . ರೇಖಾಗಣಿತ
God ...ಈಶ್ವರ
Good, the...ಮಾನವಶ್ರೇಯ, ಪರಮಶ್ರೇಯ, ಶುಭ, ನಿತ್ಯಕಲ್ಯಾಣ
Golden Mean ...ಸ್ವರ್ಣಮಧ್ಯಮ ಸಿದ್ಧಾಂತ
Gnosticism .. ಜ್ಞಾನಯೋಗ
Ground ...ಅಧಿಷ್ಠಾನ

## H

Happiness ...ಸೌಖ್ಯ, ಆನಂದ
Harmony....ಸಾಮರಸ್ಯ, ಸಮತಾಳ, ಹೊಂದಾಣಿಕೆ, ಸಮಗಟ್ಟು
Health of the Soul....ಆತ್ಮದ ಆರೋಗ್ಯ
Hellenism....ಗ್ರೀಕ್ ಸಂಸ್ಕೃತಿ
Homogeneous ...ಏಕಜಾತೀಯ
Horseness ...ಅಶ್ವತ್ವ
Humanism ...ಮಾನವ ಶ್ರೇಷ್ಠತಾವಾದ, ಮಾನವ ಪಂಥ, ಮಾನವಾಧಿಕ್ಯವಾದ

Humanists . ಮಾನವ ಪಂಥಿಗಳು
Humanistic . ಮಾನವ ಪ್ರಯೋಜನಾರ್ಥಕವಾದ
Human Values .. ಮಾನವಾರ್ಥಗಳು, ಪುರುಷಾರ್ಥಗಳು
Hylozoism...ಸರ್ವಚೇತನವಾದ

## I

Idealism . ಚೈತನ್ಯವಾದ, ಚಿದ್ವಾದ, ವಸ್ತುಚಿನ್ಮಯವಾದ, ವಿಜ್ಞಾನವಾದ
Ideal Theory, the ...ಸಾಮಾನ್ಯವಾದ
Idealistic....ಚಿದಾತ್ಮಕ, ಆಧ್ಯಾತ್ಮಿಕ
Ideas . ಸಾಮಾನ್ಯಗಳು
Ideas, the World of ...ಸಾಮಾನ್ಯಲೋಕ
Ignorance . ಅವಿದ್ಯಾ, ಅಜ್ಞಾನ
Illusion ..ಭ್ರಾಂತಿ, ಪ್ರತ್ಯಕ್ಷಾಭಾಸ, ಭ್ರಾಂತಿದರ್ಶನ
Imagery ...ಕಲ್ಪನಾಚಿತ್ರ
Imagination ...ಕಲ್ಪನೆ, ಕಲ್ಪನಾಶಕ್ತಿ
Imaginative Representation .. ಕಲ್ಪನೆಯ ಪ್ರದರ್ಶನ
Immanence .ಅಂತರ್ಯಾಮಿತ್ವ, ದ್ರವ್ಯಾಂತರ್ಗತತ್ವ
Immanent . .ಅನುಭವಸಿದ್ಧವಾದ, ಅನುಭವಾಂತರ್ಗತವಾದ, ಅಂತರ್ಯಾಮಿಯಾದ
Immaterial ...ಅಮೂರ್ತ, ಅಪ್ರಾಕೃತ, ಅಭೌತ
Immediate principles...ವೀತ (ಅಪರೋಕ್ಷ) ತತ್ವಗಳು
Incoherent ...ಅಯುತಸಿದ್ಧ ವಾದ
Independent Existence . .ಸ್ವತಂತ್ರ ಅಸ್ತಿತ್ವ
Indestructibility of matter ...ದ್ರವ್ಯ ನಾಶರಹಿತವೆಂಬ ಸಿದ್ಧಾಂತ
Indeterminate . .ಅನಿರ್ಣೀತವಾದ
Indifferent goods . ಔಪೇಕ್ಷಿಕ ಸಾಮಗ್ರಿಗಳು ಅಥವಾ ಅರ್ಥಗಳು
Individualism ...ಸ್ವತಂತ್ರ ವ್ಯಕ್ತಿಭಾವ, ವ್ಯಕ್ತಿಪೌರುಷ
Induction ...ವ್ಯಾಪ್ತಿಮಾರ್ಗ

Inductive Reasoning...ವ್ಯಾಪ್ತಿ ಮಾರ್ಗದ ತರ್ಕ
Inference . .ಅನುಮಾನ, ನ್ಯಾಯ, ಅನುಮಿತಿ
Innate . .ಬುದ್ಧ್ಯಾರೂಢವಾದ, ನಿಶ್ಚಯಾರೂಢವಾದ
Innate character .. ಪಿತ್ರಾರ್ಜಿತ ಗುಣ ಅಥವಾ ಸಾಮರ್ಥ್ಯ
Instrumental cause ...ನಿಮಿತ್ತ ಕಾರಣ
Intuition . ತಾತ್ಪರ್ಯಜ್ಞಾನ, ಇಂಗಿತಜ್ಞಾನ, ಅಪರೋಕ್ಷಜ್ಞಾನ, ಪ್ರತ್ಯಕ್ಷ
Intuitive .ಅಪರೋಕ್ಷವಾದ, ಜ್ಞಾನರೂಪವಾದ [ಜ್ಞಾನ, ಈಹ
Inward Harmony . .ಆಂತರಿಕ ಸುಸ್ಥಿತಿ, ಆತ್ಮ ಸಾಮರಸ್ಯ
Inwardness . ಆಂತರಿಕತೆ, ಆಂತರ್ಯ, ಆತ್ಮೀಯತೆ

## J

Judgment...ಪ್ರಮೇಯ, ಪ್ರತಿಜ್ಞೆ
*Jus gentium*...ಸಮಸ್ತ ಜನಾಂಗಗಳ ಸಾಮಾನ್ಯ ಧರ್ಮ
Just...“ನ್ಯಾಯ”ವಾದ, ಧರ್ಮಸ್ವಭಾವದ
Justice . “ನ್ಯಾಯ”, ಧರ್ಮ, ಧರ್ಮಸ್ವಭಾವ, ಆತ್ಮಸಾಮರಸ್ಯ

## K

Kingdom of Ends, the . .ಪುರುಷಾರ್ಥ ರಾಜ್ಯ
Knowledge, Theory of...ಜ್ಞಾನಸಿದ್ಧಾಂತ

## L

Law...ಶಾಸನ
*Laws the*...ಪ್ಲೇಟೋವಿನ “ಶಾಸನಗಳು” ಎಂಬ ಸಂವಾದ
Later Doctrine, the...ಪ್ಲೇಟೋವಿನ ಸಂವಾದಗಳಲ್ಲಿ ಉತ್ತರ ಸಿದ್ಧಾಂತ
Leadership . ನಾಯಕತ್ವ
Logic...ನ್ಯಾಯಶಾಸ್ತ್ರ, ತರ್ಕಶಾಸ್ತ್ರ, ನ್ಯಾಯಮಾರ್ಗ
Logical...ನ್ಯಾಯಬದ್ಧವಾದ, ಬುದ್ಧಿಬದ್ಧವಾದ, ನ್ಯಾಯಪರವಾದ
Logos, the...ದೈವಚಿತ್ತ, ಹಿರಣ್ಯಗರ್ಭ, ಬ್ರಹ್ಮ, ಲೋಕಾತ್ಮ, ಸೂತ್ರಾತ್ಮ,
Lyric...ಭಾವಗೀತೆ, ಗೀತಕಾವ್ಯ [ಈಶ್ವರ

## M

Manifestation ...ಅಭಿವ್ಯಕ್ತಿ, ಪ್ರದರ್ಶನ
Marble...ಅಮೃತಶಿಲೆ, ಸಂಗಮೊರಕಲ್ಲು
Material cause...ಉಪಾದಾನಕಾರಣ
Matter...ಪ್ರಧಾನ, ವಸ್ತು
Means...ಸಲಕರಣೆ, ಉಪಕರಣ
Mechanical cause...ಪ್ರಾಕೃತಿಕ ಅಥವಾ ಸ್ವಾಭಾವಿಕ ಕಾರಣ
Mechanical explanation...ಜಡತತ್ವಪೂರ್ವಕ ವಿವರಣೆ
Mechanism...ಜಡಸೃಷ್ಟಿವಾದ, ಜಡತತ್ವವಾದ
Mechanists...ಜಡಪ್ರಪಂಚವಾದಿಗಳು
Medieval Age ...ಮಧ್ಯಯುಗ
Medieval Philosophy...ಮಧ್ಯಯುಗದ ತತ್ವಶಾಸ್ತ್ರ
*Meditations*...ಮಾರ್ಕಸ್ ಆರೀಯುಲಿಸ್ಸಿನ "ಧ್ಯಾನಮಂಜರಿ"
Members...ಅವಯುವಗಳು, ಅಂಶಗಳು, ಅಂಗಾಂಗಗಳು
*Memorabilia*...ಕ್ಸೆನೋಫನ್ನಿನ "ಸ್ಮೃತಿಚಿತ್ರಗಳು"
Merger...ಲಯ, ಲಯಯೋಗ
Metaphysical...ಆಧ್ಯಾತ್ಮಿಕ, ತಾತ್ವಿಕ
Metaphysics...ಅಧ್ಯಾತ್ಮಶಾಸ್ತ್ರ, ಸ್ಥಿತಿತತ್ವಶಾಸ್ತ್ರ
Might is Right...ಬಲವೇ ಶೀಲ, ಬಲವೇ ಹಕ್ಕು
Mimesis...ಅನುಕರಣ ವಿದ್ಯೆ
Mind ...ಚಿತ್ತ, ಚೈತನ್ಯ, ಮನಸ್ಸು
Mobile...ಚಂಚಲ ಸ್ವರೂಪವುಳ್ಳ
Modern Philosophy...ಆಧುನಿಕ ತತ್ವಶಾಸ್ತ್ರ
Modes of Being ...ಸ್ಥಿತಿತತ್ವರೂಪಗಳು, ವಸ್ತುಸ್ಥಿತಿರೂಪಗಳು
Monarchy...ರಾಜಪ್ರಭುತ್ವ
Morality....ನೀತಿಧರ್ಮ, ಸದಾಚಾರ, ಶೀಲ
Mysteries...ಗ್ರೀಕರ ರಹಸ್ಯ ವ್ರತಾಚರಣೆಗಳು
Mystic...ಯೋಗಿ, ಧ್ಯಾನಯೋಗಿ, ಈಶ್ವರಾನುಭವಿ

Mysticism ...ಯೌಗಿಕದೃಷ್ಟಿ, ಧ್ಯಾನಯೋಗ, ಈಶ್ವರಾನುಭವ
Music of the Spheres...ಗೋಳಗಳ ಚಲನೆಯಿಂದಾಗುವ ಸಂಗೀತ

## N

Naturalism...ಸ್ವಭಾವದೃಷ್ಟಿ, ಜಡತತ್ವವಾದ, ಜಡಪ್ರಪಂಚವಾದ
Naturalness...ಸಹಜತೆ, ಸ್ವಾಭಾವಿಕತೆ, ನೇರದೃಷ್ಟಿ
Nature ...ಸ್ವಭಾವ, ಪ್ರಕೃತಿ
Nature, Law of ...ಪ್ರಕೃತಿ ನಿಯಮ, ಸ್ವಭಾವ ಧರ್ಮ
Nature-Worship...ಪ್ರಕೃತಿಪೂಜೆ, ಸ್ವಾಭಾವಿಕ ಶಕ್ತಿಗಳ ಪೂಜೆ
Necessary ...ಆಧಾರಭೂತವಾದ, ಅಗತ್ಯವಾದ
Necessity ...ವಿಧಿ
Negative sense . ನಿಷೇಧಾರ್ಥ, ಅಭಾವಾರ್ಥ
Neo-Platonism .. ನವೀನ ಪ್ಲೇಟೊ ಸಿದ್ಧಾಂತ
Non-being .. ಶೂನ್ಯ, ಅಭಾವ
Non-contradiction...ಸ್ವವಿರೋಧ ನಿಷೇಧ
Non-corporeal ...ಅಮೂರ್ತ, ಅಭೌತ
Nothing ...ಅಭಾವ, ಶೂನ್ಯ
Number-theory .. "ಸಾಂಖ್ಯ" ಸಿದ್ಧಾಂತ

## O

Ontology....ಸ್ಥಿತಿತತ್ವಶಾಸ್ತ್ರ, ಅಧ್ಯಾತ್ಮಶಾಸ್ತ್ರ
Oracle...ದೇವವಾಣಿ, ಕಣಿ
Organs of sensation ...ಜ್ಞಾನೇಂದ್ರಿಯಗಳು

## P

Pantheism...ವಿಶ್ವಬ್ರಹ್ಮವಾದ, ಜಗದೀಶ್ವರವಾದ
Participation ...(ಸಾಮಾನ್ಯದಲ್ಲಿ ಪ್ರತ್ಯೇಕ) ಪಾಲುಹೊಂದಿರುವಿಕೆ
Particles of matter ...ಪುದ್ಗಲಾಣುಗಳು, ಪುದ್ಗಲಾಂಶಗಳು.

Particles of Reality...ಸತ್ವಾಂಶಗಳು, ಅಣುಗಳು
Particular...ಪ್ರತ್ಯೇಕ, ವೈಯಕ್ತಿಕ ವಸ್ತು
Parts...ಅಂಶಗಳು, ಅಂಗಗಳು, ಭಾಗಗಳು
Passions ...ರಾಗಗಳು
Patriarchal ...ಪಿತೃಮುಖ್ಯವಾದ (ಸಮಾಜವ್ಯವಸ್ಥೆ)
Percept . .ಅವಾಯ, ನಿಶ್ಚಯ
Personified...ಪುರುಷಭಾವಾರೋಪಿತ
Phenomena ...ಭವವ್ಯಾಪಾರಗಳು, ಪ್ರಕೃತಿಸಂಭವಗಳು
Phenomenal...ಭವಾತ್ಮಕವಾದ, ಪ್ರಾಕೃತಿಕ, ತೋರಿಕೆಯ
Phenomenalism...ಭವವಾದ, ಅನುಭವರೂಪವಾದ, ಭವಾತ್ಮವಾದ
Philosopher's Stone ...ರಸಸಿದ್ಧಿ, ಕನಿಷ್ಠಲೋಹಗಳನ್ನು ಬಂಗಾರಮಾಡುವ [ಕಲ್ಲು
Philosophical ...ತಾತ್ವಿಕವಾದ, ಆಧ್ಯಾತ್ಮಿಕವಾದ
Physical Science...ಭೌತಶಾಸ್ತ್ರ, ವಿಜ್ಞಾನಶಾಸ್ತ್ರ
Physicists...ವೈಜ್ಞಾನಿಕರು, ಭೌತಶಾಸ್ತ್ರಕಾರರು
Pleasure...ಸುಖ, ಭೋಗ, ಇಂದ್ರಿಯ ಸುಖ
Plurality...ನಾನಾತ್ವ, ಬಹುತ್ವ
Political animal...ರಾಜಕೀಯ ಪ್ರಾಣಿ
Politics...ರಾಜನೀತಿಶಾಸ್ತ್ರ
Polity...ಪ್ರಜಾಪ್ರಭುತ್ವ
Pollution...ಹೊಲೆ
Polytheism...ಬಹುದೈವಾರಾಧನೆ
Polytheist...ಬಹುದೈವಾರಾಧಕ
Positive sense...ಭಾವಾರ್ಥ
Possibility, principle of...ಸಾಧ್ಯತತ್ವ
Post-Aristotelian Period...ಅರಿಸ್ಟಾಟಲನ ಉತ್ತರದ ಕಾಲ
Potentiality, principle of...ಸಾಧ್ಯತತ್ವ
Predestination...ಪೂರ್ವಸ್ಥಾಪನೆ, ವಿಧಿನಿಯಮ, ಮುನ್ನಿರ್ಣಯ
Premise...ಹೇತುವಾಕ್ಯ, ಅವಯವ

Probability...ಸಂಭಾವನಾರೂಪ

Probability, the doctrine of...“ಸ್ಯಾದ್ವಾದ”, “ಅನೇಕಾಂತವಾದ”, ಸಂಭಾವನಾ ಸಿದ್ಧಾಂತ

Proposition...ವಾಕ್ಯ

Pure Activity...ಶುದ್ಧ ಕ್ರಿಯಾಸ್ವರೂಪ

Pure Form...ಶುದ್ಧರೂಪ

Purification...ಶುದ್ಧಿಸಂಸ್ಕಾರ

## Q

Quality...ಗುಣ

Quantitative Relations...ರಾಶಿ ಸಂಬಂಧಗಳು

## R

Rarefaction...ವಿರಳನ

Rational...ಬುದ್ಧಿಬದ್ಧವಾದ, ಬುದ್ಧಿಪ್ರಾಮಾಣಿಕವಾದ, ಕಾರ್ಯಕಾರಣಬದ್ಧವಾದ

Rationalism ...ಹೇತುವಾದ, ಬುದ್ಧಿಪ್ರಮಾಣವಾದ, ಸಾಂಖ್ಯವಾದ

Rationalist...ಹೇತುವಾದಿ, ಬುದ್ಧಿಪ್ರಮಾಣವಾದಿ

Real...ವಾಸ್ತವಿಕ, ಸತ್ವ, ಸತ್ಯವಸ್ತು

Realism...ವಸ್ತುಸತ್ಯವಾದ

Realities...ಸರ್ವಮೂಲಾಧಾರವಾದ ಸತ್ವಗಳು

Reality . .ಸತ್ಯಸತ್ವ

Reason...ವಿಜ್ಞಾನ, ಜ್ಞಾನಶಕ್ತಿ, ಚಿತ್ತು, ಜ್ಞಾನಚೇತನ

Reason, principles of...ಜ್ಞಾನತತ್ವಗಳು

Rectangle...ಆಯತ

Relative...ವಿಶಿಷ್ಟವಾದ

Relativity...ವೈಶಿಷ್ಟ್ಯಸಿದ್ಧಾಂತ

Reminiscence...ಸ್ಮೃತಿ

Renaissance...(ಯೂರೋಪಿನ ಸಂಸ್ಕೃತಿಯಲ್ಲಿ) ಹೊಸಹುಟ್ಟು, ನವಯುಗ

*Republic, the*...“ಆದರ್ಶರಾಜ್ಯ”ವೆಂಬ ಪ್ಲೇಟೋವಿನ ಸಂವಾದ

"Right"...ಸರಿಯಾದ “ಹಾದಿ”, ಧರ್ಮ, ಮತ

Righteousness...ಧರ್ಮಸ್ವಭಾವ, “ನ್ಯಾಯ”

## S

Scepticism...ಸಂದೇಹಸೂತ್ರ
Scientific...ಶಾಸ್ತ್ರೀಯ, ವಿಜ್ಞಾನಬದ್ಧವಾದ
Secret Doctrine...ಆರ್ಯರ ಗುಪ್ತವಿದ್ಯೆ
Self-consciousness...ಆತ್ಮಚೇತನ, ಸ್ವಪರಿಜ್ಞಾನ
Self-contradictory...ಸ್ವವಿರೋಧ, ಸ್ವವಿಘಾತ
Self-realisation...ಆತ್ಮಸಿದ್ಧಿ, ಆತ್ಮಲಾಭ, ಆತ್ಮಸಾಕ್ಷಾತ್ಕಾರ
Sensation...ಸಂವೇದನೆ, ಅವಗ್ರಹ, ಗ್ರಾಹ್ಯ, ಇಂದ್ರಿಯಪ್ರಜ್ಞೆ
Sense-perception...ಇಂದ್ರಿಯ ದರ್ಶನ, ಪ್ರತ್ಯಕ್ಷ, ದರ್ಶನ
Sentimentality...ಭಾವಾತಿರೇಕ, ಭಾವಪೈತ್ಯ
Simplicity...ಸರಳತೆ
Socratic irony...ಸಾಕ್ರಟೀಸನ ವ್ಯಂಗ್ಯಭಾವ
Sophistication...ಯುಕ್ತಿ ಚಮತ್ಕೃತಿ; ನಾಣ್ಯವಂತರೆಂಬ ಸೋಗುಹಾಕಿಕೊಳ್ಳುವಿಕೆ
Sophists...ಚಾರುವಾಕರು
Source of all being...ಸರ್ವತತ್ವ ಮೂಲಕಾರಣ
Space ...ಆಕಾಶ
Space-filling...ಆಕಾಶವ್ಯಾಪಕ
Spatial forms...ಆಕಾಶರೂಪಗಳು
Spirit...ಆತ್ಮ
Spiritualistic...ಆಧ್ಯಾತ್ಮಿಕ, ಚಿದಾತ್ಮಕ
Square...ಚದರ
State, theory of...ರಾಜ್ಯಸಿದ್ಧಾಂತ
*Statesman the*...ಪ್ಲೇಟೋವಿನ "ರಾಜನೀತಿಕುಶಲ" ಎಂಬ ಸಂವಾದ
Stoic...ವಿರಕ್ತ, ವೈರಾಗಿ
Straight....ಸರಳ
Substance ...ದ್ರವ್ಯ
Surface....ಮೇಲ್ಮೈ

Syllogism...ತರ್ಕವ್ಯಕ್ತವಾದ ಪರಿಕ್ಷಾ ಕ್ರಮ, ತರ್ಕ, ನ್ಯಾಯ, ಅವಯವ ಘಟಿತವಾಕ್ಯ

Symbolic Art ...ಸಾಂಕೇತಿಕ ಕಲೆ

Synthesis...ಸಂಯೋಜನೆ

## T

*Tabula Rasa*...ಶುಭ್ರ ಹಲಗೆ

Teleological...ನೈಗಮಿಕ

Teleological cause...ನೈಗಮ ಕಾರಣ

Teleological universe...ನೈಗಮ ಪ್ರಪಂಚ

Teleology...ನೈಗಮವಾದ, ಫಲಪ್ರತಿಪಾದನವಾದ, ಪ್ರಯೋಜನಾತ್ಮವಾದ

Terms...ಪದಗಳು

Theism...ಸೇಶ್ವರ ಮತ, ವಿಶ್ವೇಶ್ವರ ಮತ, ಈಶ್ವರ ಪ್ರಾಧಾನ್ಯವಾದ

Theogony...ದೇವೋತ್ಪತ್ತಿ ಸಿದ್ಧಾಂತ

Theology...ದೇವಜ್ಞಾನಶಾಸ್ತ್ರ

Thought, Laws of...ಚಿಂತನೆಯ ಮೂಲತತ್ವಗಳು, ಧರ್ಮಗಳು

Transcendent...ಬುದ್ಧ್ಯಾರೂಢವಾದ, ಚಿತ್ತಾರೂಢವಾದ

Transcendental...ಲೋಕಾತೀತ, ಲೋಕೋತ್ತರ, ಪ್ರಪಂಚಾತೀತ, ಅತೀಂದ್ರಿಯ, ದ್ರವ್ಯಾತೀತ, ಇಂದ್ರಿಯಾತೀತ, ಅನುಭವಾತೀತ

Transcendentalism...ಈಶ್ವರನು ಪ್ರಪಂಚಾತೀತನೆಂಬ ಸಿದ್ಧಾಂತ, ಲೋಕೋತ್ತರವಾದ

Tyrannies...ತುರಾಣಾಧಿಪತ್ಯಗಳು, ಘಾತುಕರ ದೌಲತ್ತುಗಳು, ಆಶಾಧಿಪತ್ಯಗಳು

## U

Ultimate Principle...(ಜ್ಞಾನದ) ಪರತತ್ವ

Unchangeableness...ನಿರ್ವಿಕಾರತೆ, ಪರಿಣಾಮರಾಹಿತ್ಯ

Unconditioned...ಭೂಮ, ನಿರ್ವಿಶಿಷ್ಟ

Unconsciousness...ಜಡಸ್ಥಿತಿ

Understanding...ಜ್ಞಾನಶಕ್ತಿ

Un-Greek...ಅಗ್ರೀಕವಾದ, ಗ್ರೀಕ್ ಅಲ್ಲದ
Uniformity...ಕ್ರಮ, ಸಮಾನತೆ, ಏಕರೂಪ
Uniform occurrence...ಕ್ರಮಸಂಭವ, ಕ್ರಮವ್ಯಾಪಾರ
Unifying principle...ಏಕೀಕರಣ ತತ್ತ್ವ
Unity...ಏಕತೆ, ಐಕ್ಯತೆ, ಸಮಾಕಾರ
Unity of being...ಸತ್ತ್ವಸಮಾಕಾರ
Universal...ಸಾರ್ವತ್ರಿಕ, ಸಾಮಾನ್ಯ
Universal Soul...ವಿಶ್ವಾತ್ಮ, ಲೋಕಾತ್ಮ
Utilitarian...ಪ್ರಯೋಜನವಾದಿ

## W

"Way", the...ಸರಿಯಾದ "ಹಾದಿ", ಧರ್ಮ, ಮತ
Whole...ಅವಯವಿ, ಪೂರ್ಣಜೀವಿ
World-Soul...ಲೋಕಾತ್ಮ, ಸೂತ್ರಾತ್ಮ, ಹಿರಣ್ಯಗರ್ಭ

## PUBLICATIONS OF THE MYSORE UNIVERSITY

### I. ENGLISH

1. **The Mysore Tribes & Castes.** By H. V. Nanjundayya, M.A., M.L., C.I.E. and Diwan Bahadur L. K. Ananthakrishna Iyer, B.A., M.D. HON. (BRES.).

   Four Volumes: *Volume II, 1928; Volume III, 1930; Volume IV, 1931; Volume I, 1935.* Each Volume is profusely illustrated Volume I Rs. 15 0 0. Other Volumes each Rs. 12 8 0.

   Appendix to the Four Volumes of the Mysore Tribes and Castes.

2. **Pramana Samuccaya of Acarya Dinnaga.** Chap. I. By H. R. Rangaswami Iyengar, M.A. Rs. 3 0 0.
3. **Labour and Housing in Bangalore City.** By C. Narasimha Moorthy, M.A., and R. K. Srinivasan, M.A. Rs. 0 8 0.
4. **The Munro System of British Statesmanship in India.** By K. N. Venkatasubba Sastry, M.A., PH.D., F.R.HIST.S. Rs. 3 0 0.
5. **Sources of Karnataka History, Vol. I.** By S. Srikanta Sastry, M.A. Ordinary Rs. 3 0 0. Special Rs. 3 8 0.
6. **Dvaita Philosophy and its Place in the Vedanta.** By H. N. Raghavendrachar, M.A. Rs. 3 0 0.
7. **Grammar of the Oldest Kannada Inscriptions.** By A. N. Narasimhiah, M.A., L.T., Ph.D. Rs. 2 12 0.

*(a) General*

1. **History of Kannada Language**
2. **History of Kannada Literature.** By Praktanavimarsa Vichakshana Mahamahopadhyaya Rao Bahadur R. Narasimhachar, M.A., M.R.A.S. Each Re. 1 0 0.
3. **Kannada Kaipidi, Vol. I** Ordinary Rs. 1 4 0. Special Rs. 1 12 0.

*(b) Mysore University Kannada Publication Series*

1. **Harischandrakavyasangraha.** Abridged and Edited By T. S. Venkannaiya, M.A. and A. R. Krishna Sastry, M.A. Rs. 0 12 0.
2. **Kadambari Sangraha.** Abridged and Edited By T. S. Venkannaiya, M.A. Rs. 0 12 0.
3. **Prabhulingaleeleya Sangraha.** Abridged and Edited By M. S. Basavalingayya, M.A., B.L. and M. R. Srinivasa Moorthy, B.A. Rs. 0 12 0.

4. **Sakratisana Koneya Dinagalu.** Translation of Four Socratic Dialogues with an Introduction
By A. N. Murthy Rao, M.A. Ordinary Rs. 0 12 0.
Calico Re. 1 0 0.

5. **Sri Ramakrishna Paramahamsa.**
By K. V. Puttappa, M.A. Ordinary Rs. 0 12 .0.
Calico Re. 1 4 0.

6. **Rabindranath Tagore.** By M. Venkatesa Iyengar, M.A.
Ordinary Rs. 0 12 0. Calico Rs. 1 4 0.

7. **Arogya : Adara Jnana mattu Sadhana.**
By J. A. Iswaramurthy, B.A., L.M.S., B.SC.
Ordinary Rs. 0 12 0. Calico Rs. 1 4 0.

8. **Pamparamayana Sangraha.** By Astana Maha-Vidwan Tirivallur Srinivasaraghavachar and D. L. Narasimha char, M.A. Ordinary Rs. 0 12 0.
Calico Re. 1 0 0.

9. **Hana Prapancha.** By V. Sitharamiah, M.A.
Ordinary Rs. 0 12 0. Calico 1 4 0.

10. **Sanskrit Drama.** By A. R. Krishna Sastry, M.A.
Ordinary Rs. 0 12 0. Calico Rs. 1 4 0.

11. **Jiva Vignana.** By B. Venkatanaranappa, M.A.
Ordinary Rs. 0 12 0. Calico Rs. 1 4 0.

12. **Hindu Darsanasara.** By Mahamahopadhyaya Pandita-ratnam L. Srinivasachar. Ordinary Rs. 0 12 0.
Calico Rs. 1 4 0.

13. **Rajanithi.** By H. Krishna Rao, M.A.
Ordinary Rs. 0 12 0. Calico Rs. 1 4 0.

14. **Hadibadeyadharma.** By Sri D. Champabai, M.A.
Ordinary Rs. 0 12 0. Calico Rs. 1 4 0.

15. **Purananama Chudamani.** By B. Rama Rao, M.A.,LL.B., and Vidwan P. Sundara Sastry. Ordinary Rs. 2 12 0.
Calico Rs. 3 4 0.

16. **Jannana Yasodhara Charite.** By K. V. Raghavachar, M.A., B.T. Ordinary Rs. 0 12 0.
Calico Rs. 1 4 0.

*Note :* –THE PUBLICATIONS ARE AVAILABLE FOR SALE

*at*

**THE ORIENTAL LIBRARY, MYSORE**

*or at*

**MESSRS. KARNATAKA PUBLISHING HOUSE, BASAVANGUDI, BANGALORE.**